 ದೀಪಾವಳಿಯು ಸರ್ವರಿಗೂ ಶುಭದಾಯಕವಾಗಲಿ ! 

# ಮ್ಯಾಸ್ಸಿ-ಫರ್ಗುಸನ್

## ಟ್ರ್ಯಾಕ್ಟರ ಮೇನ ಡೀಲರರು

ಧಾರವಾಡ, ವಿಜಾಪೂರ, ಬೆಳಗಾವಿ
ಹಾಗೂ ಕಾರವಾರ ಜಿಲ್ಹೆಗಳಿಗೆ

- **ಫಾಯರಸ್ಟೋನ್, ಡನಲಪ್, ಗುಡ್-ಇಯರ್**
  ಮೊದಲಾದ ಕಂಪನಿಗಳ
  ಟಾಯರ್-ಟ್ಯೂಬ್‌ಗಳ ಸಂಗ್ರಾಹಕರು.
- **ರ್‍ಯಾಲೇ, ರಾಬಿನ್‌ಹುಡ್, ಹರ್ಕ್ಯುಲಸ್, ಫಿಲಿಪ್ಸ**
  ಮೊದಲಾದ
  ಸಾಯಕಲ್ಲುಗಳ ಹಂಚಿಕೆದಾರರು.
- **ಬರ್ಮಾಶೆಲ್ — "ಬರಶೇನ"**
  ಏಜಂಟರು.
- **"ವರ್ದಿಂಗ್ಟನ್ — ಸಿಂಪ್ಸನ್"**
  ಮೊನೋಬ್ಲಾಕ್ ಪಂಪಸೆಟ್ಟುಗಳ
  ಹಂಚಿಕೆದಾರರು.
- **G. E. C. ಮೋಟರ್, ಸ್ಟಾರ್ಟರು, ಸ್ವಿಚ್‌ಗಿಯರ್‌ಗಳ**
  ಸಂಗ್ರಾಹಕರು.
- **ಬೆಸ್ಟ ಆ್ಯಂಡ ಕಂಪನಿಯು**
  ತಾಡಪತ್ರಿಗಳ ವಿತರಕರು.



# ದೇಸಾಯಿ ಮತ್ತು ಕಂಪನಿ

ಹುಬ್ಬಳ್ಳಿ

ಶಾಖೆಗಳು : ಬೆಳಗಾವಿ ಹಾಗೂ ಬಿಜಾಪೂರ

**SERVICE AFTER SALES IS OUR MOTTO**



## AND NOW
## A FRESH PACKAGE FOR EVER – FRESH




## GLUCOSE BISCUITS










REGD.

ಪ್ಯಾಕಿಂಗ್ ನಕ್ಷೆಗಳ ಅಧುನಿಕ ಅಭಿರುಚಿಗೆ ಅನುಗುಣವಾಗಿ ಆಝಾದ ಈ ಹಿಂದೆ ಅಸಂಖ್ಯಾತ ಜನರಿಗೆ ಮನಾನಂದಗೊಳಿಸಿದ ತನ್ನ ಗ್ಲುಕೋಜ್ ಬಿಸ್ಕಿತ್ತುಗಳಿಗೆ ಅವುಗಳ ಗುಣಶ್ರೇಷ್ಠತೆ ಮತ್ತು ರುಚಿಯನ್ನೂ ಕೆಡಿಸದೆ ಹೊಸ ಪ್ಯಾಕಿಂಗ್ ನಕ್ಷೆ ಒದಗಿಸಿ ಮುಂಚೂಣಿಯಲ್ಲಿದೆಯೆಂದು ತಿಳಿಸಲು ಹರ್ಷಿಸುತ್ತಾರೆ.

– ಈಗ ನಿಮ್ಮ ಕಣ್ಮನಗಳನ್ನೂ ಸಹ ತೃಪ್ತಿಗೊಳಿಸುತ್ತದೆ. –

**ಆಝಾದ ಇಂಡಸ್ಟ್ರೀಜ್, ಮಂಗಳೂರು – ೧**

 ....! ದಿವ್ಯ ದೀಪಾವಳಿಯ ಹಾರ್ದಿಕ ಶುಭಾಶಯಗಳು !.... 

# ಹೊಟೆಲ್ ಗೋಕುಲ

(ಉಪಹಾರ, ಊಟ ವ ವಸತಿ)

ಫೋನ : ೪೫೫

ಸ್ಟೇಶನ್ ರೋಡ್, ಕೊಲ್ಹಾಪುರ



# HOTEL GOKUL

**Restaurant, Boarding & Lodging**

**Phone : 455**

**Station Road-KOLHAPUR**

**ಉಪಹಾರ :** ಗ್ರಾಹಕರ ಆಯ್ಕೆಗೆ ಅನುಗುಣವಾಗಿ ದಿನ ನಿತ್ಯ ಬೇರೆ ಬೇರೆ ವೇಳೆಯಲ್ಲಿ ವಿವಿಧ ನಮೂನೆಯ ಸಿಹಿ-ಖಾರ ಖಾದ್ಯಗಳು, ಹಾಗೂ ಬಿಸಿ ವ ತಂಪಾದ ಪಾನೀಯಗಳು ರುಚಿಯಲ್ಲಿ ಮಿಗಿಲು, ಶುಚಿತ್ವಕ್ಕೆ ಪ್ರಾಮುಖ್ಯತೆ.

**ಊಟ :** ಸಸ್ಯಾಹಾರಿ ಊಟ ದಕ್ಷಿಣ-ಉತ್ತರ ಹಿಂದುಸ್ತಾನದ ಎರಡೂ ಪದ್ಧತಿಗಳ ಗ್ರಾಹಕರ ಅಭಿರುಚಿಗಳಿಗೆ ತಕ್ಕದ್ದಾಗಿದೆ.

**ವಸತಿ :** ನೂತನ ಕಟ್ಟಡದಲ್ಲಿ ಆಧುನಿಕ ಮಾದರಿಯ (ಸಿಂಗಲ್ ಹಾಗೂ ಡಬಲ್) ರೂಮ್‌ಗಳು. ಅವಕೆ ಹೊಂದಿ ಸ್ನಾನಗೃಹ-ಅದರಲ್ಲಿ ಬಿಸಿನೀರಿನ ಪ್ರತ್ಯೇಕ ವ್ಯವಸ್ಥೆ. ಸುಖನಿದ್ರೆಗಾಗಿ ಮೆತ್ತಗಿನ 'ಡನ್ ಲಪ್' ಹಾಸಿಗೆ ತಲೆದಿಂಬುಗಳು. ಮೇಲ್ವಿಚಾರಣೆಗೆ ದಕ್ಷ ಆಡಳಿತ ವರ್ಗ. ಕಾರುಗಳನ್ನು ನಿಲ್ಲಿಸಲು ಅನುಕೂಲವಾದ ಸ್ಥಳ.

ಇನ್ನೂ ಅನೇಕ ಸೌಲಭ್ಯಗಳನ್ನು ಹೊಂದಿರುವ ಈ ಅದ್ವಿತೀಯ 'ಹೊಟೆಲ್ ಗೋಕುಲ' ರೇಲ್ವೆಸ್ಟೆಶನ್, ಬಸ್‌ಸ್ಟ್ಯಾಂಡ್ ವ ಮಾರ್ಕೆಟ್‌ಗಳಿಗೆ ತೀರ ಸಮೀಪವಿದ್ದು ನಗರದ ಕೇಂದ್ರ ಸ್ಥಳದಲ್ಲಿದೆ.

ಪ್ರೊ :- ಎಮ್. ಆರ್. ಪ್ರಭು ಹಾಗೂ ಎಮ್. ವಿ. ಕಾಮತ.

---

ನಮ್ಮೆಲ್ಲ ಗ್ರಾಹಕರಿಗೆ ದೀಪಾವಳಿಯ ಶುಭಾಶಯಗಳು



# ಸಿಂಗರ್* ಕಂಪೆನಿಯವರು ಮಾತ್ರ ಮೆರಿಟ್*




## ಹೊಲಿಗೆ ಮೆಶೀನ್‌ನ ಬಗ್ಗೆ ನಿಮಗೆ 5 ವರ್ಷಗಳ ಗ್ಯಾರಂಟಿ ಕೊಡಬಲ್ಲರು.

ಏಕೆಂದರೆ, ಹೊಲಿಗೆ ಮೆಶೀನುಗಳನ್ನು ತಯಾರಿಸುವುದರಲ್ಲಿ ನಮಗೆ 100ಕ್ಕಿಂತಲೂ ಹೆಚ್ಚು ವರ್ಷಗಳ ಜಗದ್ವ್ಯಾಪಕ ಅನುಭವವಿದೆ.

ರೂ. 30ರಷ್ಟು ಕಡಿಮೆ ಹಣ ಕೊಟ್ಟು 'ಹಯರ್ ಪರ್ಚೇಸ್' ವ್ಯವಸ್ಥೆಯ ಪ್ರಕಾರವೂ ಪಡೆಯಬಹುದು.

ಅಧಿಕೃತ ವ್ಯಾಪಾರಿಗಳು :-

# ಎಸ್. ಅಶೋಕ ಕುಮಾರ

ಸ್ಟೇಶನ ರೋಡ, ಹುಬ್ಬಳ್ಳಿ — ಫೋನ: 4086

# ಎಸ್. ಸಿ. ಶೆಟ್ಟರ ಆ್ಯಂಡ್ ಸನ್ಸ

**ಕಬ್ಬಿಣ ಮತ್ತು ಹಾರ್ಡವೇರ ವ್ಯಾಪಾರಿಗಳು,**
**ಪಾಣ್ಯಾಮ್ ಸಿಮೆಂಟ್ ಸ್ಟಾಕಿಸ್ಟರು.**

ಜಿ. ಆಯ್. ಪೈಪ್, ಪೈಪ ಫಿಟಿಂಗ್ಸ್, ಸ್ಟೇನವೇರ ಪೈಪ ಮತ್ತು ಫಿಟಿಂಗ್‌ಗಳು, ಎ. ಸಿ. ಪೈಪು ಮತ್ತು ಫಿಟಿಂಗ್ಸ್ ಹಾಗೂ ಸ್ಯಾನಿಟರಿ ಫಿಟಿಂಗ್ಸ್, ಮೋಟಾರ ಬಾಡಿ ಬಿಲ್ಡಿಂಗ್ಸ್, ಬೋಲ್ಟನಟ್ಟುಗಳು, ಆ್ಯಂಗಲ್ ಆಯಿರ್ನ ಅಲ್ಯುಮಿನಿಯಮ್ ಮತ್ತು ಕಬ್ಬಿಣ ತಗಡುಗಳು ಭರಪೂರ ಸಂಗ್ರಹದಿಂದ ಯೋಗ್ಯ ಧಾರಣೆಗೆ ಯಾವಾಗಲೂ ಸಿಗುತ್ತವೆ.

**ಹಿರೇಪೇಟೆ ಹುಬ್ಬಳ್ಳಿ** ಫೋನ ನಂ. 2229

**ದೀಪಾವಳಿಯು ಹಾಗೂ ನೂತನ ವರ್ಷವು ನಮ್ಮೆಲ್ಲ ಗ್ರಾಹಕರಿಗೂ ಖರೀದಿದಾರರಿಗೂ ಮತ್ತು ಹಿತೈಷಿಗಳಿಗೂ ಶುಭದಾಯಕವಾಗಲಿ!**

 ನಮ್ಮ ಗ್ರಾಹಕರಿಗೂ ಹಿತೈಷಿಗಳಿಗೂ ದೀಪಾವಳಿಯ ಶುಭಾಶಯಗಳು

**— ನೂತನ ವರ್ಷವು ಸರ್ವರಿಗೂ ಮಂಗಲಕರವಾಗಲಿ —**

ಅಖಂಡ ಕರ್ನಾಟಕದಲ್ಲಿ ಜನಾನುರಾಗ ಪಡೆದ ಉತ್ಕೃಷ್ಟವೆಂದು ಹೆಸರುಗಳಿಸಿದ

# ಎ. ರಹಮಾನ ಬೀಡಿಗಳು




**ನಿಮ್ಮ ಸೇವೆಗೆ ಉತ್ತಮವಾಗಿವೆ. ಅಲ್ಲದೆ ನಮ್ಮೆಲ್ಲ ಗ್ರಾಹಕರು ಆದರದಿಂದ ನೀಡುವ ಹೆಚ್ಚಿನ ಪ್ರೋತ್ಸಾಹವನ್ನು ಕೋರುತ್ತೇವೆ.**

★

ಕಾರಖಾನೆಗಳು :

ಧಾರವಾಡ, ಹುಬ್ಬಳ್ಳಿ, ರಾಣೇಬೆನ್ನೂರ

**ತಯಾರಕರು :** ಎಚ್. ಎಂ. ದಾಸನಕೊಪ್ಪ ಆ್ಯಂಡ ಸನ್ಸ, ಧಾರವಾಡ

# JAYES FILM DISTRIBUTORS

GANDHINAGAR
BANGALORE-9.

C/O PRAKASH PICTURES, KOPPIKAR ROAD, HUBLI

WE TAKE THIS OPPORTUNITY OF WISHING OUR NUMEROUS PATRONS, EXHIBITOR FRIENDS & WELLWISHERS



## *A HAPPY DEEPAVALI*



AND CONTINUED GOOD HEALTH AND SUCCESS IN THE YEARS TO COME.

ಅತಿ ಶೀಘ್ರದಲ್ಲಿಯೇ ನಿಮ್ಮ ನೆಚ್ಚಿನ ಚಿತ್ರಮಂದಿರಗಳಲ್ಲಿ ನಿರೀಕ್ಷಿಸಿ !

**EXEMPTED FROM ENTERTAINMENT TAX THROUGH OUT MYSORE-STATE.**

ಅಖಂಡ ಮೈಸೂರು ರಾಜ್ಯದ ಘನ ಸರ್ಕಾರದವರಿಂದ ಮನರಂಜನೆ ತೆರಿಗೆ ಮನ್ನಣೆ ಹೊಂದ



ಕೃಷ್ಣಕುಮಾರಿ
ಉದಯಕುಮಾರ್
ಅಶ್ವಥ್
ರಾಜೇಶ್
ದಿನೇಶ್
ಶೈಲಶ್ರೀ
ಬಾಲಕೃಷ್ಣ
ನರಸಿಂಹರಾಜು







ಜಯೀಸ್ ಪ್ರೊಡಕ್ಷನ್ಸ್

# ನಮ್ಮ ಊರು

·ಕನ್ನಡ·

ಕಥೆ / ಬಿ.ಎಸ್.ನಾರಾಯಣ್
ಸಂಗೀತ / ರತ್ನ
ಛಾಯಾಗ್ರಹಣ / ಚಿಟ್ಟಿಬಾಬು
ನಿರ್ದೇಶನ / ಸಿ.ವಿ.ಶಿವಶಂಕರ್

JAYES FILM RELEASE

# INDEX TO ADVERTISERS

# ಪರಿವಿಡಿ



ವ್ಯಂಗ್ಯಚಿತ್ರಗಳು- ಕೆ. ಆರ್. ಸ್ವಾಮಿ, ಪ್ರಾಣ ಮತ್ತು ಎನ್. ಎಂ. ಶರಣಪ್ಪ

ಚುಟುಕುಗಳು- ಪಂಚಾಕ್ಷರಿ ಹಿರೇಮಠ, ಎಂ. ಗೋವಿಂದ, ಜಿನದತ್ತ ದೇಸಾಯಿ, ಹಾಗೂ ನಿಸಾರ ಅಹಮ್ಮದ

ಕಲೆ-ಕೆ. ಬಿ. ಕುಲಕರ್ಣಿ, ಪಿ. ಆರ್. ಪಾಟೀಲ, ಎನ್. ಸಿ. ದೇಸಾಯಿ, ಮತ್ತು ಎಸ್. ಎನ್. ಸ್ವಾಮಿ

ಫೋಟೊ- ಬಿ. ಕೇಸರಸಿಂಗ

# ಕರ್ಮವೀರ

ಸಂಸ್ಥಾಪನೆ : ೧೫ ಫೆಬ್ರುವರಿ ೧೯೨೧

## ದೀಪಾವಳಿ ಸಂಚಿಕೆ ೧೯೬೮

ಸಂಪಾದಕರು :
ರಂಗನಾಥ ದಿವಾಕರ

ಸಹಾಯಕ ಸಂಪಾದಕರು :
ಎಸ್. ವ್ಹಿ. ಪಾಟೀಲ

## ನಮ್ಮ ನುಡಿ

**ಕ**ರ್ಮವೀರ ತನ್ನ ಇಪ್ಪತ್ತೊಂದನೆಯ ದೀಪಾವಳಿ ಸಂಚಿಕೆಯನ್ನು ಓದುಗರಿಗೆ ತುಂಬ ಅಭಿಮಾನಪುರಸ್ಸರವಾಗಿ ಅರ್ಪಿಸುತ್ತಿರುವನು. ಪ್ರತಿ ವರುಷವೂ ಹೊಸ ಹೊಸ ವೈಶಿಷ್ಟ್ಯಗಳಿಂದ ಓದುಗರನ್ನು ಈ ಅವಧಿಯಲ್ಲಿ ಅವನು ರಂಜಿಸುತ್ತ ಬಂದಿರುವನು. ಓದುಗರು ಅವನು ನೀಡಿರುವ ಸಾಹಿತ್ಯ ರಸದೂಟವನ್ನು ತುಂಬ ಮೆಚ್ಚಿಕೊಳ್ಳುತ್ತಲೂ ಇರುವರು.

ಪ್ರತಿ ವರುಷದಂತೆ ಈ ಸಲವೂ ಹೊಸ ವೈಶಿಷ್ಟ್ಯಗಳನ್ನು ಕರ್ಮವೀರ ಓದುಗರಿಗೆ ಈ ದೀಪಾವಳಿ ಸಂಚಿಕೆಯಲ್ಲಿ ನೀಡಿದ್ದಾನೆ. 'ನಾನು ಮತ್ತು ಸಂಗೀತ' ಈ ಶೀರ್ಷಿಕೆಯಡಿಯಲ್ಲಿ ಅಖಿಲ ಭಾರತ ಖ್ಯಾತಿಯ ನಾಲ್ವರು ಸಂಗೀತಗಾರರಾದ ಶ್ರೀ ಮಲ್ಲಿಕಾರ್ಜುನ ಮನಸೂರ, ಶ್ರೀಮತಿ ಗಂಗೂಬಾಯಿ ಹಾನಗಲ್ಲ, ಶ್ರೀ ಭೀಮಸೇನ ಜೋಶಿ ಹಾಗೂ ಶ್ರೀ ದೊರೆಸ್ವಾಮಿ ಅಯ್ಯಂಗಾರ ಅವರು, ಸಂಗೀತ ತಮ್ಮ ಜೀವನದಲ್ಲಿ ವಹಿಸಿದ ಪಾತ್ರ, ಸಂಗೀತದ ಮಹತಿ, ಸಂಗೀತದ ಸಾಧನೆ, ಸಂಗೀತದ ಬಗೆಗೆ ಆಗಬೇಕಾದ ಕೆಲಸವನ್ನು ತಮ್ಮ ಶಬ್ದಗಳಲ್ಲಿ ಇಲ್ಲಿ ನಿವೇದಿಸಿದ್ದಾರೆ.

ಇದೇ ಬಗೆಯ ಇನ್ನೊಂದು ವಿಶೇಷ ಕಾಣಿಕೆ : ಕನ್ನಡ ಕುವರಿ ಕಾವೇರಿ. ಚಿತ್ರಗಳ ಮೂಲಕ 'ಕಾವೇರಿ' ಕನ್ನಡಿಗರಿಗೆ, ನಮ್ಮ ನೆರೆ-ಹೊರೆಯವರಿಗೆ ನೆರವು ನೀಡುತ್ತಿರುವದರ ಬಗೆ, ಅವರ ಜೀವನದಲ್ಲಿ ಪಾತ್ರವಹಿಸುತ್ತಿರುವ ಪರಿ ಇವುಗಳನ್ನು ಸೆರೆಹಿಡಿದು ಓದುಗರಿಗೆ ನೀಡಲು ಯತ್ನಿಸಿದ್ದೇವೆ. ನಮ್ಮ ವಿಶೇಷ ಛಾಯಾಚಿತ್ರಗ್ರಾಹಕ ಶ್ರೀ ಬಿ. ಕೇಸರಸಿಂಗ್ ಅವರು ತಲಕಾವೇರಿಯಿಂದ—ಕಾವೇರಿಪಟ್ಟಣಂ ವರೆಗೆ ಸ್ವತಃ ಸಂಚರಿಸಿ ಮೋಹಕವಾದ ಅಂದವಾದ ಚಿತ್ರಗಳಲ್ಲಿ 'ಕಾವೇರಿ'ಯ ಕಥೆಯನ್ನು ಸೆರೆಹಿಡಿದುಕೊಂಡು ಬಂದಿರುವರು, ಜೊತೆಗೆ ಸಾಂಪ್ರದಾಯಕವಾದ ಕಥೆಗಳಿಂದ ಕೂಡಿದ ವಿವರಣೆಯೂ ಇದೆ.

ಈ ಎರಡು ವಿಶೇಷ ಕಾಣಿಕೆಗಳೊಂದಿಗೆ ಕನ್ನಡದ ಖ್ಯಾತ ಸಾಹಿತಿಗಳ ಕಥೆ-ಕವನ, ಹರಟೆಗಳು, ನಾಟಕಗಳು ಇನ್ನಿತರ ಲೇಖನಗಳೂ ಇವೆ. ಚುಟುಕುಗಳು, ವ್ಯಂಗ್ಯ ಚಿತ್ರಗಳು ಓದುಗರಿಗೆ ಉಪ್ಪಿನಕಾಯಿಯಂತೆ ನಂಜಿಕೊಳ್ಳಲು ಇವೆ. ಚಿತ್ರ ರಂಗದಲ್ಲಿ ಕೂಡ ಈ ಸಲ ಮುಂಬಯಿ ಚಿತ್ರೋದ್ಯಮದಲ್ಲಿಯ ಕನ್ನಡಿಗರ ಪರಿಚಯ ಮಾಡಿಕೊಡಲಾಗಿದೆ.

ಈ ದೀಪಾವಳಿ ಸಂಚಿಕೆಯನ್ನು ಹೀಗೆ ಸರ್ವಾಂಗಸುಂದರವಾಗಿ ಮಾಡಿ ನಮ್ಮ ಓದುಗರಿಗೆ ಅರ್ಪಿಸುತ್ತಿದ್ದೇವೆ. ಈ ಕಾರ್ಯದಲ್ಲಿ ನಮ್ಮ ಲೇಖಕರು ತಮ್ಮ ಒಳ್ಳೇ ಲೇಖನಗಳಿತ್ತು, ಕಲಾವಿದರು ಅವುಗಳಿಗೆ ಒಪ್ಪವಾದ ಚಿತ್ರಗಳನ್ನು ರೂಪಿಸಿ, ನಮ್ಮ ಸಹೋದ್ಯೋಗಿಗಳು ಈ ಲೇಖನ ಚಿತ್ರಗಳನ್ನು ಅಂದವಾಗಿ ಅಳವಡಿಸಿ ಸಹಾಯ ನೀಡಿದ್ದಾರೆ. ಅದೇ ರೀತಿ ಜಾಹೀರಾತುದಾರರು ತಮ್ಮ ಜಾಹೀರಾತುಗಳನ್ನು ನೀಡಿ ಸಂಚಿಕೆಯ ಕಳೆಕಟ್ಟಿಸಿದ್ದಾರೆ. ಇವರಿಗೆಲ್ಲ ನಮ್ಮ ಕೃತಜ್ಞತೆಗಳು.

ದೀಪಾವಳಿಯು ನಮ್ಮ ಓದುಗರಿಗೆಲ್ಲ ಹರುಷವನ್ನು ತರಲಿ, ಸಕಲರಿಗೂ ಮಂಗಳವುಂಟುಮಾಡಲಿ ಎಂದು ಹಾರೈಸುತ್ತೇವೆ.

—ಸಂಪಾದಕ





# ದೀಪಾವಳಿಯ ನೆನಪುಗಳು



ಡಾ. ಹಾ. ಮಾ. ನಾಯಕ

'ಕರ್ಮವೀರ' ಪತ್ರಿಕೆಯ ಸಂಪಾದಕಮಿತ್ರರು ತಮ್ಮ ದೀಪಾವಳಿ ಸಂಚಿಕೆಗೆ ನಾನೊಂದು ಹರಟೆಯನ್ನು ಬರೆದುಕೊಡಬೇಕೆಂದು ಕೇಳಿದ್ದಾರೆ. ಇದುವರೆಗೂ ನನ್ನನ್ನು ಯಾರೂ ಹರಟೆ ಬರೆಯುವಂತೆ ಕೇಳಿಲ್ಲ; ಮಾತ್ರವಲ್ಲ, 'ಹರಟೆಹೊಡೆ'ಯಲು ಕೂಡ ನನ್ನ ಮಿತ್ರರು ಆಹ್ವಾನಿಸಿದ್ದಿಲ್ಲ. ಸ್ವಭಾವತಃ ಹರಟೆಮಲ್ಲನಲ್ಲದ ನನ್ನ ವಿಷಯದಲ್ಲಿ ಈ ಕೃಪೆ ತುಂಬ ದೊಡ್ಡದು. ಆದರೆ ಈಗ ಈ ಮಿತ್ರರು ನನ್ನನ್ನು ಉರುಳಿನಲ್ಲಿ ಸಿಕ್ಕಿಸಿಬಿಟ್ಟಿದ್ದಾರೆ

"ಹರಟೆ ಎನ್ನುವುದು ಬೇಜಾರಿಗೆ ಭೇಷಜ. ಪೂರ್ವಾನುಭವಗಳ ಸ್ವಪ್ನಾರಣ್ಯದಲ್ಲಿ ಪೋಲಿಪೋಲಿಯಾಗಿ ಅಲೆಯುವುದೇ ಹರಟೆ" ಎಂದು ಕವಿ ಕುವೆಂಪು ಹೇಳಿದ್ದಾರಂತೆ. ಹರಟೆ ಬರೆಯಲು (ಹೊಡೆಯಲು?) ಸಂಪಾದಕಮಿತ್ರರ ಆಹ್ವಾನ ಬಂದಾಗ ನನಗೆ ಮೊದಲು ಹೊಳೆದದ್ದು ಈ ಕವಿವಾಣಿ. ಅದರಲ್ಲಿಯೇ ನಾನು ಪೂರ್ಣ ಆಶ್ರಯವನ್ನೂ ಪಡೆದುಕೊಂಡೆ. ಅರಣ್ಯಸ್ವಪ್ನವೋ ಅಲ್ಲವೊ, ಪೋಲಿಪೋಲಿಯಾಗಿ ಅಲೆಯಲಂತೂ ಋಷಿಕವಿಗಳೇ ಅನುಮತಿ ಕೊಟ್ಟಿದ್ದಾರಲ್ಲ ಎಂದು ಸಮಾಧಾನ ತಂದುಕೊಂಡೆ. ಒಡನೆಯೆ ಮನಸ್ಸು ಕೊರಳು ಕಳಚಿಕೊಂಡು ಕಳೆದ ಕಾಲದ ಕೋಟೆಯನ್ನು ಲಗ್ಗೆಯೇರುವ ಪ್ರಯತ್ನದಲ್ಲಿ ತೊಡಗಿತು. ಕಳೆದುಹೋದ ಕಾಲದ ಕತ್ತಲಲ್ಲಿ ಕಾಲು ಶತಮಾನದ ಕೆಳಗಿನ ದೀಪಾವಳಿಯ ದೀಪಗಳು ಪ್ರಜ್ವಲಿಸಿದವು. ಅವುಗಳ ದಿವ್ಯಕಾಂತಿಗೆ ಬೆರಗಾಗಿ ಮನಸ್ಸು ಒಂದು ಕ್ಷಣ ಅಲ್ಲಿಯೇ ನಿಂತುಬಿಟ್ಟಿತು. ಫಲವಾಗಿ ನಾನು ಸಂಪಾದಕಮಿತ್ರರಿಂದ ಬಚಾವಾದೆನೆಂದುಕೊಂಡಿದೇನೆ.

* * * *

ದಿನಗಳ ಮೇಲೆ ದಿನ ಕಳೆದು ಮತ್ತೆ ಮತ್ತೆ ಬರುತ್ತಿದೆ ದೀಪಾವಳಿ.

ನೆನಪಿನ ಎಳೆ ಬಿಸಿಲಿನಲ್ಲಿ ಹಿಂದಿನ ದೀಪಾವಳಿಯ ನೆನಹುಗಳನ್ನು ಮೆಲುಕಾಡಿಸುವುದೇ ಒಂದು ಆನಂದ. ಇಂದಿನ ಈ ಬೇಸರದ ದಿನಗಳಲ್ಲಿ ಹಲವು ವರ್ಷಗಳ ಹಿಂದೆ ನಾವು ಹುಡುಗರಾಗಿದ್ದಾಗ ಬರುತ್ತಿದ್ದ ದೀಪಾವಳಿ ಅಂದಿಗೇ ಮಾಯವಾಗಿ ಹೋದಂತೆ ಕಾಣಿಸುತ್ತದೆ. ಆದರೆ ಸುಖ ಸಂತೋಷಗಳ ಚೀಲ ಚೀಲಗಳನ್ನು ಹೊತ್ತು ತರುತ್ತಿದ್ದ ಆ ದೀಪಾವಳಿಗಳ ನೆನಪು ಮಾತ್ರ ಸ್ಮೃತಿಫಲಕದಲ್ಲಿ ಹಚ್ಚಹಸುರಾಗಿದೆ; ಹೊಚ್ಚಹೊಸದಾಗಿದೆ

ಈ ಅಂತರದಲ್ಲಿ ಕಳೆದುಹೋಗಿರುವ ಹತ್ತಿಪ್ಪತ್ತು ವರ್ಷಗಳ ಅವಧಿಯೇನೋ ಚಿಕ್ಕದಾಗಿ ತೋರುತ್ತದೆ. ಆದರೆ ಜೀವನದಲ್ಲಿ ಈ ಅವಧಿಯೊಳಗೇ ಒಂದು ಅನಂತಯಾತ್ರೆ ಸಾಗಿಹೋಗಿದೆ. ಬದಲಾವಣೆಗಳ ಯಾತ್ರೆ ಅದು. ಲೋಕದ ಮಾತು ಇರಲಿ; ನಮ್ಮ ಹಳ್ಳಿಯಲ್ಲಿ-ನಿಸರ್ಗದ ಮಡಿಯಲ್ಲಿ, ನೀರವ ಪ್ರಶಾಂತ ಕಣಿವೆಯಲ್ಲಿ, ಸುಖವಾಗಿ ನಿದ್ರಿಸುತ್ತಿದ್ದ ಆ ನಾಲ್ಕೇ ನಾಲ್ಕು ಮನೆಗಳ ಗುಂಪಿನಲ್ಲಿ ('ನಮ್ಮ ಕಡೆ ಊರೆಂದರೊಂದೆ ಮನೆ!')-ಎಷ್ಟೆಲ್ಲ, ಏನೆಲ್ಲ ಬದಲಾವಣೆಗಳಾಗಿ ಹೋಗಿವೆ! ಕ್ಷಣ ಕ್ಷಣಕ್ಕೂ ಹೊಸ ನೀರು ಹರಿದುಬರುತ್ತದೆ; ಹೊಸ ದಿಕ್ಕು ಹಿಡಿದುಹೋಗುತ್ತದೆ.

ನಮ್ಮ ಹಳ್ಳಿಯಲ್ಲಿ ಅಥವಾ ಸುತ್ತಣ ಹಳ್ಳಿಗಳಲ್ಲಿ ಎಲ್ಲೂ ಈಗಿನಂತೆ ಶಾಲೆ ಇರಲಿಲ್ಲ ಹಾಗಾಗಿ ನನ್ನ ಎಳೆಯ ದಿನಗಳೆಲ್ಲ ವಿದ್ಯಾಭ್ಯಾಸದ ನೆವದಿಂದ ದೂರದ ಬಂಧುಗಳ ಮನೆಯಲ್ಲಿ ಕಳೆದುಹೋದವು. ದೂರದಿಂದಲೂ ನನಗೆ ನಮ್ಮ ಮನೆಯ ನೆನಪು ನಮ್ಮ ಹಳ್ಳಿಯ
ನೆನಪು ಸದಾ ಕಾಡುತ್ತಿರುತ್ತಿತ್ತು. ಭೂಮಿ
ಹುಣ್ಣಿಮೆ ಎಂದು ಬರುವುದೋ ಎಂದು ದಿನ
ಗಳನ್ನು ಎಣಿಸುತ್ತಿದ್ದೆ. ಮುಂದಣ ಅಮಾವಾ-
ಸ್ಯೆಯೇ ದೀಪಾವಳಿ ಭೂಮಿ ಹುಣ್ಣಿಮೆ
ನನಗೆ, ನನ್ನಂಥ ಹಳ್ಳಿ ಹುಡುಗರಿಗೆ ಆ ದಿನ
ಗಳಲ್ಲಿ ದೀಪಾವಳಿಯ ಬರುವಿನ ಸೂಚನೆ
ಮೊದಲ ಘಂಟೆ. ಅಂದಿನಿಂದ ಮೇಲಿನ ಹ
ನ್ನೆರಡೂ ದಿನಗಳು ದೀಪಾವಳಿಯ ಸಂಭ್ರಮ
ಸಡಗರಗಳಿಗೆ ಸಾಲದಾಗುತ್ತಿದ್ದವು.

ಏನು ಅಡ್ಡಿ ಅಡಚಣೆಗಳುಂಟಾದರೂ ಭೂಮಿ
ಹುಣ್ಣಿಮೆಗೆ ನಾಲ್ಕು ದಿನಗಳಿರುವ ಹಾಗೆಯೆ
ನಾನು ನಮ್ಮ ಹಳ್ಳಿಯ ಹಾದಿ ಹಿಡಿಯುತ್ತಿದ್ದೆ
ಶಾಲಾಜೀವನದಲ್ಲಿ ವರ್ಷಕ್ಕೊಮ್ಮೆ ಬರುತ್ತಿದ್ದ
ರಸಮಯ ರಜಾದಿನಗಳ ಅವಧಿ ಅದು. ಅ
ಕ್ಕಿಂತ ಮಿಗಿಲಾಗಿ, ಹತ್ತು ಕಾಲ ಹಸುರಾ
ಉಳಿಯಬಲ್ಲ ಹರ್ಷದಾಯಕ ದಿನಗಳೂ ಅವ
ಆಗಿದ್ದವು.

ನಮ್ಮ ಹಳ್ಳಿಯಿಂದ ಪಟ್ಟಣಕ್ಕೆ ವಿದ್ಯಾಭ್ಯಾ
ಸದ ಸಲುವಾಗಿ ಹೋದ ಹುಡುಗ ನಾನೊಬ್ಬನೆ
ಆದ್ದರಿಂದ ನನ್ನ ಬರುವಿಕೆಯನ್ನು ನನ್ನೂರಿ
ಮುಗ್ಧ ಮಿತ್ರರೆಲ್ಲ ಕುತೂಹಲದಿಂದ ನಿರೀಕ್ಷಿಸು
ತ್ತಿದ್ದುದು ಸಹಜವೇ ಆಗಿತ್ತು. ಊರು ಸೇರಿ
ಮರ ದಿನ, ನಾವು ಪರಸ್ಪರ ಎದುರಿಗಿಲ್ಲದಾ
ನಡೆದುಹೋದ ಕೌತುಕ ಸಂಗತಿಗಳ ವಿ
ಮೆಯ, ಪರಾಮರ್ಶೆ ನಡೆಯುತ್ತಿತ್ತು. ಎರ
ನೆಯ ದಿನದಿಂದಲೇ ಆರಂಭವಾಗುತ್ತಿತ್ತು ನಮ
ದೀಪಾವಳಿ.

ದೀಪಾವಳಿ ದೀಪಗಳ ಹಬ್ಬ ಹೇಗೋ
ಹಾಗೆಯೇ ನಮಗೆ ಗೋವುಗಳ ಹಬ್ಬ ಕೂ
ಆಗಿತ್ತು. ಲಕ್ಷ ಲಕ್ಷ ದೀಪಗಳನ್ನು ಹತ್ತಿ

ದೀಪಾವಳಿಯ ಸೊಬಗನ್ನು ಕಾಣುವ ಹಾಗೆಯೇ, ನಾವು ಗೋವುಗಳನ್ನು ಸಿಂಗರಿಸಿ ಪೂಜೆ ಮಾಡಿ ಅವುಗಳ ಅಲಂಕಾರದಲ್ಲಿಯೇ ತೃಪ್ತಿಪಡುತ್ತಿದ್ದೆವು. ಆ ಗೋವುಗಳೇ ನಮ್ಮ ಬದುಕಿನ ಉಸಿರಾಗಿದ್ದವು. ದೀಪಾವಳಿಯಂದು ಅವನ್ನು ಸಿಂಗರಿಸುತ್ತಿದ್ದುದು ಬರಿಯ ಬಣ್ಣದ ಹೂವುಗಳ ಸರದಿಂದಲ್ಲ; ಜೊತೆಗೆ ಇನ್ನೂ ಒಂದೆರಡು ಬಗೆಯ ವಿಶಿಷ್ಟ ಸರಗಳಿರುತ್ತಿದ್ದವು. ಒಂದು ಉಗುಣೆ ಕಾಯಿ ಸರ; ಇನ್ನೊಂದು ಗಿಲಗಿಚ್ಚಿ ಕಾಯಿನ ಸರ. ಪೊದೆ ಪೊದೆಗಳಲ್ಲಿ ಹಬ್ಬಿಕೊಳ್ಳುವ ಉಗುಣೆ ಬಳ್ಳಿ ತಿಳಿ ನೇರಿಲೆ ಬಣ್ಣದ ಸೊಗಸಿನ ಹೂಗಳನ್ನು ಬಿಡತೊಡಗಿದೊಡನೆಯೇ ನಮಗೆ ದೀಪಾವಳಿಯ ಅನುಭವದ ಆರಂಭವಾಗುತ್ತಿತ್ತು. ಈ ಕಾಯಿಗಳನ್ನು ಕೊಯ್ದು ಸಂಗ್ರಹಿಸಲು ತೊಡಗಿದ ದಿನದಿಂದಲೇ ನಿಜವಾದ ದೀಪಾವಳಿ. ನಾವು ಎಷ್ಟು ಉಗುಣೆ ಕಾಯಿ, ಗಿಲಗಿಚ್ಚಿ ಕಾಯಿ ಸಂಗ್ರಹಿಸಿ ನಮ್ಮ ನಮ್ಮ ಮನೆಯ ಹಸುಗಳಿಗೆ, ಎತ್ತುಗಳಿಗೆ (ಎಮ್ಮೆ ಕೋಣಗಳಿಗೆ ಆ ಪುಣ್ಯವಿಲ್ಲ!) ಸರ ಮಾಡುತ್ತಿದ್ದೆವೊ, ಆ ಸರಗಳ ಸಂಖ್ಯೆಯ ಮೇಲೆಯೇ ನಮ್ಮ ಸಾಮರ್ಥ್ಯ ಗೊತ್ತಾಗುತ್ತಿದ್ದುದು; ನಮ್ಮ ಮನಸ್ಸಿಗೆ ಸಮಾಧಾನವಾಗುತ್ತಿದ್ದುದು. ಜೊತೆಗಾತಿಯರಾದ ಚೆಲುವೆಯರಿಗೆ ನಮ್ಮ ವಿಷಯದಲ್ಲಿ ಇದರಿಂದಾಗಿಯೇ ಒಂದು ಬಗೆಯ ಆಸಕ್ತಿ ಮೂಡುತ್ತಿತ್ತು; ಅನುರಾಗಪೂರ್ವಕವಾದ ಅಚ್ಚರಿ ಬೆರೆತ ನಗುವಾದರೂ ಅವರ ಮುಖದಲ್ಲಿ ಮಿಂಚಿ ಮಾಯವಾಗುವುದಕ್ಕೆ ಇದು ಒಂದು ಅವಕಾಶವಾಗಿತ್ತು.

ಚಾಟರಬಿಲ್ಲಿನಿಂದ ಹಕ್ಕಿಗಳ ಶಿಕಾರಿಗೋ, ಬಿಳುಮಾರಲ ಹಣ್ಣುಗಳ ಶೋಧನೆಗೋ ಕಾಡುಮೇಡುಗಳಲ್ಲಿ ಅಲೆಯುತ್ತಿದ್ದಾಗ ನಮ್ಮ ಒಂದು ಕಣ್ಣು ಉಗುಣೆ ಬಳ್ಳಿಗಳ ಮೇಲೊ, ಗಿಲಗಿಚ್ಚಿ ಗಿಡಗಳ ಮೇಲೊ ತಪ್ಪದೆ ಇರುತ್ತಿತ್ತು. ಹೀಗಾಗಿ ಈ ಗಿಡಗಳು, ಬಳ್ಳಿಗಳು ಎಲ್ಲೆಲ್ಲಿವೆಯೆಂಬ ಭೂಗೋಳವೆಲ್ಲ ನಮಗೆ ತಿಳಿದಿರುತ್ತಿತ್ತು. ಯಾವುದನ್ನೂ ಹೊಸದಾಗಿ ಶೋಧಿಸಬೇಕಾಗಿರಲಿಲ್ಲ. ಒಂದು ನಿಮಿಷವನ್ನೂ ವ್ಯಯಿಸದೆ ಸುತ್ತಣ ಗುಡ್ಡ ಬೆಟ್ಟ ಕಣಿವೆ ಕಾಲುವೆಗಳಲ್ಲೆಲ್ಲ ಅಲೆದು ಕಾಯಿಗಳನ್ನು ಆರಿಸುತ್ತಿದ್ದೆವು. ಒಂದೊಂದು ಗುಂಪಿನಲ್ಲಿ ಇಬ್ಬರು, ಮೂವರು. ಇಂಥ ಗುಂಪುಗಳು ಮೂರು ನಾಲ್ಕು. ಎಲ್ಲೆಲ್ಲಿಯೋ ಹತ್ತಿ ಹಾರಿ ನೆಗೆದು ನುಸುಳಿ ಜಿಗಿದು ಜಾರಿ ಸಂಜೆ ಇಳಿ ಬಿಸಿಲಿನ ಸಮಯದಲ್ಲಿ ಎಲ್ಲರೂ ಪೂರ್ವ ನಿಯೋಜಿತ 'ಗೊತ್ತಿ'ನಲ್ಲಿ ಸೇರುತ್ತಿದ್ದೆವು. ಒಬ್ಬೊಬ್ಬರ ಬಳಿಯೂ ಆಗ ಒಂದೆರಡು ಕೊಳಗ ಕಾಯಿಗಳ ಸಂಗ್ರಹವಾಗಿರುತ್ತಿತ್ತು. ಪರಸ್ಪರ ಪರಾಕ್ರಮ ಪ್ರಶಂಸೆಗಳಿಗಂತೂ ಲೆಕ್ಕವಿರಲಿಲ್ಲ.

ಕೆಲವು ಸಲ ಯಾವುದೋ ಗಿಡದ ಬುಡದಲ್ಲಿ ಮರದ ಪೊಟರೆಯಲ್ಲಿ ನೆರೆಯೂರಿನ ಹುಡುಗರು ಕೊಯ್ದು ಅಡಗಿಸಿಟ್ಟಿರುತ್ತಿದ್ದ ಕಾಯಿಗಳನ್ನೂ ನಾವು ಅಪಹರಿಸುತ್ತಿದ್ದೆವು. ಬದಲಿಗೆ ನಮ್ಮ ಸಂಗ್ರಹದಿಂದಲೂ ಸರಗಳು ಮಾಯವಾಗಿ ಹೋಗುತ್ತಿದ್ದ ಸಂದರ್ಭಗಳು ವಿರಳವಾಗಿರಲಿಲ್ಲ.

## ದೀಪಾವಳಿಯ ಶುಭಾಶಯ !



ದೀವಳಿಗೆಯು ಹೊಸ ವರುಷದ ಚೈತನ್ಯದ ಕಾಂತಿ !
ನೀಡಲಿ ಸುಖ ಸಿರಿ–ಸಂಪದ ಸದ್ಭವನೆ ಶಾಂತಿ ||
ಜಗದೊಡಲಲಿ ಸೆಲೆಯೊಡೆಯಲಿ ಭಾವೈಕ್ಯದ ಝರಿಗೆ |
ನೀರುಣಿಸಲಿ ಧೀ–ದೇವಿಯು ಸುಜ್ಞಾನದ ಬೆಳಗೆ ||

— ಭಾಲಚಂದ್ರ ಘಾಣೇಕರ

ಕಳ್ಳತನಕ್ಕಾಗಿಯೇ ಆಗಾಗ ಕದ್ದು ಓಡಾಡುವುದೂ ಸಾಮಾನ್ಯವಾಗಿತ್ತು. ಯಾವುದಾದರೂ ದೊಡ್ಡ ಶೇಖರಣೆಗೆ ಮುತ್ತಿಗೆ ಹಾಕಿದಾಗಲಂತೂ, ಅಪರಾಧ ದೊಡ್ಡವರ ಕಿವಿಯ ತನಕ ಹೋಗುತ್ತಿತ್ತು.

ಹಗಲೆಲ್ಲ ಸಂಗ್ರಹಿಸುತ್ತಿದ್ದ ಉಗುಣೆ- ಗಿಲಗಿಚ್ಚಿ ಕಾಯಿಗಳನ್ನು ರಾತ್ರಿ ನಾಲ್ಕಾರು ಹಣತೆಗಳ ಮಂದ ಬೆಳಕಿನಲ್ಲಿ ಸರ ಮಾಡುತ್ತಿದ್ದೆವು. ಈ ಕಾರ್ಯದಲ್ಲಿ ಮನೆಯ ಹಿರಿಯರೂ ಕೈ ಹಾಕುತ್ತಿದ್ದರು. ಆ ಹೊತ್ತಿನಲ್ಲಿ ಹಬ್ಬದ ಏರ್ಪಾಡುಗಳೆಲ್ಲ ಚರ್ಚೆಗೆ ಬರುತ್ತಿದ್ದವು. ಗೋಪೂಜೆಯಲ್ಲಿ ಪ್ರಾತಿನಿಧಿಕವಾದ ದನ ಯಾವುದು ? ಕರು ಯಾವುದು ? ಕಳೆದ ವರ್ಷ ಕೆಂಪು ಹೋರಿ ಮೈ ಕೊಳೆಸಿಕೊಳ್ಳದೆ ಗಲಾಟೆ ಮಾಡಿತಲ್ಲ, ಈ ಸಲ ಅದನ್ನು ಉಪಾಯವಾಗಿ ನೀರಿಗಿಳಿಸುವ ಬಗೆಯೇನು ? ಕೊಡುಕೊಟ್ಟಿಗೆಯಲ್ಲಿ ಸುಣ್ಣ ಕೆಮ್ಮಣ್ಣುಗಳ ಸೇರು ಗುರುತನ್ನು ಹಾಕುವ ವಿಧಾನ ಯಾವುದು ?- ಸಮಸ್ಯೆಗಳು ಒಂದೆ, ಎರಡೆ ? ದೊಡ್ಡವರಿಗೂ ಚಿಕ್ಕವರಿಗೂ ಸಮನಾಗಿ ಒಪ್ಪಿಗೆಯಾಗುವ ಪರಿಹಾರಗಳನ್ನು ಹುಡುಕುವುದು ಎಷ್ಟೋ ಸಲ ಕಷ್ಟಸಾಧ್ಯವಾಗುತ್ತಿತ್ತು. ಅವರವರ ನೆಚ್ಚಿನ 'ಕಾಲ್ನಡೆ'ಗಳಿಗೆ ಅವರವರು ವಿಶೇಷ ರೀತಿಯ ಸರಗಳನ್ನು ಸಿದ್ಧಪಡಿಸುತ್ತಿದ್ದರು.

ಹಾಗೂ ಹೀಗೂ ದಿನಗಳು ಉರುಳಿ ಹೋಗುತ್ತಿದ್ದವು. ದೀಪಾವಳಿ ತೀರ ಸನಿಯಕ್ಕೆ ಬಂದುಬಿಡುತ್ತಿತ್ತು. ಇನ್ನೇನು ನಾಲ್ಕು ದಿನ ಇದೆ ಎನ್ನುವಾಗ ಪಕ್ಕದ ಹಳ್ಳಿ ಅಸಿಕೊಪ್ಪದ ಫಕೀರ ಸಾಹೇಬರು ನಮ್ಮೂರಿನಲ್ಲಿ ಬೀಡು ಬಿಡುತ್ತಿದ್ದರು. ಬಣ್ಣ ಬಣ್ಣದ ಕಾಗದಗಳನ್ನು ತಂದು ಗೂಡುದೀಪಗಳನ್ನು ಮಾಡಿ ಕೊಡುವುದು, ಅವನ್ನು ತೂಗು ಹಾಕಲು ನಾನಾ ಎತ್ತರದ ಕಂಬಗಳನ್ನು ನೆಟ್ಟು, ಅವುಗಳ ಸೊಗಸನ್ನು ಹೆಚ್ಚಿಸುವಂತೆ ಸಿಂಗರಿಸುವುದು ಫಕೀರ

...ಸುತ್ತಣ ಗುಡ್ಡ ಬೆಟ್ಟ ಕಣಿವೆ ಕಾಲುವೆಗಳಲ್ಲೆಲ್ಲ ಅಲೆದು ಕಾಯಿಗಳನ್ನು ಆರಿಸುತ್ತಿದ್ದೆವು.



## ಇವರಿಗೇ ನಿಮ್ಮ ಮತ ಕೊಡಿರಿ



ನಮ್ಮೂರ ಸಂಘಕ್ಕೆ ಕತ್ತೆಯೇ ಹುರಿಯಾಳು
ಊರಿಗೇ ಬೇರಿಲ್ಲ ಇದರಂಥ ಮುಂದಾಳು
ತಿನ್ನುವುದು ಕಸ-ಮುಸುರೆ
ಹರಕು ಕಾಗದ ಕಡ್ಡಿ
ತಿನ್ನಲಾರದೆ ಊರ? ಒಮ್ಮೆ ಅರಿಸಿನೋಡಿ

– ಜಿನದತ್ತ ದೇಸಾಯಿ

ಸಾಹೇಬರ ಪಾಲಿನ ಕೆಲಸವಾಗಿತ್ತು. ಹಣ್ಣು ಗಡ್ಡದ ನಡುವೆ ಮಂದಹಾಸದ ನಗೆಯನ್ನು ಚೆಲ್ಲುತ್ತಾ, ಆ ನಗುವೇ ತಮ್ಮ ಬದುಕಿನ ಆಸರೆಯೇನೊ ಎಂಬಂತೆ ಅತ್ತಿತ್ತ ಓಡಾಡುತ್ತಿದ್ದ ಅವರು ಮಕ್ಕಳ ಪಡೆಗೊಂದು ನಿಧಿಯಾಗಿದ್ದರು. ಗೂಡುದೀಪ ಮಾಡುವಾಗ ಕತ್ತರಿಸುತ್ತಿದ್ದ ಬಣ್ಣದ ಕಾಗದಗಳ ಚೂರುಪಾರನ್ನು ನಮ್ಮ ಪ್ರೀತಿಪಾತ್ರ ಎಳಗರುಗಳ ಸಿಂಗಾರಕ್ಕಾಗಿ ಅವರು ಕೊಡುತ್ತಿದ್ದರು. ಬದಲಿಗೆ ನಾವು ಸಾಹೇಬರಿಗೆ ಎರಡು ವೀಳೆಯದೆಲೆಗಳನ್ನೊ, ನಾಲ್ಕು ಅಡಿಕೆಗಳನ್ನೊ ಕೊಡುತ್ತಿದ್ದೆವು. ಆದರೆ ಅವರಿಗೆ ಈ ಎಲೆ ಅಡಿಕೆಗಳಿಗಿಂತ ನಮ್ಮ ಸಂತೋಷವೇ ನೂರು ಪಾಲು ಹೆಚ್ಚಿನ ಆನಂದವನ್ನು ಕೊಡುತ್ತಿತ್ತು. ಒಂದೊಂದು ಸಲ ಅವರೇ ಕಾಗದದ ಸರಗಳನ್ನೂ ಕೋಡುವ ಟೋಪಿಗಳನ್ನೂ ಮಾಡಿ ಕೊಡುತ್ತಿದ್ದುದೂ ಉಂಟು.

ಅಮಾವಾಸ್ಯೆಯ ದಿವಸವೇ ಎಲ್ಲ 'ಕಾಲ್ನಡೆ'ಗಳನ್ನೂ 'ಮೈ ತೊಳೆಸ'ಬೇಕಾಗುತ್ತಿತ್ತು. ಹೊಳೆಯಲ್ಲಿ ನಡೆಯುತ್ತಿದ್ದ ಈ ಮಹಾಕಾರ್ಯದಲ್ಲಿ ದೊಡ್ಡವರಿಗಿಂತ ಹುಡುಗರದೇ ಉತ್ಸಾಹ, ಆರ್ಭಟ. ಆದರೆ ನಿಜವಾಗಿ ಕೆಲಸ ನಡೆಯುತ್ತಿದ್ದುದು ದೊಡ್ಡವರಿಂದಲೆ. ದೊಡ್ಡ ದೊಡ್ಡ ಎತ್ತುಗಳೂ, ಗೌರಿಯಂಥ ಚೂಪುಕೋಡಿನ ಹಸುಗಳೂ ನಮ್ಮಿಂದ ಮೈತೊಳೆಸಿಕೊಳ್ಳಲು ಸರ್ವಥಾ ಒಪ್ಪುತ್ತಿರಲಿಲ್ಲ. ಗಾಬರಿಯಿಂದ ಗುಂಡಿಗೆ ಹಾರಿ ಈಜಿಕೊಂಡು ದಡ ಸೇರುತ್ತಿದ್ದ ಹೋರಿಗಳೂ, ಚಂಗಾಳಿಯಾಡುತ್ತಿದ್ದ ಗುಡ್ಡ ಮಣಕಗಳೂ ಕೇಕೆಹಾಕಿ ಚಪ್ಪಾಳೆ ತಟ್ಟಿ ಅವನ್ನು ಹಿಂಬಾಲಿಸುತ್ತಿದ್ದ ಹುಡುಗರೂ ದೊಡ್ಡವರ ಶಾಪಕ್ಕೆ ಗುರಿಯಾಗುತ್ತಿದ್ದರು. ಆ ದಿನ ರಾತ್ರಿ ಮನೆಯಲ್ಲಿ ಯಾರಿಗೂ ನಿದ್ರೆಯಿಲ್ಲ. ಅದು 'ಬೂರೆ'ಯ ರಾತ್ರಿ ಅಭ್ಯಂಜನಕ್ಕೆ ಸಿದ್ಧಪಡಿಸುವ ರಾತ್ರಿ. ಹೆಣ್ಣುಮಕ್ಕಳಿಗೆಲ್ಲ ನೀರು ತುಂಬುವ ಹಬ್ಬದ ಸಿದ್ಧತೆ. ಸಾಹಸಿಗಳಿಗೆ ಮಾತ್ರ 'ಬೂರೆ ಕಳುವಿ'ನ ಅವಕಾಶ. ಅಂದಿನ ಕಳ್ಳತನಕ್ಕೆ ಯಾವ ದೋಷವೂ ತಟ್ಟದು. ಸಾಹಸದ ಕಥೆಗಳಿಗೆ ಕೊನೆಯಿಲ್ಲ, ಮೊದಲಿಲ್ಲ. ಮರುದಿನದ ಸಡಗರದ ಸಿದ್ಧತೆಗಳಿಗೆ ರಾತ್ರಿ ಸಾಕಾಗುತ್ತಲೇ ಇರಲಿಲ್ಲ. ರಾಶಿರಾಶಿ ಚೆಂಡು ಹೂಗಳನ್ನು ಮಾಲೆ ಕಟ್ಟುವುದರಲ್ಲಿಯೇ ಬೆಳಗಾಗಿ ಹೋಗುತ್ತಿತ್ತು. ಒಂದೊಂದು 'ಕಾಲ್ನಡೆ'ಗೆ ಕೊನೆಯ ಪಕ್ಷ ಒಂದಾದರೂ ಚೆಂಡುಹೂವಿನ ಸರ ಇಲ್ಲದಿದ್ದರೆ ದೀಪಾವಳಿ ಬಂದಾದರೂ ಏನು ಪ್ರಯೋಜನ?

ಬೆಳಗಾದ ಮೇಲೆ, ಗೋಪೂಜೆಯಾಗುವುದಕ್ಕೆ ಮೊದಲೇ ಉಳಿದ ಎಲ್ಲ ದನಕರುಗಳ ಶೃಂಗಾರವೂ ಮುಗಿದಿರುತ್ತಿತ್ತು. ಉಗುಣೆ ಕಾಯಿ ಸರ, ಗಿಲಗಿಚ್ಚಿ ಕಾಯಿ ಸರ, ಚೆಂಡು ಹೂವಿನ ಸರ; ಕೆಮ್ಮಣ್ಣು ಪಟ್ಟೆ, ಜೇಡಿ ಪಟ್ಟೆ; ಕೋಡು ಕೊಳಗುಗಳಿಗೆ ಬಣ್ಣ ಬಗೆಬಗೆಯ ಸಿದ್ಧತೆಗಳು ನಡೆಯುತ್ತಿದ್ದವು ಪಚ್ಚೆತೆನೆ, ಹಣ್ಣಡಿಕೆ, ಬಾಳೆಹಣ್ಣು, ವೀಳೆಯದೆಲೆ, ಚಪ್ಪೆರೊಟ್ಟಿ ಮುಂತಾದವುಗಳನ್ನು ಕಟ್ಟಿ ಮಾಡಿದ 'ಚಪ್ಪೆರೊಟ್ಟಿ ಸರ'ವನ್ನು ಎಲ್ಲ 'ಕಾಲ್ನಡೆ'ಗಳಿಗೂ ಕಟ್ಟಿ ಮುಗಿಸಿದ ಮೇಲೆಯೆ ಗೋಪೂಜೆ. ನಮ್ಮ ಮನೆಗೇ ಅತಿ ಮುಚ್ಚಿನದಾದ, ಆದರೆ ಆ ಹೊತ್ತಿನಲ್ಲಿ 'ಕರಾವು' ಇರುವ, ಕರು ಇರುವ ಯಾವುದಾದರೊಂದು ಹಸುವಿಗೆ ವಿಶೇಷ ಪೂಜೆ ಅತ್ತ ಕೊಟ್ಟಿಗೆಯಲ್ಲಿ ಒಂದರ ಕೊರಳಲ್ಲಿರುವ ಚಪ್ಪೆರೊಟ್ಟಿಯನ್ನು ಕಿತ್ತು ತಿನ್ನಲು ಇನ್ನೊಂದರ ಸತತ ಸಾಹಸ. ಹೀಗಾಗಿ ಕೊಟ್ಟಿಗೆಯೆಲ್ಲ ಗುದ್ದುಬಳಿ ಬರುತ್ತಿತ್ತು; ಗುಲ್ಲೋ ಗುಲ್ಲಾಗಿರುತ್ತಿತ್ತು. ಅಂದು ತಿನ್ನಲು ದೊರೆಯುತ್ತಿದ್ದ ಅಕ್ಕಿಕಾಯಿ ಬಾಳೆಹಣ್ಣುಗಳ ರುಚಿಯಿಂದ ಅವೆಲ್ಲ ನಿತ್ಯ ದೀಪಾವಳಿಯನ್ನು ಹಾರೈಸಿದ್ದರೆ ಆಶ್ಚರ್ಯವಿಲ್ಲ

ಪೂಜೆ ಮುಗಿದ ಮೇಲೆ ಎಲ್ಲವನ್ನೂ ಒಟ್ಟಿಗೆ ಬಿಟ್ಟು ಗದ್ದಲವೆಬ್ಬಿಸಿ, ಗಡಿಬಿಡಿ ಮಾಡಿ ಕೋವಿ ಈಡುಗಳನ್ನು ಹಾರಿಸಿ, ಜಾಗಟೆ ಹೊಡೆದು, ಗಂಟೆ ಬಾರಿಸಿ, ಡಬ್ಬಿ ಹೊಡೆದು ಬಯಲಿಗೆ ಓಡಿಸುತ್ತಿದ್ದೆವು. ಹಸುಗಳನ್ನೂ ಕರುಗಳನ್ನೂ ಒಟ್ಟಿಗೆ ಬಿಡುತ್ತಿದ್ದುದರಿಂದ ಕರುಗಳಿಗೆ ಕೆಚ್ಚಲಲ್ಲಿ ಬಾಯಿಡುವುದಕ್ಕೆ ಅವಸರ; ಹಸುವಿಗೋ ಈ ಗದ್ದಲದಿಂದ ಬಿಡುಗಡೆಯಾದರೆ ಸಾಕೆಂಬ ಕಾತರ; ಕಣ್ಣುಕಟ್ಟಿದ ಇಂಥ ಪರಿಸ್ಥಿತಿಯಲ್ಲಿ ಓಡುವ ಕಾಲ್ನಡೆಗಳ ಕೊರಳಿನಿಂದ ಚಪ್ಪೆರೊಟ್ಟಿಗಳನ್ನು ಹಸಿದುಕೊಳ್ಳುವ ಹುಡುಗರ ದಂಡು ಅವರ ಕೇಕೆ ಕೋಲಾಹಲ; ಇದೊಂದೂ ಅರ್ಥವಾಗದೆ ಸುಮ್ಮನೆ ರಂಪವೆಬ್ಬಿಸುವ ನಾಯಿಗಳ ಬೊಗಳಿಕೆ. ಒಟ್ಟಿನಲ್ಲಿ ವಿಚಿತ್ರ ಮೇಳ; ಎಲ್ಲವೂ ಗದ್ದಲಮಯ.

ಗೋಪೂಜೆ ಮುಗಿಯುತ್ತಲೇ ಬಲೀಂದ್ರ ಪೂಜೆಗೆ ಸಿದ್ಧವಾಗುತ್ತಿದ್ದೆವು. ಚಾವಡಿಯ ಒಂದು ಮೂಲೆಯಲ್ಲಿ ಗೃಹಕೃತ್ಯದ, ವ್ಯವಸಾಯದ ಸಲಕರಣೆಗಳನ್ನೆಲ್ಲ ಚೆನ್ನಾಗಿ ತೊಳೆದು ಅಂದವಾಗಿ ಜೋಡಿಸಿಡಲಾಗುತ್ತಿತ್ತು. ನೇಗಿಲು ನೊಗ ಕತ್ತಿಗಳಿಂದ ಹಿಡಿದು ಬೀಸುವಕಲ್ಲು ಕಡಗೋಲುಗಳ ತನಕ ಎಲ್ಲವನ್ನೂ ಸೇರಿಸಲಾಗುತ್ತಿತ್ತು. ಇವು ಪ್ರತಿಯೊಂದನ್ನು ಹೂವು, ಹಲಸು ಮಾವಿನಸೊಪ್ಪುಗಳಿಂದ, ಜೇಡಿ ಕೆಮ್ಮಣ್ಣು ಬಣ್ಣಗಳಿಂದ ಬಗೆಬಗೆಯಾಗಿ ಅಲಂಕರಿಸುತ್ತಿದ್ದವು. ಮೇಲುಗಡೆಗೆ ಮೋಹಕವಾಗಿ ಪಳುವಳಿಕೆಗಳನ್ನು ಕಟ್ಟುತ್ತಿದ್ದೆವು. ಬಲೀಂದ್ರ ಪೂಜೆಯ ಸಿದ್ಧತೆ ಅವರವರ ರಸಿಕ ದೃಷ್ಟಿಗೆ ಅನುಗುಣವಾಗಿರುತ್ತಿತ್ತು. ಒಟ್ಟಿನಲ್ಲಿ ಇದು ತುಂಬ ದೀರ್ಘಕಾಲದ ಸಿದ್ಧತೆಯಾಗಿತ್ತು

ಎಲ್ಲವೂ ಸಿದ್ಧವಾಗಿ ಬಲೀಂದ್ರ ಪೂಜೆ ಮುಗಿಯುವ ಹೊತ್ತಿಗೆ ಸಂಜೆ ನಾಲ್ಕು ಐದು ಘಂಟೆಯಾಗುತ್ತಿತ್ತು. ಆದಾದಮೇಲೆ ತುಲಸಿ, ಬೇಟ, ಕೊಟ್ಟಿಗೆ ಪಣ್ತ, ಗಾಡಿ ಹಾಗೂ ಹೊಸ್ತಿಲುಗಳ ಪೂಜೆಯಾಗಬೇಕಾಗುತ್ತಿತ್ತು. ಅಷ್ಟರಲ್ಲಿ ಕತ್ತಲಾಗಿಬಿಡುತ್ತಿತ್ತು. ಆಗ ಎಲ್ಲರೂ ಅವರವರ ಗದ್ದೆ ತೋಟಗಳಿಗೆ ದೀಪ ತೋರಿಸಲು ಹೊರಡುತ್ತಿದ್ದರು. ಅವರ ಜೊತೆ ನಾವಿಲ್ಲದಿದ್ದರೆ ಆಗುತ್ತಿರಲಿಲ್ಲ. ಚಿಕ್ಕದಾಗಿ ಸೀಳಿದ ಅಡಕೆ ದಬ್ಬೆ ಕಡ್ಡಿಗಳಿಗೆ ಎಣ್ಣೆಯಲ್ಲಿ ತೋಯಿಸಿದ ಬಟ್ಟೆಯನ್ನು ಸುತ್ತಿ ಅವುಗಳ ಕಟ್ಟನ್ನು ಮೊದಲೇ ಸಿದ್ಧಪಡಿಸಿಟ್ಟಿರುತ್ತಿದ್ದರು ಈಗ ಒಂದೊಂದಕ್ಕೂ ಉರಿತಾಗಿಸಿ ಪ್ರತಿಗದ್ದೆಗೂ ಒಂದೊಂದನ್ನು ಹುಗಿಯುವುದಷ್ಟೇ ಕೆಲಸ. ಬಲಿಚಕ್ರವರ್ತಿ ತನ್ನ ನೆಲದಲ್ಲಿ ಬೆಳಕು ಕಾಣದೆ ನಿರಾಶನಾಗಬಾರದಲ್ಲ! ದೀಪ ಹೊತ್ತಿಸಲು ಹೋದವರ ಕೂಗು "ದಿಪ್ದ ದಿಪ್ದ ದೀಪೋಳಿಗೆ" ಎಲ್ಲ ಕಡೆಯೂ ಪ್ರತಿಧ್ವನಿಸುತ್ತಿತ್ತು ಬಂಗಾರವನ್ನೇ ತೆನೆಗರ್ಭದಲ್ಲಿ ಅಡಗಿಸಿಟ್ಟುಕೊಂಡ ಹಸಿರು ಹೊಲಗಳ ತುಂಬ ಮಿಣಿಮಿಣಿ ಮಿನುಗುತ್ತಿದ್ದ ಸಹಸ್ರಾವಧಿ ದೀಪಗಳು ಬಾನನ್ನೇ ಭುವಿಗಿಳಿಸಿಬಿಡುತ್ತಿದ್ದವು. ಆ ಚೆಲುವು ನಮ್ಮ ಎಳೆಯ ಹೃದಯಗಳನ್ನು ಅರಳಿಸಿ ತೇಲಿಸುತ್ತಿತ್ತು ಈ ದೀಪಮಾಯೆಯನ್ನು ನೋಡಲು ಬಲಿ ಬಯಸಿದ್ದರೆ ಆಶ್ಚರ್ಯವೇನು?

ದೀಪ ತೋರಿಸಲು ಹೊರಗೆ ಹೋದವರೆಲ್ಲ ಮನೆಗೆ ಬಂದೊಡನೆಯೇ, ಅಂಗಳದಲ್ಲಿ ಗೂಡು ದೀಪಗಳನ್ನು ಏರಿಸುವ ಕಾರ್ಯಕ್ರಮ. ಇದರಲ್ಲಿ ಹೆಂಗಸರೂ ಪಾಲುದಾರರು. ಅನಂತರ ಈ ಮೊದಲೆ ಪೂಜೆಗೊಂಡಿದ್ದ ಬಲೀಂದ್ರ, ಕೊಟ್ಟಿಗೆ ಬೇಟ, ಹೊಸ್ತಿಲು ಮೊದಲಾದವುಗಳಿಗೆಲ್ಲ ಇನ್ನೊಮ್ಮೆ ಪೂಜೆ ಮಾಡಿ ಹಾಲು ತುಪ್ಪ ತೋರಿಸಬೇಕಾಗುತ್ತಿತ್ತು ಆ ಮೇಲೆ ಊಟವಾಗುವ ಹೊತ್ತಿಗೆ ರಾತ್ರಿ ಎಂಟು ಗಂಟೆ ದಾಟಿರುತ್ತಿತ್ತು.

ಇಷ್ಟೆಲ್ಲ ಆದ ಮೇಲೆ 'ಅಂಟಿಗೆ ಪಂಟಿ'ಗೆಯವರ ಹಾಡು ಕೇಳದೆ ನಿದ್ದೆ ಬರುತ್ತದೆಯೆ? ಅಂಟಿಗೆ ಪಂಟಿಗೆ ನಮ್ಮ ಕಡೆ ಒಕ್ಕಲಿಗರ ದೀಪಾವಳಿಯ ವೈಶಿಷ್ಟ್ಯ, ನಮ್ಮ ಜಾನಪದದ ಒಂದು ಮುಖ್ಯ ಅಂಶ. ಇದು ಎಷ್ಟೋ ಸಲ ನನಗೆ ಕ್ರಿಸ್ಮಸ್ ಕೆರಾಲಿನ ನೆನಪು ತರುತ್ತದೆ. ದೀಪಾವಳಿಯ ರಾತ್ರಿಗಳಲ್ಲಿ ಮನೆಯಿಂದ ಮನೆಗೆ ದೀಪ ಮುಟ್ಟಿಸುತ್ತ ಹಾಡುತ್ತ ಹೋಗುವ

ಆಕರ್ಷಣೀಯ ಸಂಪ್ರದಾಯ ಇದು. ಹಾಡು ಗಾರರ ಮುಖ್ಯ ತಂಡ ಹಾಡುತ್ತದೆ. ಆ ಹಾಡು ಗಳೋ ಜನಪದ ಕವಿಗಳು ಕಂಡ ಪೌರಾಣಿಕ ಪ್ರಪಂಚ; ಶೃಂಗಾರ, ವೀರ, ಹಾಸ್ಯ, ಕರುಣೆ ಗಳ ಮಡುಗಳು; ಅಲ್ಲಿನ ಪಾತ್ರವೈವಿಧ್ಯ, ವರ್ಣನಾಚಾತುರ್ಯ ಸಂಭಾಷಣೆಯ ಸೊಗಸು ಅಲ್ಲಿಗೇ ವಿಶೇಷಲು. ಹಿಮ್ಮೇಳದವರು ಪಲ್ಲವಿ ಹಾಡುತ್ತಾರೆ ಹಾಡುಗಾರರ ಜೊತೆ ದೀವಟಿಗೆ ಯವರು, ಸಂಭಾವನೆ ಹೊರುವವರು ಉತ್ಸಾಹಿ ರಸಿಕರು ಹೀಗೆ ಹಲವರ ಒಂದು ಗುಂಪೇ ಇರು ತ್ತದೆ. ಮನೆ ಮನೆ ತಿರುಗಿ ಅಕ್ಕಿಯನ್ನೊ, ಬತ್ತ ವನ್ನೊ ಜೊತೆಗೆ ಹಣವನ್ನೊ ಸಂಗ್ರಹಿಸುತ್ತಾರೆ. ಈ ಸಂಗ್ರಹದಿಂದ ಮುಂದೆ ಒಂದು ದಿನ ಔಂತ್ಲ (ಔತಣ) ಮಾಡಿ ಊರಿನವರನ್ನೆಲ್ಲ ಆಹ್ವಾನಿಸಿ ರಸಕವಳ ಹಾಕಿ ಕೆರೆಯ ನೀರನ್ನು ಕೆರೆಗೆ ಚೆಲ್ಲು ತ್ತಾರೆ

ನಮ್ಮ ಜಾನಪದದ ಜೀವಂತ ಸಂಪ್ರದಾಯ ಗಳಲ್ಲಿ ಒಂದಾಗಿರುವ ಅಂಟಿಗೆ ಪಂಟಿಗೆ ಹಾಡು ಗಳು ಕೇಳಲು ತುಂಬ ಆಕರ್ಷಕ. ಈ ಗುಂಪಿ ನವರು ಎಷ್ಟು ಹೊತ್ತಿಗೆ ಬಂದಾರು? ಈ ವರ್ಷ ಎಷ್ಟು ಗುಂಪುಗಳು ಬಂದಾವು? ಎಂಬುದು ಆ ರಾತ್ರಿಯ ನಮ್ಮ ಚರ್ಚಾ ವಿಷಯವಾಗಿರು ತ್ತಿತ್ತು. ಪ್ರಾಸಂಗಿಕವಾಗಿ ಹಿಂದಿನ ವರ್ಷದ ಔಂತ್ಲದಲ್ಲಿ ಆದ ನ್ಯೂನತೆಗಳು. ಕಣ್ಮರೆಯಾಗಿ ಹೋದ ಹಳೆ ಕಾಲದ ಹಾಡುಗಾರರು- ಹೀಗೆ ನಾನಾ ವಿಷಯಗಳು ಪ್ರಸ್ತಾಪಕ್ಕೆ ಬರುತ್ತಿ ದ್ದವು. ಈ ಮಾತುಗಳು ಮುಗಿಯುವ ಮೊದಲೆ ತೂಕಡಿಕೆಯ ತೊಟ್ಟಿಲು ನಮ್ಮನ್ನು ತೂಗು ತ್ತಿರುತ್ತಿತ್ತು......

ಮರುಕ್ಷಣವೆ ಕಾಡಮೌನವನ್ನು ಸೀಳಿ ಬಂದ 'ದಿಪ್ಪಡು' ನಮ್ಮನ್ನೆಲ್ಲ ಎಚ್ಚರಿಸುತ್ತಿತ್ತು "ದಿಪ್ಪ್ ದಿಪ್ಪ್ ದೀಪೋಳಿಗೆ" ಅದೇ ಆ ಕೂಗು. ವಿನೋದಕ್ಕೆ ಅದೇ ಗುಂಪಿನ ಹುಡು ಗರ ಮರುದನಿ "ಹಾರ್ರ ಮನೆ ಹೋಳಿಗೆ." ಗುಂಪು ಹತ್ತಿರ ಹತ್ತಿರ ಬಂದಂತೆ ಕೂಗೂ ಸ್ಪಷ್ಟ. ಅಂಗಳಕ್ಕೆ ಬರುವ ಹೊತ್ತಿಗೆ ಕೂಗು ನಿಂತು ಹಾಡು ಪ್ರಾರಂಭವಾಗುತ್ತದೆ "ತಂದೀವಿ ದೀಪ ದೇವರ ಕೊಳ್ಳೀರಯ್ಯ" ಎಂದು ಅವರು ಆಹ್ವಾನಿಸುತ್ತಾರೆ ಮನೆಯ ಗೃಹಿಣಿ ಬಾಗಿಲು ತೆಗಯಬೇಕು. "ಬಾಗಿಲು ತೆಗೆದ ಕೈಗೆ ಭಾಗ್ಯದ ಮಳೆ ಬರಲಿ" ಎಂದೂ "ದೀಪ ಕೊಂಡವಂಗೆ ದೊರೆಪದವಿ ದೊರಕಲೆಂ"ದೂ ಅವರು ಹರಸುತ್ತಾರೆ. ತಾವು ಎಂಥ ಕಲ್ಲು ಮುಳ್ಳಿನ ಹಾದಿಯಲ್ಲಿ ದೀಪವನ್ನು ಉಳಿಸಿ ಕೊಂಡು ಬಂದಿದ್ದೇವೆಂದು ಅವರು ಹಾಡುತ್ತಾರೆ. ಓ! ಆ ಹಾಡುಗಳನ್ನು ನೆನಸಿಕೊಂಡರೇ ಹೃದಯ ಕುಣಿದು ಕುಪ್ಪಳಿಸುತ್ತದೆ.

ಬಾಗಿಲು ತೆರೆಯುತ್ತದೆ ಗುಂಪು ಹಾಡು ತ್ತಲೇ ಒಳಗೆ ಬರುತ್ತದೆ. ನಾವೆಲ್ಲ ಭಯ. ಭಕ್ತಿ ಕುತೂಹಲ ಆನಂದಗಳಿಂದ ದಡಬಡನೆ ಎದ್ದು ಕಣ್ಣರಳಿಸಿ ಕುಳಿತುಕೊಳ್ಳುತ್ತೇವೆ. ಮನೆಯ ಗೃಹಿಣಿ- ನನ್ನ ತಾಯಿ-ದೀವಟಿಗೆಗೆ ಎಣ್ಣೆ ಸುರಿದು, ಕಾಸು ಹಾಕಿ, ತನ್ನ ಹಣತೆಯನ್ನು ಹಚ್ಚಿ ಕೊಂಡು ಒಳಗೆ ಹೋಗಿ ತನ್ನ ಒಲೆಗೆ 'ಅಗ್ನಿ ಕೂಡಿ'ಸುತ್ತಾಳೆ. ಹಾಡು ಅವುಗಳ ಉದ್ದಕ್ಕೆ ತಕ್ಕಂತೆ, ಹಾಡುಗಾರರ ಉತ್ಸಾಹಕ್ಕೆ ತಕ್ಕಂತೆ ಮುಂದುವರಿದು ಮುಗಿಯುತ್ತವೆ. ನಮ್ಮ ಶಕ್ತ್ಯಾನುಸಾರ ನಾವು ಸಂಭಾವನೆ ಕೊಡು ತ್ತೇವೆ. ಗುಂಪೆಲ್ಲ ಕುಳಿತು ವೀಳ್ಯ ಮೆಲ್ಲುತ್ತದೆ. ಹರಟೆ ಹೊಡೆಯುತ್ತದೆ ಮುಂದಿನ ಮನೆಗೆ ಹಾದಿ ಕೇಳುತ್ತದೆ ಮುಕ್ತಾಯಸೂಚಕವಾಗಿ, ವಂದ ನೆಯ ಸಂಕೇತವಾಗಿ ಮತ್ತೆ ಕೂಗು ಮೊಳಗು

## ಮನೆಯಾಕೆಯ ಡ್ಯಾನ್ಸು



" ಅರವತ್ತಕ್ಕೆ ಎಂಥ ದೊಡ್ಡನೆ ?
ಅಂತೂ ಒಳ್ಳೇ ಛಾನ್ಸು! "
ಹಿಗ್ಗಿದ ಮರುದಿನ ಬಿಟ್ಟನು ಮನೆಯನು
ಕೇಳದೆ ಅಡ್ಡಾನ್ಸು
ತಿಳಿಯೋದ್ ಹೇಗೆ ಹೇಳಿ ಪಾಪ,
ಬೀಳ್ಬೇಕಾಗಿತ್ತೆ ಕನ್ಸು ?
ಮಹಡಿ ಮೇಲೆ ರಾತ್ರಿ ನಡೆಯೋ
ಮನೆಯಾಕೆಯ ಡ್ಯಾನ್ಸು !

– ನಿ

ತ್ತದೆ: "ದಿಪ್ಪ್ ದಿಪ್ಪ್ ದೀಪೋಳಿಗೆ". ತುಂಟ ಹುಡುಗರು ದನಿಗೂಡಿಸುತ್ತಾರೆ: "ಹಾರ್ರಮನೆ ಹೋಳಿಗೆ."

ಒಂದು ಗುಂಪು ಹೋಗುತ್ತದೆ. ನಾವು ಹುಡುಗರು ಇನ್ನೊಂದರ ದಾರಿ ಕಾಯುತ್ತೇವೆ. ಒಂದು ರಾತ್ರಿಗೆ ಮೂರು ನಾಲ್ಕು ಗುಂಪುಗಳ ಹಾಗೆ ಮೂರೂ ರಾತ್ರೆ ಬರುತ್ತಿದ್ದುದುಂಟು. ಈ ಸಂಖ್ಯೆ ಹೆಚ್ಚಿದಷ್ಟೂ ನಮಗೆ ಉತ್ಸಾಹ ಹೆಚ್ಚಾಗುತ್ತಿತ್ತು ಒಂದು ಗುಂಪಿನ ದೀವಟಿಗೆ ಯನ್ನು ಇನ್ನೊಂದು ಗುಂಪಿನವರು ನೋಡ ಬಾರದೆಂಬುದೂ ಒಂದು ಪದ್ಧತಿ ಇದನ್ನು ಕಾಯ್ದುಕೊಳ್ಳುವುದಕ್ಕಾಗಿ ಪ್ರತಿ ಗುಂಪಿನ ವರೂ ಕೂಗುತ್ತಾ ಇನ್ನೊಂದ ಗುಂಪಿನವರಿಗೆ ದಾರಿಯ ಎಚ್ಚರ ಸೂಚಿಸುತ್ತಿರುತ್ತಾರೆ. ಇನ್ನೇನು ನಿದ್ದೆ ಬಂತು ಎಂದುಕೊಳ್ಳುವಷ್ಟರಲ್ಲಿ ಇನ್ನೊಂದು ಗುಂಪಿನ ಕೂಗು ಹೊಡೆದು ಎಚ್ಚ ರಿಸುತ್ತದೆ. ಹಾಗೆಯೇ ಬೆಳಗಾಗುತ್ತದೆ.

ಎರಡನೆಯ ದಿನ ಕರಿ. ಅಂದು ಊರಿನವ ರೆಲ್ಲ ಒಟ್ಟಾಗಿ ಶಿಕಾರಿಗೆ ಹೊರಡುತ್ತಾರೆ. ನಮಗೆ ಹುಡುಗರಿಗೆ ಸ್ವಚ್ಛಂದವಾಗಿ ಕಾಡು ಮೇಡುಗಳನ್ನು ಅಲೆಯಲು. ಇದೊಂದು ಅವ ಕಾಶ ಈ ಹಾರಾಟ ನೆಗೆದಾಟಗಳೇ ನಮ್ಮ ಪಾಲಿಗೆ ದೊಡ್ಡ ದೀಪಾವಳಿಯಾಗುತ್ತಿತ್ತು.

ದೀಪಾವಳಿಯ ಮೂರನೆ ದಿನ ವರ್ಷ ತೊಡಿಕೆ. ನಮ್ಮ ಪದ್ಧತಿಯಲ್ಲಿ ಅಂದು ಹೆಚ್ಚಿನ ದೇನಿಲ್ಲ. ಮೊದಲ ದಿನ ಪೂಜೆ ಮಾಡಿದವಕ್ಕೆಲ್ಲ ಇಂದು ಎಡೆ ಹಾಕಿ ಮತ್ತೆ ಪೂಜೆ ಮಾಡಬೇಕು ಇದೆಲ್ಲ ಮಧ್ಯಾಹ್ನದ ಹೊತ್ತಿಗೆ ಮುಗಿದು ಹೋಗುತ್ತದೆ ಆದರೆ ರಾತ್ರೆಯೂ ಒಂದು ಹೊತ್ತು ಅವಕ್ಕೆಲ್ಲ ಹಾಲು ತುಪ್ಪ ತೋರಿಸ

...ಪೂಜೆ ಮುಗಿದ ಮೇಲೆ ಎಲ್ಲವನ್ನೂ ಒಟ್ಟಿಗೆ ಬಿಟ್ಟು...ಬಯಲಿಗೆ ಓಡಿಸುತ್ತಿದ್ದೆವು.



ಬೇಕು. ಈ ವೇಳೆಗೆ ದೀಪಾವಳಿಯ ದೀಪಕಾಂತಿ ಮಸಗಾಗೊಳ್ಳುತ್ತಿರುತ್ತದೆ; ಉತ್ಸಾಹ ಆರ ತೊಡಗುತ್ತಿರುತ್ತದೆ. ನಾಲ್ಕನೆಯ ದಿನ ಬೆಳಗಾಗುವ ಮೊದಲೆ, ಜೋಡಿಸಿಟ್ಟ ಬಲೀಂದ್ರನ ವಿಸರ್ಜನೆಯಾಗುತ್ತದೆ; ಬಾಗಿಲುಗಳಲ್ಲಿ ಹೂಡಿದ್ದ 'ಕೆರಕಲು'ಗಳನ್ನು ತೆಗೆದುಬಿಡುತ್ತಾರೆ. ಅದರೊಂದಿಗೆ ಆ ವರ್ಷದ ದೀಪಾವಳಿಯ ಕುರುಹು ಅಳಿಸಿಹೋಗುತ್ತದೆ

'ಕೆರಕಲು' ಎಂದೊಡನೆ ಇನ್ನೊಂದು ಮಾತು ನೆನಪಿಗೆ ಬರುತ್ತದೆ. ಇದೂ ನಮ್ಮ ಕಡೆಯ ವಿಶಿಷ್ಟ ಸಂಪ್ರದಾಯವೆ. ಕುಡಿಬಾಳೆ ಎಲೆಗಳಲ್ಲಿ ಐದೈದು ಸಗಣಿಯ ಸಣ್ಣ ಸಾಲುಗಳನ್ನು ನಿರ್ಮಿಸಿ ಅವುಗಳಲ್ಲಿ ನೆಲ್ಲಿಕಾಯಿ, ಹಣ್ಣಡಿಕೆ ಪಚ್ಚೆತೆನೆ, ಉತ್ತರಾಣೆ, ಗುರುಕೆ ಮೊದಲಾದವುಗಳನ್ನು ನೆಡುತ್ತಾರೆ. ಇಂಥ ಪೂಜಾರ್ಹವಾದ ಎರಡೆರಡು ಎಲೆಗಳನ್ನು ಗೋಪೂಜೆಯ ಸಮಯದಲ್ಲಿ, ಬಲೀಂದ್ರ, ಬೇಟೆ, ಹೊಸ್ತಿಲು ಮೊದಲಾದವುಗಳ ಪೂಜೆಯ ಸಮಯದಲ್ಲಿ ಇಡುತ್ತಾರೆ. ಈ ಎಲೆಗಳಿಗೆ 'ಕೆರಕಲು'ಗಳೆಂದು ಹೆಸರು. ಇದರ ಇನ್ನೊಂದು ಮುಖ ಕೆರಕಲುಕೊಡುವ ಪದ್ಧತಿ. ಸಾಮಾನ್ಯವಾಗಿ ಗಂಡ-ಹೆಂಡತಿ, ಅತ್ತಿಗೆ- ನಾದಿನಿಯರು. ಭಾವ ನೆಂಟರು ಇವರ ಮಧ್ಯೆ ಇದು ಜಾಣನ ಪ್ರಶ್ನೆ. ಎಂದರೆ ಕೆರಕಲುಕೊಡಲು ಇಚ್ಛಿಸಿದವರು ಎದುರಿನವರಿಂದ 'ಹೂಂ' ಎನ್ನಿಸಬೇಕು. 'ಹೂಂ' ಎಂದಾಗ ಒಂದು ಕೆರಕಲಾಯಿತು ಎಂದರ್ಥ

ಉದಾಹರಣೆಗೆ -

"ಭಾವ ಯಾವಾಗ ಬಂದಿರಿ ?"

"ನೆನ್ನೆ"

"ನೆನ್ನೆ ಬಂದಿರಾ ?"

'ಹೂಂ"

"ಕೆರಕೊಳ್ಳಿ"

ಈಗ ಭಾವನ ಮೇಲೆ ಒಂದು ಕೆರಕಲಾಯಿತು. ಜಾಣ ಭಾವ ಒಡನೆಯೇ ಕೇಳುತ್ತಾನೆ :

"ಕೆರಕೋಬೇಕ ?"

"ಹೂಂ" ಮರೆವಿನಿಂದ ಉತ್ತರ ಬರುತ್ತದೆ.

ಗದ್ದ ಭಾವ ಹೇಳುತ್ತಾನೆ : "ಕೆರಕೊ". ಭಾವನ ಮೇಲಾದ ಕೆರಕಲು ಈಗ ತೀರಿತು. ನಾವು ಹುಡುಗರಾಗಿದ್ದಾಗ ಮೂರು ದಿನ ಈ ಕೆರಕಲುತ್ಸವ ನಡೆಯುತ್ತಿತ್ತು. ಎಷ್ಟು ಜಾಣ್ಮೆಯಿಂದ ಯಾವ ಅನುನಯದಿಂದ ಎದುರಿನವರನ್ನು 'ಹೂಂ' ಅನ್ನಿಸಲು ಪ್ರಯತ್ನಿಸುತ್ತಿದ್ದೆವು, ದೊಡ್ಡವರಿಂದ ಬೈಸಿಕೊಳ್ಳುತ್ತಿದ್ದೆವು ಎನ್ನುವುದೇ ಒಂದು ಪ್ರತ್ಯೇಕ ಪುರಾಣ.

ಹದಿನೈದು ದಿನಗಳ ಸಡಗರವೆಲ್ಲ ಮೂರು ದಿನಗಳಲ್ಲಿ ಮುಗಿದುಹೋಗುತ್ತಿತ್ತು. ಆದರೆ ಅದು ಅಲ್ಲಿಗೇ ನಿಲ್ಲುತ್ತಿರಲಿಲ್ಲ. ಮುಂದಿನ ದೀಪಾವಳಿ ಎಂದು ಬರುತ್ತದೆ ಎಂದು ಮತ್ತೆ ಲೆಕ್ಕಹಾಕಲು ಪ್ರಾರಂಭಿಸುತ್ತಿದ್ದೆವು. ಈ ಸಲ ಯಾವ ದನಕ್ಕೆ ಪೂಜೆ ಮಾಡಬೇಕು ಎಂಬ ಯೋಚನೆ ಆರಂಭವಾಗುತ್ತಿತ್ತು. ನಮ್ಮ ಎಳೆಗಾಲದ ದೀಪಾವಳಿ, ಇಷ್ಟು ಹಸುರಾಗಿತ್ತು; ಪೂರ್ಣವಾಗಿತ್ತು. ಆ ನಲಿವು, ಆ ಗೆಲವು, ಆ ಸುಖ ಸಂತೋಷ, ಆ ಸಡಗರ, ಆ ಉತ್ಸಾಹ ಎಷ್ಟು ಕೋಟಿ. ಕೋಟಿ ! ಎಷ್ಟು ಬರೆದರೇನು? ಎಷ್ಟು ನೆನಸಿದರೇನು ? ಕಾಸಿನಷ್ಟೂ ತೀರದು.

ಕಾಲಯಾತ್ರೆ ನಡೆದಿದೆ, ಅಂದಿನ ದಿನಗಳು ಇಂದಿಲ್ಲ ಇಂದಿನ ನಮ್ಮ ಊರು ಅಂದಿನ ಹಾಗಿಲ್ಲ. ಆ ಫಕೀರ ಸಾಹೇಬರು ಈಗ ಬದುಕಿಲ್ಲ. ನಮ್ಮ ಅಜ್ಜ, ಜೊತೆಗಾರರಾದ ಪುಟ್ಟಣ್ಣ ಸೀನಪ್ಪ ಮೊದಲಾದವರು ಉಳಿದಿಲ್ಲ. ಅಂಟಿಗೆ ಪಂಟಿಗೆ ನಾಯಕ ಅನಂತಯ್ಯ ತೀರಿಹೋಗಿ ವರ್ಷಗಳೇ ಸಂದವು. ನಮ್ಮ ಊರಿನ ಮುಗ್ಧ ಚೆಲುವೆಯರು ಮದುವೆಯಾಗಿ ಯಾವುದೋ ಹಳ್ಳಿ ಸೇರಿದ್ದಾರೆ. ಅವರೆಲ್ಲ ಕೂಡಿ ಸೃಷ್ಟಿಸಿದ್ದ ಆ

ಈಗ ಒಂದೊಂದಕ್ಕೂ ಉರಿತಾಗಿಸಿ ಪ್ರತಿ ಗದ್ದೆಗೂ ಒಂದೊಂದನ್ನು ಹುಗಿಯುವುದಷ್ಟೇ ಕೆಲಸ



ನನ್ನ ತಾಯಿ ದೀವಟಿಗೆಗೆ ಎಣ್ಣೆ ಸುರಿದು...ತನ್ನ ಹಣತೆಯನ್ನು ಹಚ್ಚಿಕೊಳ್ಳುತ್ತಾಳೆ.

ಸ್ವಪ್ನಪ್ರಪಂಚ ಈಗ ಹೇಗೆ ಲಭ್ಯವಾಗಬೇಕು? ದೀಪಾವಳಿಯೇನೋ ತಪ್ಪದೆ ಬರುತ್ತದೆ ಆದರೆ ಅಂದಿನ ತುಂಬಿಕೆ ಇಂದು ಉಳಿದಿಲ್ಲ.

ನೆನೆದರೇ ಪುಲಕಗೊಳಿಸುವಂಥ ಅಂದಿನ ಆ ದೀಪಾವಳಿಗಳು ಈಗ ಏನೋ ಸ್ವಪ್ನಸ್ಮಾರಣ, ಗಳು.. ಅಂದು ಅವು ನಮ್ಮ ಸಂಪ್ರದಾಯದ ಒಂದು ಸಮೃದ್ಧ ಭಾಗಗಳಾಗಿದ್ದವು. ಈಗ ಅವು ಬಣ್ಣ ಕಂದಿವೆ; ದನಿಗುಂದಿವೆ.

ಬಾಳೇ ಬರಡಾಗಿರುವಾಗ ದೀಪಾವಳಿ ಎಲ್ಲಿ ಬೆಳಗೀತು. ಈಗ ಅದೆಲ್ಲ ನಮ್ಮ ಸಾಂಸ್ಕೃತಿಕ ಇತಿಹಾಸದ ಒಂದು ಪುಟ, ಅಷ್ಟೆ.

ಆದರೆ ನೆನಪಿನ ಬುತ್ತಿ ಅಕ್ಷಯ; ಮೆಲುಕು ಹಾಕಿದಷ್ಟೂ ಅದು ಸಮೃದ್ಧ. ಅಲ್ಲಿ ಪುಟಿಯುತ ಸವಿ ಸ್ಮರಣೆಯ ಕಾರಂಜಿಗಳೋ ಅನಂತ; ಬತ್ತಲಾರದ ಬುಗ್ಗೆಗಳು ಅವು. ಅಂತೆಯೇ ಆ ಕಾಲದ ದೀಪಾವಳಿಗಳು ನನ್ನ ಪಾಲಿಗಿನ್ನೂ ಚಿರನೂತನವಾಗಿವೆ. ನೆನಪಿನಾಗಸದಲ್ಲಿ ಅಂದಿನ ತಾರೆಗೆಗಳು ಮಿನುಗುತ್ತಲೇ ಇವೆ.

---

## ಹೆರಿಗೆ ಪೀಡೆ

ಪಕ್ಕದ ಮನೆಯ ಜಿರಾಫಿಣಿನ ತಪಿಸ್ತಾ ಕುಳ್ಳಿ ಕಮ್ಲು:
“ಹೊಟ್ಟ್ಯುರಿಸ್ತೀಯಾ ಹಾಳಾದೋಳೆ! ಎರಿದೆ ತಲೆಗೆ ಅಮ್ಲು—
ಒಂದೇ ತಿಂಗ್ಳು ಸುಮ್ಕಿರು ಸಾಕು ಹೆರಿಗೆ ಪೀಡೆ ತಪ್ಲಿ
ನಿನ್ನ ಹಾಗೇನೆ ಮೆರೀತೀನ್ ನಾನೂ ಕೊಂಡ್ಕೊಂಡ್ ಹೈಹೀಲ್ಡ್ ಚಪ್ಲಿ!”

- ನಿ.









"ರಷಿಯ ಮತ್ತು ಅಮೇರಿಕೆಗಳ ಅನೇಕ ಉಪಗ್ರಹಗಳು ಮು
ಎಂಟು ಗ್ರಹಗಳನ್ನು ಕೂಡಿಕೊಂಡಿರುವುದರಿಂದ ಜ್ಯೋ
ಲೆಕ್ಕ ಹಾಕುವುದು ಕಠಿಣವಾಗಿದೇರೀ ! "












"ಏನೆ ಇದೂ? ಹಬ್ಬದ ಧ್ಯಾನವೇನೆ?"




"ನಿಮ್ಮ ಅಣ್ಣನಿಗೆ ಅರ್ಧತೋಳಿ ನಶ್ಯನಾಪ್ಕೊ ತಗೊಳ್ಳೋಣ ಇಲ್ದೆ ಇದ್ರೆ ಮನಸ್ಸು ಚಿಕ್ಕದು ಮಾಡಿಕೊಂಡಾರು."






ಒಬ್ಬಕ್ಕ ಮೂರು ದಿನ ಮುಂಚಿತವಾಗಿ ಬರೋದಕ್ಕೆ ಹೆಣ್ಣುಮಕ್ಕಳಿಗೆ ಕಾಗದಾ ಬರೀರಿ ಅಂತಂದ್ರೆ " ನಿಂಗೆ ಕಸಬಿಲ್ಲ " ಅಂದ್ರು......



ತಿಂಡಿ ತಗೊಂಡು ಹೋಗೋಕೆ ನಾನೇ ಬುಟ್ಟಿ ಕೊಂಡು ಬಂದೆ ಮಾವಯ್ಯ, ನಿಮಗ್ಯಾಕೆ ತಾಪತ್ರಯ ಅಂತ.







" ನನ್ನಪ್ಪಾ ಈ ಸಲ ಒಂದೂ ಪಟಾಕಿ ಕೊಡಿಸಲಿಲ್ಲ, ಪಟಾಕಿ ಅಂಗಿ ಹೊಲಿಸಿಕೊಟ್ಟ್ರು."



" ಈ ಹಣತೆ ಕೆಳಗಿಟ್ರೆ ಮಗು ಬಿಡೋದಿಲ್ಲ, ಬೇರೆಲ್ಲೂ ಇಡಲು ಜಾಗವಿಲ್ಲ ಸ್ವಲ್ಪ ಹೊತ್ತು ಇಲ್ಲಿರ್ಲಿ."








# ನಾಲ್ಕು ಹೂ

ಅಂಬಿಕಾತನಯದತ್ತ



## ಸೃಷ್ಟಿ-ಸ್ಥಿತಿ-ಲಯ

ಮಣ್ಣಿನಲಿ ತಲೆಯನೆತ್ತುತ್ತಲಿವೆ ಹೂವು
ಗಂಧವನು ದುರ್ಗಂಧದಿಂದ ಬಿಡಿಸಿ
ಕಾಲನನು ತಾಲದಲಿ ಕುಣಿಸಿ ಯಮ ನಿಯತಿಯಲಿ
ಜೋಗುಳವ ಋತುವಾನದಿಂದ ನುಡಿಸಿ.

ಮೊಮ್ಮಕ್ಕಳನು ಕಂಡು ಮುತ್ತಯ್ಯ ನಗುವಂತೆ
ಮಣ್ಣಿಗೇ ಹೂ ಮುಡಿಸಿ ಮಡಿಯುತಿಹವು
ಬಕುಲಕ್ಕೆ ಇಲ್ಲ ವ್ಯಾಕುಲತೆ ಲಯಕಾಲದಲಿ
ಒಣಗಿದರು ಕಂಪಿಸುತ ನಡೆಯುತಿಹವು.



## ಹುಂಜ-ಹೂ

ಎದೆಗೆಂಪು, ಎದೆಗಂಪು, ಎದೆ ಕಂಪನಂಗಳಲಿ
ತೆರೆಯನರಿಯದ ಹೃದಯ ತೆರೆಯುತಿಹುದು
ಎಲರಿನಲೆ ಅಲರುತಲೆ ಕೊಡಹಿ ಕೊಡ ಕೊಡ ತುಂಬಿ
ನೀರಿನೊಲು ನೀರಾಗಿ ಬೆರೆಯುತಿಹುದು.

ಯಾವ ಬೇಗೆಯು ಇಲ್ಲಿ ಕಾಗೆಗಳ ಚದುರಿಸುತ
ಎಂಥ ನಿಗಿನಿಗಿ ಕೆಂಡ ಪುಂಜವಾಗಿ
ಕಾದಾರದೇ ನೀಲಿ ಮುಗಿಲನಡರಡರಿ ಕೆಂ-
ಜೆಡೆ ಪಸರಿಸುತ್ತಿಹುದೊ ಹುಂಜವಾಗಿ.

ಓಹೊ ! ಹುಂಜದ ಪುಂಜ ಪೂಜೆ ಬಾನ್ ಹೂಜೆಯಲಿ
ನೀಡುವದು ಕೆನ್ನೀರ ಹೂವ ಮಾಡಿ
ಹಸುರೆಲೆಯು ಬಿಸಿಯುಸಿರು ಜೀವ ತಣಿಸುತ್ತಿಹುದು
ಬಯಲ ಭಾವದ ಬಸಿಗೆ ಭಾವ ಮೂಡಿ.



## ಕದಳಿಗೆ ಪ್ರಶ್ನೆ

ಯಾವ ಲಾಜಾ ಹೋಮ-
ದೀ ಲಜ್ಜೆ ದರುಶನವೊ ?
ತಿರುಪು ತಿರುಪಣೆ ತುಂಬ
ಕುಂಕುಮವು ಅರಿಷಿಣವೊ !

ರಾಯ ಕದಳಿಯು ಬಾಳೆ-ಕಾಬಾಳೆ
ನಿಶೆಯು ಮುಸಿ,
ಬೆಳಗು ಬೆಳಕೇ ಹಾಳೆ;
ಯಾ ಹಗಲು ಯಾವ ಶಶಿ ?
ಯಾವ ಮಾತರಳುವುದೊ
ಇಲ್ಲಿ ಮೌನದಿ ಹೂತು ?
ಯಾವ ಕಂಬನಿಯ ಕೆಂ-
ಬನಿಯ ದಳದಳ ಸುರುಳಿ
ಉರುಳುರುಳಿ ಏರಾಟ
ಮಾಡುತಿದೆ ಮರು ಮರುಳಿ ?

ಯಾವ ಸಂಧ್ಯಾಭಾಷ್ಯ
ಈ ರಂಗು ತೋಡಿತ್ತು ?
ಯಾವ ಗಿಳಿ ಗೆಳೆತನದ
ಶಿವ-ಶಕ್ತಿ ಮೂಡಿತ್ತು ?

ಈ ಬಾಳೆ ಮುಡುಪಿಡುವೆ
ನಿನ್ನ ನೆತ್ತರ ಮೆಚ್ಚಿ
ಈ ಬಿಚ್ಚು ಮೊಗ್ಗೆಯಲಿ
ಇಡಲೇನು ನಾ ಮುಚ್ಚಿ ?



## ಜೇಡನ ಹೂ

ಎಳೆ ಸೆಳೆ ಹೂವಿನ ತಿಳಿ ಬಿಳಿ ಬಣ್ಣ
ಇದು ಯಾ ಲೋಕದ ನವಪುಷ್ಪ ?
ಆಕೂತಿಗೆ ಕೇಸರಿಸಿದ ಕಣ್ಣ
ಆನಂದದ ಸುಂದರ ಬಾಷ್ಪ !

ತವಕದ ಮರ್ಮದ ಶರ್ಮದ ದಳವೇ
ದಳದಳ ವಿಕಸಿತ ಅವಿರತವು
ಯುವಕನ ಮುಖದಲಿ ಶಿಶುವಿನ ಕಳೆ ಬರೆ
ವಿಸ್ಮಿತ ಕುತುಕಕೆ ಸ್ವಾಗತವು.

ಕೃಪಾಪ್ರಸಾದದ ತುಂತುರು ಕಣ ಕಣ
ತೂರಿ ಹಿಡಿಯುವೊಲು ಊರ್ಜಿಸಿದೆ
ತಂತುವಾಯದಾ ಉಪಾಯ ಕ್ಷಣಗಣ
ಪೋಣಿಸಿದೊಲು ಅವತೀರ್ಜಿಸಿದೆ.






ಸದಾ ಹೊಯ್ಯುವ ಮಳೆ, ಸುಯ್ಯುವಗಾಳಿ ನನ್ನ ನಿನ್ನ ನಡುವೆ
ಉರಿಯುವ ಬೇಸಗೆ, ಕೆಂಡದ ಹಾಸುಗೆ ನನ್ನ ನಿನ್ನ ನಡುವೆ
ಉದುರುವ ಎಲೆ, ಉರಿಯುವ ಚಿತೆ ನನ್ನ ನಿನ್ನ ನಡುವೆ
ಹದ್ದಿನ ರೆಕ್ಕೆಯ ನೆರಳೂ, ಬೇಟೆನಾಯಿಗಳ ಬೊಗಳೂ ನನ್ನ ನಿನ್ನ ನಡುವೆ

ಸಾವಿರ ಮನೆ ದೀಪಗಳುರಿದಿವೆ ಝಗ ಝಗ ನನ್ನ ನಿನ್ನ ನಡುವೆ
ತಲೆಯಿಕ್ಕಲು ನೆಲೆಯಿಲ್ಲವೆ ನಮಗೀ ತುಂಬಿದೂರಿನೊಳಗೆ!
ಲಕ್ಷಾಂತರ ಜನ ಬದುಕವ ಈ ಭೂಮಂಡಲದೊಳಗೆ
ನಾನೂ ನೀನೂ ಯಾವ ಲೆಕ್ಕವೆ? ಆದರು ಈ ನಾಲ್ಕು ಜನದ ಭಯವೆ?

ನಿನ್ನ ಸುತ್ತ ಆ ನಾಲ್ಕು ಜನ, ನನ್ನ ಸುತ್ತ ಈ ನಾಲ್ಕು ಜನ
ಹೊತ್ತು ಸಾಗಿಸಲು ಹೊಂಚುತ್ತಾರೆ, ಹುಡುಕುತ್ತಾರೆ ದಿನಾ ದಿನಾ
ಕೊಂಚ ಸಿಕ್ಕಿತೋ ಏನಾದರು ಸರಿ, ಕುತಂತ್ರದ ಚಿತೆಯನ್ನೊಟ್ಟಿ
ಸುಟ್ಟು ಬಿಡುತ್ತಾರೆ ಜೀವ ಸಹಿತ ಈ ಬದುಕಿಗೆ ಬೆಂಕೀ ಹಚ್ಚಿ

ಎದ್ದರೆ ಕಾಲಿಗೆ ಬೀಳುತ್ತದೆ, ಬಿದ್ದರೆ ಕಚಪಚ ತುಳಿಯುತ್ತದೆ ಈ ಲೋಕ
ಹೇಗೋ ಏನೋ ಮೇಲಿದ್ದವನದೆ ಗದ್ದುಗೆ; ಅವನದೆ ಎಲ್ಲ ಪ್ರತಾಪ
ಸುಮ್ಮನಿದ್ದವನ ಹಾಗೇ ತಳ್ಳಿ ಕೊರಳಿಗೆ 'ಬಕರಾ' ಬ್ರ್ಯಾಂಡು
ಆ ಮೇಲೇನಿದೆ? ಗೆದ್ದವನಿಗೆ ಬಾಜಾ ಬಜಂತ್ರೀ ಬ್ರ್ಯಾಂಡು

ಇವರದೆ ಮೆರವಣಿಗೆ, ಇವರದೆ ಆರ್ಭಟ ನನ್ನ ನಿನ್ನ ನಡುವೆ;
ಕಾಲಿಗೆ ಬಿದ್ದಲ್ಲದೆ ಕರುಣಿಸಲೊಲ್ಲದ ಈ ಕೃಪಾನಂದರ ತಂತ್ರಕ್ಕೆ
ಬೇಸರವಾಗಿದೆ; ಹೋಗುವ ನಡೆ, ತಲೆಬಾಗದೆ ನಿಲ್ಲುವ ದೂರಕ್ಕೆ
ತಣ್ಣಗೆ ಉರಿದೂ, ಕಿಡಿಗಣ್ಣಿಲ್ಲದ ದೀಪಾವಳಿಗಳ ತೀರಕ್ಕೆ






೧

ಹಸಿರಿನೊಡನೇ ಬೆಸೆದು ಬಂದ
ಈ ಸಂಬಂಧ
ಬಿಡಲಾಗದ ಬಂಧ !
ಬಂದಿಖಾನೆಯ ಛಪ್ರಗೋಡೆಯಲಿ ಕಂಡಿಯ ಕೊರೆದು
ಹೊರಜಿಗಿದು
ತಲೆ ಎತ್ತಿ,
ಕಟ್ಟಿಹಾಕಿದ **ಜೇಡಿ**-ಮಣ್ಣಿನೆದೆಯನೆ ಮೆಟ್ಟಿ
ನಿಂತು ನಟರಾಜನೆನೆ
ಕುಣಿದೆನ್ನೆ ಮನದಣೀ ಚಿಗುರೆ ಆಗಿ;
ಮದಿಸಿದೆನು ತಲೆತಿರುಗಿ ತಿಗುರಿಯಾಗಿ !
ಗತಿ ಇಲ್ಲದೆಯೆ ನಿಂತೆ
ಕಾಲಂಟಿದಂತೆ… …
ಬಂಧಮುಕ್ತಿಯ ಗುಂಗಿನಲಿ ಮುಳುಗಿ ಯೋಚಿಸುತ
ಯೋಚಿಸುತ
ನಿಂತೆ, ನಿಂತೇ ನಿಂತೆ;
ಒಂಟಿಗಾಲ ತಪಸ್ವಿಯಾಗಿ ನೋಂತೆ!… …

೨

ಬಯಕೆ ಹಣ್ಣಾದಂತೆ
ತಡೆದ ಮಳೆ ಬಂದಂತೆ
ಬಂತೊಂದು ಶುಭ ಸಮಯ;
ಬಂದ ಗಾಳಿಯ ಗೆಳೆಯ,
ಆಕಾಶಲೋಕಕೆ ನನ್ನ ರೊಂಯನೊಯ್ದು
ಸ್ವಚ್ಛಂದ ಸುಖದೊಂದು ಸ್ವರ್ಗಸೃಷ್ಟಿಸಲೆನಗೆ
ಸಹಕಾರವನಿತ್ತು
ಭೀಮರಕ್ಷೆಯವಾಗಿ ಬೆನ್ನಿಗುಳಿವ
ಮುಕ್ತಜೀವಿಯ ಶಕ್ತಿ ಸಂಸ್ಫುರಿಸಿದಂತಾಗಿ
ಎದೆ ಉಬ್ಬಿ ಬಿಬ್ಬಿರನೆ ಬೀಗಿ ಬೀಗಿ
ತಲೆ ಎತ್ತಿ ಹತ್ತೂ ನಿಟ್ಟು ಅಳೆದು ತೂಗಿ
"I am the master of all I survey-
ಕಣ್ಣಸುತ್ತಿನ ನಿಟ್ಟು-ನೆಲೆಗಳೆಲ್ಲಕು ನಾನೆ ಗಂಡಗಜಬೀರ"–
ನೆಂದೊದರಿ, ಗದರಿ
ಗರ್ವದಹಂಭಾವದಲಿ ಹೊರಳಿ ನೋಡಿದೆನು-ನೆಲದತ್ತ ತಿರುಗಿ;
ಆಗ ಕಂಡಿತು-ಅಲ್ಲ, ಕಣ್ಣ ಚುಚ್ಚಿತು, ಅರರೆ!
ಕೊರಳ ಕಣ್ಣಿಯದಾಗಿ ಕಟ್ಟಿಹಾಕಿದ ಒಂದು ಸೂಜಿಗಲ್ಲಿನ ಸೆಳೆ!...
ಸಿಡಿಲ ಬಡಿದಂತಾಗಿ
ಧೂಳಿ ಹೋಗಿ
ಕುಪ್ಪಳಿಸಿ ಬಿದ್ದೆ ನಾ ಮೂರ್ಛೆ ಹೋಗಿ!… …

೩

ಎಷ್ಟೊಂದಲೋ ಬಂದ
ಕರುಣಾಳುವಿನ ಬೆರಳಲೀಲೆಗೆಚ್ಚರಗೊಂಡು
ಮೈ ಕೊಡವಿ
ಮತ್ತೆ ಮೇಲಕ್ಕೆದ್ದೆ;
ಬಿಗಿದ ಕಟ್ಟುಗಳನ್ನು ಕತ್ತರಿಸಲನುವಾದೆ !
ಬಾಗಿಕೊಂಡೊಂದು ಕರ ಮೊಳೆಮೊಳೆದು ಹಂಗಿಸಿತು
ನೆತ್ತರಿನ ನದಿಗುಕ್ಕಿ-ಸೊಕ್ಕಿ ಬಂದು
ಕುದಿ-ರೆಕ್ಕೆ ಚಕ್ಕಚಕ ಚಕಚಕಿಸಿ
ಮಸೆಯಲನುವಾದುವೈ ಕ್ರಾಂತಿಯ ಕುಠಾರ !
ರೋಮ-ರೋಮದಿ ಆಂಜನೇಯ ಬಲ, ಸ್ಯಾಮ್‌ಸನ್ ಶಕ್ತಿ
ಉದ್‌ಘಟಿಸಿ
ಅಣುವಿನಂತಾಸ್ಫೋಟಿಸಿ
ಟಣ್ಣನುಡ್ಡಾಣಿಸಿದೆ-ಗರುವದಾ ಗರುಡನಾಗಿ !
ಬಾಂದಳಕೆ ಬಾಂದಳವನೆಲ್ಲ ಬೆದಕಿ
ತಿಂಗಳನ ಮಂಗಳನ ಅಂಗಳವನೂ ಕೆದಕಿ ಕೆದಕಿ
ಅನಿರ್ಬಂಧಗತಿಯಲ್ಲಿ ಸುತ್ತಿಯೇ ಸುತ್ತಿ
ಆಕಾಶಭೂಪ ತಾನಿನ್ನೆಂಬ ಪಿತ್ತಭ್ರಮೆಯು ನೆತ್ತಿಗೇರಿ
ಅನಿರ್ವಚನೀಯದಮಲಿನಲಿ
ಹಾರಾಡಿಯೇ ಹಾರಾಡಿದೆನು!… …
ಏನು ಮಾಡಿದರೂನು ನೆಲೆಗಾಣದಂತಾಗಿ,
ಅಂತರಪಿಶಾಚಿಯವಾಗಲು ಮನಸ್ಸೊಪ್ಪದೆಯೆ
ಮತ್ತೆ ಮರಳಿದೆ ಮನೆಗೆ
ಕೊನೆಗೆ-
ಪಶ್ಚಾತ್ತಾಪದಗ್ಧನಾಗಿ !

೪

ಹಾಸುಕಂಬಿಯ ಗುಂಟ ಪುನಃ ಬಂಡಿಯ ಹೊಡೆದೆ.
ಮರಳಿ ಮುಂಚಿನ ಕಿತ್ತಿಯನೆ ಹಿಡಿದೆ.
ತಣಿಯುಂಡು ಬೆಚ್ಚನೆ ಮಲಗಿ
ಬೆಲ್ಲದಚ್ಚಿನ ಬಾವಿಯಲಿ ಧುಡುಮ್ಮನೆ ಧುಮುಕಿ
ತಳ ಕಂಡು, ಮನಸೇಚ್ಛೆ ಈಸಾಡಿ
ಮೇಲೆದ್ದು ಬಂದೆ;
ಮೈ-ಮನವು ಹಗುರಾಗಿ ಹೊಸಬನಾಗೆದ್ದೆ !
ಆಗ ತಟ್ಟನೆ ಅಹಂಕಾರದೋಕಿಕಾಟ ಪುಟಿದು,
ಸೆಟೆದು,
"ಎಷ್ಟಾದರೂ ಈ ನೆಲ
ನನ್ನ ಕಾಲಡಿ ಬಿದ್ದೆ ಹೊರಳಾಡಬೇಕಲ್ಲ"—
ಎಂದು ಮೂಗುಬ್ಬಿಸಿತು, ಬಿಲ್ಲಿದ್ದ ಕೊಟ್ಟಿ
ಆ ಒಂದು ಕ್ಷಣ ನನ್ನ ತಲೆ ಗಿಮಿಗಿಮೀ ತಿರುಗಿ
ಬುಗುರಿಯಾಗಿದ್ದಾಗ,
ಪಕಾಪಕಿ,
ನೇಲವು ಹಾಕಿತು ನೇರವಾಗಿ ಗಿಜ್ಜಿ:
"ಈ ಹುಚ್ಚತನ ನಿಲಿಸಿ, ಕಣ್ ತೆರೆದು ನೋಡೊಮ್ಮೆ;
ನೀನೆನ್ನ ತುದಿಬೆರಳ ಮೇಲೆ ಕುಣಿಯುವ ಗೊಂಬೆ!...
ಏನು?...ಏನೆಂಬೆ!?..."
ಕಣ್ಣು ಕತ್ತಲಗಟ್ಟಿ
ಕಡಕೊಂಡು ಬಿದ್ದು
'ಅಯ್ಯೋ ಇನ್ನೇನೆಂದು
ತಲೆಯ ಗಟ್ಟಿಸಿಕೊಳ್ಳತೊಡಗಿರುವದನು ಕಂಡು,
[illegible]
ನಕ್ಕು, ನುಡಿದಿತು ಬೀಸುಕಲ್ಲು:
"ಗಂಧ ತೀಡಿದ ಹಾಗೆ, ಗಂಡ-ಹೆಂಡಿರ ಜಗಳ;
ಏಳೀಗ ಹೋಗು ಮಲಗು ಮಗನೆ!"

[ ನನ್ನ ಸುತ್ತು ಮಾನವನ ಬಂಧ-ಸಂಬಂಧಗಳ ಬಗೆಗಿನ ಒಂದು ಹೊಳಹು ಇಲ್ಲಿದೆ. ಗಿಡ, ಗಾಳಿಪಟ, ಗರುಡಪಕ್ಷಿ ಈ ಸಂಕೇತಗಳ ಮೂಲಕ ಅದು ಪ್ರಕಾಶಿತವಾಗಿದೆ. ]




ಅಲ್ಲಪ್ಪ ಒಪ್ಕೊಂಡಿದ್ವಲ್ಲ ಮದ್ವೆ ಆಗ್ಬಿಡಪ್ಪ
ನಿನ್ ಪಾಪ ಕ್ಷಮೆ ಕೇಳ್ತಾರೆ ಏನ್ ಮಾಡಿದಿದ್ರು ತಪ್ಪ
ಹುಡುಗಿ ಕಣ್ಣೀರು ನೋಡಲಾರೆವಿ ಗಜ್ಜುಗದಷ್ಟು ದಪ್ಪ
"ಮದುವೆ ಆಗೋಲ್ರಿ ಅವಳನ್ನ, ಮದುವೆ ಆಗೋಲ್ಲ"

ಅವರಪ್ಪ ಕೊಡ್ತಾನೆ ಇನ್ನೂ ಒಂದ್ಹತ್ ಸಾವಿರ
ಆಸೆ ಇದ್ರೆ ಹೇಳಯ್ಯ ಕೊಡ್ತಾನಪ್ಪಂತ ಕಾರ
ಚಿಕ್ಕ ಹುಡುಗಿ ಗತಿಯೇನೂಂತ ಯೋಚಿಸೋಲ್ಲ ಯಾರಾರ?
"ಮದುವೆ ಆಗೋಲ್ರಿ ಅವಳನ್ನ, ಮದುವೆ ಆಗೋಲ್ಲ."

ನಿಮ್ಮಪ್ಪನ್ನ ಹೋಗಿ ಕೇಳ್ಕೊಂಡ್ರಿ, ನಿನ್ನಿಷ್ಟ ಅಂದ್ರು
ತಾಳಿಕಟ್ಟೊ ಹೊತ್ನಲ್ಲಿ ನೀ ಹೀಗ್ಮಾಡ್ಬಾರ್ದು ಚಂದ್ರು
ಬಾಯಿಬಿಟ್ಟು ಹೇಳಪ್ಪ ಯಾರು ನಿನಗೇನಂದ್ರು?
"ಮದುವೆ ಆಗೋಲ್ರಿ ಅವಳನ್ನ, ಮದುವೆ ಆಗೋಲ್ಲ"

ನಿನ್ತಂಗೀಗ್ ಹೀಗಾದ್ರೆ ಹೇಗಯ್ಯ ಮಾಡ್ತಿ
ಇಂಥ ಪಾಪ ನೀಗಬೇಕಿದ್ರೆ ಪುಣ್ಯ ಇರಬೇಕ್ ಮೂರ್ತಿ
ಹೀಗೆಲ್ಲ ಮಾಡಿದ್ರೆ ಮನೇಗ್ ಒಳ್ಳೇ ಕೀರ್ತಿ!
"ಮದುವೆ ಆಗೋಲ್ರಿ ಅವಳನ್ನ, ಮದುವೆ ಆಗೋಲ್ಲ."

ಆ ಹುಡುಗೀಗಿದಾನೊಬ್ಬ ಭೀಮನಂಥ ಅಣ್ಣ
ಅವನಿಗೇನಾದ್ರು ಗೊತ್ತಾದ್ರೆ ಮುಕ್ಕಿಸಿಬಿಡ್ತಾನೆ ಮಣ್ಣ
ಬುದ್ಧಿ ಹೆಚ್ಚಿ ಹೇಳಿಸಿಕೊಳ್ಳಕ್ಕೆ ನೀನೇನಲ್ಲ ಸಣ್ಣ
"ಮದುವೆ ಆಗೋಲ್ರಿ ಅವಳನ್ನ, ಮದುವೆ ಆಗೋಲ್ಲ."

ನೀ ಹೀಗೆ ಹಟ ಹಿಡಿದ್ರೆ ಹುಚ್ಚ ಬಿಡ್ತೀವಿ ಒಟ್ಗೆ
ಸುಟ್ಟು ಬಿಡ್ತೀವಿ ಇಲ್ಲೀನೆ ಬೇಕಾದಷ್ಟಿದೆ ಕಟ್ಗೆ
ಯಾಕಯ್ಯ ಹೀಗ್ಮಾಡ್ತೀಯ, ಏನ್ ತಿನ್ತೀಯ ಹೊಟ್ಗೆ?
"ಮದುವೆ ಆಗೋಲ್ರಿ ಅವಳನ್ನ, ಮದುವೆ ಆಗೋಲ್ಲ!"

(ಸ್ಫೂರ್ತಿ: ಒಂದು ಇಂಗ್ಲಿಷ್ ಕವಿತೆ)



ನಂ.ಕೃ.ನಾಗರಾಜ

ಕಣ್ಣತೆರೆ! ಕಣ್ಣತೆರೆ! ಕನ್ನಡದ ಕಂದ
ಕನ್ನಡದ ಕೈ ದೀಪ ಬೆಳಗುತಿದೆ ಚಂದ.

ಕನ್ನಡದ ತೊಟ್ಟಿಲಿನ ಹಸುಗೂಸು ಕಂದ
ಬೀಸುತಿದೆ ಹೊಸಗಾಳಿ ಹೊಸತನದಿನಿಂದ
ಹೊಸಬೆಳಕು, ಹೊಸಭಾವ, ಹೊಸಹುರುಪಿನಿಂದ
ಸಿಂಗರಿಸಿ ಕೊಂಡಿಹಳು ಕನ್ನಡತಿ ಕಂದ.

ಕನ್ನಡದ ರಸಪೀಠ ಬಾಯಾರಿ ಬಂದ
ಕನ್ನಡದ ಪ್ರೇಮಿಗಳಿಗೌತಣವು ಇಂದು
ಭಾವುಕತೆ, ಮೋದಕತೆ, ಕೋಮಲತೆಯಿಂದ
ಕೂಗುವಳು ಕನ್ನಡಿತಿ ಕಣ್ಣತೆರೆ ಕಂದ.

ಕನ್ನಡದ ಲೇಖನಿಗೆ ಶಕ್ತಿಯಿದೆ ಕಂದ
ಕನ್ನಡವು ರಸಭರಿತ ಬಾವುಟವ ಮುಂದು
ಬೀಳಲಿಕೆ ಬಿಡಬೇಡ, ಬಾಳಲಿದು ಚಂದು
ಬೆಳಸಿಕೊಳ್ಳದ ಬಿಡದೆ ಕನ್ನಡದ ಕಂದ.

ಮಾತುಸವಿ, ಗೀತೆಸವಿ, ಗಾನಸವಿ ಕಂದ
ಕನ್ನಡದ ಕಾಜಾಣ, ಕೋಗಿಲೆಯು ಬಂದು
ಹಾಡುತಿದೆ ಹೂ ಬನದಿ ಕೇಳುವುದೆ ಕಂದ?
'ಕನ್ನಡಕೆ ಪ್ರೋತ್ಸಾಹ ನೀಡುತಿರು' ಎಂದ.



# ದೀಪ

ಎಸ್. ವಿ. ವಿಷ್ಣುಮೂರ್ತಿ

ಹಾಗೇ ಹೊತ್ತುವುದಿಲ್ಲ
ದೀಪ
ಬರಿದೆ ಅವಸರದ ಸಿಟ್ಟಿನಲಿ
ನೆಲ ಒದ್ದು ಧೂಳೆದ್ದು ಕೆಂಪಾಗಿ ತಂಪಾಗಿ
ಕಣ್ಣೀರು ಚರಂಡಿಯ ಸೇರೀತು,
ಅಷ್ಟೆ.

ಆವರಿಷ್ಟೆ-
ಅವುಗಳಲ್ಲೊಂದಾದರೂ
ಬೆಂಕಿಯಾರದೆ ಉರಿದು
ಹೊಸ ಹಣತೆ ಹಸಿಗೊಂಡ ದಿನವೆರಡರೊಳಗೆ
ಒಳನುಗ್ಗಿ ಮುಟ್ಟಬೇಕು
ಹಸಿ ಹತ್ತಿಯನು.
ಬೆಂಕಿತುದಿ ಮುದ್ದೆಯಲ್ಲಿಳಿದು
ಹೊತ್ತಬೇಕು ಹಣತೆ.

ಮೂರುದಿನ ಹೊಸ್ತಿಲಾಚೆಗೆ ಕುಳಿತು
ಕಿಲುಬು ಹಣತೆಯನ್ನೆತ್ತಿ ಬೀಸಾಕದೆ
ಕರಟು ಎಣ್ಣೆಯ ಜಿಲ್ಲಿ ತಿಕ್ಕಿ ತೊಳೆದು,
ಮೈಯೆರೆದು ಒಳಬಂದು
ಒಳ್ಳೆಣ್ಣೆ ಕೂಡಿಸುತ
ನಡುವೆ ಹತ್ತಿಯನ್ನದ್ದಿಟ್ಟು
ನಾ ಕಡ್ಡಿ ಗೀರಿ ನಿನ್ನೆದುರು ಹಿಡಿವನಕ
ಹತ್ತು ಹದಿನಾಲ್ಕು ದಿನ
ಬೇಸತ್ತು ಕಾದು ನಿಲ್ಲು.

ಅಷ್ಟೆ ಅಲ್ಲ-
ಸೆರಗ ತೆರೆಮರೆಯಲ್ಲಿ ಎಣ್ಣೆಯೂಡಿ
ಬತ್ತಿ ಮುಂದೂಡುತ್ತ
ಉರಿವಕುಡಿ ಜೋಪಾನಮಾಡು.
ಆಮೇಲೆ ನೋಡು:
ನೆಲದೆದೆಯ ನೀಳ ಜ್ವಾಲಾಮುಖಿ ಸಿಡಿದು
ಹರಿಯುತ್ತದೆ ಲಾವಾರಸ :
ಅದರ ಜೊತೆ ಬಂದ ಈ ದೀಪ
ಬೇರೆಯೇ ನಿಲ್ಲುತ್ತದೆ.
ಬದುಕುತ್ತದೆ.
ಬೆಳಕ ಬೀರುತ್ತದೆ.
ನನ್ನ
ನಿನ್ನ
ಇರವನ್ನು ಲೆಕ್ಕಿಸದೆ
ಬಾಂಧವ್ಯ ದಿಕ್ಕಳವ ಸಿಕ್ಕಿಸದೆ
ಅರಳುತ್ತದೆ.

ಕಡ್ಡಿ ಹಣತೆಗಿರುವ ಅಂತರ
ಕೈಯಾರೆ ಆ ಹಣತೆ ನಾ ಹಚ್ಚಲಾರೆನೆನ್ನುವ ಸತ್ಯ
ನೆನಪಿಟ್ಟುಕೊ.
ನಾ ಭಿಲ್ಲವನಾದೇನು :
ಬಿಟ್ಟೇನು ಬೆಂಕಿ ಬಾಣವ ಲಕ್ಷಲಕ್ಷ
ನನಗಿಲ್ಲ ದಣಿವು ಬೇಸರ ಕೂಡ.



# ಮೃಗಶಿರ

ಬುದ್ದಣ್ಣ ಹಿಂಗಮಿರೆ

ಇದು ನನ್ನ ಪ್ರತಿಬಿಂಬ ಹೊಳೆ:
ಉನ್ಮತ್ತ, ವಿಕಾರ, ಉದ್ರೇಕ ಧಾವಿಸುವ ದ್ರವಕ್ಕೆ
ಕಟ್ಟಲೆ, ಒಡ್ಡುಕಟ್ಟಲೆ
ಅಥವಾ ಭಂಗಗೊಳಿಸಲಿ?
ಉಪ್ಪಿನ ಬಂಡೆ ಸದ್ದಿಲ್ಲದೆ ಕರಗಿ
ನುಣ್ಣ ನುಣ್ಣಗೆ ಜಾರಿ
ಬೋರೆ ಹಣ್ಣಕ್ಕಾಗಿ
ರತ್ನಮುಳ್ಳು ಜಡಿದುಕೊಳ್ಳಲೆ ಮೈತುಂಬ?
ಹುಳಿ ಹುಣಿಸೆ ಹೊಳೆ ಮುಳುಗಿ
ಅರಿಸಿಕೊಳ್ಳಲೆ ಅತೃಪ್ತಿ, ದಾವಾನಲ?
ತಪ್ಪು ತುಳಿವ ಅಸ್ತವ್ಯಸ್ತ ತಿದ್ದಿ
ಎಚ್ಚತ್ತು ಹೆಡೆಯಾಡಿಸುವ ಹೊತ್ತು
ಮತ್ತೆ ಮತ್ತೆ ಶಿಥಿಲಗೊಳ್ಳುತ್ತವೆ ಇಂದ್ರಿಯ.

ರಕ್ತ-ಮಾಂಸ, ಸಪ್ತಧಾತುವನ್ನಾಕರ್ಷಿಸಿ
ಮಂತ್ರ-ಮುಗುಳೆರಚಿ
ನಾಯಮಾಡಿಕೊಂಡೊಯ್ಯಬೇಕೆನ್ನುವ
ದುರುಗಮುರುಗಿ ಮಾಯಿ
ತನ್ನ ಹೆತ್ತವಳಲ್ಲಿ ತನ್ನಿಂದ ಸೃಷ್ಟಿಗೊಂಡು ಬಳ್ಳ-ಹೂವಾಗಿ
ಜಲ ಜಲ ಹರಿದಾಡಿದವಳಲ್ಲಿ
ಮುತ್ತು-ಹವಳ ಕೊಯ್ದು
ಅಚಿಂತ್ಯ ಶೋಧಿಸೆನ್ನುವ ಛಲ
ಪ್ರಶ್ನೆಗಳ ಹೊಂಡದಲಿ ತೆಪ್ಪ ತೇಲುವ ಹೆಣಕ್ಕಿಂತಲೂ
ಭಗ್ನಗೊಂಡು ಗೊಳ್ಳನೆ
ಛಿನ್ನ ವಿಚ್ಛಿನ್ನ ಉಂಡೆ ಉಂಡೆ ಉರುಳಿ
ಹೊರಳಿ,

ನಗ್ನ ಪರಿಭ್ರಮಿಸುವ ನಕ್ತಂಚರ.
ಪುಣ್ಯ-ಪಾಪ ಚೆಣ್ಣಗೋಲ ತೂಗಿ
ತೂಗಿ ತಿನ್ನುವ ಮಾರ್ಜಾಲಕ್ಕಿಂತ
ಕ್ಷುದ್ರವೆ ತಾನು?

ತನ್ನ ಬೆಂಕಿ ಬೀಜ ಬಿದ್ದುದ್ಭವಿಸಿದವಳಲ್ಲವೆ
ಈ ತರಳೆ
ಕಂಗೊಳಿಪ ಎರಳೆ?
ನನ್ನ ವಿರುದ್ಧ ಬಂಡಾಯವೆದ್ದ ಐದೂ ದೆವ್ವ ತಣಿಸುವುದಕ್ಕೆ
ಜಿನ್ನಟ್ಟಿ ಜಿನ್ನಟ್ಟಿ, ಜಾಂಪಾರಿ, ಬಸವಳಿದು
ಕೆಂಡಮಳೆ ಕೊಯ್ದು ಗಡ್ಡೆಗಟ್ಟಿದೆ,

ಶಿರ ಕಳಚಿ ಬಿತ್ತೆಂದು
ಖಿನ್ನಗೊಳ್ಳಲಿ ಇಲ್ಲ. ನೂರು ಪಾಪ ನಾಯಿ
ಬೊಗಳಿದರೂ ಬೆಚ್ಚಲಿಲ್ಲ.
ಬೆಳ್ಳ ಬೆಳಕಿನ ಬೆಳ್ಳಿಮೈ ಕೊಳಚೆ ಮುಳುಗಿ
ಅಂಡಲೆದೆ ಇದ್ದಲಿ ಇಲಿ.
ಉಕ್ಕಿನ ಪ್ರತಿಮೆಯಾಗಿ
ಶಾಪ ಬಿಟ್ಟ ಹೊತ್ತು ಬೆನ್ನ ಮೇಲೆ
ಕಳ್ಳುಂಡು ಅಪಘಾತ-ಕೊಳ್ಳ ಘುಮುಕಿದ್ದಕ್ಕೆ
ಇದ್ದೆಲ್ಲ ಗಟ್ಟಿತನ ಸಡ್ರನೆ ಸಡಲಿ

ಶಿಲೆಯಾಗಿರುವ ಭರಮ.
ಮುತ್ತಿ ಕಾಡುತ್ತವೆ ಇಂದಿಂದಿಗೂ
ಅವೆ ಅತ್ಯುಗ್ರ ಭೀತಿ ಮತ್ತು ಕರ್ಮ
ಬೆನ್ನ ಹಿಂದೆ ನಿಂತು ಗಹಗಹಿಸುವ ಬೆಳ್ಳವ್ಯಾಧ.
ಇದು ನನ್ನ ಪ್ರತಿಬಿಂಬ ಹೊಳೆ:



# ಆತ್ಮಗೀತೆ

ಜೀವಿ

(೧)

ನಾನಜಾತಶತ್ರುವಲ್ಲ, ಮಿತ್ರರೆನಗೆ ಕಡಿಮೆಯಿಲ್ಲ
ಆಗದವರ ಕಿಚ್ಚಿನಲ್ಲಿ ಬೆಂದಿರುವೆನು
ಸ್ನೇಹಿತರ ಸುಧೆಯಲ್ಲಿಯೆ ಮಿಂದಿರುವೆನು

(೨)

ಸುಖದ ದಿನದಿ ನಕ್ಕಿರುವೆನು, ದುಃಖದಲ್ಲಿ ಬಿಕ್ಕಿರುವೆನು
ನನ್ನವರ ನಲುಮೆಯಲ್ಲಿ ಮರೆತಿರುವೆನು
ಬೇರೆಯವರ ಕುಲುಮೆಯಲ್ಲಿ ಕರಗಿರುವೆನು

(೩)

ನಾನು ಜಿಗಿದು ಗೆದ್ದುದುಂಟು, ಕೆಳಗೆ ಬಿದ್ದು ಸೋತುದುಂಟು
ಹೊಗಳಿದವರ ಹೊನ್ನಶೂಲ ಏರಿರುವೆನು
ಬೊಗಳಿದವರ ಮಾತನುಂಡೆ ಬಾಳಿರುವೆನು

(೪)

ನನ್ನದೆಂದು ಬಡಿದುಕೊಂಡು, ಒಲುಮೆಯಿಂದ ಅಪ್ಪಿಕೊಂಡು
ರತ್ನವೆಂದು ತಿಳಿದು ಕಾಜು ಹಿಡಿದಿರುವೆನು
ಮಣ್ಣಿನಲ್ಲಾ ಹೊನ್ನ ಕಣವ ಪಡೆದಿರುವೆನು

(೫)

ಹುಚ್ಚ–ಪ್ರೇಮಿ ಕವಿಯು ಆಗಿ, ದಿವ್ಯತೇಜಕೊಂದೆ ಬಾಗಿ
ಈ ಜೀವದ ಪಾತ್ರೆ ಎತ್ತಿ ಕುಡಿದಿರುವೆನು
ಅಗುಳಿನಲ್ಲಿ ಅಕ್ಷಯವನು ಕಂಡಿರುವೆನು.

(೬)

ಕುರುಡ ರಾಜನಾದುದುಂಟು, ಹೆಡ್ಡ ಧನಿಕನಾದುದುಂಟು
ಒಳ್ಳೆತನಕೆ ಮಾರುಹೋಗಿ ಕುದಿದಿರುವೆನು
ಬೆಳಕಿನಂಗಿ, ಅಗ್ನಿರಕ್ಷೆ ಪಡೆದಿರುವೆನು

(೭)

ತಿಪ್ಪೆಯಲ್ಲು ಇಹುದು ಮಾವು, ಹೂವಿನಲ್ಲು ಇಹುದು ಹಾವು
ವೈಪರೀತ್ಯದುಸಿರೆ ಬಾಳು, ಕಂಡಿರುವೆನು
ಹೇಸಿಕೆಯಲಿ ದ್ರಾಕ್ಷಿ ಬೆಳೆದು, ಉಂಡಿರುವೆನು

(೮)

ಕಲ್ಲು–ಬಂಡೆ ಇದ್ದರೇನು ? ಉಸುಕು ಕಾಡು ಬಿದ್ದರೇನು ?
ಸತ್ಯ—ಬೀಜ ಬಾಳುವದನು ನೋಡಿರುವೆನು.
ಆಲದೆಲೆಯಲೊರಗಿಕೊಂಡೆ ಹಾಡಿರುವೆನು

(೯)

ಬಯಕೆಯಿದ್ದ ಬಸಿರುಬೇಕು, ಕೆಸರು ಇದ್ದ ಕುಸಿರು ಬೇಕು
ನೋವೆ ಕಲೆಯ ತಾಯಿ ಇದನು ಅರಿತಿರುವೆನು
ಸಾವರಿಯದ ಮಕ್ಕಳನ್ನು ಪಡೆದಿರುವೆನು

(೧೦)

ಕಾಣುತಿರುವ ಜಗವು ಹೊರದಿ, ಕಾಣದಿರುವ ಜಗವು ಒಳದಿ
ಎರಡು ವಿಶ್ವಗಳಿಗೆ ಹಗ್ಗ ಹಾಕಿರುವೆನು
ಸಂಬಂಧವ ಏನೊ ಕಂಡು ಜೋತಿರುವೆನು

(೧೧)

ಹೊನ್ನಿ—ಹುಳವು ಬೆಳಗಿದಂತೆ, ಎಣಿ ಮುಗಿಲ ಮುಟ್ಟುವಂತೆ
ಕಂಗಳಲ್ಲಿ ವಿಶ್ವ ಹುಗಿಯೆ ಬಯಸಿರುವೆನು
ಬೊಗಸೆಯಿಂದ ಕಡಲು ಅಳೆಯೆ ಹೊರಟಿರುವೆನು.





ಆನಂದಕಂದ

# ಬೀಸಗಿತ್ತಿಯ ಹಬ್ಬ



ಕನ್ನಡ ಜನಪದ ಇಂದು-ನಿನ್ನೆಯದೆ? ಇದಕ್ಕೆ ಎರಡು ಸಾವಿರ ವರುಷಗಳ ಜ್ಞಾತಚರಿತ್ರೆಯಿದೆ. ಅದಕ್ಕೆ ಹಿಂದಿನ ಅಜ್ಞಾತಕಾಲದಲ್ಲಿಯೂ ಕನ್ನಡನಾಡು ಸುಸಂಸ್ಕೃತಿಯ ಬೀಡಾಗಿರಬೇಕು. ಆದರೆ ಆ ಕಾಲದ ಚರಿತ್ರೆಯ ಮೇಲೆ ಕಗ್ಗತ್ತಲೆಯ ತೆರೆಯು ಮುಸುಕು ಹೊದ್ದಿಸಿರುವುದು. ಜ್ಞಾತಚರಿತ್ರೆಯೆಂದು ಜಂಭಕೊಚ್ಚಿಕೊಳ್ಳುವ ಕಾಲದ ಕಥೆಯನ್ನೂ ನಾವು ಅರಿತುಕೊಂಡುದೆಷ್ಟು? ಅರಿತುಕೊಂಡಿರುವುದು ಸಿಂಧುವಿನೊಳಗಿನ ಬಿಂದುವಿನಷ್ಟು ಮಾತ್ರ! ಅರಿತುಕೊಳ್ಳಬೇಕಾಗಿರುವುದು ಅಪಾರ ಮಹಾಸಾಗರ! ಏಕೆಂದರೆ, ಎರಡು ಸಾವಿರ ವರ್ಷಗಳ ಕಾಲಖಂಡವೆಂದರೆ ಕಿರಿಯದೆ? ಈ ಕಾಲಖಂಡದಲ್ಲಿ ಬಾಳಿದ ಕನ್ನಡ ಜನರ ಜೀವನವೇನು ಅರಿಯದ?

ಕನ್ನಡಿಗರು ಕಟ್ಟಿದ ರಾಜ್ಯ-ಸಾಮ್ರಾಜ್ಯಗಳ ನಾಗರಿಕ ರಾಜಕೀಯ ಚರಿತ್ರೆ ಒತ್ತಟ್ಟಿಗಿರಲಿ; ಮಾನವತೆಯನ್ನು ಅರಳಿಸಿಕೊಳ್ಳುತ್ತ, ಸುಸಂಸ್ಕೃತಿಯ ಸಾಮ್ರಾಜ್ಯವನ್ನು ಕಟ್ಟಿ ಮೆರೆಯಿಸಿದ ಅವರ ಜನಜೀವನಚರಿತ್ರೆ ರಾಜಕೀಯ ಚರಿತ್ರೆಗಿಂತಲೂ ಸತ್ತ್ವಯುತವಾಗಿದೆ; ತತ್ತ್ವನಿದರ್ಶಕವಾಗಿದೆ. ಆದುದರಿಂದಲೇ ಇದನ್ನು ಅರಿತುಕೊಳ್ಳಬೇಕೆಂಬ ಉತ್ಕಟ ಅಭಿಲಾಷೆ ನನಗೆ. ಎಂತಲೇ ಹಳೆಯ ಕಾಲದ ಗುರುತು ದೊರೆತಾಗಲೆಲ್ಲ, ಭೂತಕಾಲದ ಗೋರಿಗಳನ್ನು ಕೆದರುತ್ತ ಕುಳಿತುಕೊಳ್ಳುವುದು ನನ್ನದೊಂದು ಸ್ವಭಾವ. ಮಿಕ್ಕವರ ದೃಷ್ಟಿಯಲ್ಲಿ ಇದು ನನ್ನ ಹುಚ್ಚುತನ.

ಕನ್ನಡ ಜನಪದದ ಹಳೆಯ ಕಾಲದ ರಮ್ಯಜೀವನವನ್ನೂ ದಿವ್ಯಜೀವನವನ್ನೂ ನೆನಪಿನೆದುರು ತಂದು ನಿಲ್ಲಿಸುವ ಸ್ಮಾರಕಸಂಜ್ಞೆಗಳು, ನಮ್ಮಲ್ಲಿ ಇಂದಿನ ವರ್ತಮಾನಕಾಲದಲ್ಲಿಯೂ-ಬೇಕಾದಷ್ಟು ಸಿಕ್ಕುವುವು. ಗಾದೆಯ ಮಾತು, ನಾಡನುಡಿ, ಕುಲಾಚಾರ, ವಿಶಿಷ್ಟ ರೀತಿಯ ಕೌಟುಂಬಿಕ ಹಬ್ಬಗಳು, ಅನೇಕ ಮನೆತನಗಳಲ್ಲಿರುವ ವೀರಪೂಜೆ, ಮಹಾಸತಿಪೂಜೆ ಇವುಗಳೆಲ್ಲ ನಮ್ಮ ನಾಡಿಗರ ಜೀವನಸಂಸ್ಕೃತಿಯ ಆದರ್ಶಸಾಧನೆಯ ಸ್ಮಾರಕಗಳೇ ಆಗಿವೆ. ಈ ಸ್ಮಾರಕಗಳ ಹಿಂದೆ ಹುದುಗಿದ್ದ ವಾಸ್ತವ ಚರಿತ್ರೆಯನ್ನು ಕಂಡುಕೊಳ್ಳುವುದೆಂದರೆ, ಅದೊಂದು ಆದರ್ಶಸಿದ್ಧಿಯೆಂದು ನಾನು ಭಾವಿಸಿದ್ದೇನೆ. ಇದಕ್ಕಾಗಿಯೇ ನಾನು, ನನಗೆ ದೊರೆತ ಸರಕಾರೀ ಕೆಲಸವನ್ನು ಬಿಟ್ಟು, ಹಣದ ಗಳಿಕೆ ಕೊಂಚವೂ ಇಲ್ಲದ ಈ ಕೆಲಸದ ಬೆನ್ನನ್ನು ಹತ್ತಿದ್ದೇನೆ. ಈ ನನ್ನ ಕೆಲಸದ ಕಾರಣದಿಂದಲೇ ನನ್ನ ಮೆಚ್ಚಿನ ಮಡದಿಯ-ಪ್ರೀತಿಯ ಮಕ್ಕಳ-ಮುನಿಸು-ಮುನಿಸ್ತಾಪಗಳನ್ನೂ ಆಗಾಗ ಅನುಭವಿಸುತ್ತಲಿದ್ದೇನೆ.

'ಇದೇನಿದು? ಸಣ್ಣ ಕಥೆ ಬರೆಯುವೆನೆಂದು ಹೊರಟು ಸ್ವಂತದ ಕಥೆಯನ್ನು ಪ್ರಾರಂಭಿಸಿದರಲ್ಲಾ' ಎಂದು ಯಾರಾದರೂ ನನ್ನನ್ನು ಕೆಣಕಿ ಕೇಳಬಹುದು; ಹೀಗೆ ಕೇಳುವವರಿಗೆ ನನ್ನ ಉತ್ತರ ಇಷ್ಟೇ; ನನ್ನ ಪರಿಚಯ ನಿಮಗೆ ಆಗದೆ ಇದ್ದರೆ, ನಾನು ಹೇಳಲಿರುವ ಸಣ್ಣಕಥೆಯನ್ನು ಕೇವಲ ಕಲ್ಪಿತಕಥೆಯೆಂದು ನೀವು ಭಾವಿಸಬಹುದು-ಎಂದು! ಇದು ಕನ್ನಡ ಜನಜೀವನದಲ್ಲಿ ನಡೆದ ವಾಸ್ತವ ಘಟನೆ-ಎಂಬುದರ ಮನವರಿಕೆಯಾಗಬೇಕೆಂದು!

ಸರಕಾರ ನಮ್ಮ ಇತಿಹಾಸ-ಸಂಸ್ಕೃತಿಗಳ ಸಂಶೋಧನೆಗೆಂದು ಒಂದು ಕಾರ್ಯವಿಭಾಗವನ್ನೇ ಆರಂಭಿಸಿರುವದಲ್ಲವೇ? ಅದರದೊಂದು ಶಾಖಾಕಾರ್ಯಾಲಯ ನಮ್ಮ ನಗರದಲ್ಲಿದೆ. ಅದಕ್ಕೆ ಹೊಂದಿದ ಒಂದು ಗ್ರಂಥಭಾಂಡಾರವೂ, ಹಳೆಯ ಕೈಬರೆಹದ ಕಾಗದ-ಕಡತಗಳ ಸಂಗ್ರಹಾಲಯವೂ ಇವೆ. ವಿಶ್ವವಿದ್ಯಾಲಯದ ಪರಮೋಚ್ಚ ಪದವಿಗಳನ್ನು ಪಡೆದ ನಾಲ್ಕೈದು ಜನರು. ಆ ಕಾರ್ಯಾಲಯದಲ್ಲಿ ಸಂಶೋಧಕರಾಗಿ ಕೆಲಸ ಮಾಡುತ್ತಿರುವರು. ನನಗೆ ಯಾವುವಾದರೂ ಚರಿತ್ರ ಗ್ರಂಥಗಳು, ಹಳೆಯ ಕಾಗದ ಕಡತಗಳು ಬೇಕಾದಲ್ಲಿ, ಆ ಸಂಶೋಧನ ಕಾರ್ಯಾಲಯಕ್ಕೆ ಹೋಗುತ್ತಿರುತ್ತೇನೆ. ನನ್ನ ಸಂಸ್ಕೃತಿ ಸಂಶೋಧನದ ಆಸಕ್ತಿಯನ್ನು ಕಂಡುಕೊಂಡುದರಿಂದಲೋ ಏನೋ, ಅಲ್ಲಿಯ ಸಂಶೋಧಕವರ್ಗವೂ, ಕಾರ್ಯಾಲಯದ ಮುಖ್ಯಾಧಿಕಾರಿಯೂ, ನನ್ನನ್ನು ಹತ್ತಿರದವನನ್ನಾಗಿ ಮಾಡಿಕೊಂಡಿದ್ದಾರೆ. ಆಗಾಗ ನನ್ನೊಂದಿಗೆ ಸಂಶೋಧನಸಮಸ್ಯೆಗಳ ಬಗೆಗೆ ಚರ್ಚೆ-ಸಂಭಾಷಣೆಗಳನ್ನೂ ನಡೆಸುತ್ತಾರೆ. ನನ್ನೊಡನೆ ಚರ್ಚೆ-ಸಂಭಾಷಣೆಗಳನ್ನು ನಡೆಯಿಸುವುದರಲ್ಲಿ ಆ ಜನರಿಗೆ ವಿಶೇಷ ಪ್ರಯೋಜನವೇನಾದರೂ ಸಿಕ್ಕುತ್ತಿರಬಹುದು; ಎಂತಲೇ ನನ್ನೊಂದಿಗೆ ಮಾತನಾಡುವ ಸಂದರ್ಭಗಳನ್ನು ಅವರು ಮತ್ತೆ ಮತ್ತೆ ತಂದುಕೊಳ್ಳುತ್ತಿರುವರು. ಒಂದು ಮೋಜಿನ ಸಂಗತಿಯೆಂದರೆ, ಕಾರ್ಯಾಲಯದ ಸಂಶೋಧಕರೊಬ್ಬರು ಬರೆದು ಪ್ರಕಟಿಸಿ, 'ಮಹತ್ತ್ವದ ಸಂಸ್ಕೃತಿ ಸಂಶೋಧನವಿದು' ಎಂದು ತಜ್ಞರ ಪ್ರಶಂಸೆಗೆ ಪಾತ್ರನಾದ ಲೇಖನಗಳಲ್ಲಿ, ವಿಷಯ

ದೆಲ್ಲ ನನ್ನದಾಗಿರುವುದು; ಲೇಖಕರು ಮಾತ್ರ ಅವರು! ಆ ವಿಷಯಗಳನ್ನು ನಾನೇ ಬರೆದು ಪ್ರಕಟಿಸಿದ್ದರೆ, ಆ ತಜ್ಞಬ್ರುವರು ಅದನ್ನು ಮೆಚ್ಚಿ ಹೊಗಳುತ್ತಿದ್ದರೋ ಇಲ್ಲವೋ! ಹೋಗಲಿ, ಸರಕಾರಿ ಅಧಿಕಾರಿಯ ಹೆಸರಿನಿಂದಾದರೂ ನನ್ನ ಸಂಶೋಧನೆ ಮನ್ನಣೆಗ ಪಾತ್ರವಾಯಿತಲ್ಲ-ಎಂದು ಸಮಾಧಾನ ನನಗೆ! ಯಾವುದೇ ರೀತಿಯಿಂದಲಾಗಲಿ, ಯಾರಿಂದಲೇ ಆಗಲಿ, ಕತ್ತಲೆಯಲ್ಲಿ ಮರೆಯಾಗಿದ್ದ ಸತ್ಯಸಂಗತಿ ಬೆಳಕಿಗೆ ಬಂದಿತಲ್ಲ-ಎಂದು ನನಗೆ ತುಂಬ ಸಂತೃಪ್ತಿ!

ಈಗ ನಾಲ್ಕು ದಿನಗಳ ಹಿಂದೆ, ಸಂಶೋಧನಾಧಿಕಾರಿಗಳ ಕಡೆಯಿಂದ ನನಗೆ ಆತುರದ ಕರೆ ಬಂದಿತು. ಕೂಡಲೇ ಕುತೂಹಲಿಯಾಗಿಯೇ ಅವರ ಕಾರ್ಯಾಲಯಕ್ಕೆ ಹೋದೆ. ಅಧಿಕಾರಿಗಳಿಂದ ಆದರದ ಸ್ವಾಗತ ದೊರೆಯಿತು; ತಿಂಡಿ-ತೀರ್ಥಗಳೂ ದೊರೆತುವು. ಎಲ್ಲವೂ ಮುಗಿದ ಮೇಲೆ ನಾನೇ ಮಾತನ್ನಾರಂಭಿಸಿದೆ:

"ಏನು, ತಿಂಡಿ—ತೀರ್ಥಗಳಿಗಾಗಿಯೇ ನನ್ನನ್ನು ಕರೆಸಿದಿರಾ ಇಲ್ಲಿಯ ವರೆಗೆ?"

ಅಧಿಕಾರಿಗಳು ಮೆಲುನಗೆ ನಗುತ್ತ ಹೇಳಿದರು!

"ಕೇವಲ ತಿಂಡಿ-ತೀರ್ಥಗಳಿಗಾಗಿ ಅಲ್ಲ! ಒಂದು ವಿಷಯ ಕುರಿತು ನಿಮ್ಮ ಜೊತೆ ಮಾತನಾಡಬೇಕೆನಿಸಿತು. ವನಪಾಲನಾಯಕ ದೇಸಾಯಿ ಎಂ. ಎಲ್. ಎ. ಅವರನ್ನು ನೀವು ಬಲ್ಲಿರಲ್ಲವೆ?"

"ಬಲ್ಲೆನೆಂದರೆ ಬಲ್ಲೆ; ಇಲ್ಲವೆಂದರೆ ಇಲ್ಲ, ಎಂ. ಎಲ್. ಎ.ಗಳು ಮಂತ್ರಿಗಳು ಇಂಥವರ ಪರಿಚಯ ಸಂಬಂಧ, ನಮ್ಮಂತಹ ಬಿಡಾಡಿಗಳೊಡನೆ ಹೇಗೆ ಬರಬೇಕು? ಏತಕ್ಕಾಗಿ ಬರಬೇಕು? ಪತ್ರಿಕೆಗಳನ್ನೋದುವಾಗ, ವನಪಾಲನಾಯಕ ದೇಸಾಯಿ ಎಂಬವರ ಹೆಸರು ಆಗಾಗ ಕಣ್ಣಿಗೆ ಬೀಳುತ್ತಿರುತ್ತದೆ. ಆದುದರಿಂದ ಅವರ ಅಸ್ತಿತ್ವವನ್ನು ಮಾತ್ರ ನಾನು ಅರಿತಿದ್ದೇನೆ," ನಾನು ಹೇಳಿದೆ.

ನನ್ನ ಮಾತಿಗೆ ಅವರು ತಮ್ಮ ಮೆಲುನಗೆಯನ್ನು ಬಲಿಸುತ್ತ ಹೇಳಿದರು:

"ನಿಮ್ಮ ಮಾತು ಸರಿಯಾದದ್ದು! ಎಂ. ಎಲ್. ಎ.ಗಳು ಮಂತ್ರಿಗಳು ಇವರಿಗೆಲ್ಲಾ ಜನಸಾಮಾನ್ಯರ ಸಂಬಂಧ ಬರುವುದು ಕಡಮೆ! ಆದರೂ ಅವರು ಜನಸಾಮಾನ್ಯರ ಪ್ರತಿನಿಧಿಗಳೆಂಬುದು ಸುಳ್ಳಲ್ಲ. ಅದು ಹೋಗಲಿ, ಈಗ ಪ್ರಸ್ತುತ ವಿಷಯಕ್ಕೆ ಬರುವ. ಆ ವನಪಾಲ ದೇಸಾಯಿಯವರು, ತಮ್ಮ ಮನೆತನದ ಪೂರ್ವೇತಿಹಾಸವನ್ನು ಅರಿತುಕೊಳ್ಳುವುದಕ್ಕೆ ತುಂಬ ಕುತೂಹಲವುಳ್ಳವರು. ಅದಕ್ಕಾಗ ಅವರು ಆಗಾಗ ಕಾಗದ ಬರೆದು ಏನೇನನ್ನೋ ವಿಷಯ ಕೇಳುತ್ತಿರುವರು. ಅವರಿಗೆ ಬರೆದ ಉತ್ತರಗಳಲ್ಲಿ ನಾವೂ ಏನೇನೋ ಸಂಶೋಧನಾಭಾಸಗಳನ್ನು ಬರೆದು, ಅವರನ್ನು ಸಮಾಧಾನಗೊಳಿಸುತ್ತಿರುವೆವು. ಈಗ ನಿನ್ನೆಯ ಅಂಚೆಯಿಂದ ಮತ್ತೊಂದು ಅವರ ಪತ್ರ ಬಂದಿದೆ. ಕೂಡಲೆ ಅದಕ್ಕೆ ಉತ್ತರ ಬರೆಯಬೇಕೆಂದು ಅವರ ಆತುರ. 'ಎಂ. ಎಲ್. ಎ.' ಅವರು. ಬೇಗನೆ ಅವರಿಗೆ ಏನಾದರೂ ಉತ್ತರ ಬರೆಯಲೇಬೇಕು, ಆದರೆ ಏನು ಬರೆಯಬೇಕೆಂಬುದು ಗೊತ್ತಾಗದೆ, ನಿಮ್ಮೊಂದಿಗೆ ಇದರ ಬಗೆಗೆ ವಿಚಾರವಿನಿಮಯ ಮಾಡಬೇಕೆಂದು, ನಿಮ್ಮನ್ನು ಅವಸರದಿಂದ ಬರಮಾಡಿಕೊಂಡೆ. ತೊಂದರೆ ಕೊಟ್ಟುದಕ್ಕಾಗಿ ಕ್ಷಮಿಸಿ!"

"ಸರಿ ಸರಿ! ಕ್ಷಮೆಯ ಸಂದರ್ಭವೇನೀಗ? ನೀವು ಕೊಟ್ಟ ತಿಂಡಿ-ತೀರ್ಥದಲ್ಲಿ ನಿಮ್ಮ ಶತಾಪರಾಧಗಳೂ ತೇಲಿಹೋಗಿವೆ. ನಿಮ್ಮ ಆದರ ಸತ್ಕಾರಗಳಿಗಾಗಿ ನಾನೇ ನಿಮಗೆ ಕೃತಜ್ಞತೆಗಳನ್ನು ಸಲ್ಲಿಸಬೇಕು. ಅಪ್ರೇಷ್ಟರು ಕೂಡ ಹುಚ್ಚನೆಂದು ಭಾವಿಸಿರುವ ನನ್ನನ್ನು, ಮುಂದೆ ಕರೆದು ಮನ್ನಣೆ ಸಲ್ಲಿಸುವವರಾರು? ಇರಲಿ, ವನಪಾಲನಾಯಕರು ಏನೆಂದು ಕಾಗದ ಬರೆದಿದ್ದಾರೆ?"

"ಇದು ಅವರ ಕಾಗದ! ನೀವೇ ಓದಿ ನೋಡಿ!"

ನಾನು ಕಾಗದ ಕೈಯಲ್ಲಿ ತೆಗೆದುಕೊಂಡು ಓದಲು ತೊಡಗಿದೆ:

"ಸರಕಾರದ ಸಂಶೋಧನಾಧಿಕಾರಿಗಳ ಸಮಕ್ಷಮಕ್ಕೆ—

ರಾಯರೆ,

ಈ ಮೊದಲು ನಾನು ಅನೇಕ ಪ್ರಶ್ನೆಗಳನ್ನು ಕೇಳಿ, ತಮ್ಮಿಂದ ಅವುಗಳಿಗೆ ಸಮಾಧಾನಕಾರಕ ಉತ್ತರಗಳನ್ನು ಪಡೆದಿದ್ದೇನೆ. ಇನ್ನೂ ಈಗ ಒಂದು ವಿಷಯವನ್ನು ತಮ್ಮ ಮುಂದೆ ಇರಿಸಿ, ಅದರ ಮೂಲವನ್ನು ತಿಳಿದುಕೊಳ್ಳಬೇಕೆಂದು ಅಪೇಕ್ಷೆಪಟ್ಟುಕೊಂಡಿದ್ದೇನೆ.

ನಮ್ಮ ಮನೆತನದಲ್ಲಿ ಕಲಕಲಾಂತರದಿಂದಲೂ ಒಂದು ಸಂಪ್ರದಾಯ ನಡೆದುಕೊಂಡು ಬಂದಿದೆ. ಅದೇನೆಂದರೆ: ಪ್ರತಿ ವರ್ಷ ಪೌಷ್ಯ ಶುದ್ಧ ಪಂಚಮಿಯ ದಿನ 'ಬೋನಗಿತ್ತಿಯ ಹಬ್ಬ' ಎಂಬುದೊಂದು ಉತ್ಸವ ದಿನವನ್ನು ಆಚರಿಸಲಾಗುತ್ತದೆ. ಅಂದು ತಳವಾರ ಜಾತಿಯ ಮುತ್ತೈದೆಯೊಬ್ಬಳನ್ನು ಮನೆಗೆ ಕರೆದು, ದೇವತೆಯಂತೆ ಅವಳನ್ನು ಪೂಜಿಸಬೇಕಾಗುವುದು. ಆಕೆಗೆ ಹೊಸ ಸೀರೆ, ಕುಪ್ಪಸ, ದಕ್ಷಿಣೆ ತಾಂಬೂಲಗಳನ್ನು ಸಲ್ಲಿಸಬೇಕಾಗುವುದು. ಉಚ್ಚಾಸನದ ಮೇಲೆ ಅವಳನ್ನು ಕುಳ್ಳಿರಿಸಿ, ಸವಿಯೂಟದೆಡೆಯನ್ನು ಬಡಿಸಲಾಗುವುದು. ಮನೆಯವರೆಲ್ಲರೂ ಅವಳಿಗೆ ನಮಸ್ಕಾರ ಮಾಡಿ, ಅರಿಷಿಣ—ಕುಂಕುಮಗಳನ್ನು ಒಪ್ಪಿಸುವರು. ಮೊದಲು ಅವಳಿಗೆ ಊಟ, ಆ ಮೇಲೆ ಮಿಕ್ಕವರೆಲ್ಲರೂ ಆ ದೇವತೆಯ ಪ್ರಸಾದವೆಂದು ಸವಿಯೂಟವನ್ನು ಉಣ್ಣುವರು. ಅಂದಿನ ಪೂಜೆಗೆ ನಮ್ಮ ಆಪ್ತೇಷ್ಟರೆಲ್ಲರೂ ಒಂದೆಡೆ ಸೇರಿ ಈ ಉತ್ಸವದಲ್ಲಿ ಭಾಗವಹಿಸುವರು. ನಮ್ಮ ಮನೆತನದಲ್ಲಿ ಅಲ್ಲದೆ. ಈ ಬೋನಗಿತ್ತಿಯ ಹಬ್ಬ ಬೇರೆ ಯಾರಲ್ಲಿಯೂ ಇಲ್ಲವೆಂಬುದನ್ನು ನಾನು ಅರಿತುಕೊಂಡಿದ್ದೇನೆ. ನಮ್ಮ ಮನೆಯಲ್ಲಿ ಮಾತ್ರ ಈ ಹಬ್ಬ ಪರಂಪರೆಯಿಂದ ಬಂದಿರುವುದಕ್ಕೆ ಕಾರಣವೇನಿರಬಹುದು? 'ಬೋನಗಿತ್ತಿಯ ಹಬ್ಬ' ಎಂಬ ಹೆಸರು ಇದಕ್ಕೆ ಏಕೆ ಬಂದಿರಬಹುದು? ಈ ಬೋನಗಿತ್ತಿ ಯಾರಿರಬಹುದು? ಅವಳಿಗೂ ನಮ್ಮ ಮನೆತನಕ್ಕೂ ಏನಾದರೂ ಸಂಬಂಧವಿದ್ದಿರಬಹುದೆ? ಇವೆಲ್ಲ ಪ್ರಶ್ನೆಗಳಿಗೂ ಸಮಾಧಾನಕರವಾದ ಉತ್ತರ ನಿಮ್ಮಿಂದ ಬೇಗನೆ ಬರಬೇಕು. ನಿಮ್ಮಿಂದ ಉತ್ತರ ಬಂದು, ಅದು ನನಗೆ ಸರಿಯೆನಿಸಿದರೆ, ನಿಮಗೆ ಮೇಲಿನ ಅಧಿಕಾರ ಸ್ಥಾನವು ಸಿಗುವಂತೆ ನಾನು ಸರ

ಕಾರದವರೊಂದಿಗೆ ಮಾತನಾಡುತ್ತೇನೆ. ಬೇಗನೆ ಉತ್ತರ ಬರಲಿ!

ನಿಮ್ಮ ವಿಶ್ವಾಸದ
ವನಪಾಲನಾಯಕ ಭೈರವನಾಯಕ
ದೇಸಾಯಿ ಎಂ. ಎಲ್. ಎ."

ನಾನು ಪತ್ರವನ್ನು ಎಲ್ಲರಿಗೂ ಕೇಳುವಂತೆ ಗಟ್ಟಿಯಾಗಿಯೆ ಓದಿದೆ. ಓದುವುದು ಮುಗಿದೊಡನೆ ಸಂಶೋಧನಾಧಿಕಾರಿಗಳು ನಿರಾಶೆಯ ಧ್ವನಿಯಲ್ಲಿ ನುಡಿದರು:

"ಸಂಶೋಧಕರೆಂದರೆ ಸರ್ವಜ್ಞರೆಂದು ತಿಳಿದುಕೊಂಡಿದ್ದಾನೇನೋ ಈ ಮಹಾನುಭಾವ! ಇಂತಹ ಪ್ರಶ್ನೆಗಳಿಗೆಲ್ಲ ನಾವು ಹೇಗೆ ಉತ್ತರ ಕೊಡಬಲ್ಲೆವು?"

ಪತ್ರದ ಮೇಲೆ ಕಣ್ಣಾಡಿಸುತ್ತಲೇ ನಾನು ಮಾತನಾಡಿದೆ:

"ಜೋ-ನ-ಗಿ-ತ್ತಿ-ಯ ಹ-ಬ್ಬ! ಹಂ! ಜೋನಗಿತ್ತಿಯ ಹಬ್ಬ! ಏನು ಸರ್, ಈ ವನಪಾಲನಾಯಕರು ಚೆಳ್ಳಕೆರೆಯ ದೇಸಾಯಿಯರಲ್ಲವೇ?"

"ಅಹುದಹುದು! ಚೆಳ್ಳಕೆರೆಯವರು!" ಅಧಿಕಾರಿ ಆತುರದಿಂದ ಹೇಳಿದರು.

"ಚೆ—ಳ್ಳ—ಕೆ—ರೆ ! ಜೋನಗಿತ್ತಿಯ ಹಬ್ಬ!" ಎಂದು ಗೊಣಗುತ್ತಲೇ ನಾನು ನುಡಿದೆ ;

"ನಾಗರಕೊಪ್ಪಲಿನ ನಾಡಗೌಡರ ಮನೆತನದ ಬಖೈರನ್ನು ನಾನು ಓದಿನೋಡಿದ್ದೇನೆ. ಅದನ್ನು ಬರೆದು ಸುಮಾರು ಇನ್ನೂರು ವರ್ಷಗಳಾಗಿರಬಹುದು. ಮರಾಠೀ ಭಾಷೆಯ ಮೋಡೀ ಲಿಪಿಯಲ್ಲಿ ಅದನ್ನು ಬರೆಯಲಾಗಿದೆ. ಕರಡು ಕಾಗದ; ಬರೆದ ಮಸಿ ಎಂತಹದೇನೋ, ಈಗಲೂ ಕೂಡ ಮಿರಿಮಿರಿ ಮಿಂಚುತ್ತದೆ."

ಅಧಿಕಾರಿಗಳೆಂದರು:

"ಅದು ಸರಿ; ಚೆಳ್ಳಕೆರೆಯ ದೇಸಾಯಿಯರಿಗೂ ನಾಗರಕೊಪ್ಪಲಿನ ನಾಡಗೌಡರ ಬಖೈರಿಗೂ ಏನು ಸಂಬಂಧ?"

ನಾನು ಹೇಳಿದೆ :

"ಹಾಗಲ್ಲ! ಈ ದೇಸಾಯಿಯ ಮನೆತನದ ಬಖೈರೂ ಇರಬಹುದಲ್ಲವೆ?"

"ಇದ್ದಿತಂತೆ! ಅದರೆ ಗೆದ್ದಲಿಗಳಿಗೆ ಆಹಾರವಾಗಿ ಹೋಯಿತಂತೆ!"

ನಾನು ಕರುಣಾಸ್ವರದಲ್ಲಿ ನುಡಿದೆ.

"ಅಯ್ಯೊ! ಅದಿದ್ದರೆ ಎಷ್ಟು ಒಳ್ಳೆಯದಾಗುತ್ತಿತ್ತು! ಹೀಗೆಯೆ ಇನ್ನೆಷ್ಟು ಇತಿಹಾಸಾಕರಗಳು ಹಾಳಾಗಿ ಹೋಗಿವೆಯೋ ನಮ್ಮ ನಾಡಿನಲ್ಲಿ!"

"ಕಳೆದುಹೋದುದಕ್ಕೆ ಅಳುಕಿ ಮಾಡುವುದೇನು? ಈಗ ನಮ್ಮ ಸದ್ಯದ ತೊಂದರೆಯಿಂದ ಬಿಡುಗಡೆ ಹೊಂದುವುದಕ್ಕಾಗಿ ನಮಗೆ ಮಾರ್ಗದರ್ಶನವೇನಾದರೂ ಸಿಕ್ಕೀತೇನು ನಿಮ್ಮಿಂದ!"

ನಾಗರಕೊಪ್ಪಲಿನ ನಾಡಗೌಡರ ಬಖೈರಿನಲ್ಲಿ ಚೆಳ್ಳಕೆರೆಯ ಜೋನಗಿತ್ತಿ ಭೋಗಬ್ಬೆಯ ವಿಷಯವನ್ನೆಲ್ಲ ನಾನು ಓದಿ ಅರಿತುಕೊಂಡಿದ್ದೆ. ಆ ವಿಷಯ ತುಂಬ ಅದ್ಭುತರಮ್ಯವಾಗಿರುವುದರಿಂದ ಅದನ್ನು ನಾನೇ ಬರೆದು ಪ್ರಕಟಿಸಬೇಕೆಂದು ನಿರ್ಣಯಿಸಿಗೊಂಡಿದ್ದೆ. ಎಂತಲೇ ನನಗೆ ಗೊತ್ತಿದ್ದ ವಿಷಯವನ್ನು ಅವರೆದುರು ಹೇಳಬೇಕೋ ಬೇಡವೊ ಎಂದು ಮನಸ್ಸು ತುಂಬ ಉಯ್ಯಾಲೆಯಾಡಿತು. ಹೇಳಿದರೆ, ಸಂಶೋಧನೆ ನನ್ನದಿದ್ದು ಯಾವ ಶ್ರಮದನ್ನೂ ಸಹಿಸದೆ. ಇವರು ನನ್ನ ಹೊಸಲು ಸಂಶೋಧನೆಯ ಫಲವನ್ನು ತಾವು ಗಿಟ್ಟಿಸುವರು! ನನಗೆ ಕೀರ್ತಿಯೂ ಇಲ್ಲ; ಕಾಂಚನವೂ ಇಲ್ಲ—ಎಂಬ ಸ್ವಾರ್ಥವು ಕೊಂಚಕಾಲ ಹೃದಯವನ್ನು ಮೀಟಿ, ಮನಸ್ಸು ಬುದ್ಧಿಗಳನ್ನು ಆಟವಾಡಿಸಿತು. ಬಳಿಕ 'ಈ ಸ್ವಾರ್ಥ ನನಗೇಕೆ? ಈ ಅಧಿಕಾರಿಗೆ ಮೇಲಿನ ಪದ ಸಿಕ್ಕರೆ ಸಿಕ್ಕಲಿ! ನನ್ನಂತಹ ಕಾರ್ಪಣ್ಯಮೂರ್ತಿಯ ಕಡೆಯಿಂದ ದಾನಧರ್ಮದ ಪುಣ್ಯಕಾರ್ಯ ಅಸಾಧ್ಯ ! ಈಗ ನಾನು ನನ್ನ ಸಂಶೋಧನಫಲವನ್ನು ಇವರಿಗೆ ದಾನವಾಗಿತ್ತು ಏಕೆ ಪುಣ್ಯವನ್ನು ಸಾಧಿಸಬಾರದು?' ಎಂಬ ಉದಾತ್ತಭಾವವು ತಲೆಯೆತ್ತಿ ನಿಲ್ಲಲು ನಾನು ಬಾಯಿಬಿಚ್ಚಿದೆ -

"ಸರ್, ನೀವೇನೂ ಯೋಚಿಸಬೇಡಿ! ಜೋನಗಿತ್ತಿಯ ಹಬ್ಬದ ಪೂರ್ವಾಪರಗಳನ್ನೆಲ್ಲ ನಾನು ಬಲ್ಲೆ. ನಾಗರಕೊಪ್ಪಲಿನ ಬಖೈರಿನಲ್ಲಿ, ಚೆಳ್ಳಕೆರಿಯ ಜೋನಗಿತ್ತಿ ಭೋಗಬ್ಬೆಯ ತ್ಯಾಗಮಯ ಜೀವನ ಸಂಪೂರ್ಣ ಚಿತ್ರಿತವಾಗಿದೆ!"

ಸಂಭ್ರಮಭಾವದವರಾಗಿ ಸಂಶೋಧನಾಧಿಕಾರಿ ಕೇಳಿದರು:

"ಏನು? ಜೋನಗಿತ್ತಿಯ ಕಥೆ ನಿಮಗೆ ಗೊತ್ತಿದೆಯೆ? ಧನ್ಯರು ನೀವು! ನಿಮ್ಮ ಸಂಶೋಧಕ ಶ್ರಮಕ್ಕೆ ಸಹಸ್ರ ನಮಸ್ಕಾರ! ನಾವು ಕೈತುಂಬ ಸಂಬಳ ಪಡೆದೂ ಮಾಡದಿರುವ ಕಾರ್ಯವನ್ನು, ಕೈಯಿಂದ ಹಣ ವೆಚ್ಚಮಾಡುತ್ತ ಕಾಸು ಕೀರ್ತಿಗಳ ಆಸೆಯಿಲ್ಲದೆ ನೀವು ಈಗಾಗಲೇ ಎಷ್ಟೋ ಮಾಡಿದ್ದೀರಿ!"

"ನನಗೆ ಅದರಲ್ಲಿಯೇ ಸಂತೃಪ್ತಿ! ಹೊಸ ಸಂಗತಿಯೊಂದನ್ನು ಕಂಡುಹಿಡಿದಾಗ ನನಗಾಗುವ ಆನಂದ, ಹತ್ತು ಸಾವಿರ ರೂಪಾಯಿ ಸಿಕ್ಕಿದಾಗಲೂ ಆಗದು!"

"ಸರಿ! ನಾವು ಸಂಬಳ ತಿನ್ನುವ ಸೋಗಿನ ಸಂಶೋಧಕರು! ನೀವು ಆತ್ಮಸ್ಫೂರ್ತಿಯಿಂದ ಕಾರ್ಯಕ್ಕೆ ತೊಡಗಿದ ಸಿದ್ಧ ಸಂಶೋಧಕರು ! ನಿಮ್ಮ ಸಹಾಯ-ಸಹಕಾರಗಳನ್ನು ನಾವು ಕೋರಲೇಬೇಕು!"

ನಾನು ನಗೆಯಾಡಿದೆ ;

"ಸರಕಾರದವರು, ಅಪರಾಧಿಗಳನ್ನು ಗೊತ್ತುಹಿಡಿಯುವುದಕ್ಕಾಗಿಯೇ ಪೋಲೀಸ್ ಅಧಿಕಾರಿಗಳನ್ನು ನೇಮಿಸಿರುತ್ತಾರೆ! ಆ ಅಧಿಕಾರಿಗಳಿಗೆ ಅಸಾಧ್ಯವೆನಿಸಿದ ಅಪರಾಧಿಯನ್ನು ಸಮಾಜಸೇವಕನಾದ ಖಾಸಗೀ ಪತ್ತೇದಾರನೊಬ್ಬ, ಚಾತುರ್ಯದಿಂದ ಹಿಡಿದು ಕೊಡುತ್ತಾನೆ. ಹೀಗೆಯೆ ಅಲ್ಲವೇ ನಿಮ್ಮ ಸಂಶೋಧನಾಧಿಕಾರಿಗಳ ರೀತಿ ಕೂಡ!"

ಅಧಿಕಾರಿ ಪ್ರಾಮಾಣಿಕ ಸ್ವರದಲ್ಲಿ ಹೇಳಿದರು :

"ನಿಮ್ಮ ಮಾತು ನೂರಕ್ಕೆ ನೂರು ಸತ್ಯ! ಸಂಶೋಧನೆಯಂತಹ ತಲೆತಿನ್ನುವ ಕೆಲಸ, ಸಂಬಳದಾಳುಗಳಿಂದ ಎಂದೂ ಸಾಧ್ಯವಾಗದು. ಅದಕ್ಕೆ ಸ್ವಯಂಸ್ಫೂರ್ತಿ ಬೇಕು! ನಿಷ್ಠೆ ಬೇಕು! ಶ್ರದ್ಧೆ ಬೇಕು! ಜೋನಗಿತ್ತಿಯ ಹಬ್ಬದ ಕಥೆಯನ್ನು ಕೇಳಬೇಕೆಂದು ನನಗೆ ತುಂಬ ಕುತೂಹಲವುಂಟಾಗಿದೆ, ದಯವಿಟ್ಟು ಹೇಳುತ್ತೀರಾ?"

"ಆಗಲಿ, ಕೇಳಿ! ನಿಮ್ಮಂಥಹರಿದುರು ಹೇಳುವುದಕ್ಕೆ ನನಗೂ ತುಂಬ ಸಂತೋಷ" ಎಂದು ಹೇಳಲಾರಂಭಿಸಿದೆನು:

"ನೋಡಿ ರಾಯರೆ, ಸಂಸ್ಕೃತಿಸಂಶೋಧನದ ಕಾರಣದಿಂದ, ಕನ್ನಡ ನಾಡಿನ ಈ ಉತ್ತರ ಭಾಗದಲ್ಲಿ ನಾನು ತಿರುಗಾಡದ ಸ್ಥಳವೇ ಇಲ್ಲ. ಅದರಲ್ಲಿಯೂ ದೇಸಾಯಿ, ನಾಡಗೌಡ, ದೇಶಪಾಂಡೆ, ನಾಡಿಗರು ಇರುವ ಇನಾಮುದ ಗ್ರಾಮಗಳನ್ನಂತೂ ಅನೇಕ ಸಲ ಕಂಡುಬಂದಿದ್ದೇನೆ. ನಾಗರಕೊಪ್ಪಲಿಗೆ ನಾನು ಮೊದಲ ಸಲ ಹೋದಾಗಲೇ ಅಲ್ಲಿಯ ನಾಡಗೌಡ ಅಣ್ಣಾಸಾಹೇಬರು, ತುಂಬ ಉತ್ಸಾಹದಿಂದಲೇ ತಮ್ಮ ನಾಡಗೌಡಿಕೆಯ ಹಳೆಯ ಕಾಗದ ಪತ್ರಗಳನ್ನು ತೋರಿಸಿದರು. ವಿಜಯನಗರದ ಎರಡನೆಯ ಬುಕ್ಕರಾಜನ ಕಾಲದಿಂದಲೂ ಪಾಳೆಯಗಾರರೆಂದು ಪ್ರಸಿದ್ಧಿ ಪಡೆದ ಮನೆತನವದು. ಅಣ್ಣಾಸಾಹೇಬರು ನನ್ನ ಕಡೆ ಒಪ್ಪಿಸಿದ ಕಾಗದ-ಪತ್ರಗಳಲ್ಲಿ, ಎಲ್ಲಕ್ಕಿಂತಲೂ ಮೊದಲು ನನ್ನ ಮನಸ್ಸನ್ನು ಆಕರ್ಷಿಸಿಬಿಟ್ಟುದೆಂದರೆ, ಅವರ ಮನೆತನದ ಪರಂಪರೆಯ ಚರಿತ್ರೆಯನ್ನು ವಿವರಿಸುವ ಬಖೈರಿನ ಆ ಕರಡು ಕಾಗದದ ಪ್ರತಿ. ಅದನ್ನು ಕೈಗೆ ತೆಗೆದುಕೊಂಡು ಹಾಳೆಗಳನ್ನು ಮಗುಚುತ್ತಿರುವಾಗ 'ಚೆಳ್ಳಕೆರೆಯ ದೇವತಾನಾರ ಬೋನಗಿತ್ತಿ ಭೋಗಬ್ಬಾ' ಎಂಬ ಹೆಸರು ನನ್ನ ಕುತೂಹಲವನ್ನು ಕೆರಳಿಸಿತು. ನಾನು ಹಾಳೆ ಮಗುಚುವುದನ್ನು ನಿಲ್ಲಿಸಿ, ಭೋಗಬ್ಬೆಯ ವಿಷಯವನ್ನು ಓದಲುತೊಡಗಿದೆ. ಮೋಡಿ ಲಿಪಿಯಾದರೂ ಓದಲು ಕಷ್ಟವಾಗುವಂತಿರಲಿಲ್ಲ. ಭಾಷೆ ಮರಾಠಿಯಾಗಿದ್ದರೂ ಪರಿಶುದ್ಧತೆಯು ಅದರಲ್ಲಿ ಸ್ವಲ್ಪವೂ ಇರಲಿಲ್ಲ. ಕನ್ನಡ ಭಾಷೆಯ ಛಾಯೆಯಲ್ಲಿ ಮುಂದುವರಿದ ಮರಾಠಿಯದು. ವಿಜಾಪುರದ ಆದಿಲ್‌ಶಾಹಿ ರಾಜ್ಯದ ಕೊನೆಯ ಭಾಗದಲ್ಲಿ ಆ ಬಖೈರನ್ನು ಬರೆಯಿಸಿರಬಹುದೇನೊ !

ಈ ನಾಡಗೌಡ ಮನೆತನದ ಮೂಲಪುರುಷನಿಂದ ಎಂಟನೆಯ ತಲೆಯವನು ಬಚ್ಚನಾಯಕ. ಬಚ್ಚನಾಯಕನ ಮಗ ಕುಮಾರನಾಯಕ. ಬಚ್ಚನಾಯಕನ ತಂಗಿ ನಾಗಲಬ್ಬೆಯನ್ನು ಚೆಳ್ಳಕೆರೆಯ ದೇಸಾಯಿ ದೇವಪ್ಪನಾಯಕರಿಗೆ ಧಾರೆಯೆರೆದುಕೊಟ್ಟದ್ದಿತು. ನಾಗಲಬ್ಬೆಗೆ ಒಬ್ಬಳೇ ಒಬ್ಬಳು ಮಗಳು. ಎಂತಲೇ ತಂದೆ ದೇವಪ್ಪನಾಯಕರು ಮಗಳನ್ನು ತಮ್ಮ ಪ್ರಾಣಕ್ಕಿಂತ ಹೆಚ್ಚಾಗಿ ಪ್ರೀತಿಯಿಂದ ಸಲಹುತ್ತಿದ್ದರು. ತಾಯಿ ನಾಗಲಬ್ಬೆಗಂತೂ ಮಗಳೆಂದರೆ ಕಣ್ಣ ಪಾಪೆಯಿದ್ದಂತೆ. ಚೆಲುವಮ್ಮ ಎಂಬುದು ಆ ಮಗಳ ಹೆಸರು. ಅದು ಇಟ್ಟ ಹೆಸರಲ್ಲ; ತೊಟ್ಟ ಹೆಸರು. ತಾವರೆಯ ವನದ ಹಂಸಿಯಂತೆ, ಸಿರಿವಂತಿಕೆಯಲ್ಲಿ ಬೆಳೆಯತೊಡಗಿದಳು. ಹದಿನೈದು ವರ್ಷದ ಚೆಲುವಮ್ಮನ ಚೆಲುವಿಕೆಯ ಕೀರ್ತಿ ದೇಶದೊಳಗೆಲ್ಲ ಸುತ್ತಾಡಲು ತೊಡಗಿತು. ಬಖೈರಿನ ಲೇಖಕ, ಅವಳ ಸೌಂದರ್ಯ, ಇಂದ್ರಾಣಿ ಚಂದ್ರಾಣಿ, ಪಾರ್ವತಿಯರನ್ನೂ ಮೀರಿಸಿದದೆಂದು ಅನೇಕ ಉಪಮೆ ರೂಪಕ-ಉತ್ಪ್ರೇಕ್ಷೆಗಳಿಂದ ಬಣ್ಣಿಸಿದ್ದಾನೆ. ಪ್ರಥಮ ಪ್ರಾಯದಲ್ಲಿ ಕಾಲಿಟ್ಟ ಚೆಲುವಬ್ಬೆ ಕಾಮನಲ್ಲಿ ರತಿದೇವಿಯ ವಿಷಯಕವಾಗಿ ಉಪೇಕ್ಷೆಯನ್ನು ಹುಟ್ಟಿಸಿದಳಂತೆ. ದೇವೇಂದ್ರನ ಕಣ್ಣಿಗೆ ಇವಳು ಬಿದ್ದಾಗಿದ್ದಾಳೆಂದು ಅಪ್ಸರೆಯರು ಅವನನ್ನು ಯಾವಾಗಲೂ ಸುತ್ತುಗಟ್ಟಿ ನಿಲ್ಲುತ್ತಿದ್ದರಂತೆ. ತನ್ನ ಪ್ರತಿರೂಪ ಭೂಲೋಕದಲ್ಲಿ ಇನ್ನೊಂದು ಮೂಡಿಬಂದಿತಲ್ಲಾ ಎಂದು ಪೂರ್ಣಚಂದ್ರನು ಈರ್ಷೆಯಿಂದ ಕೊರಗತೊಡಗಿದನಂತೆ. ಲೋಕದ ನಾರಿಯರೆಲ್ಲರೂ ತಮ್ಮ ತಮ್ಮ ಪತಿಗಳ ಪ್ರೇಮವು ತಮ್ಮತ್ತಲೇ ನೆಲೆಗೊಳ್ಳುವಂತೆ ಮಾಡೆಂದು ಗಿರಿಜಾಪತಿಯನ್ನು ಬೇಡಿಕೊಳ್ಳತೊಡಗಿದರಂತೆ! ಚೆಲುವಬ್ಬೆಯ ಮುಡಿಯಲ್ಲಿ ಮಾಲೆಗಳಾಗಿ ಮೆರೆದು ತಮ್ಮ ಜನ್ಮಸಾರ್ಥಗೊಳಿಸಿಕೊಳ್ಳಬೇಕೆಂದು ಕುಂದ, ಮಾಧವಿ, ಮಲ್ಲಿಗೆ, ಸಂಪಿಗೆ, ಸೇವಂತಿಗೆ, ಇವುಗಳೆಲ್ಲ ತೋಟದ ತುಂಬ ಹೂಗಳನ್ನರಳಿಸತೊಡಗಿದುವಂತೆ. ನೋಡಿ ಸರ್. ಈ ಬಖೈರು ಮರಾಠೀ ಭಾಷೆಯಲ್ಲಿದ್ದರೂ ಇದರ ಲೇಖಕರು ಕನ್ನಡ ಜನಪದದಲ್ಲಿಯೆ ಹುಟ್ಟಿ ಬೆಳೆದವನಾಗಿರಬೇಕು. ಕನ್ನಡಿಗನಲ್ಲದೆ ಇದ್ದರೆ, ಈ ಬಗೆಯ ಕನ್ನಡ ಜಾನಪದ ವರ್ಣನಾಚಾತುರ್ಯಕ್ಕೆ ಅವಕಾಶವೆಲ್ಲಿ? ರಾಜಕೀಯ ಪ್ರಭಾವಕ್ಕೊಳಗಾಗಿ ಆ ಬಖೈರುಕಾರ, ಹರಕು-ಮುರುಕು ಮರಾಠಿಯಲ್ಲಿ ಅದನ್ನು ಬರೆದಿರಬಹುದು ಇಷ್ಟೆ!"

ನನ್ನ ಮಾತುಗಳನ್ನು ಮನಸ್ಸುಗೊಟ್ಟು ಕೇಳುತ್ತ ಕುಳಿತ ಸಂಶೋಧನಾಧಿಕಾರಿ ಮಾತನಾಡಿದರು :

"ನಿಮ್ಮ ಮಾತು ಸರಿಯಾದುದು. ಸಾರಾಂಶರೂಪದಲ್ಲಿ ನೀವು ಹೇಳುತ್ತಿರುವ ಮಾತುಗಳೇ ಇಷ್ಟೊಂದು ರಸವತ್ತಾಗಿವೆಯೆಂದ ಮೇಲೆ, ಮೂಲದಲ್ಲಿ ಈ ರಸವು ಇನ್ನೂ ವಿಸ್ತಾರಗೊಂಡಿರಬಹುದು. ನಾನೂ ಒಮ್ಮೆ ಅದನ್ನು ಸಂಪೂರ್ಣ ನಿರೀಕ್ಷಿಸಬೇಕು. ಆದರೆ ಮೋಡೀ ಲಿಪಿಯು ನನಗೆ ಬ್ರಹ್ಮಲಿಪಿ ! ನನಗದರ ಮೋರೆ ಗುರುತು ಕೂಡ ಇಲ್ಲ!"

ನಾನಂದೆ :

"ಸಂಶೋಧನೆ ಮಾಡಬೇಕೆನ್ನುವವರಿಗೆ ಈ ನಾಡಿನಲ್ಲಿ ರೂಢವಾಗಿರುವ ಎಲ್ಲ ಲಿಪಿಗಳ ಪರಿಚಯವೂ ಬೇಕೇಬೇಕು. ಲಿಪಿಗಳ ಜ್ಞಾನವಿಲ್ಲದೆ ಯಾವ ಸಂಶೋಧಕನೂ ಪೂರ್ಣ ಫಲವನ್ನು ಪಡೆಯಲಾರ !"

"ನಿಮ್ಮ ಮಾತು ಸತ್ಯ ! ಅದಾಯಿತಲ್ಲ ! ಚೆಲುವಬ್ಬೆಗೂ ಬೋನಗಿತ್ತಿಗೂ ಸಂಬಂಧವೇನು ? ಅಥವಾ ಈ ಚೆಲುವಬ್ಬೆಯೇ ಬೋನಗಿತ್ತಿಯೆನಿಸಿಕೊಂಡಿರುವಳೋ ?"

"ಅದನ್ನೇ ಹೇಳುತ್ತೇನೆ ಕೇಳಿ. ಚೆಲುವಬ್ಬೆಯೇ ಬೋನಗಿತ್ತಿ ಹೇಗಾಗುವಳು? ಬೋನಗಿತ್ತಿಯ ಹೆಸರು ಭೋಗಬ್ಬೆ. ಅವಳು ಚೆಳ್ಳಕೆರೆಯ ದೇಸಾಯಿಯರ ಮನೆಯ ಬೋನಗಿತ್ತಿ. ಬೋನಗಾರ ಭೀಮಣ್ಣನ ತರುಣ ಹೆಂಡತಿ. ಈ ಬೋನಗಾರಮನೆತನ ತಲೆತಲೆಗಳಿಂದಲೂ ದೇಸಾಯಿಯರ ಮನೆತನದ ಊಳಿಗ ಮಾಡುತ್ತ ಬಂದವರು. ಯುದ್ಧಕ್ಕೆ ಹೋದಾಗ, ಸೈನ್ಯದೊಂದಿಗಿನ ಬೋನಗಾರರ ಗುಂಪಿಗೆ ಈ ಗಂಡ-ಹೆಂಡಿರು ಹಿರಿಯರಾಗಿ ಸೇವೆ ಸಲ್ಲಿಸುವರು. ಶಾಂತಿಕಾಲದಲ್ಲಿ ದೇಸಾಯಿಯರ ಅಡುಮನೆಯ ಊಳಿಗ ಮಾಡುವರು. ಭೀಮಣ್ಣ ಭೋಗಬ್ಬೆ ಇಬ್ಬರೂ ಸ್ವಾಮಿನಿಷ್ಠರು; ಒಡೆಯರ ಸಂಪೂರ್ಣ ಅನುಗ್ರಹಕ್ಕೆ ಪಾತ್ರರಾದವರು. ಚೆಲುವಬ್ಬೆಯಂತೂ ಭೋಗಬ್ಬೆಯೆಂದರಾಯಿತು. ಆಕೆಯ ಒಡನಾಟದಲ್ಲಿ ಹಿಗ್ಗಿನಿಂದ ದಿನಗಳನ್ನು ಕಳೆಯುವಳು. ಭೋಗಬ್ಬೆ ಅವಳನ್ನು ಬೆನ್ನಲ್ಲಿ ಬಿದ್ದ ತಂಗಿಗಿಂತಲೂ ಹೆಚ್ಚಾಗಿ ಪ್ರೀತಿಸುವಳು...

"ಬಸ್ವೆರು ಲೇಖಕ, ಈ ಬೋನಗಾರ ದಂಪತಿಯ ಪರಸ್ಪರ ಪ್ರೀತಿಯನ್ನೂ ರಸಿಕತನವನ್ನೂ ತುಂಬುತುಂಬಾಗಿ ಬಣ್ಣಿಸಿದ್ದಾರೆ. ಬೆಲ್ಲ-ಕೊಬ್ಬರಿ, ಹಾಲು-ಜೇನು, ಸಕ್ಕರೆ— ತುಪ್ಪ, ಇವುಗಳ ದ್ವಂದ್ವಕ್ಕೆ ಈ ಗಂಡ-ಹೆಂಡಿರ ಬಾಳಿನ ಸಾಮರಸ್ಯಕ್ಕೆ ಹೋಲಿಸಿ ಹೇಳಿದ್ದಾನೆ. ಒಂದು ಸಲ ವಂತೂ ಬಿಸಿ ಸಜ್ಜೆರೊಟ್ಟಿ-ಹೊಸ ಬೆಣ್ಣೆ ಇವುಗಳ ಸವಿಯ ಸಾಮರಸ್ಯಕ್ಕೆ ಹೋಲಿಸಿ ಹೇಳಿದ್ದಾನೆ ಭೋಗಬ್ಬೆ ಹಾಡುಗಾತಿಯೂ ಅಹುದು. ಏಕನಾದದ ಮಧುರ ಧ್ವನಿಯಲ್ಲಿ ತನ ಇನಿದನಿಯನ್ನು ಬೆರಸಿ ಭಜನೆಯ ಪದಗಳನ್ನೂ ಬಾಳ ಹಾಡುಗಳನ್ನೂ ಹಾಡತೊಡಗಿದಳೆಂದರೆ ಎಂತಹ ಅರಸಿಕರೂ ಮಂಕುವಟ್ಟು ನಿಂತು ಅವಳ ಹಾಡಿನ ಸವಿಯನ್ನು ಸವಿಯುವರು. ದೇವಪ್ಪನಾಯಕರು ಕೂಡ ಒಮ್ಮೊಮ್ಮೆ ಭೋಗಬ್ಬೆಯ ಹಾಡುಗಳನ್ನು ಕೇಳುವ ಅಪೇಕ್ಷೆಯನ್ನು ಪೂರೈಸಿಕೊಳ್ಳುವರು ಚೆಲುವಬ್ಬೆಗಂತೂ ಭೋಗಬ್ಬೆಯ ಹಾಡುಗಾರಿಕೆ ತುಂಬ ಇಷ್ಟ. ಅವಳ ಹಾಡುಗಳನ್ನು ಕೇಳುತ್ತಿರುವಾಗ, ಚೆಲುವಬ್ಬೆ ಭೋಗಬ್ಬೆಯನ್ನು ತಮ್ಮ ಊಳಿಗದವಳೊಬ್ಬಳೆಂಬ ಕೀಳ್ನೋಟಕ್ಕೆ ಅಸ್ಪದವನ್ನೇ ಕೊಡುತ್ತಿರಲಿಲ್ಲ."

ಸಂಶೋಧನಾಧಿಕಾರಿಗಳು ನಡುವೆ ಮಾತನಾಡಿದರು:

"ಏನು ರಾಯರೆ, ನೀವೊಂದು ಸ್ವಾರಸ್ಯವಾದ ಕಥೆಯನ್ನೇ ಪ್ರಾರಂಭಿಸಿಬಿಟ್ಟಿದ್ದೀರಿ. ನಮ್ಮ ಸಂಶೋಧನೆಗೆ ಇಷ್ಟೆಲ್ಲ ರಸವತ್ತಾದ ಸಂಗತಿಗಳೆಲ್ಲ ಏತಕ್ಕೆ ಬೇಕು? ಸತ್ಯದ ಅಸ್ಥಿಪಂಜರ ದೊರೆತರೆ ನಮಗೆ ಸಾಕು!"

"ಸರಿ, ನಾನೀಗ ಇತಿಹಾಸ-ಸಾಂಸ್ಕೃತಿಕ ಜೀವನಗಳ ಸಾಮರಸ್ಯಸೌಂದರ್ಯದ ರೂಪವನ್ನು ನಿಮ್ಮೆದುರು ನಿಲ್ಲಿಸುತ್ತೇನೆ. ನಿಮಗೆ ಮೂಳೆಗಳಷ್ಟೇ ಬೇಕಾದರೆ, ಅವುಗಳನ್ನಷ್ಟೇ ಆಯ್ದುಕೊಳ್ಳಿರಿ."

"ಸಂಶೋಧಕರ ರೂಕ್ಷದೃಷ್ಟಿಗೆ ಅಂಜನ ದಂತಿದೆ ನಿಮ್ಮ ಮಾತು, ಸರಿ! ಮುಂದಿನ ಸಂಗತಿಯನ್ನು ವಿವರಿಸಿರಿ!"

ನಾನು ನನ್ನ ಕಥೆಯನ್ನಾರಂಭಿಸಿದೆ:

"ಹೆಣ್ಣು ಹುಟ್ಟಿದಂದಿನಿಂದಲೂ ತನ್ನ ಕೂಸನ್ನು ತನ್ನ ತವರಮನೆಯ ಬಳಗಕ್ಕೆ ಸೇರಿಸಬೇಕೆಂಬುದು ನಾಗಲಬ್ಬೆಯ ಹಾರಯ್ಕೆಯಾಗಿದ್ದಿತು. ದೇವಪ್ಪನಾಯಕರೂ ಈ ಹಾರಯ್ಕೆಗೆ ಅಡ್ಡಿಯೊಡ್ಡಲಿಲ್ಲ. ಏಕೆಂದರೆ, ಮಲ್ಲಿಗೆಯ ಬಳ್ಳಿ ಮಾಮರದ ಮೇಲೆ ಹಬ್ಬುವುದು ಯೋಗ್ಯವೇ ಎಂಬ ಅವರ ಒಳದನಿಯ ಹೇಳಿಕೆ

"ನಾಗರಕೊಪ್ಪಲಿನ ಕುಮಾರನಾಯಕ ಸಾಮಾನ್ಯ ಗಂಡಲ್ಲ, ಒಡೆತನವಿದೆ; ಸಿರಿತನವಿದೆ; ಚೆಲುವಿಕೆಯಿದೆ. ಶೌರ್ಯ— ಸಾಹಸಗಳಿವೆ. ಇಷ್ಟೆಲ್ಲದರ ಮೇಲೆ ಮಗಳಿಗೆ ಸೋದರಮಾವನ ಮಗ. ಎಲ್ಲ ಗುಣಗಳೂ ಒಂದೆಡೆಯಲ್ಲಿ ಒಗ್ಗೂಡಿದ ಗಂಡನ್ನು ಒಪ್ಪದ ಹೆಣ್ಣು ಯಾವುದು? ಚೆಲುವಬ್ಬೆಯೂ ಕುಮಾರನಾಯಕನನ್ನು ಮನಸಾರೆ ಮೆಚ್ಚಿ, ಒಳಗೊಳಗೆ ಒಲವಿನ ಬಳ್ಳಿಯನ್ನು ನೀರೆರೆದು ಬೆಳೆಸುತ್ತಲಿದ್ದಳು. ಹಬ್ಬ-ಜಾತ್ರೆಗಳ ಕಾರಣದಿಂದ ಕುಮಾರನಾಯಕ ಚೆಳ್ಳಕೆರೆಗೆ ಬರುವನು; ಚೆಲುವಬ್ಬೆ ನಾಗರಕೊಪ್ಪಲಿಗೆ ಹೋಗುವಳು. ಈ ಕಾಲದ ಪ್ರತ್ಯಕ್ಷ ಸಂದರ್ಶನ-ಸಂಭಾಷಣ-ಸಹಜವಿನೋದ-ಚೇಷ್ಟೆಗಳು. ಇಬ್ಬರ ಕರುಳಿನೆಳೆಗಳನ್ನೂ ಗಂಟು ಹಾಕಲು ಕಾತರಿಗೊಳಿಸತೊಡಗಿದುವು."

ಢಣ್-ಢಣ್--ಢಣ್-ಢಣ್ ನಾಲ್ಕು ಗಂಟೆಗಳನ್ನು, ಗೋಡೆಯ ಗಡಿಯಾರ ಬಾರಿಸಿತು ಸಂಶೋಧನಾಧಿಕಾರಿ ತಟ್ಟನೆ ಮಾತನಾಡಿದರು:

"ಅಬ್ಬಾ, ನಾಲ್ಕು ಗಂಟೆ! ನಿಮ್ಮೀ ದಿಗಿಲ ಮಾತುಗಳಲ್ಲಿ ಎರಡೂವರೆ ತಾಸುಗಳು ಹೇಗೆ ದಾಟಿದುವೆಂಬುದು ಗೊತ್ತಾಗಲೇ ಇಲ್ಲ. ಇತಿಹಾಸದಂತಹ ರೂಕ್ಷ ವಿಷಯದಲ್ಲಿಯೂ ರಸಭಾವಗಳನ್ನು ತುಂಬಿ ಅದನ್ನು ಸಜೀವಗೊಳಿಸುತ್ತೀರಿ ನೀವು!"

ನಾನು ಉತ್ತರವಿತ್ತೆ:

"ಇದೇನು ಹೇಳುತ್ತೀರಿ ನೀವು? ಇತಿಹಾಸ ವೆಂದರೆ ಮಾನವಕುಲದ ಸರ್ವತೋಮುಖವಾದ ಜೀವನಚಿತ್ರ! ರಸಭಾವಗಳಿಗೆ ಎಡೆಯಿಲ್ಲದ ಮಾನವಜೀವನವಿರುತ್ತದೆಯೆ? ಮಾನವ ಜೀವನ ಉತ್ಸಾಹ, ಶೋಕ, ಪ್ರೀತಿ, ಹಾಸ್ಯ, ಕ್ರೋಧ, ಭೀತಿ, ವಿಸ್ಮಯ ಜುಗುಪ್ಸೆ ಮೊದಲಾದ ಎಲ್ಲ ಸ್ಥಾಯೀಭಾವಗಳನ್ನೂ ಒಳಗೊಂಡಿರುವುದು. ರಸ-ಭಾವಗಳು ಕೇವಲ ಕವಿಕಲ್ಪನೆಯ ಸರಕು ಎಂದು ಭಾವಿಸುವುದು ತಿಳಿದವರ ಕೆಲಸವಲ್ಲ! ಮಾನವನ ಅಂತರಂಗಜೀವನವನ್ನು ಪ್ರತಿನಿಧೀಕರಿಸದ ಕಾವ್ಯರಸ-ಭಾವಗಳು, ನಿಜವಾದ ರಸಭಾವಗಳಲ್ಲ. ಅವು ಮಾನವನ ವಿಕೃತಮನದ ಹುಚ್ಚಾಟವೆನಿಸುವವು."

ಪ್ರಶಂಸೆಯ ಧ್ವನಿಯಲ್ಲಿ ಅಧಿಕಾರಿ ಹೇಳಿದರು:

"ನಿಮ್ಮ ಒಂದೊಂದು ವಿಚಾರಗಳೂ ತತ್ತ್ವದರ್ಶನದಂತಿರುವುವು. ಮುಖಸ್ತುತಿಗಾಗಿ ಆಡುವ ಮಾತಲ್ಲವಿದು. ವಾಸ್ತವ ಸಂಗತಿ! ಸರಿ! ಬೋನಗಿತ್ತಿಯ ಕಥೆಯ ಮುಂದಿನ ಸಂಗತಿಯೇನು? ನಮ್ಮನ್ನು ಕುತೂಹಲಿಗಳನ್ನಾಗಿ ಕಾಳ್ಪರಿಸಿಬಿಡಬೇಡಿರಿ!"

"ಆಯಿತು. ಮುಂದೆ ಕೇಳಿ! ದೈವಸಂಕಲ್ಪದ ಮುಂದೆ ಮಾನವನ ಸಂಕಲ್ಪಕ್ಕೆ ಬೆಲೆಯೇನು? ಮಗಳ ಮಂಗಲಭವಿಷ್ಯವನ್ನು ಕಣ್ಣಾರೆ ಕಾಣಬೇಕೆಂಬ ಹಾರಯ್ಕೆಯಲ್ಲಿರುವಾಗಲೇ ನಾಗಲಬ್ಬೆ ವಿಷಮಜ್ವರದಿಂದ ಹಾಸಿಗೆ ಹಿಡಿದಳು. ರಾಜವೈದ್ಯರ ಮಾತ್ರೆಮೂಲಿಕೆಗಳೆಲ್ಲ ನಿರ್ವೀರ್ಯವಾದುವು ಕಾಲರಾಯ ಅವಳನ್ನು ಕರೆಯಿಸಿಯೇ ಬಿಟ್ಟ ಕಂಕಣದ ಕೈಯನ್ನು ಮೇಲೆ ಮಾಡಿಕೊಂಡು ಆ ಸುಮಂಗಲೆ ಇಹಲೋಕದಿಂದ ಮರೆಯಾದಳು...

"ನಾಗಲಬ್ಬೆಯ ವಿಯೋಗ, ಪತಿ-ಪುತ್ರಿಯನ್ನೂ ಪರಿವಾರದವರನ್ನೂ ದುಃಖಸಾಗರದಲ್ಲಿ ಮುಳುಗಿಸಿತಾದರೂ, ಇನ್ನೂ ಅವರು ಬದುಕಬೇಕೆಂದು ದೈವಸಂಕಲ್ಪವಿದ್ದುದರಿಂದ ದುಃಖಸಾಗರ ಮತ್ತೆ ಅವರನ್ನು ಸಂಸಾರಕ್ಷೇತ್ರದಲ್ಲಿ ಮೆಲ್ಲಗೆ ತಂದು ಚೆಲ್ಲಿತು. ಮತ್ತೆ ಅವರು ಜೀವನ-ನಾಟಕದಲ್ಲಿ ನಟರಾಗಿ ಅಭಿನಯಿಸತೊಡಗಿದರು. ತಾಯಿಯನ್ನು ಕಳೆದುಕೊಂಡ ಚೆಲುವಬ್ಬೆಗೆ ಭೋಗಬ್ಬೆಯೇ ತಾಯಿಯಾಗಿ ನಿಂತಳು. ತಂದೆಯ ಪ್ರೇಮ ಮಗಳ ಬಗೆಗೆ ಇಮ್ಮಡಿಯಾಯಿತು. ಚೆಲುವಬ್ಬೆಯನ್ನು ಕುಮಾರನಾಯಕನಿಗೆ ಕೊಡುವುದಾಗಿ ನಿಶ್ಚಯದ ಮಾತು-ಕಥೆಗಳೂ ಮುಗಿದುವು. ಮಾಘಮಾಸದಲ್ಲಿ ಲಗ್ನಕಾರ್ಯ ನೆರವೇರಿಸುವುದಾಗಿ ನಿರ್ಣಯವೂ ಆಯಿತು. ಚೆಲುವಬ್ಬೆ, ಕುಮಾರನಾಯಕ

ಅವನನ್ನು ಹೊಗಳುವವರು ಕೆಲವರಿದ್ದರೆ ತೆಗಳುವವರು ಹಲವರು. ಪುಂಡಾಳುಗಳ ದಂಡು ಕಟ್ಟಿಕೊಂಡು, ಸಂಧಿ-ಸಮಯ ನೋಡಿ ತನ್ನ ಸ್ವಾರ್ಥ ಸಾಧಿಸಿಕೊಂಡು, ನಿಷ್ಪಾಪಿ ಜನರಲ್ಲಿ ತನ್ನ ಭೀತಿಯುಕ್ತ ಕೀರ್ತಿಯನ್ನು ಹರಡಿದ್ದ.

ಗಳೇ ಆಗಿದೆಯೆಂದು, ದೇವಪ್ಪನಾಯಕ ಒಳ್ಳೆಯ ಮಾತುಗಳಲ್ಲಿಯೇ ಹೇಳಿಕಳುಹಿದ. ಆ ವೇಳೆ ಮಾಲಗೊಂಡ ಚೆಲುವಬ್ಬೆಯನ್ನು ತನಗೇ ಕೊಡಬೇಕೆಂದು ದರ್ಪದಿಂದ ಓಲೆಯನ್ನು ಬರೆದು ಆಳನ್ನಟ್ಟಿದ್ದ. 'ಕೊಟ್ಟ ಹೆಣ್ಣನ್ನು ತನಗೇ ಕೊಡಬೇಕೆನ್ನುವುದು ಧರ್ಮಕ್ಕೆ ಸಲ್ಲದ ಮಾತು- ದೇವರು ಒಪ್ಪದ ಮಾತು-'



ಇಬ್ಬರೂ ವಿವಾಹೋತ್ತರ ಸಂಯೋಗದ ಕಾಲದ ಸುಖದ ಕನಸುಗಳನ್ನು ಕಾಣುತ್ತ, ಕಳೆದ ದಿನಗಳನ್ನು ಒಂದೊಂದಾಗಿ ಎಣಿಸುತ್ತ, ಕುತ್ತುಸಿರು ಬಿಡುತ್ತ ಕಾಲ ಕಳೆಯತೊಡಗಿದ್ದರು......

"ಅಲದಕೆರೆಯ ಮಾಲಗೊಂಡನ ಹೆಸರು ಆಗ ಎಲ್ಲ ಕಡೆಯಲ್ಲಿಯೂ ಹಬ್ಬಿ ನಿಂತಿದ್ದಿತು. ತುಂಬ ಛಲಗಾರ ತನಗೆ ಬೇಕಾದುದನ್ನು ಪಡೆಯಲಿಕ್ಕೆ ಎಂತಹ ಹೀನ ಮಾರ್ಗವನ್ನು ಹಿಡಿಯುವುದಕ್ಕೂ ಹೇಸುವವನಲ್ಲ ಆತ!....

"ಮಾಲಗೊಂಡ ಚೆಲುವಬ್ಬೆಯನ್ನು ತನಗೆ ಕೊಡಬೇಕೆಂದು ಓಲೆಯೊಂದಿಗೆ ದೂತನನ್ನಟ್ಟಿದ. ಮಗಳ ಮದುವೆಯ ನಿಶ್ಚಯ ಈಗಾ

ಎಂಬ ನೀತಿಬೋಧಕ ಮಾತುಗಳನ್ನು ಬರೆದು ಉತ್ತರ ಕಳುಹಿದ ದೇವಪ್ಪ; ಬಳಿಕ ಮಾಲಗೊಂಡ ಮತ್ತೆ ಓಲೆಯೊಂದಿಗೆ ಆಳನ್ನಟ್ಟಿದ. ಆ ಓಲೆಯಲ್ಲಿ ಹೀಗೆ ಬರೆದಿತ್ತು: 'ಧರ್ಮನೀತಿಯ ಮಾತು ನನಗೆ ಬೇಕಾಗಿಲ್ಲ. ನಿಮ್ಮ ಮಗಳನ್ನು ನನಗೆ ಕೊಡದೆ ಇದ್ದರೆ ಮುಂದಿನ ಪರಿಣಾಮವನ್ನು ನೋಡಿರಿ! ಮತ್ತೆ ಮತ್ತೆ ಯೋಚನೆ ಮಾಡಿರಿ!'

ದೇವಪ್ಪನಾಯಕರಿಗೆ ಕೋಪ ಬಂತು. ಅವರೂ ಒಂದು ಉತ್ತರ ಬರೆದರು:

'ಧರ್ಮ ನೀತಿ ನಿನಗೆ ಬೇಕಾಗಿರದಿದ್ದರೂ ನನಗೆ ಅವು ಜೀವದ ಜೀವವಿದ್ದಂತೆ! ಮುಂದಿನ ಪರಿಣಾಮವನ್ನು ಯೋಚಿಸಿ, ನಾನು ಧರ್ಮ-ನೀತಿಗಳನ್ನು ಬಿಡಲಾರೆ!'

"ಈ ಉತ್ತರವನ್ನೋದಿ ಶಾಲಿಗೌಡ ಕಿಡಿಕಿಡಿಯಾದ. ಕರುಳಿಗೆ ನೂರಾರು ಚೇಳುಗಳು ಒಮ್ಮೆಲೇ ಕುಟುಕಿದಷ್ಟು ನೋವನ್ನು ಅನುಭವಿಸಿದ. ಕರಕರನೇ ಹಲ್ಲುಗಳನ್ನು ಕಡಿಯುತ್ತ ಕೆಂಗಣ್ಣುಗಳಿಂದ ಬೆಂಕಿಯನ್ನುಗುಳುತ್ತ, ತನ್ನೊಳಗೆ ತಾನೇ ಏನನ್ನೋ ಯೋಚಿಸಿದ. ಯಾವುದೋ ಮಾತನ್ನು ನಿರ್ಣಯಿಸಿ, ಬಿಗಿದ ಮುಷ್ಟಿಯ ಕೈಯನ್ನು ಅಲ್ಲಾಡಿಸಿದ. ಎಲ್ಲರ ಮೇಲೆ ಏರಿ ಹೋದಂತೆ, ಚೆಳ್ಳಕೆರೆಯ ದೇಸಾಯಿಯರ ಮೇಲೆ ಏರಿ ಹೋಗುವಂತಿರಲಿಲ್ಲ; ಏಕೆಂದರೆ ದೇಸಾಯಿಯರು ಸಾಕಿದ ಸೈನಿಕರೂ ಕೆಚ್ಚೆದೆಯ ಕಲಿಗಳಾಗಿದ್ದರು. ಒಡೆಯನ ಬಗೆಗೆ ನಿಷ್ಠೆಯುಳ್ಳವರಾಗಿದ್ದರು.

"ಕಾರ್ತಿಕಮಾಸ ಕಳೆದು ಮಾರ್ಗಶೀರ್ಷವು ಕಾಲಿಕ್ಕಿತು. ದೇಸಾಯಿಯರ ಮನೆಯಲ್ಲಿ ಚಟ್ಟಿಯ ಹಬ್ಬ ವಿಜೃಂಭಣೆಯಿಂದ ಜರುಗಿತು. ಹಬ್ಬಕ್ಕೆಂದು ಬಂದ ಕುಮಾರನಾಯಕನನ್ನು ಕಂಡ ಚೆಲುವಬ್ಬೆ ಕಣ್ಣಿನಗಳಿಂದ ಸಾಕಷ್ಟು ಮಾತನಾಡಿಸಿದಳಾದರೂ, ಬಾಯಿಂದ ಮಾತನಾಡಿಸಲು ನಾಚಿಕೆ ಸಂಕೋಚಗಳು ಅಡ್ಡವಾಗಿ ನಿಂತುವು. ಕುಮಾರನಾಯಕನೂ ಆಗ ಮೂಕಭಾವದಲ್ಲಿಯೆ ಕಣ್ಣಿನಗಳಿಂದ ಆಕೆಯ ಸೌಂದರ್ಯದ ಸವಿಯನ್ನು ಸುರಿಯುತ್ತಿದ್ದ. ಹಬ್ಬ ಮುಗಿಯಿತು; ಕುಮಾರನಾಯಕ ಮರಳಿ ತನ್ನ ಊರಿಗೆ ಹೊರಟುಹೋದ. ಚೆಲುವಬ್ಬೆಗೆ ಮನೆ ಭಣಭಣವೆನಿಸಿತು. ಮತ್ತೆ ಸಮೀಪ ಭವಿಷ್ಯದ ಸವಿಗನಸುಗಳಲ್ಲಿ ನಾಯಕಿಯಾಗಿ ನಟಿಸತೊಡಗಿದಳು

"ಮಾರ್ಗಶೀರ್ಷ ಹುಣ್ಣಿಮೆಯಾಗಿ ಎರಡು ದಿನಗಳು ಕಳೆದುವು. ಮೂರನೆಯ ದಿನವೇ ದೇವಣ್ಣನಾಯಕರು ಜ್ವರದಿಂದ ಹಾಸಿಗೆ ಹಿಡಿದರು. ತಲೆ ಸಿಡಿದುಬೀಳುವಂತಹ ತಲೆನೋವು! ಮೈ ಬೆಂದುಹೋಗುವಂತಹ ಉಗ್ರ ಜ್ವರ. ಒಂದೆ ದಿನದಲ್ಲಿ ಅವರ ಎಚ್ಚರವೇ ತಪ್ಪಿಹೋಯಿತು. ವೈದ್ಯರ ಕಷಾಯ ಮಾತ್ರೆಗಳ ಉಪಚಾರ ನಡೆಯಿತು. ಯಾವ ಉಪಚಾರಕ್ಕೂ ಜ್ವರವು ಸರಿಯಲೊಲ್ಲದು. ಸಿಂಪಿಯಷ್ಟು ನೀರು ಕುಡಿಸಿದರೆ ಅದಕ್ಕೆ ಹತ್ತುಮಡಿಯಾಗಿ ವಾಂತಿಯಾಗುವುದು. ದಿನದಿನಕ್ಕೆ ಶಕ್ತಿ ಕುಗ್ಗತೊಡಗಿತು. ಚೆಲುವಬ್ಬೆ ಕಂಗೆಟ್ಟುಹೋದಳು. ಮನೆಯಲ್ಲಿ ಕರುಣೆಯಿಂದ ಬೆರೆತ ಮೌನ ಆವರಿಸಿತು. ಏಳು ದಿನಗಳು ಕಳೆದುವು. ಎಂಟನೆಯ ದಿನವೂ ಜಡವಾದ ಅಡಿಗಳನ್ನಿಡುತ್ತ ಸಾಗಿಹೋಯಿತು.

"ಒಂಬತ್ತನೆಯ ದಿನ ಭೋಗಬ್ಬೆ ಬಂದು ಹೇಳಿದಳು; 'ಜ್ಯೋತಿಷಿಯೊಬ್ಬನು ಈ ಊರಿಗೆ ಬಂದಿದ್ದಾನೆ. ಅವನು ಮಂತ್ರವಾದಿಯೂ ಆಗಿರುವನಂತೆ. ಮಂತ್ರದಿಂದ ಗ್ರಹಬಾಧೆಯನ್ನು ಕಳೆಯಬಲ್ಲನಂತೆ! ಅವನ ಸುತ್ತಲೂ ಊರ ಜನರು ಕವಿದು ನಿಂತಿದ್ದಾರೆ!"

ಚೆಲುವಬ್ಬೆ ಕಂಬನಿಗರೆಯುತ್ತಲೇ ನುಡಿದಳು:

"ಅಪ್ಪಾಜಿಯವರಿಗೆ ವೈದ್ಯರ ಔಷಧಗಳ ಪರಿಣಾಮ ಸ್ವಲ್ಪವೂ ಆಗಿಲ್ಲ. ಅವರಿಗೀಗ ಗ್ರಹಗಳ ಕಾಟವೇ ಇರಬಹುದು. ಆ ಜ್ಯೋತಿಷಿಯನ್ನು ಕರೆದು ತೋರಿಸೋಣವೇ?"

"ಭೋಗಬ್ಬೆ ಮೌನಿಯಾಗಿಯೇ ಹೊರಟು ಹೋದಳು. ಅರಿಗಳಿಗೆ ಕಳೆಯುವುದರಲ್ಲಿಯೇ ಅವಳು ತನ್ನ ಗಂಡನೊಡನೆ ಜ್ಯೋತಿಷಿಯನ್ನು ಕರೆದುಕೊಂಡು ದೇಸಾಯಿಯರ ಮನೆಗೆ ಬಂದಳು. ಆಗ ಚೆಲುವಬ್ಬೆ ಕಂಬನಿಗರೆಯುತ್ತ ತಂದೆಯ ಪಕ್ಕದಲ್ಲಿಯೇ ಕುಳಿತಿದ್ದಳು. ಜ್ಯೋತಿಷಿ ಬಂದು ದೇವಪ್ಪನಾಯಕರ ಬಲಗೈಯನ್ನು ಎತ್ತಿ ಅಂಗೈಯ ಗೆರೆಗಳನ್ನು ನಿರೀಕ್ಷಿಸಿದ. ಬಾಯಿಂದ ಏನೇನನ್ನೋ ಗುಣಗುಣಿಸಿ. ಎಡಗೈ ಬೆರಳುಗಳಿಂದ ಎಣಿಕೆ ಹಾಕಿದ. ಎಲ್ಲವೂ ತನಗೆ ತಿಳಿದಂತಹ ಸಮಾಧಾನ ಸ್ವರದಲ್ಲಿ ಮಾತನ್ನಾರಂಭಿಸಿದ:

"ಚಿಂತೆಮಾಡಲು ಏನೂ ಕಾರಣವಿಲ್ಲ. ಈ ಧಣಿಯರಿಗೆ ಈಗ, ಉಗ್ರಮಂಗಳ ಬಾಧೆಯಿದೆ. ಇದಕ್ಕೆ ತಕ್ಕ ಯಂತ್ರ-ಮಂತ್ರಗಳನ್ನು ಮಾಡಿ, ನಾನು ಮಂಗಳನ ದುಷ್ಟಶಕ್ತಿಯನ್ನು ಕಡಿಮೆ ಮಾಡಬಲ್ಲೆ! ಇಂಥ ಎಷ್ಟೋ ಗ್ರಹಬಾಧೆಗಳನ್ನು ನಾನು ನಿವಾರಿಸಿದ್ದೇನೆ!"

ಸಮಾಧಾನದ ಸ್ವರದಲ್ಲಿ ಚೆಲುವಬ್ಬೆ ಹೇಳಿದಳು:

"ಏನು ಮಾಡಬೇಕೋ ಎಲ್ಲವನ್ನೂ ಮಾಡಿ. ನಮ್ಮ ಅಪ್ಪಾಜಿಯವರನ್ನು ಬದುಕಿಸಿರಿ! ಎಷ್ಟೇ ಹಣ ವೆಚ್ಚವಾದರೂ ಆಗಲಿ!"

"ಸಂಪೂರ್ಣವಾಗಿ ಗ್ರಹಬಾಧೆಯ ಉಚ್ಚಾಟನೆಯಾಗದೆ, ನಾನೊಂದು ಕಾಸನ್ನೂ ತೆಗೆದುಕೊಳ್ಳುವುದಿಲ್ಲ. ಕೇವಲ ಜನೋಪಕಾರಕ್ಕಾಗಿ ನನ್ನ ಸಿದ್ಧಿಯನ್ನು ಉಪಯೋಗಿಸುವುದು ನನ್ನ ಪದ್ಧತಿ. ಸ್ವಾರ್ಥಕ್ಕಾಗಿ ನಾನು ಈ ಮಂತ್ರ-ತಂತ್ರಗಳನ್ನು ಬಳಸಿಕೊಂಡರೆ, ನನ್ನ ಸಿದ್ಧಿ ನಿಷ್ಪ್ರಯೋಜಕವಾಗುವುದು. ನೀವು ಇವರ ಹೊಟ್ಟೆಯ ಮಗಳೇನು ತಾಯಿ?"

"ಹಾಂ! ಅಹುದು!" ಚೆಲುವಬ್ಬೆ ಬಿಸಿಯುಸಿರಿಕ್ಕುತ್ತ ಹೇಳಿದಳು.

"ಅಹುದೇ? ಸರಿ, ತಮ್ಮ ಎಡದ ಅಂಗೈಯನ್ನು ಸ್ವಲ್ಪ ತೋರಿಸುತ್ತೀರಾ?"

ಚೆಲುವಬ್ಬೆ ಕುಳಿತಲ್ಲಿಂದಲೇ ಕೈಯನ್ನು ಮುಂದೆ ಚಾಚಿ ಅಂಗೈಯನ್ನು ತೋರಿಸಿದಳು. ಮಂತ್ರವಾದಿ ಅಂಗೈ ಗೆರೆಗಳನ್ನು ಒಂದೊಂದಾಗಿ ನಿಟ್ಟಿಸಿ ನಿಟ್ಟಿಸಿ ನೋಡಿ ನುಡಿದ:

"ನಿಮಗೀಗ ಇರುವ ದುಷ್ಟಗ್ರಹಗಳ ದೃಷ್ಟಿಯು ನಿಮ್ಮ ಅಪ್ಪಾಜಿಯವರ ಅನಾರೋಗ್ಯಕ್ಕೆ ಹೆಚ್ಚಿನ ಕಾರಣವಾಗಿದೆ. ಇದರ ನಿವಾರಣೆಗಾಗಿ ನೀವು ಕೂಡ ಸ್ವಲ್ಪ ಶ್ರಮ ವಹಿಸಬೇಕಾಗುವದು!"

"ಎಂತಹ ಶ್ರಮವನ್ನು ವಹಿಸಲಿಕ್ಕೂ ನಾನು ಸಿದ್ಧ. ನನ್ನ ಅಪ್ಪಾಜಿ ನನಗಾಗಿ ಬದುಕಿ ಉಳಿದರೆ ಸಾಕು! ನಾನೇನು ಮಾಡಬೇಕೆಂಬುದನ್ನು ಅಪ್ಪಣೆ ಕೊಡಿಸಿ" ಮಾತಿನ ಕೊನೆ ಕೊನೆಗೆ ಚೆಲುವಬ್ಬೆಯ ಕಂಠ ಬಿಗಿಯಿತು. ಕಂಬನಿಗಳು ದಳದಳನೆ ಸುರಿದವು.

"ದುಃಖಿಸಬೇಡಿ ತಾಯಿ! ತಮ್ಮ ಅಪ್ಪಾಜಿಯವರ ಬದುಕಿನ ಭಾರವನ್ನು ನನ್ನ ಮೇಲೆ ಹೊರಿಸಿಬಿಡಿ! ಆದರೆ ನಿಮ್ಮಿಂದ ಒಂದು ಕಾರ್ಯ

ಆಗಲೇಬೇಕು. ಜ್ಯೋತಿಷ್ಯಶಾಸ್ತ್ರದ ಪ್ರಕಾರ ನಿಮಗೀಗ ಕೇತುಗ್ರಹವು ಕಾಡುತ್ತಿದಲ್ಲದೆ, ಪಿತೃಸ್ಥಾನವನ್ನು ಉಗ್ರ ದೃಷ್ಟಿಯಿಂದ ನೋಡುತ್ತಿದೆ. ಈ ಗ್ರಹಶಾಂತ್ಯರ್ಥವಾಗಿ, ನೀವೆ ಸ್ವತಃ ಭೈರವನ ಪೂಜೆಮಾಡಿ ಪ್ರಸನ್ನತೆಯನ್ನು ಪಡೆಯಬೇಕು! ಎಲ್ಲವೂ ಒಳ್ಳೆಯದಾಗುವುದು!"

ಕಳೆಯಿಲ್ಲದ ಕಣ್ಣುಗಳನ್ನು ಅರೆದೆರೆದು, ಕದಲದೆ ಬಿದ್ದುಕೊಂಡಿದ್ದರು. ನಾಳೆ ಮತ್ತೆ ಬರುವೆನೆಂದು ಹೇಳಿ, ಭೈರವನ ಪೂಜೆಯನ್ನು ನಾಳೆಯಿಂದಲೇ ಪ್ರಾರಂಭಿಸಬೇಕೆಂಬುದನ್ನು ಸೂಚಿಸಿ, ಚಿಂತಿಸದಿರುವಂತೆ ಅಭಯ ಕೊಟ್ಟು, ಮರಳಿ ತಾನಿಳಿದ ಧರ್ಮಶಾಲೆಗೆ ಹೊರಟುಹೋದನು.



ಗಂಭೀರಭಾವದಲ್ಲಿ ಮಂತ್ರವಾದಿ ಹೇಳಲು ಚೆಲುವಬ್ಬೆ ಆತುರ ಧ್ವನಿಯಲ್ಲಿ ಕೇಳಿದಳು:

"ಪೂಜೆಯ ವಿಧಾನವು ಹೇಗೆ ಹೇಗೆ?"

"ಅದೇ ತಮಗೆ ಸ್ವಲ್ಪ ಕಷ್ಟವಾದೀತು—ಎಂದು ನನ್ನ ಭಾವನೆ!"

"ಎಂತಹ ಕಷ್ಟವೇ ಆಗಲಿ, ನಾನು ಮಾಡುತ್ತೇನೆ. ವಿಧಿ-ವಿಧಾನಗಳನ್ನು ಹೇಳಿ."

"ರಾತ್ರಿಯ ಹತ್ತುಗಳಿಗೆಗಳಾದ ಮೇಲೆ ಶುಚಿಯಾಗಿ, ಮಡಿ ಬಟ್ಟೆಯನ್ನುಟ್ಟು ಪೂಜಾ ಸಾಹಿತ್ಯಗಳನ್ನು ತೆಗೆದುಕೊಂಡು ಏಕಾಕಿಯಾಗಿ ಭೈರವದೇವಾಲಯಕ್ಕೆ ಹೋಗಬೇಕು. ದೀಪ, ಧೂಪ—ನೈವೇದ್ಯಗಳನ್ನು ಸಲ್ಲಿಸಿ, ಪಂಚಾರತಿಯನ್ನು ಬೆಳಗಬೇಕು. ಬಳಿಕ ಅರ್ಧ ಗಳಿಗೆಯ ವರೆಗೆ ದೇವರ ಮುಂದೆ ಕುಳಿತು ಸಂಕಟ ನಿವಾರಣೆಗಾಗಿ ಭೈರವನಾಮದ ಜಪ ಮಾಡುತ್ತ ಪ್ರಾರ್ಥನೆ ಮಾಡಿಕೊಳ್ಳಬೇಕು. ಮೂರೇ ಮೂರು ರಾತ್ರಿ ಹೀಗೆ ಮಾಡಿದರೆ ಸಾಕು! ಭೈರವನ ಅನುಗ್ರಹ ನಿಮಗೆ ಖಂಡಿತವಾಗಿ ಸಿಕ್ಕುವುದು!"

ಚೆಲುವಬ್ಬೆ ಪೂಜೆ ಮಾಡುವೆನೆಂದು ಒಪ್ಪಿಕೊಂಡಳು. ಮಂತ್ರವಾದಿ ದೇವಪ್ಪನಾಯಕನ ಕೊರಳಲ್ಲಿ, ಕರಿಯ ದಾರದಲ್ಲಿ ಪೋಣಿಸಿದ ಒಂದು ತಾಯಿತವನ್ನು ಕಟ್ಟಿದ. ಮಂತ್ರವನ್ನು ಪುಟಪುಟಿಸಿ ಮುಖದ ಮೇಲೆ ಮೂರು ಸಲ ಊದಿದ ದೇವಪ್ಪನಾಯಕರು ಎಚ್ಚರವಿಲ್ಲದೆ

ಮರುದಿನದಿಂದಲೇ ಚೆಲುವಬ್ಬೆಯು ಭೈರವ ದೇವನ ಏಕಾಂತ ಪೂಜೆಗೆ ಎಲ್ಲ ಸಿದ್ಧತೆಗಳನ್ನೂ ಮಾಡಿಕೊಂಡಳು. ಊರ ತೆಂಕಣಕ್ಕೆ ಸ್ಮಶಾನದ ಬಳಿ ಭೈರವದೇವರ ಗುಡಿ. ನಟ್ಟಿರುಳಲ್ಲಿ ಒಬ್ಬಳೇ ಒಬ್ಬಳನ್ನು ಕಳುಹುವುದೆಂದರೆ, ಭೋಗಬ್ಬೆಯ ಎದೆ ದಡದಡಿಸಿತು. ಮನೆಯ ಯಜಮಾನನ ಜೀವದ ಮೇಲೆ ಸಂಕಟ ಬಂದಿರುವಾಗ ಅವಳು ಚೆಲುವಬ್ಬೆಗೆ ಹೋಗಬೇಡವೆಂದಾದರೂ ಹೇಗೆ ಹೇಳಬೇಕು? ಚೆಲುವಬ್ಬೆ ತಂದೆಯನ್ನು ಉಳಿಸಿಕೊಳ್ಳುವುದಕ್ಕಾಗಿ ಎಂತಹ ಆಪತ್ತಿಯನ್ನೂ ಎದುರಿಸಲು ಸಿದ್ಧಳಾಗಿದ್ದಳು. ಮೊದಲ ದಿನ ಆಕೆ ಪೂಜೆಯ ಸಾಹಿತ್ಯಗಳೊಂದಿಗೆ ಏಕಾಕಿನಿಯಾಗಿ ಹೊರಟಾಗ, ಭೋಗಬ್ಬೆ

ಊರ ಅಗಸೆಯ ವರೆಗೆ ಅವಳ ಜೊತೆ ಹೋಗಿ, ತಾನು ಅಲ್ಲಿಯೆ ನಿಂತುಕೊಂಡಳು. ಚೆಲುವಬ್ಬೆ ಯಾವ ಹೆದರಿಕೆಯೂ ಇಲ್ಲದಂತೆ ಮುಂದುವರೆದು ದೇವಾಲಯಕ್ಕೆ ಹೋಗಿ ಪೂಜಾವಿಧಿಯನ್ನೆಲ್ಲ ಮುಗಿಸಿ ಮರಳಲು ಸರಿಯಿರುಳು ಸರಿದು ಹೋಗಿತ್ತು. ಅದುವರೆಗೂ ದಾರಿ ಕಾಯುತ್ತ ನಿಂತಿದ್ದ ಭೋಗಬ್ಬೆ, ಚೆಲುವಬ್ಬೆಯನ್ನು ಮನೆಗೆ ಕರೆದುಕೊಂಡು ಹೊರಟಳು. ಮೊದಲ ದಿನದ ಪೂಜೆ ಯಥಾಕ್ರಮವಾಗಿ ನೆರವೇರಿದುದಕ್ಕಾಗಿ ಇಬ್ಬರ ಎದೆಯಲ್ಲಿಯೂ ಒಂದು ಬಗೆಯ ಸಮಾಧಾನ ನೆಲಸಿತ್ತು.

ಮರುದಿನ ಬೆಳಗಿನಲ್ಲಿ ಮಂತ್ರವಾದಿ ಬಂದು, ಬಾಬಾ ಬುಡನ್‌ಗಿರಿಯ ಅಂಗಾರವನ್ನು



ರೋಗಿಯ ಮೈತುಂಬ ಸವರಿದ; ಮಂತ್ರ, ಹಾಕಿ ಊದಿದ! ಎಲ್ಲವೂ ಒಳ್ಳೆಯದಾಗುವುದು- ಎಂದು ಹೇಳಿ ಹೊರಟುಹೋದ. ದೇವಪ್ಪ ನಾಯಕರಿಗೆ ಅಂದು ಕುಡಿಸಿದ ಹಾಲು ನೀರು ದಕ್ಕಿದುದರಿಂದ, ಮನೆಯಲ್ಲಿ ಸ್ವಲ್ಪ ಸಮಾಧಾನದ ವಾತಾವರಣ ತಲೆಯೆತ್ತಿದ್ದಿತು. ಮೊದಲ ದಿನದಂತೆ ಎರಡನೆಯ ದಿನವೂ ಚೆಲುವಬ್ಬೆಯ ಭೈರವನ ಪೂಜೆ ಸಾಂಗವಾಗಿ ನೆರವೇರಿತು.

ಮೂರನೆಯ ದಿನವೂ ಮಂತ್ರವಾದಿ ಬೆಳಗಿನಲ್ಲಿ ಮನೆಗೆ ಬಂದು, ರೋಗಿಗೆ ಮಾಡಬೇಕಾದ ಮಂತ್ರ-ತಂತ್ರಗಳನ್ನು ಮಾಡಿ ಮರಳಿದ. ಅಂದು ದೇವಣ್ಣನಾಯಕರ ಕಂಕುಳಲ್ಲಿ ಕಿರುಬೆವರು ಕಾಣಿಸಿಕೊಂಡಿತು; ಆದರೂ ಮೈಮೇಲೆ ಎಚ್ಚರವು ಬಂದಿರಲಿಲ್ಲ; ಕಣ್ಣನ್ನು ಪೂರ್ಣವಾಗಿ ಮುಚ್ಚಿ ನಿಶ್ಚಲಭಾವದಲ್ಲಿ ಬಿದ್ದುಕೊಂಡಿದ್ದರು.

ಮಾರ್ಗಶೀರ್ಷ ಬಹುಳ ಪಕ್ಷದ ಕೊನೆಯ ದಿನದ ರಾತ್ರಿ. ಆಕಾಶದಲ್ಲಿ ತಾರೆಗಳು ಮಿಣುಗುಟ್ಟುತ್ತಿದ್ದುವಾದರೂ ದಟ್ಟವಾದ ಕಗ್ಗತ್ತಲು ಚಿಳ್ಳಕೆರೆಯನ್ನು ಮುಚ್ಚಿಬಿಟ್ಟಿತ್ತು. ಹತ್ತುಗಳಿಗೆಯ ರಾತ್ರಿಯಾದಾಗ, ಊರ ಜನರೆಲ್ಲರೂ ಮೊದಲ ನಿದ್ದೆಯ ಗಾಢತೆಯಲ್ಲಿ ಮಗ್ನರಾಗಿಬಿಟ್ಟಿದ್ದರು. ಎಲ್ಲ ಬೀದಿಗಳಲ್ಲಿ ಮೌನ ತನ್ನ ಸಂತೆಯನ್ನು ಸೇರಿಸಿತ್ತು. ಅಲ್ಲಿ ಇಲ್ಲಿ ಆಗಾಗ ಬೊಗಳುತ್ತಲಿದ್ದ ನಾಯಿಗಳು, ರಾತ್ರಿಯ ಮೌನದೊಂದಿಗೆ ಜಗಳವಾಡಿ, ಸೋಲನ್ನು ಪಡೆಯುತ್ತಿದ್ದುವು. ಕಾಗೆ ಹದ್ದುಗಳು ಯಾವಾಗಲಾದರೊಮ್ಮೆ ಎಚ್ಚತ್ತು, ತಮ್ಮ ರೆಕ್ಕೆಗಳನ್ನು ಜಾಡಿಸಿ ಪಟಪಟ ಸದ್ದು ಮಾಡುತ್ತಿದ್ದುವು.

ಗಾಬರಿಯ ಧ್ವನಿಯಲ್ಲಿ ಸಂಶೋಧನಾಧಿಕಾರಿ ಕೇಳಿದರು:

"ಇಂದು ಭೈರವನ ಪೂಜೆಯ ಮೂರನೆಯ ರಾತ್ರಿಯಲ್ಲವೆ? ಪಾಪ ಚೆಲುವಬ್ಬೆಯ ಭಕ್ತಿ ನಿಷ್ಠೆ ದೊಡ್ಡದು. ಇಂತಹ ಅಮಾವಾಸ್ಯೆಯ

ಕಗ್ಗತ್ತಲಲ್ಲಿ ಬೇರೆ ಹೆಣ್ಣುಮಕ್ಕಳು ಮನೆಯ ಹೊರಗೆ ಮುಖವನ್ನಾದರೂ ಇಕ್ಕಬಹುದೆ? ವಿಸ್ಮಯಕಾರಿ ಸಂಗತಿಯಿದು!"

ನಾನು ನನ್ನ ಹೇಳಿಕೆಯನ್ನು ಮುಂದುವರೆಸಿದೆ:

"ಮೂರನೆಯ ರಾತ್ರಿಯೂ ಚೆಲುವಬ್ಬೆ ಪೂಜೆಗೆ ಹೊರಟಳು. ಭೋಗಬ್ಬೆ ಅವಳನ್ನು ಹಿಂಬಾಲಿಸಿದಳು. ಅಮಾವಾಸ್ಯೆ-ಕಾರಿರುಳು-ಸ್ಮಶಾನದ ಬಳಿ ಭೈರವದೇವರ ಗುಡಿ. ಇವೆಲ್ಲದರ ಸ್ಮೃತಿ ಭೋಗಬ್ಬೆಯ ಎದೆಯನ್ನು ಎಡೆಬಿಡದೆ ನಡುಗಿಸುತ್ತಿತ್ತು. ಚೆಲುವಬ್ಬೆ ಮೌನದ ಬೊಂಬೆಯಾಗಿ ಮುಂದೆ ಮುಂದೆ ಅಡಿಗಳನ್ನಿಡುತ್ತಿದ್ದಳು. ನಿಯಮದಂತೆ ಭೋಗಬ್ಬೆ ಊರ ಅಗಸೆಯ ಬಳಿ ನಿಂತುಕೊಂಡಳು.

ಚೆಲುವಬ್ಬೆ ದೇವಾಲಯವನ್ನು ಪ್ರವೇಶಿಸಿ, ಜೊತೆಯಲ್ಲಿ ಒಯ್ದ ದೀಪವನ್ನು ಬೆಳಗಿಸಿದಳು. ಆ ಕಿರುದೀಪ, ದೇವಾಲಯದಲ್ಲಿ ಮುಸುಕಿದ್ದ ಕತ್ತಲೆಯ ದೆವ್ವವನ್ನು ಹೇಗೆ ಹೊರಗೆ ಹೋಗಿಸಬೇಕು. ದೀಪ ಹಿಡಿದುಕೊಂಡೇ ಗರ್ಭಾಗಾರವನ್ನು ಪ್ರವೇಶಿಸಿ ಮೂರ್ತಿಯ ಮುಂದೆ ನಿಂತಳು. ಆ ರುಂಡಮಾಲಾಧರ ತ್ರಿಶೂಲಾಂಕಿತದ ಭೀಕರ ಮೂರ್ತಿ ಚೆಲುವಬ್ಬೆಯ ಕೆಚ್ಚೆದೆಯನ್ನೂ ಅಲುಗಾಡಿಸಿತು. ಧೂಪ-ದೀಪ—ನೈವೇದ್ಯಗಳನ್ನು ಒಪ್ಪಿಸಿ ಪಂಚಾರತಿಯನ್ನು ಬೆಳಗಿದಳು. ಇನ್ನು ಭೈರವನಾಮಜಪಕ್ಕೆ ಕುಳಿತುಕೊಳ್ಳುವವಳು. ಹೊರ ಗುಡಿಯ ಕತ್ತಲಲ್ಲಿ ಮನುಷ್ಯರ ಕಾಲ ಸಪ್ಪಳ ಕೇಳಿಸಿದಂತಾಯಿತು. ಚೆಲುವಬ್ಬೆ ಗದಗದ ನಡುಗಿದಳು. ಗಾಬರಿಯಿಂದ ಚೇತರಿಸಿಕೊಳ್ಳಬೇಕೆನ್ನುತ್ತಿರುವಾಗಲೇ ಚೆಲುವಬ್ಬೆಯ ಬಲಕ್ಕೆ ನಾಲ್ಕು ಜನ, ಎಡಕ್ಕೆ ನಾಲ್ಕು ಜನ ಬಂದು ನಿಂತುಕೊಂಡರು. ಎಲ್ಲರಿಗೂ ಕರಿಯ ಬಣ್ಣದ ಬಟ್ಟೆಯ ಉಡಿಗೆ ತೊಡಿಗೆ; ಮುಖಕ್ಕೆಲ್ಲ ಕರಿಯ ಬಣ್ಣ! ಆ ಕರಿಯ ಬಣ್ಣದಲ್ಲಿ ಎದ್ದು ಕಾಣುವ ಭೀಕರಾಕಾರದ ಕಣ್ಣುಗಳು. ಚೆಲುವಬ್ಬೆಯ ಧೈರ್ಯ ಕುಸಿಯಿತು. ತಾನು ಎಲ್ಲಿರುವೆನೆಂಬುದೇ ಆಕೆಗೆ ತಿಳಿಯದಂತಾಯಿತು. ಕಿರುಚಿಕೊಳ್ಳಬೇಕೆಂದು ಎನಿಸಿತಾದರೂ ಬಾಯಿಂದ ಧ್ವನಿಯೆ ಹೊರಡಲೊಲ್ಲದು. ನಿಂತಲ್ಲಿಯೆ ಆಕೆ ಮೈಮರೆದು ಬಿದ್ದುಬಿಟ್ಟಳು. ಬಂದಿದ್ದ ಆ ಕತ್ತಲೆಯ ಮಕ್ಕಳು ಆಕೆಯ ಕೈಕಾಲುಗಳನ್ನು ಅಲುಗಾಡದಂತೆ ಬಿಗಿಯಾಗಿ ಕಟ್ಟಿದರು. ಬಳಿಕ ಅವಳನ್ನೆತ್ತಿಕೊಂಡು ಗುಡಿಯಿಂದ ಹೊರಬಿದ್ದು, ಕಾಡಿನ ಕಗ್ಗತ್ತಲೆಯಲ್ಲಿ ಕಣ್ಮರೆಯಾದರು

"ಭೋಗಬ್ಬೆ ಚೆಲುವಬ್ಬೆಯ ದಾರಿಯನ್ನು ಕಾಯುತ್ತ ನಿಂತಿದ್ದಳು, ನಿತ್ಯದ ವೇಳೆ ಮೀರಿತು. ಎರಡು ಗಳಿಗೆಗಳಾದುವು; ಮೂರು ಗಳಿಗೆಗಳಾದುವು. ಏನೇನೋ ನೆನಪುಗಳು ಅವಳ ಕರುಳನ್ನು ಕುಕ್ಕಿದುವು. ಅಳುವು ಹೊರಹೊಮ್ಮಿಬಂತು. ಹಾಗೆಯೆ ಕಂಪಿಸುವ ಅಡಿಗಳನ್ನು ಎಳೆದೆಳೆದು ಹಾಕುತ್ತ ಭೈರವನ ಗುಡಿಯತ್ತ ನಡೆದಳು. ಒಳಗೆ ಹೋದಳು. ಗರ್ಭಾಗಾರದಲ್ಲಿ ಎಣ್ಣೆ ತೀರುತ್ತ ಬಂದ ದೀಪ, ಮಬ್ಬು ಬೆಳಕನ್ನು ಹರಡಿತ್ತು. ಚೆಲುವಬ್ಬೆ ತಂದ ಪೂಜೆಯ ಸಾಹಿತ್ಯಗಳೆಲ್ಲ ಅಲ್ಲಿ ಇದ್ದುವು; ಆದರೆ ಚೆಲುವಬ್ಬೆಯಿಲ್ಲ. ಭೋಗಬ್ಬೆ ನೋಡಿ ಎದೆ ಎದೆ ಚಚ್ಚಿಕೊಂಡಳು; 'ಚೆಲುವಕ್ಕಾ, ಚೆಲುವಕ್ಕಾ' ಎಂದು ಕರುಣಾಧ್ವನಿಯಲ್ಲಿ ಕಿರುಚತೊಡಗಿದಳು. ಚೆಲುವಕ್ಕ ಅಲ್ಲಿದ್ದರಲ್ಲವೇ ಓಗೊಡಬೇಕು. ಯಾವುದೂ ತಿಳಿಯದೆ ಕಂಗೆಟ್ಟ ಭೋಗಬ್ಬೆ, ಮಂಕು ಕವಿದವಳಂತೆ ಓಡುತ್ತಲೇ ಮನೆಯ ಕಡೆ ಬಂದಳು. ದೇಸಾಯಿಯವರ ಪರಿವಾರದವರೆಲ್ಲ ಅವಳನ್ನು ಸುತ್ತುಗಟ್ಟಿ ನಿಂತರು. ಅವರೆಲ್ಲ ಎಷ್ಟು ಮಾತನಾಡಿಸಿದರೂ ಭೋಗಬ್ಬೆ ಉತ್ತರವನ್ನೇ ಕೊಡಲಿಲ್ಲ. ಎಲ್ಲರೂ ಗಾಬರಿಗೊಂಡರು. ಚೆಲುವಬ್ಬೆಯಿಲ್ಲದೆ ಹೀಗೆ ಒಬ್ಬಳೇ ಅರಿವಿಲ್ಲದೆ ಭೋಗಬ್ಬೆ ಓಡಿ ಬಂದುದು, ಎಲ್ಲರನ್ನೂ ಕಂಗೆಡಿಸಿಬಿಟ್ಟಿತು. ಅರೆಗಳಿಗೆ ಕಳೆದ ಮೇಲೆ ಅವಳು 'ಚೆಲುವಕ್ಕಾ, ನನ್ನ ಚೆಲುವಕ್ಕಾ' ಎಂದು ಕೂಗಿ ಕೂಗಿ ಅಳಲುತೊಡಗಿದಳು. ಪರಿವಾರದವರ ಕಳವಳ ಇನ್ನೂ ಹೆಚ್ಚಿತು. ಬೆಳಗಿನ ಕೊನೆಯ ಜಾವದಲ್ಲಿ ಭೋಗಬ್ಬೆ ಮೂಲಸ್ಥಿತಿಗೆ ಬಂದು, ನಡೆದ ಸಂಗತಿಯನ್ನೆಲ್ಲ ಅಳುತ್ತಳುತ್ತಲೇ ತಿಳಿಸಿದಳು. ದೇವಪ್ಪನಾಯಕರು ಎಚ್ಚರ ಕಾಣದೆ ಬಿದ್ದುಕೊಂಡಿದ್ದರು. ದೇಸಾಯಿಯವರ ದಳವಾಯಿಯ ಅಪ್ಪಣೆಯಂತೆ, ದಿಕ್ಕು ದಿಕ್ಕುಗಳಿಗೂ ಬಂಟರನ್ನು ಅಟ್ಟಿಯಾಯಿತು. ದೇವಪ್ಪನಾಯಕರ ಆರೈಕೆಯನ್ನು ಯಾರು ಯಾರೋ ನೋಡಿಕೊಳ್ಳತೊಡಗಿದರು. ಆ ಮನೆಯಲ್ಲಿ ದುಃಖವು ಸ್ಥಾಯಿಯಾಗಿ ತನ್ನ ಲೀಲಾರೂಪವನ್ನು ಪ್ರದರ್ಶಿಸತೊಡಗಿತು.

"ಮರುದಿನ ಬೆಳಗಿನಲ್ಲಿ ಮಂತ್ರವಾದಿ ದೇಸಾಯಿಯವರ ಮನೆಗೆ ಬರಲೇ ಇಲ್ಲ. ವಿಚಾರಿಸಿ ನೋಡಿದಾಗ, ಮಂತ್ರವಾದಿ ಧರ್ಮಶಾಲೆಯಲ್ಲಿ ಇಲ್ಲವೆಂಬುದು ಗೊತ್ತಾಯಿತು. ಊರಲ್ಲಿ ಎಲ್ಲ ಕಡೆಗೂ ಶೋಧಿಸಲಾಯಿತು. ಎಲ್ಲಿಯೂ ಅವನ ಸುಳಿವು ಸಿಕ್ಕಲಿಲ್ಲ. ಹಿನ್ನೆಯ ಕತ್ತಲೆಯ ರಾತ್ರಿಯಲ್ಲಿಯೆ ಅವನು ಕಣ್ಮರೆಯಾಗಿದ್ದ. ಆಗ ಎಲ್ಲರಿಗೂ ಎನಿಸತೊಡಗಿತು, ಏನೋ ಮೋಸದ ತಂತ್ರ ನಡೆದಿದೆ—ಎಂದು. ನಡೆದುದೆಲ್ಲವೂ ಮಾಲಗೊಂಡ ರಕ್ಕಸನ ಮಾಯೆಯ ಆಟ ಎಂದು ಊರ ಹಿರಿಯ ನಾಯಕರೆಲ್ಲರೂ ಮಾತಾಡತೊಡಗಿದರು. ಮಾಲಗೊಂಡನ ಮೇಲೆ ದಾಳಿಯಿಕ್ಕಲು ದಳವಾಯಿ ಸೈನಿಕರನ್ನು ಕಳುಹಬೇಕೆಂದರೆ, ಅರಮನೆಯಲ್ಲಿ ದೇವಪ್ಪನಾಯಕರು ಮೃತ್ಯುಮುಖರಾಗಿ ಮಲಗಿಬಿಟ್ಟಿದ್ದಾರೆ. ಊರ ಜನರಿಗೆಲ್ಲ ತುಂಬ ಪೇಚಾಟಕ್ಕಿಟ್ಟುಕೊಂಡಿತು. ಹೊಣೆಗಾರ ನಾಯಕರೆಲ್ಲ ಒಂದೆಡೆ ಸೇರಿ ವಿಚಾರ ಮಾಡಿ ಒಂದು ನಿರ್ಣಯಕ್ಕೆ ಬಂದರು.

"ನಾಗರಕೊಪ್ಪಲಿನ ಬಚ್ಚನಾಯಕರಿಗೆ ನಡೆದ ಸಂಗತಿಯನ್ನೆಲ್ಲ ಹೇಳಿಕಳುಹಬೇಕು. ಅವರು ಇಲ್ಲಿಗೆ ಬಂದು, ನಮಗೆ ಮಾಡಲು ಹೇಳಿದ್ದನ್ನು ನಾವು ಮಾಡಬೇಕು"

ಆಗ ಭೋಗಬ್ಬೆ ಬಿನ್ನಹದ ಸ್ವರದಲ್ಲಿ ಎಲ್ಲರೆದುರು ಅರಿಕೆ ಮಾಡಿಕೊಂಡಳು :

"ನಾಗರಕೊಪ್ಪಲಿಗೆ ಈಗಲೇ ಈ ಸುದ್ದಿಯನ್ನು ಕಳುಹಿ ದುಡುಕುವುದು ಬೇಡ. ಹೆಣ್ಣು—ಗಂಡಿನ ಸಂಬಂಧ ಸೂಕ್ಷ್ಮವಾದದ್ದು. ಮಾಡಿಕೊಂಡ ಹೆಂಡತಿ ಮಹಾಪತಿವ್ರತೆಯಾಗಿದ್ದರೂ ಶ್ರೀರಾಮಚಂದ್ರದೇವರು. ಜನ ಅಪವಾದಕ್ಕಾಗಿ ಸೀತಾಮಾತೆಯನ್ನು ಮನೆಯಿಂದ ಕಾಡಿಗೆ ಅಟ್ಟಿಬಿಟ್ಟರಂತೆ. ನನ್ನ ಚೆಲುವಬ್ಬೆ ಇನ್ನೂ ಮದುವೆ-ಮಂಗಲ ಕಾಣುವಾಕೆ. ದೇವರ ದಯೆಯಿಂದ ಚೆಲುವಬ್ಬೆ ಮರಳಿ ಬಂದರೆ, ಆಕೆಯ ಬಾಳು ಸುಖವಾಗಬೇಕಲ್ಲವೆ? ಇದೆಲ್ಲ ದುರ್ಘಟನೆಗೆ ಕಾರಣ ಆಲದಕೆರೆಯ ಮಾಲಗೊಂಡನೇ ಎಂಬುದು ನನಗೆ ಸ್ಪಷ್ಟ

ಹಾಗಿದೆ. ನನಗೆ ನಾಲ್ಕು ದಿನಗಳ ಗಡುವನ್ನು ಕೊಡಿರಿ, ಚೆಲುವಬ್ಬೆ ಎಲ್ಲಿದ್ದಾಳೆ ಹೋಗಿದ್ದಾಳೆ ಎಂಬುದನ್ನು ತಿಳಿದುಕೊಂಡು ಬರುತ್ತೇನೆ, ಬೇರೆಯ ಉಪಾಯ ಯಾವುದೂ ಇಲ್ಲವೆಂದಾಗ ಬಚ್ಚನಾಯಕರಿಗೆ ಹೇಳಿ ಕಳುಹಬಹುದು."

ಭೋಗಬ್ಬೆಯ ಮಾತು, ನಾಯಕರೆಲ್ಲರಿಗೂ ಸರಿಯೆನಿಸಿತು. ಚೆಲುವಬ್ಬೆಯ ಶೋಧದ ಹೊಣೆಯನ್ನು ಅವಳ ಕಡೆಗೆ ಒಪ್ಪಿಸಿದರು.

"ಭಲೆ, ಭೋಗಬ್ಬೆಯ ಮುನ್ನೋಟದ ಬಗೆ ಅದ್ಭುತವಾದದ್ದು! ಆಕೆಯ ಅನುಭವಪಕ್ವ ಬುದ್ಧಿಗಾಗಿ, ಎಂತೆಂತಹ ಬುದ್ಧಿವಂತರೂ ತಲೆದೂಗಬೇಕು. ಚೆಲುವಬ್ಬೆಯ ಭವಿಷ್ಯದ ಒಳಿತಿಗಾಗಿ ಆಕೆ ಎಷ್ಟೊಂದು ಪೂರ್ವವಿಚಾರ ಮಾಡಿದ್ದಾಳೆ ನೋಡಿ. ನಮ್ಮ ಕನ್ನಡ ತಾಯಿ ಇಂತಹ ಸಹಜ ವಿದ್ಯಾವತಿಯರಿಗೂ ಜನ್ಮವಿತ್ತಿದ್ದಾಳಲ್ಲವೆ? ಧನ್ಯ ಕನ್ನಡ ಜನಪದ! ಸರಿ, ಮುಂದೇನಾಯಿತು?...ಭೋಗಬ್ಬೆಯ ಚರಿತ್ರೆ ಮುಂದುವರೆಯಲಿ!" ಹೀಗೆ ನುಡಿದು ಸಂಶೋಧನಾಧಿಕಾರಿಗಳು ತಮ್ಮ ಕುತೂಹಲಭಾವವನ್ನು ಹೊರ ಹಾಕಿದರು. ನಾನು ಬಖೈರಿನಲ್ಲಿ ಬರೆದಿರಿಸಿದ ಸಂಗತಿಗಳನ್ನು ಮುಂದೆ ಸಾಗಿಸಿದೆ:

"ಪುಷ್ಯಶುದ್ಧ ದ್ವಿತೀಯೆಯ ದಿನ. ಆಲದಕೆರೆಯ ಭೂತನಾಥನ ದೇವಾಲಯದಲ್ಲಿ ಒಬ್ಬ ಶರಣಮ್ಮ ಬಂದು ಇಳಿದುದನ್ನು ಊರ ಜನರೆಲ್ಲರೂ ನೋಡಿದರು. ಜೊತೆಯಲ್ಲಿ ಇಬ್ಬರು ಶಿಷ್ಯೆಯರು. ಎಲ್ಲರೂ ಕಾವಿಯನ್ನು ಉಟ್ಟು ತೊಟ್ಟಿದ್ದರು. ಕೊರಳಲ್ಲಿ ಮುಂಗೈಗಳಲ್ಲಿ ರುದ್ರಾಕ್ಷಿಯ ಸರಗಳು. ಮುಖ-ಮೈಗಳಿಗೆ ದಟ್ಟವಾದ ಭಸ್ಮಲೇಪನವಿದ್ದಿತು. ಶರಣಮ್ಮನ ಸ್ವಾಭಾವಿಕಸೌಂದರ್ಯ, ಎಲ್ಲರ ಕಣ್ಣುಗಳನ್ನೂ ಆಕರ್ಷಿಸುವಂತಹದು. ಬಂದಿಳಿದ ಸ್ವಲ್ಪ ವೇಳೆಯಲ್ಲಿಯೇ ಶರಣಮ್ಮ ದೇವಾಲಯದ ಮಧ್ಯರಂಗದಲ್ಲಿ, ಭಕ್ತಿಪೂರ್ಣವೆನಿಸುವ ಭಂಗಿಯಲ್ಲಿ ಕುಳಿತು, ಏಕನಾದದ ಸ್ವರದಲ್ಲಿ ಸ್ವರ ಬೆರೆಯಿಸಿ, ದೇವರ ಭಜನೆಗೆ ಮೊದಲು ಮಾಡಿದಳು. ಶಿಷ್ಯೆಯರಿಬ್ಬರೂ ಆಕೆಯ ಮುಂಗಡೆಯಲ್ಲಿ ವಿನಯಭಾವದೊಂದಿಗೆ ಕುಳಿತಿದ್ದರು. ಶರಣಮ್ಮನ ಭಜನೆಯ ಮಧುರಕಂಠ, ಊರ ಜನರ ಕುತೂಹಲವನ್ನು ಸೆಳೆಯಿತು. ಹೆಂಗಸರು, ಗಂಡಸರು, ಹುಡುಗರು ಬಂದು ಬಂದು ಗುಡಿಯ ಮುಖಮಂಟಪದಲ್ಲಿ ತುಂಬಿನಿಂತರು. ಹೊರಗೆ ಕೂಡ ಜನರ ನೆರವಿ ನೆರೆಯಿತು. ಶರಣಮ್ಮನ ಭಜನೆ-ಗೀತಗಳು ತಡೆಯಿಲ್ಲದೆ ಸಾಗಿದ್ದುವು

ಇದ್ದಿದ್ದ ಹಾಗೆಯೇ ಐದು ಜನ ಅಪರಿಚಿತ ಪಯಣಿಗರು. ನೆರವಿಯನ್ನು ಬದಿಗೆ ಸರಿಸುತ್ತ ಗುಡಿಯೊಳಗೆ ಬಂದರು. ಒಬ್ಬೊಬ್ಬರೇ ಮುಂದೆ ಹೋಗಿ ಶರಣಮ್ಮನಿಗೆ ಸಾಷ್ಟಾಂಗ ನಮಸ್ಕಾರವನ್ನು ಸಲ್ಲಿಸತೊಡಗಿದರು. ಭಜನೆಯಲ್ಲಿ ತಲ್ಲೀನಳಾದ ಶರಣಮ್ಮ ಕಣ್ಣುಗಳನ್ನು ಮುಚ್ಚಿಕೊಂಡೇ ಕುಳಿತಿದ್ದಳು. ಶಿಷ್ಯೆಯರಿಬ್ಬರೂ ಪರಿಚಯದ ಕಿರುನಗೆಯನ್ನು ಪ್ರಕಟಿಸುತ್ತ ಆಗಂತುಕರನ್ನು ಸ್ವಾಗತಿಸಿದರು ಬಂದವರೆಲ್ಲರೂ ಭಕ್ತ್ಯಾದರಗಳನ್ನು ತೋರುತ್ತ ಅಲ್ಲಿಯೇ ಒಂದೆಡೆಯಲ್ಲಿ ಕುಳಿತುಕೊಂಡರು

ಭಜನೆಯನ್ನು ಮುಗಿಸಿ ಶರಣಮ್ಮ ಕಂಣ್ತೆರೆದು ನೋಡಿದಳು ಮುಂಗಡೆಯಲ್ಲಿ ಕುಳಿತ ಆಗಂತುಕರನ್ನು ಅನುಗ್ರಹಭಾವದಿಂದ ನೋಡುತ್ತ ಗಾಂಭೀರ್ಯದ ಧ್ವನಿಯಲ್ಲಿ ಕೇಳಿದಳು :

"ನೀವು ಇಲ್ಲಿಗೂ ಬಂದುಬಿಟ್ಟಿರಾ?"

"ಬಂದುಬಿಟ್ಟೆವು. ತಮ್ಮ ಮಹಿಮೆ ನಮ್ಮನ್ನು ಇಲ್ಲಿಗೆ ಎಳೆದು ತಂದಿತು ದೇವೀಜಿ!" ಬಂದವರಲ್ಲಿ ಒಬ್ಬ ವಿನಯದಿಂದ ಹೇಳಿದ! ಶರಣಮ್ಮ ಕೇಳಿದಳು:

"ಬಳ್ಳಿಗಾಂವಿಯಲ್ಲಿ ಎಲ್ಲರೂ ಸುಖವಾಗಿದ್ದಾರೆಯೆ? ಕೆಳದಿಯ ರಾಣಿಯವರೀಗ ಸ್ವಸ್ಥಚಿತ್ತರಾಗಿದ್ದಾರಲ್ಲವೇ!"

"ತಮ್ಮ ಕೃಪೆಯ ಫಲ. ಕೆಳದಿಯ ರಾಣಿಯವರು ಈಗ ಸಂಪೂರ್ಣವಾಗಿ ಸುಧಾರಿಸಿಕೊಂಡಿದ್ದಾರೆ. ಊರಲ್ಲಿ ಎಲ್ಲರೂ ಸುಖವಾಗಿ ಜೀವಿಸುತ್ತಿದ್ದಾರೆ. ತಮ್ಮ ಅಗಲಿಕೆಗಾಗಿ ಎಲ್ಲರೂ ಕಾತರಗೊಂಡಿದ್ದಾರೆ. ತಮ್ಮ ದರ್ಶನ ನಮಗೆ ಅನಿವಾರ್ಯವೆನಿಸಿದುದರಿಂದ, ತಾವಿರುವ ಸ್ಥಳವನ್ನು ಶೋಧಿಸುತ್ತ ಹೊರಟು, ಇಂದು ಮನೋರಥಸಿದ್ಧಿಯನ್ನು ಪಡೆದೆವು!"

"ಮಹಾದೇವಿ ನಿಮಗೆ ಒಳ್ಳೆಯದನ್ನು ಮಾಡಲಿ" ಎಂದು ಹರಕೆಯಿತ್ತು ಶರಣಮ್ಮ ಭಜನೆಯನ್ನು ಮುಗಿಸಿ ಮೇಲೆದ್ದು, ತನ್ನ ಬಿಡಾರದತ್ತ ಹೊರಟಳು. ಶಿಷ್ಯೆಯರಿಬ್ಬರೂ ಆಕೆಯನ್ನು ಅನುಸರಿಸಿ ನಡೆದರು. ನೆರೆದ ಜನರು ತಾವಾಗಿಯೇ ಸರಿದು ಅವರಿಗೆ ದಾರಿಯನ್ನು ಮಾಡಿಕೊಟ್ಟರು.

ದೇವಾಲಯದಲ್ಲಿ ಜನರ ಗುಂಪು ಕರಗತೊಡಗಿತು. ಅಂದು ಆಲದಕೆರೆಯ ಜನರ ಬಾಯಲ್ಲಿ ಶರಣಮ್ಮನ ಮಹಿಮೆಯನ್ನು ಕುರಿತ ಮಾತೇ ಮಾತು!

'ಶರಣಮ್ಮ ತನ್ನ ತಪಸ್ಸಿನ ಬಲದಿಂದ ದೇವರನ್ನು ಪ್ರತ್ಯಕ್ಷ ಮಾಡಿಕೊಂಡಿದ್ದಾಳಂತೆ.'

'ಈಕೆ ಆಡಿದ ಮಾತು ಹುಸಿಯಾಗದಂತೆ!'

'ಇವಳು ಕೈಯಿಂದ ಮುಟ್ಟಿದುದೆಲ್ಲ ಚಿನ್ನವಾಗುವುದಂತೆ!

'ರಾಜವಶ್ಯ, ಸ್ತ್ರೀವಶ್ಯ, ಜನವಶ್ಯಗಳ ಸಿದ್ಧಿಯನ್ನೂ ಈ ಶರಣಮ್ಮ ಪಡೆದಿದ್ದಾಳಂತೆ. ಕೆಳದಿಯ ದೊರೆ-ದೊರೆಸಾನಿಯರ ನಡುವೆ ಬೆಳೆದು ಬಂದ ಬಹುಕಾಲದ ಮನಸ್ತಾಪವನ್ನು ತಿದ್ದಿ, ಇಬ್ಬರ ಹೃದಯವನ್ನು ಒಂದುಗೂಡಿಸಿದಳಂತೆ!'

ಎಲ್ಲೆಲ್ಲಿಯೂ ಶರಣಮ್ಮನ ಗೌರವ-ಘನತೆಗಳ ಮಾತುಗಳೇ ಕಿವಿಗೆ ಬೀಳುತ್ತಲಿದ್ದುವು. ಊರ ಯಜಮಾನ ಮಾಲಗೊಂಡನ ಕಿವಿಗೆ ಈ ಮಾತುಗಳು ಬೀಳದೆ ಹೋಗುವುವೇ?

× × ×

ಮೊದಲೇ ಹೇಳಿ ಒಪ್ಪಿಗೆ ಪಡೆದುಕೊಂಡಂತೆಯೇ ಮಾಲಗೊಂಡನು, ರಾತ್ರಿಯ ಎರಡನೆಯ ಪ್ರಹರದ ಕೊನೆಯ ಗಳಿಗೆಗೆ ಮೊದಲು, ಮಾಲಗೊಂಡ ಶರಣಮ್ಮನ ಸಂದರ್ಶನಕ್ಕೆ ಬಂದ. ಅವನ ಕಪ್ಪು ಮೈಬಣ್ಣ, ಗಲ್ಲ ಮೀಸೆಯ ಕೆಕ್ಕರುಗಣ್ಣಿನ ಉಗ್ರಮುಖ, ಎತ್ತರವಾದ ನಿಲುವು-ಇವೆಲ್ಲ ಶರಣಮ್ಮನ ಎದೆಯನ್ನು ಕ್ಷಣಕಾಲ ನಡುಗಿಸಿದುವು. ಅವನನ್ನು ದೃಷ್ಟಿಸಿ ನೋಡಲು ಕಣ್ಮನಗಳು ಹಿಂಜರಿದುವು. ಮತ್ತೆ ಸ್ಥಿರಭಾವವನ್ನು ತಂದುಕೊಂಡು ಬಂದ ಊರೊಡೆಯನನ್ನು ಉಚಿತ ರೀತಿಯಿಂದ ಸ್ವಾಗತಿಸಿ ಕುಳ್ಳಿರಿಸಿದಳು! ಮಾಲಗೊಂಡ ತನ್ನ ಗೊಗ್ಗರು ದನಿಯಲ್ಲಿ ಬಿನ್ನವಿಸಿಕೊಂಡ:

"ಅನೇಕರ ಬಾಯಿಂದ ತಮ್ಮ ಶಕ್ತಿ-ಸಾಮರ್ಥ್ಯಗಳನ್ನು ಕೇಳಿ ತಿಳಿದಿದ್ದೇನೆ. ತಾವು ದಯೆತೋರಿ, ನನ್ನದೊಂದು ಕೆಲಸವನ್ನು ಮಾಡಿಕೊಡಬೇಕು!"

ಶರಣಮ್ಮ ಮಾತನಾಡಿದಳು:

"ನಾನೇನು ಮಾಡಿಕೊಡಬಲ್ಲೆ? ಎಲ್ಲವನ್ನೂ ಮಾಡುವವಳು ಮಾಡಿಸುವವಳು ಆ ಮಹಾದೇವಿ! ಇರಲಿ, ಈಗ ನನ್ನಿಂದ ಅಪೇಕ್ಷಿಸುವ ಕಾರ್ಯ ಯಾವುದು?"

"ಒಲಿಯದ ಹೆಣ್ಣನ್ನು ನನಗೆ ಒಲಿಸಿಕೊಡಬೇಕು!"

ಮುಗುಳು ನಗೆಯೊಂದಿಗೆ ಶರಣಮ್ಮ ಕೇಳಿದಳು :

"ಯಾವ ಹೆಣ್ಣು? ನಿಮ್ಮಂತಹರನ್ನು ಒಲಿಯದ ಹೆಣ್ಣು ಯಾವುದದು!"

ಮಾಲಗೊಂಡ ಉತ್ತರವಿತ್ತ :

"ಚೆಳ್ಳಕೆರೆಯ ದೇಸಾಯಿಯರ ಮಗಳು! ಅವಳ ಕೈಯನ್ನು ಹಿಡಿದು ಅವಳನ್ನು ನನ್ನವಳನ್ನಾಗಿ ಮಾಡಿಕೊಳ್ಳಬೇಕೆಂದು ನನ್ನ ಎದೆಯ ಆಶೆ. ಮಿಕ್ಕ ಎಂತಹ ಕಾರ್ಯಗಳನ್ನೂ ಒತ್ತಾಯಗಳಿಂದ ನಾನು ಸಹಜವಾಗಿ ಸಾಧಿಸಿಕೊಳ್ಳಬಲ್ಲೆ. ಆದರೆ, ಅವೇ ಬಲುಮೆ-ಒತ್ತಾಯಗಳಿಂದ ಹೆಣ್ಣಿನ ಹೃದಯ, ಪ್ರೀತಿಯನ್ನು ಸಾಧಿಸಿಕೊಳ್ಳಲಿಕ್ಕೆ ಆದೀತೇ?"

"ಎಂದೆಂದಿಗೂ ಸಾಧ್ಯವಾಗದು!" ಎಂದು ಶರಣಮ್ಮ ಗಟ್ಟಿಯಾಗಿ ನುಡಿದಳು.

"ಅದಕ್ಕಾಗಿ ನಾನು ತಮಗೆ ಶರಣಾಗಿ ಬಂದಿದ್ದೇನೆ. ನನ್ನ ಈ ಆಶೆಯನ್ನು ನೀವು ನೆರವೇರಿಸಿ ಕೊಡಬೇಕು!"

"ಸರಿ. ಮಹಾದೇವಿಯ ಇಚ್ಛೆ. ಈಗ ಆ ಹುಡುಗಿ ಎಲ್ಲಿದ್ದಾಳೆ ಗೊಂಡಜೀ?"

"ಇನ್ನೆಲ್ಲಿಯೂ ಇಲ್ಲ. ಈ ಊರಲ್ಲಿಯೇ ನಮ್ಮ ಮನೆಯಲ್ಲಿಯೆ ಇದ್ದಾಳೆ!"

"ಆಶ್ಚರ್ಯದ ವಿಷಯ! ಮದುವೆಯಾಗದ ಹುಡುಗಿ, ತಮ್ಮ ಊರನ್ನು ಬಿಟ್ಟು ನಿಮ್ಮ ಮನೆಗೆ ಬಂದಳು ಹೇಗೆ? ನಿಮ್ಮ ಮೇಲೆ ಪ್ರೀತಿಯಿಲ್ಲದೆ ಹೋದರೆ ಅವಳು ಇಲ್ಲಿಗೆ ಬರುವಳು ಏಕೆ?"

"ಈಗ ಇದ್ದುದೆಲ್ಲವನ್ನೂ ತಮ್ಮೆದುರು ಬಿಚ್ಚಿ ಹೇಳುತೇನೆ ಕೇಳಿರಿ! ನನಗೆ ಆ ಚೆಲುವ ಚೆನ್ನೆಯ ಮೇಲೆ ಆಶೆಯಾಯಿತು. ರೀತಿಯಂತೆ

ನನಗೆ ಅವಳನ್ನು ಕೊಟ್ಟು ಮದುವೆಮಾಡ ಬೇಕೆಂದು ಮೂರು ಬಾರಿ ಹೇಳಿ ಕಳುಹಿದೆ ಹುಡುಗಿಯ ತಂದೆ ನನ್ನ ಮಾತನ್ನು ಒಪ್ಪಿ ಕೊಳ್ಳದೆ ನನ್ನನ್ನು ಅವಮಾನಗೊಳಿಸಿದರು. ನನಗದು ಸಹನೆಯಾಗಲಿಲ್ಲ. ಯುಕ್ತಿ-ಪ್ರಯು ಕ್ತಿಗಳನ್ನು ಹೂಡಿ, ಯಾರಿಗೂ ಗೊತ್ತಾಗದಂತೆ ಆ ಹೆಣ್ಣೊಂದನ್ನೇ ಇಲ್ಲಿಗೆ ಹೊತ್ತು ತರಿಸಿದ್ದೇನೆ. ಆದರೆ ತುಂಬ ಅಭಿಮಾನದ ಹೆಣ್ಣು ಅದು. ಇಲ್ಲಿ ಬಂದಾಗಿನಿಂದಲೂ ಊಟವಿಲ್ಲದೆ, ಬಾಯಲ್ಲಿ ನೀರು ಕೂಡ ಹಾಕದೆ, ಅಳುತ್ತ ಬಿದ್ದು ಕೊಂಡಿದೆ..."





ಶರಣಮ್ಮನ ಮುಖದಲ್ಲಿ ಮೂಡಿ ಮರೆಯಾದ ಕರುಣಾಭಾವವನ್ನು, ಮಾಲಗೊಂಡ ನೋಡಿದನೋ ಇಲ್ಲವೊ! ತನ್ನ ಮಾತನ್ನು ಹಾಗೆಯೆ ಮುಂದುವರಿಸಿದ :

"ನಾನು ಎಷ್ಟೆಷ್ಟೋ ವಚನಗಳನ್ನು ಕೊಟ್ಟೆ; ನಾನಾ ರೀತಿಯ ಸಮಾಧಾನದ ಮಾತುಗಳನ್ನು ನಾನು ಹೇಳಿದೆ; ಹಿರಿಯರಿಂದ ಹೇಳಿಸಿದೆ. ಅವಳಿಂದ ಒಂದು ಮಾತಿನ ಉತ್ತರವೂ ಇಲ್ಲ! ಬರೀ ಅಳುವು–ಅಳುವು! ಆಗಾಗ ಅಪ್ಪಾಜೀ ಎಂದು ಕೂಗುವಳು. ಮುಖವೆತ್ತಿ ಯಾರ ಕಡೆಗೂ ನೋಡಳು. ಬಿದ್ದಲ್ಲಿಯೇ ಬಿದ್ದುಕೊಂಡುಬಿಟ್ಟಿದ್ದಾಳೆ. ಯಾರ ಹಟವನ್ನೂ ನಾನು ಸಹನ ಮಾಡುವವನಲ್ಲ! ಒತ್ತಾಯದಿಂದ ಕಾರ್ಯ ಸಾಧಿಸಿಕೊಂಡು ಬಿಡುವವನು. ಆದರೆ ಆಕೆಯ ಪ್ರೀತಿಯನ್ನು ಅಪೇಕ್ಷಿಸುತ್ತಿರುವುದರಿಂದ ನನ್ನ ಕ್ರೋಧ-ಕಠೋರತೆಗಳು ಅವಳೆದುರು ತಮ್ಮ ಉಗ್ರತೆಯನ್ನು ಮರೆಮಾಚುತ್ತಿರುವವು!"

ಶರಣಮ್ಮ ಕರುಣೆಯ ಸ್ವರದಲ್ಲಿ ನುಡಿದಳು:

"ಪಾಪ, ಪಾಪ! ಒಳ್ಳೆಯ ಜನರು ನೀವು! ಹುಡುಗಿ ಹಟಮಾರಿಯಿರುವಂತೆ ಕಾಣುತ್ತದೆ. ಆ ಹುಡುಗಿಯನ್ನೊಮ್ಮೆ ನನಗೆ ತೋರಿಸುತ್ತೀರಾ?"

"ಈಗ ನೋಡುವಿರೇನು? ಅವಳಂತೂ ಇಲ್ಲಿ ಬರುವಂತಿಲ್ಲ. ತಾವೇ ಅವಳಿದ್ದಲ್ಲಿಗೆ ಬರಬೇಕಾಗುವುದು."

"ಆಗಲಿ, ನಾನೊಮ್ಮೆ ಆ ಹುಡುಗಿಯನ್ನು ನೋಡಲೇಬೇಕು. ಆ ಮೇಲೆ ಮುಂದೆ ಮಾಡಬೇಕಾದುದನ್ನು ಮಾಡುವೆನು ತಮ್ಮ ಕಾರ್ಯವನ್ನು ಮಾಡಿಕೊಡಬೇಕೆಂದು ಮಹಾದೇವಿಯ ಆಜ್ಞೆಯೂ ದೊರೆತಿದೆ!"

ಆಗಂತುಕನಾಗಿ ಬಂದ ಪ್ರಯಾಣಿಕನೊಬ್ಬನನ್ನು, ಜೊತೆಗೆ ಕರೆದುಕೊಂಡು ಶರಣಮ್ಮ ಮಾಲಗೊಂಡನನ್ನು ಹಿಂಬಾಲಿಸಿ ಹೊರಟಳು

* * *

ಚೆಲುವಬ್ಬೆಯನ್ನು ಮಾಲಗೊಂಡ, ತನ್ನ ಹಳೆಯ ವಾಡೆಯ ಒಂದು ಕೋಣೆಯಲ್ಲಿ ಇರಿಸುವ ವ್ಯವಸ್ಥೆ ಮಾಡಿದ್ದ. ಆಕೆಯ ಯೋಗ ಕ್ಷೇಮ ವಿಚಾರಕ್ಕೆನ್ನಿ, ಕಾವಲಿಗಾಗಿ ಎನ್ನಿ ಇಬ್ಬರು ಆಳಿಯರನ್ನು ಇರಿಸಿದ್ದ. ವಾಡೆಯ ಹೆಬ್ಬಾಗಿಲಲ್ಲಿ ಎಂಟು ಜನ ಬಿಚ್ಚುಗತ್ತಿಯ ಬಂಟರನ್ನು ಭದ್ರತೆಗೆಂದು ಕಾವಲಿರಿಸಿದ್ದ. ಬಂದಾಗಿನಿಂದಲೂ ಚೆಲುವಬ್ಬೆ ಹಾಸಿಗೆ ಹಿಡಿದು ಬಿದ್ದುಬಿಟ್ಟಿದ್ದಳು. ಎಡೆಬಿಡದೆ ಬಿಡುವ ನಿಟ್ಟುಸಿರು ಅವಿರತವಾಗಿ ಹೊರಬರುವ ಕಂಬನಿ. ಯಾರೊಡನೆಯೂ ಮಾತಿಲ್ಲ; ನಡು ನಡುವೆ 'ಅಪ್ಪಾಜೀ' ಎಂದು ಕೂಗಿ ತಲೆಯನ್ನು ಮೇಲಕ್ಕೆ ಎತ್ತುವಳು; ಮತ್ತೆ ಎರಡೂ ಕೈಗಳಿಂದ ಮುಖವನು, ಮುಚ್ಚಿಕೊಂಡು ಅವಳು. ತಲೆಯನು ದಿಂಬಿಗೆ ಅಪ್ಪಳಿಸುವಳು. ಆಳಿಯರು ಬಂದು ಆಗಾಗ ಸಮಾಧಾನಪಡಿಸುವರು. ಮಾಲಗೊಂಡನ ಧೈರ್ಯ, ಶೌರ್ಯ, ಶ್ರೀಮಂತಿಕೆಯ ಪವಾಡಗಳನ್ನು ಬಣ್ಣಿಸುವರು. ಯಾವುದನ್ನೂ ಕೇಳಲು ಚೆಲುವಬ್ಬೆ ಸಿದ್ಧಳಿರಲಿಲ್ಲ. ಅನ್ನ ನೀರಿನ ಅಭಾವದ ಮೂಲಕ ದೇಹ ಬಡವಾಗಿದೆ; ಮುಖದ ಕಾಂತಿ ಕಂದಿ ಹೋಗಿದೆ.

ಮಾಲಗೊಂಡನೊಂದಿಗೆ ಬಂದ ಶರಣಮ್ಮ, ಅವನನ್ನು ಹೊರಗೇ ಬಿಟ್ಟು ಚೆಲುವಬ್ಬೆ ಮಲಗಿದ ಕೋಣೆಯೊಳಗೆ ಬಂದಳು. ಆಳಿಯರನ್ನು ನೀವು ದೂರ ಹೋಗಿರೆಂದು ಹೊರಗೆ ಅಟ್ಟಿದಳು. ಬಳಿಕ ಕೋಣೆಯ ಕದಗಳನ್ನು ಗಟ್ಟಿಯಾಗಿ ಮುಚ್ಚಿ, ಚೆಲುವಬ್ಬೆಯ ಬಳಿ ಹೋಗಿ ತಗ್ಗಿದ ಸ್ವರದಲ್ಲಿ 'ಚೆಲುವಬ್ಬೇ' ಎಂದು ಕೂಗಿದಳು. ಧ್ವನಿಯು ಪರಿಚಯದ್ದಾಗಿ ತೋರಿದುದರಿಂದ ಚಟ್ಟನೆ ಕಣ್ಣು ತೆರೆದು ನೋಡಿದಳು; ಒಂದೇ ಸಮನೆ ನಿಟ್ಟಿಸಿ ನೋಡತೊಡಗಿದಳು.

"ಯಾಕೆ ತಾಯೀ, ನನ್ನ ಗುರುತು ಸಿಕ್ಕಲಿಲ್ಲವೇ? ನಿನ್ನ ಬಿಡುಗಡೆಯ ಪ್ರಯತ್ನಕ್ಕಾಗಿಯೇ ಈ ವೇಷ ಹಾಕಿಕೊಂಡು ಬಂದಿ



ದ್ದೇನೆ. ನಾನು ಯಾರೆಂಬುದು ತಿಳಿಯಲಿಲ್ಲವೆ? ಚೆಲುವಕ್ಕಾ?"

ಚೆಲುವಕ್ಕೆ ಒಮ್ಮೆಲೆ ಎದ್ದು ಕುಳಿತು, ಶರಣಮ್ಮನನ್ನು ಅಪ್ಪಿಕೊಂಡು, 'ಭೋಗವ್ವಾ!' ಎಂದು ಅಳಲು ತೊಡಗಿದಳು. ಭೋಗಮ್ಮ ಅವಳನ್ನು ಸಂತವಿಡುತ್ತ ಹೇಳಿದಳು:

"ಅಳಬೇಡ ತಾಯೀ! ಅಪ್ಪಾಜಿ ಕ್ಷೇಮವಾಗಿ ಇದ್ದಾರೆ. ನಾಳೆಯ ರಾತ್ರಿಯಲ್ಲಿಯೇ ನಿನ್ನ ಬಿಡುಗಡೆ ನಿಶ್ಚಿತ! ನನ್ನ ಜೀವನವನ್ನು ಪಣಕ್ಕಿಟ್ಟು, ನಿನ್ನನ್ನು ಬಿಡುಗಡೆಗೊಳಿಸಬೇಕೆಂದು ಆಣೆಯಿಟ್ಟುಕೊಂಡೇ ಇಲ್ಲಿಗೆ ಬಂದಿದ್ದೇನೆ!"

"ನೀನು ನನ್ನ ಹಡೆದ ತಾಯಿ ಭೋಗವ್ವಾ!" ಎಂದು ನುಡಿದು ಚೆಲುವಕ್ಕೆ ಮುಕ್ತ ಅಳಲು ತೊಡಗಿದಳು. ಶರಣಮ್ಮ ಅವಳನ್ನು ಸಮಾಧಾನ ಪಡಿಸಿ, ಪಿಸುನುಡಿಗಳಲ್ಲಿ ಏನೇನೋ ಮಾತುಗಳನ್ನು ಹೇಳಿದಳು. ತರುವಾಯ ಹಣೆಗೆ ವಿಭೂತಿಯನ್ನು ಹಚ್ಚಿ, ಎಡದ ರಟ್ಟೆಯಲ್ಲೊಂದು ರಕ್ಷೆಯನ್ನು ಕಟ್ಟಿದಳು. ತುಂಬ ಪ್ರೀತಿಯ ಕೈಯನ್ನಾಡಿಸಿ, 'ನಾನು ಹೇಳಿದುದನ್ನು ಮರೆಯಬೇಡ, ಎದೆಯನ್ನು ಗಟ್ಟಿ ಮಾಡಿಕೋ' ಎಂದು ಹೇಳಿ ಮೇಲಕ್ಕೆದ್ದಳು. ಕೋಣೆಯ ಕದವನ್ನು ತೆಗೆದು ಹೆಬ್ಬಾಗಿಲ ಬಳಿ ಬಂದಳು. ಅಲ್ಲಿ ಆತುರಹೃದಯನಾಗಿ ನಿಂತಿದ್ದ ಮಾಲಗೊಂಡನನ್ನು ಕುರಿತು ಹೇಳಿದಳು:

"ಇನ್ನು ನಿಶ್ಚಿಂತರಾಗಿ ಇರ್ರಿ! ಇದೀಗ ಪ್ರಾರಂಭದ ಪ್ರಯೋಗ ಮಾಡಿ ಬಂದಿದ್ದೇನೆ. ಇದರ ಪರಿಣಾಮ ನಾಳೆಯ ಬೆಳಗಿನಲ್ಲಿಯೇ ನಿಮ್ಮ ಅನುಭವಕ್ಕೆ ಬರಬಹುದು. ನನಗಿನ್ನು ಅಪ್ಪಣೆ ಕೊಡಿ!"

ಮಾಲಗೊಂಡ ಅವಳ ಕಾಲು ಮುಟ್ಟಿ ನಮಸ್ಕರಿಸಿ, ಶರಣಮ್ಮನನ್ನು ಆದರದಿಂದ ಬೀಳ್ಕೊಟ್ಟ.

*  •

ಮರುದಿನ ಬೆಳಗಿನ ಐದು ಗಳಿಗೆ ಕಳೆದಿವೆ. ಶರಣಮ್ಮ ತನ್ನ ಬೆಳಗಿನ ಭಜನೆಯ ಕಾರ್ಯಕ್ರಮ ಮುಗಿಸಿಕೊಂಡು, ಆಗ ತಾನೇ ಹವೇಲಿಯ ತನ್ನ ಬಿಡಾರಕ್ಕೆ ಬಂದು, ತನ್ನ ಆಸನದ ಮೇಲೆ ಕುಳಿತಿದ್ದಾಳೆ. ಮಾಲಗೊಂಡ ಉತ್ಸಾಹ ಭಾವವನ್ನು ಮುಖದ ಮೇಲೆ ಕುಣಿದಾಡಿಸುತ್ತ ಅಲ್ಲಿಗೆ ಬಂದ; ಬಂದವನೇ ಭಕ್ತಿಪೂರ್ವಕವಾಗಿ ಶರಣಮ್ಮನಿಗೆ ನಮಸ್ಕಾರ ಮಾಡಿದ. ಮೇಲಕ್ಕೆದ್ದೊಡನೆಯೇ ಸಂಭ್ರಮಸ್ವರದಲ್ಲಿ ಹೇಳಿದ :

"ನಿಮ್ಮ ಮೇಲೆ ನನ್ನ ಸಂಪೂರ್ಣ ವಿಶ್ವಾಸ ಕುಳಿತಿದೆ. ನೀವು ಮಾಡಿದ ಪ್ರಥಮಪ್ರಯೋಗ ಒಳ್ಳೆಯ ಪರಿಣಾಮವನ್ನು ಉಂಟುಮಾಡಿದೆ."

ಕಿರುನಗೆಯೊಂದಿಗೆ ಶರಣಮ್ಮ ಕೇಳಿದಳು :

"ಏಕೆ, ಏನಾಗಿದೆ ?"

"ನಿನ್ನೆಯ ರಾತ್ರಿಯಲ್ಲಿಯೇ ಆ ಹೆಣ್ಣಿನ ಮನದಲ್ಲಿ ಬದಲಾವಣೆಯಾಗುತ್ತ ನಡೆದಂತೆ ಕಾಣುತ್ತದೆ. ಏಕೆಂದರೆ ನೀವು ಅಲ್ಲಿಂದ ದಯಮಾಡಿಸಿದ ಮೇಲೆ, ಆಕೆಯ ಮುಖದ ಕಳೆಯೇ ಬದಲಾಗಿದ್ದಿತಂತೆ. ಆಳಿಯರನ್ನು ಕಂಡು ಕಿರುನಗೆ ನಗುತ್ತ ಕರೆದು ಹತ್ತಿರ ಕುಳ್ಳಿರಿಸಿಕೊಂಡಳಂತೆ. ಅವರೊಂದಿಗೆ ನಗುನಗುತ್ತ ಮಾತು-ಕಥೆ ಆಡಿದಳಂತೆ, ಹಾಸಿಗೆಯಿಂದ ಎದ್ದು ಮುಖ ತೊಳೆದುಕೊಂಡಳಂತೆ, ಆಳಿಯರು ಕೊಟ್ಟ ಹಣ್ಣುಗಳನ್ನು ತಿಂದಳಂತೆ; ಹಾಲನ್ನು ಕುಡಿದಳಂತೆ, ರಾತ್ರಿಯಲ್ಲಿ ಸುಖವಾಗಿ ನಿದ್ರೆ ಮಾಡಿದಳಂತೆ. ಇದೀಗ ನಾನು ಅಲ್ಲಿಗೆ ಹೋಗಿಯೇ ಇತ್ತಕಡೆಗೆ ಬಂದಿದ್ದೇನೆ. ನನ್ನನ್ನು ಅವಳು ಕಣ್ಣರಳಿಸಿ ನೋಡಿದಳು, ನಾಚಿಕೆಯಿಂದ ತಲೆ ಬಾಗಿಸಿದಳು. ನಾನು ಕೇಳಿದ ಪ್ರಶ್ನೆಗಳಿಗೆಲ್ಲ ನಾಚಿಕೆಯ ಭಾವದಲ್ಲಿಯೆ ಸವಿಯಾಗಿ ಉತ್ತರಕೊಟ್ಟಳು. ಹೊಟ್ಟೆ ತುಂಬ ಊಟ ಮಾಡೆಂದು ಹೇಳಿದಾಗ, ಪ್ರೀತಿಯ ನೋಟಗಳನ್ನು ನನ್ನತ್ತ ಬೀರಿ 'ಆಗಲಿ' ಎಂದು ಉತ್ತರವಿತ್ತು ತಲೆ ಬಾಗಿಸಿದಳು. ನನಗೆ ತುಂಬ ಸಂತೋಷವಾಯಿತು. ಈ ಸಂತೋಷದ ವರ್ತಮಾನವನ್ನು ನಿಮಗೆ ತಿಳಿಸಬೇಕೆಂದು ಸ್ವತಃ ನಾನೇ ನಿಮ್ಮನ್ನು ಕಾಣಲು ಬಂದೆ. ನಿಮ್ಮ ಉಪಕಾರ ನನ್ನ ಮೇಲೆ ಬಹಳ ಆಯಿತು ಶರಣವ್ವಾಜೀ!"

ತೃಪ್ತಿಯ ಮುಗುಳುನಗೆಯೊಂದಿಗೆ ಶರಣಮ್ಮ ಹೇಳಿದಳು :

"ದೇವಿಯ ಕೃಪೆ ಗೌಡರೆ, ನಾನೇನು ಮಾಡಬಲ್ಲೆ. ನಾವೆಲ್ಲರೂ ಆ ಮಹಾಶಕ್ತಿಯ ಕೈಗೊಂಬೆಗಳು. ದೇವಿಯ ಅನುಗ್ರಹ ನಿಮ್ಮ ಮೇಲೆ ಸಂಪೂರ್ಣ ಇದೆ. ನಿನ್ನೆಯದು ಕೇವಲ ಪ್ರಥಮ ಪ್ರಯತ್ನ. ಅದು ತನ್ನ ಒಳ್ಳೆಯ ಪರಿಣಾಮವನ್ನು ತೋರಿಸಿದುದಕ್ಕೆ ನಿಮ್ಮ ಶುದ್ಧವೂ ಕಾರಣ. ನೀವು ಆಯ್ದುಕೊಂಡಿರುವ

ಹುಡುಗಿಯೂ ಸುದೈವಿಯಿದ್ದಾಳೆ. ಎಂತಲೇ ನೀವು ಅವಳನ್ನು ಇಷ್ಟು ಮೆಚ್ಚಿಕೊಂಡಿದ್ದೀರಿ. ಆಯಿತು, ಇಂದು ನಟ್ಟಿರುಳಿನಲ್ಲಿ ನಾನು ಅಲ್ಲಿಗೆ ಬಂದು ವಶ್ಯದ ಸಂಪೂರ್ಣಪ್ರಯೋಗ ಮಾಡು ತ್ತೇನೆ. ತಮಗಿನ್ನು ಯಾವ ಯೋಚನೆಯೂ ಬೇಡ"

ಮತ್ತೊಮ್ಮೆ ನಮಸ್ಕಾರ ಮಾಡಿ ಮಾಲ ಗೊಂಡ, ಉತ್ಸಾಹದ ಗತಿಯಲ್ಲಿಯೇ ಅಲ್ಲಿಂದ ಹೊರಟ. ಶಿಷ್ಯೆಯರಿಬ್ಬರೂ ಶರಣಮ್ಮನ ಕಡೆಗೆ ನೋಡಿ ನಗುತ್ತಲಿದ್ದರು; ಅವರಲ್ಲಿಯ ಒಬ್ಬಳು ನುಡಿದಳು :

"ಹೆಣ್ಣಿನ ಮೋಹ ಎಂತೆಂತಹ ವೀರ-ಧೀರ ರಿಗೂ ಹುಚ್ಚು ಹಿಡಿಸುವುದು. ಹೆಣ್ಣಿನ ಹುಚ್ಚು ಹಿಡಿಯದೆ ಹೋಗಿದ್ದಲ್ಲಿ ಲೋಕ ಕಂಟಕ ಭಸ್ಮಾಸುರನಿಗೆ ಅಳಿವೆಲ್ಲಿತ್ತು !"

ಈ ಮಾತಿಗೆ ಶರಣಮ್ಮನೂ ನಕ್ಕಳು; ಆದರೆ ಆಕೆಯ ಮುಖದಲ್ಲಿ ಒಂದು ಬಗೆಯ ವಿಷಾದ ಭಾವ ಒಡಮೂಡಿತ್ತು.

*   *   *

ಅಂದು ರಾತ್ರಿಯ ಎರಡು ಪ್ರಹರಗಳು ಮುಗಿದಾಗ, ಶರಣಮ್ಮ ಚೆಲುವಬ್ಬೆಯ ಕಡೆಗೆ ಬಂದಳು, ಶಿಷ್ಯೆಯರಿಬ್ಬರೂ ಜೊತೆಯಲ್ಲಿದ್ದರು. ಹೆಬ್ಬಾಗಿಲಿಗೆ ಬಂದೊಡನೆಯೆ ಕಾಪಿನಾಳುಗಳು ಬಾಗಿ ನಮಸ್ಕಾರ ಮಾಡಿದರು. ಒಳಗೆ ಹೋದೊಡನೆಯೆ ಅಳಿಯರಿಬ್ಬರೂ ಅತ್ಯಂತ ಭಕ್ತಿಯಿಂದ ಶರಣಮ್ಮನ ಅಡಿಗಳನ್ನು ಮುಟ್ಟಿ ನಮಸ್ಕರಿಸಿದರು. ಶರಣಮ್ಮ ವಾತ್ಸಲ್ಯಭಾವ ದಿಂದ ಅಳಿಯರನ್ನು ಮೈದಡಹುತ್ತ ನೀವು ಹೆಬ್ಬಾಗಿಲ ಬಳಿ ನಿಲ್ಲಿರೆಂದು ಹೇಳಿದಳು; ಅವ ರೊಂದಿಗೆ ತನ್ನ ಶಿಷ್ಯೆಯರನ್ನೂ ಕಳುಹಿದಳು. ತಾನು ಕೋಣೆಯೊಳಕ್ಕೆ ಹೋಗಿ ಕದಗಳನ್ನು ಭದ್ರವಾಗಿ ಇಕ್ಕಿಕೊಂಡಳು.

ಸಂಶೋಧನಾಧಿಕಾರಿ ಭಾವಾವೇಶವನ್ನು ತಡೆದುಕೊಳ್ಳಲಾರದೆ ನುಡಿದರು :

"ಎಂತಹ ಅದ್ಭುತ ಸನ್ನಿವೇಶರೀ ಇದು. ಸಹೃದಯರನ್ನು ರಸಸಮುದ್ರದಲ್ಲಿ ಮುಳುಗಿಸು ವಂತಹ ಭಾವಪೂರ್ಣ ಜೀವನಚಿತ್ರ !"

ಸಹಾಯಕ ಸಂಶೋಧಕರು ನುಡಿದರು.

"ಚಲಚ್ಚಿತ್ರಕ್ಕೆ ಸುಂದರ ವಸ್ತುವಾಗಬಲ್ಲದು ಈ ಜಾನಪದ ಐತಿಹಾಸಿಕ ಘಟನೆ."

"ನಮ್ಮವೇ ಆದ ಇಷ್ಟೊಂದು ಕಥಾವಸ್ತು ಗಳಿದ್ದರೂ, ಅವುಗಳನ್ನು ನೋಡುವರಾರು ? ತಂಗುಳಾದರೂ ಅಡ್ಡಿಯಿಲ್ಲ; ಮಾಡಿಟ್ಟ ಅಡಿಗೆ ಯನ್ನು ಬಿಸಿಯದೆಂಬ ಭ್ರಮೆಯಿಂದ ಬಡಿಸುವ ಚಲಚಿತ್ರ ಕಲಾವಿದರು ನಮ್ಮವರು !"

ಸಂಶೋಧನಾಧಿಕಾರಿಗಳು ಅಧಿಕಾರವಾಣಿ ಯಲ್ಲಿ ನುಡಿದರು :

"ಒಳ್ಳೆಯ ರಸಪ್ರಸಂಗವನ್ನು ನಮ್ಮ ಈ ಚರ್ಚೆ ಕೆಡಿಸುವುದು ಬೇಡ, ರಾಯರೆ, ದಯೆ ಯಿಟ್ಟು ನಿಮ್ಮ ಕಥನ ಮುಂದುವರೆಸಿರಿ !"

ನಾನು ಹೇಳಲು ತೊಡಗಿದೆ:

"ಒಳಗೆ ಬಂದು ಶರಣಮ್ಮನ ವೇಷಧಾರಿಣಿ-ಭೋಗಬ್ಬೆಯನ್ನು ಕಂಡು ಚೆಲುವಬ್ಬೆ ಭಾವಾ ವಿಷ್ಟಳಾದಳು. ದಿಗ್ಗನೆ ಎದ್ದು ಭೋಗಬ್ಬೆ ಯನ್ನು ಅಪ್ಪಿಕೊಂಡು 'ನನ್ನ ತಾಯಿ ನೀನು' ಎಂದು ನುಡಿಯುತ್ತ ಅಳುವನ್ನಾರಂಭಿಸಿದಳು. ಆಗ ಭೋಗಬ್ಬೆ ಸ್ಥಿರಮನಸ್ಕಳಾಗಿ ಸ್ವಲ್ಪ ಬಿರು ಸಾಗಿ ಹೇಳಿದಳು:

'ಚೆಲುವಕ್ಕಾ, ಈಗ ಇದಾವುದೂ ಬೇಡ, ಅಳುವನ್ನು ನುಂಗಿಕೊಳ್ಳು. ಇಲ್ಲಿಂದ ಪಾರಾಗಿ ಕುಮಾರನಾಯಕನ ಜೊತೆ ಆನಂದವಾಗಿ ಬಾಳ ಬೇಕೆಂಬ ಗುರಿಯನ್ನು ಮಾತ್ರ ಮನದ ಮುಂದೆ ಇಟ್ಟುಕೊ! ಎದೆಯನ್ನು ಗಟ್ಟಿ ಮಾಡಿಕೊ! ಇದೋ ಮೊದಲು ನೀನು ನಿನ್ನ ವೇಷವನ್ನು ಬದಲಿಸಿಕೊಳ್ಳಬೇಕು. ಇಗೋ ಈ ಕಾವೀ ಸೀರೆಯನ್ನುಡು; ಕರಿಯ ಬಣ್ಣದ ಕುಪ್ಪಸ ತೊಡು. ಮೊಗದ ತುಂಬ ಭಸ್ಮ ತೊಡೆದುಕೋ! ರುದ್ರಾಕ್ಷಿಮಾಲೆಗಳನ್ನು ಕಟ್ಟಿಕೊಳ್ಳು ! ಎಲ್ಲವೂ ಬೇಗ ಬೇಗ ಆಗಲಿ !'

ಚೆಲುವಬ್ಬೆ ಅವಳು ಹೇಳಿದಂತೆ ವೇಷವನ್ನು ಮಾರ್ಪಡಿಸಿಕೊಂಡಳು. ಭೋಗಬ್ಬೆ ಎಲ್ಲವನ್ನೂ ನೋಡಿ ಸರಿಯಾಗಿದೆಯೆಂದಳು. 'ಇನ್ನು ನಾನು

ಶಬ್ದ ಮುಗ್ಧ....



ಲೋಕದ ಚಿಂತೆ, ಸ್ವರ್ಗದ ಆಶೆ
ದೇವರ ಸ್ಮರಣೆ, ಎಲ್ಲವನೂ
ಮರೆಯಿಸಿತು, ನಿನ್ನ ಅವರ್ಣನೀಯ
ಸೌಂದರ್ಯ ರಾಶಿ! ನಾನೋ! ಶಬ್ದ ಮುಗ್ಧ!

— ಪಂಚಾಕ್ಷರಿ ಹಿರೇಮಠ

ನೀನಾಗಬೇಕು' ಎಂದು ಚೆಲುವಬ್ಬೆಯ ಸೀರೆ ಕುಪ್ಪಸ ಆಭರಣಗಳನ್ನು ತೊಟ್ಟುಕೊಂಡಳು. ಚೆಲುವಬ್ಬೆ ಬೆರಗಿನಿಂದ ಅವಳ ಕಡೆಗೆ ನಿಟ್ಟಿಸಿ ನೋಡುತ್ತಲಿದ್ದಳು. ಆಗ ಭೋಗಬ್ಬೆ ಆಜ್ಞೆಯ ಧ್ವನಿಯಲ್ಲಿ ಹೇಳಿದಳು :-

"ಸರಿ ನೀನೀಗ ಹೊರಟುಬಿಡು ! ಹೊರ ಬಾಗಿಲಲ್ಲಿ ಅಮ್ಮನ್ನೆ ಸಿದ್ದವ್ವೆ ನಿಂತಿದ್ದಾರೆ. ನೀನು ಒಂದು ಮಾತನ್ನಾಡದೆ ಗಂಭೀರಭಾವ ದವಳಾಗಿ ಅವರನ್ನು ಅನುಸರಿಸು ! ನಾಳೆಯ ಬೆಳಗಿನಲ್ಲಿಯೆ ನಿನ್ನ ಅಪ್ಪಾಜಿಯ ಮುಖ ನಿನಗೆ ನೋಡಲು ಸಿಕ್ಕುವುದು !"

ಬಿಗಿದು ಬರುತ್ತಿರುವ ಕಂಠದಲ್ಲಿ ಚೆಲುವಬ್ಬೆ ನುಡಿದಳು:

'ನಿನ್ನ ಗತಿಯೇನು ಭೋಗಮ್ಮಾ!'

'ನಿನಗೀಗ ಯಾವ ಯೋಚನೆಯೂ ಬೇಡ! ನಾನು ಎಲ್ಲ ಮಾತಿನ ವಿಚಾರವನ್ನು ಮಾಡಿಯೆ ಇಲ್ಲಿಗೆ ಬಂದಿದ್ದೇನೆ. ನಿನ್ನನ್ನು ಪಾರು ಮಾಡಿದ ದೇವರು ನನ್ನನ್ನೂ ಪಾರು ಮಾಡ ಬಹುದು! ಬೇಗನೆ ಹೊರಡು ನೀನು ಇಲ್ಲಿಂದ. ಇನ್ನು ನಾನು ನಿನ್ನ ಪಾತ್ರವನ್ನು ವಹಿಸಿ ನಾಟಕ ಮಾಡಬೇಕು!'

ಚೆಲುವಬ್ಬೆ ಭೋಗಬ್ಬೆಯನ್ನು ಮತ್ತೊಮ್ಮೆ ಬಿಗಿಯಾಗಿ ಅಪ್ಪಿಕೊಂಡು, ಆಕೆಯ ಪಾದ ಧೂಳಿಯನ್ನು ಹಣೆಗೆ ಹಚ್ಚಿಕೊಂಡು ಹೊರಟು ಬಿಟ್ಟಳು. ಅವಳು ಹೆಬ್ಬಾಗಿಲ ಬಳಿ ಬಂದಾಗ, ಅಳಿಯರೂ ಕಾಪಿನಾಳುಗಳೂ ಬಾಗಿ ನಮ-ಸ್ಕಾರ ಮಾಡಿದರು. ಚೆಲುವಬ್ಬೆ ಮೌನಿಯಾ ಗಿಯೇ ಶಿಷ್ಯೆಯರಿಬ್ಬರನ್ನೂ ಅನುಸರಿಸಿ ಹೊರಟುಬಿಟ್ಟಳು! ಅಳಿಯರಿಬ್ಬರೂ ಮರಳಿ ಬಂದಾಗ ಕೋಣೆಯ ಬಾಗಿಲು ಇಕ್ಕಿದ್ದಿತು. ಒಳಗಿಂದ ಗಾಢನಿದ್ರೆಯ ಗೊರಕೆಯ ಶಬ್ದ ಕೇಳಿಸುತ್ತಿದ್ದಿತು. ಅಳಿಯರಿಬ್ಬರೂ ನಿಶ್ಚಿಂತೆ ಯಿಂದ ಮಲಗಿ ನಿದ್ರಿಸತೊಡಗಿದರು.

*   *   *

"ಪೌಷ್ಯಶುದ್ಧ ಪಂಚಮಿಯ ಬೆಳಗಿನ ಒಂದು ಪ್ರಹರ ಕಳೆದುಹೋಗಿದೆ. ಚಿಳ್ಳಕೆರೆಯ ಅರಮನೆಯಲ್ಲಿ ಚೆಲುವಬ್ಬೆಯ ಅಗಲಿಕೆಯ ವಿಷಯಕವಾದ ವಿಷಾದದ ವಾತಾವರಣ ಮುತ್ತಿ ಮುಸುಕಿದ್ದಿತಾದರೂ ಅದರಲ್ಲಿ ಒಂದು ಸಮಾ ಧಾನದ ಕಿರುಗಾಳಿಯೂ ಸುಳಿಯುತ್ತಿತ್ತು. ಈಗ ಎರಡು ದಿನಗಳಿಂದಲೂ ದೇವಪ್ಪನಾಯ ಕರ ಜ್ವರವು ತಣಿದಿತ್ತು. ಅವರ ಮೈಮೇಲೆ ಸಂಪೂರ್ಣ ಎಚ್ಚರು ಬಂದಿದ್ದಿತು. ಕುಡಿಸಿದ ಹಾಲು ಪೇಯಗಳು ಜಠರಕ್ಕಿಳಿದು ಜೀರ್ಣ ವಾಗುತ್ತಲಿದ್ದವು. ಎಚ್ಚರ ಬಂದ ಮೊದಲ ದಿನ ಮಾತನ್ನೇನೂ ಆಡುತ್ತಿರಲಿಲ್ಲವಾದರೂ ಕಣ್ಣರ ಳಿಸಿ ಸುತ್ತ-ಮುತ್ತಣ ಜನರಲ್ಲಿ ಯಾರನ್ನೋ ಹುಡುಕುತ್ತಲಿದ್ದರು. ಬೇಕಾದವರು ನೋಡಲು ದೊರೆಯದುದರಿಂದಲೋ ಏನೋ! ಆಗಾಗ ಮುಖವನ್ನು ಮುದುರಿಸುತ್ತಿದ್ದರು. ಮರುದಿನ ವನ್ನೂ ಇದೇ ಸ್ಥಿತಿಯಲ್ಲಿಯೇ ಕಳೆದರು. ವೈದ್ಯ ಔಷಧಿಯ ಪ್ರಭಾವದಿಂದಲೋ ಎರಡು ದಿನ ಹೊಟ್ಟೆಯಲ್ಲಿ ಹೋದ ಆಹಾರದ ಪ್ರಭಾವ ದಿಂದಲೋ ಇಂದು ನಾಯಕರ ಮೈಯಲ್ಲಿ ಸ್ವಲ್ಪ ಚೈತನ್ಯ ಬಂದಂತಾಗಿತ್ತು. ನಾಲಗೆ ಜಡ ವಾಗಿದ್ದರೂ ಅದು ತನ್ನ ಕಾರ್ಯಕ್ಕಾಗಿ ಹವಣಿ ಸುತ್ತಿತ್ತು. ಎಂತಲೆ 'ಚೆ-ಲು-ವ-ಕ್ಕ' 'ಚೆ-ಲು-ವ-ಕ್ಕ' ಎಂದು ಅದು ಆಗಾಗ ತೊದಲು-ತೊದಲಾಗಿ ನುಡಿಯುತ್ತಿತ್ತು. ಆದರೆ ಅಂತಹ ಪರಿಸ್ಥಿತಿಯಲ್ಲಿ ಚೆಲುವಕ್ಕನ ವಿಚಾರವನ್ನು ಹೇಳು ವವರಾರು? ಹೇಳುವುದಾದರೂ ಹೇಗೆ? ನಾಯಕ ರಿಗೆ ಜ್ವರ ಕಡಿಮೆಯಾಗಿ ಚೇತರಿಸಿಕೊಳ್ಳತೊಡ ಗಿದ್ದರೂ ಚೆಲುವಬ್ಬೆಯ ವಿಯೋಗದ ಮೂಲಕ

ಅವರ ಭವಿಷ್ಯದ ಬಗೆಗೆ ಅಪ್ತೇಷ್ಟರೆಲ್ಲರೂ ಭೀತಿ ಸಂದೇಹಗಳನ್ನು ತಳೆದಿದ್ದರು.

"ನಾಯಕರು ಮತ್ತೆ 'ಚೆಲುವಕ್ಕ' 'ಚೆಲುವಕ್ಕ' ಎಂದು ಕಾತರಭಾವದಲ್ಲಿ ನುಡಿದರು. ಹತ್ತಿರಿದ್ದವರೆಲ್ಲ ನಿಟ್ಟುಸಿರನ್ನು ಚೆಲ್ಲಿದರು. ಕೆಲವರ ಕಣ್ಣುಗಳಲ್ಲಿ ಕಂಬನಿಗಳೂ ಕಂಡುವು. ಇದ್ದುದಿದ್ದ ಹಾಗೆಯೆ ಹೊರಗಡೆ ಸಂತೋಷ ಸಂಭ್ರಮಗಳ ಪಿಸುಮಾತು, ಗುಣುಗುಣು ಮಾತು ಎದ್ದು ಹರಿದಾಡಲು ತೊಡಗಿದುವು. ಅರೆನಿಮಿಷದಲ್ಲಿಯೆ ಅಮ್ಮವ್ವ ಸಿದ್ದವ್ವೆಯರನ್ನೊಳಗೊಂಡು ಚೆಲುವಬ್ಬೆ ನಾಯಕರ ಕೋಣೆಯೊಳಗೆ ಬಂದಳು. ಆಗಲೇ ನಾಯಕರು ಸುತ್ತುಮುತ್ತ ನೋಡುತ್ತ 'ಚೆಲುವಬ್ಬೆ ಎಲ್ಲಿ?' ಎಂದು ಕೇಳುತ್ತಿರುವಾಗಲೇ 'ನಾನಿಲ್ಲಿ ಇದ್ದೇನೆ ಅಪ್ಪಾಜೀ' ಎಂದು ಬಿಟ್ಟ ಬಾಣದ ಗತಿಯಲ್ಲಿ ಬಂದು ದೇವಪ್ಪನಾಯಕರ ಎದೆಯ ಮೇಲೆ ಮುಖವನ್ನಿರಿಸಿ ಅಳಲುತೊಡಗಿದಳು. ಅವಳನ್ನು ನೋಡಿ ಅಲ್ಲಿದ್ದ ಎಲ್ಲರ ಹೃದಯದಲ್ಲೂ ದುಃಖ ಉಕ್ಕಿತು. ಪ್ರತಿಯೊಬ್ಬರೂ ಬಿಗಿದ ಕಂಠದವರಾಗಿ ಕಂಬನಿಗೈಯ್ಯತೊಡಗಿದರು. ಆಗ ದೇವಣ್ಣನಾಯಕರು 'ಅಳಬೇಡ ಮಗು! ಇನ್ನು ನನಗೇನೂ ಆಗುವುದಿಲ್ಲ. ದೇವರು ನನ್ನನ್ನು ಬದುಕಿಸಿದ' ಎಂದು ನುಡಿಯುತ್ತಿರುವಾಗ ಅವರ ಸುಕ್ಕುಗಣ್ಣುಗಳಿಂದಲೂ ಹನಿಗಳು ಉರುಳುತ್ತಿದ್ದುವು.

"ಅಂದು ದೇವಪ್ಪನಾಯಕರು ಸಂಪೂರ್ಣ ಎಚ್ಚತ್ತಿದ್ದರು; ತಂದೆ ಮಗಳು ಒಂದುಗೂಡಿದರು. ಆದುದರಿಂದ ಚೆಳ್ಳಕೆರೆಯ ಅರಮನೆಗೆ ಹೊಸ ಜೀವನ ಬಂದಂತಾಗಿತ್ತು; ಹಲವು ದಿನಗಳಿಂದ ಮರೆಯಾಗಿ ಹೋಗಿದ್ದ ನಗೆ ಮತ್ತೆ ಮೂಡಿ ನಿಂತಿತ್ತು. ಭೋಗಬ್ಬೆಯ ಆಣತಿಯ ಮೇರೆಗೆ ಚೆಲುವಬ್ಬೆಯ ಕಣ್ಮರೆಯ ಬಗೆಗೆ ಯಾರೂ ಮಾತನಾಡಲಿಲ್ಲ. ಕುತೂಹಲ ತಡೆಯದ ಅಸ್ಥಿರಮನದ ಕೆಲವರು ಸಿದ್ದವ್ವೆ ಅಮ್ಮವ್ವೆ ಆಲದಕೆರೆಗೆ ಹೋದ ಬೇರೆ ಜನ—ಇವರನ್ನು ಕೇಳಿದರೂ ಅವರು ಯಾವ ಮಾತನ್ನೂ ಒಡೆಯಲಿಲ್ಲ. ಹೆಚ್ಚು ಕೇಳಿದಾಗ 'ಮುಂದೆ ಎಲ್ಲ ಮಾತೂ ತಿಳಿಯುವುದು. ಈಗ ಅಷ್ಟೊಂದು ಅವಸರವೇಕೆ ?' ಎಂದು ಹೇಳಿ ಸುಮ್ಮಗಿರಿಸಿದರು.

*  •  •

ಮರುದಿನ ಭೋಗಬ್ಬೆಯ ಗಂಡ ಭೀಮಣ್ಣ ಬೋನಗಾರ ಆಲದಕೆರೆಯಿಂದ ಚೆಳ್ಳಕೆರೆಗೆ ಬಂದ. ಆಗ ಅವನು ಏನೋ ಒಂದು ಭ್ರಾಂತಿ ಹಿಡಿದಂತೆ ಕಾಣುತ್ತಲಿದ್ದ. ಬಾಡಿದ ಮುಖ, ಕುಳಿಬಿದ್ದ ಕಣ್ಣುಗಳು. ಬಳಲಿಹೋದ ಅಂಗಾಂಗಗಳು. ದುಃಖವೇ ಮೂರ್ತಿಗೊಂಡು ಬರುತ್ತಿರುವಂತೆ ಕಾಣುತ್ತಿದ್ದ ಆಲದಕೆರೆಯಿಂದ ಇಲ್ಲಿಯ ವರೆಗೆ ನಡೆದುಕೊಂಡಾದರೂ ಹೇಗೆ ಬಂದಿದ್ದನೋ ಏನೋ ! ದಾರಿಯಲ್ಲಿ ಯಾರು ಮಾತನಾಡಿಸಿದರೂ ಹುಳು ಹುಳು ಅವರನ್ನು ನೋಡುತ್ತಿದ್ದ; ಹಾಗೆಯೆ ಮುಂದೆ ಅಡಿಗಳನ್ನಿಡುತ್ತಿದ್ದ. ಅವನು ದೇಸಾಯಿಯರ ಮನೆಗೆ ಬಂದು ಪಡಸಾಲೆಯಲ್ಲಿ ಕುಸಿದು ಕುಳಿತ. ಪರಿವಾರದ ಜನರೆಲ್ಲರೂ ಬಂದು ಅವನನ್ನು ಸುತ್ತುಗಟ್ಟಿ ನಿಂತರು. ಯಾರೊಡನೆಯೂ ಮಾತನಾಡಲಿಲ್ಲ. ಚೆಲುವಬ್ಬೆ ಮುಂದೆ ಬಂದು ನಿಂತಾಗ ಭೀಮಣ್ಣ ಕಂಬನಿ ಸುರಿಸುತ್ತಲೇ ಹೇಳಿದ :

"ಚೆಲುವಕ್ಕಾ ನನ್ನ ಭೋಗಾ ನಿಮ್ಮ ಕೊನೆಯ ಊಳಿಗ ಮಾಡಿ ಮುಗಿಸಿದಳು !"

ಚೆಲುವಕ್ಕ ಗಾಬರಿಗೊಂಡು ಕೇಳಿದಳು :

"ಯಾಕೆ ಭೀಮಣ್ಣಾ ಭೋಗಬ್ಬೆಯನ್ನು ನೀವು ಪಾರುಮಾಡಲಿಲ್ಲವೆ ?"

"ಅದು ಸಾಧ್ಯವಿಲ್ಲವೆಂಬುದನ್ನು ನಿನ್ನ ಭೋಗಾ ಮೊದಲೇ ತಿಳಿದುಕೊಂಡಿದ್ದಳು. ಎಂತಲೇ ತನ್ನನ್ನು ತಾನೇ ಪಾರಾಗಿಸುವ ಹಂಚಿಕೆಯನ್ನವಳು ಮಾಡಿದ್ದಳು ! ಅಂದು ನಿನ್ನ ಬಳಿಗೆ ಬರುವಾಗ ಜೊತೆಯಲ್ಲಿ ವಿಷದ ಕರಡಿಗೆಯನ್ನು ತೆಗೆದುಕೊಂಡೇ ಬಂದಿದ್ದಳು!"

"ಅಯ್ಯೋ ಭೋಗಬ್ಬೆ ವಿಷವನ್ನು ತೆಗೆದುಕೊಂಡಳೇ" ಎಂದು ಕೂಗಿಕೊಂಡು ನಿಂತಲ್ಲಿಯೆ ಕುಸಿದಳು. ಮತ್ತೆ ಕೇಳಿದಳು :

"ಏನಾಯಿತು — ತಿಳಿಯುವಂತೆ ಹೇಳು ಭೀಮಣ್ಣಾ. ಭೋಗಬ್ಬೆ ಬದುಕಿ ಇದ್ದಾಳೋ ಇಲ್ಲವೋ ? ಏನು ಅವಳ ಸ್ಥಿತಿ ?"

"ಚೆಲುವಕ್ಕಾ ಆ ನನ್ನ ದೇವತಿ, ಸೂರ್ಯ ಚಂದ್ರ ಇರುವ ವರೆಗೂ ಬದುಕಿ ಉಳಿಯುವಂಥಾ ಕೆಲಸಾ ಮಾಡಿ ನನ್ನನ್ನ ಬಿಟ್ಟು ಮ್ಯಾಲ ಹಾರಿ ಹೋದಳು. ವಿಷದಿಂದ ಕಪ್ಪು ಕಪ್ಪಾಗಿ ಹೋದ ಆಕೆಯ ದೇಹವನ್ನು ಸ್ಮಶಾನದೊಳಗ ಸುಡುತ್ತಿರುವುದನ್ನು ಕಣ್ಣಾರೆ ನೋಡಿ, ಕಣ್ಣೀರಿನಿಂದ ಅವಳ ಋಣ ತೀರಿಸಿಯೇ ನಾನು ಇಲ್ಲಿಗೆ ಬಂದೆ!"

"ಅಯ್ಯೋ! ಭೋಗಮ್ಮಾ! ಎಂತಹ ಕೆಲಸ ನಿನ್ನದು? ಯಾರ ಸಲುವಾಗಿ ಯಾರ ಮರಣ?" ಎಂದು ಕೂಗಿ ಅಳಲುತೊಡಗಿದಳು! ಆಗ ಭೀಮಣ್ಣ ಹೇಳಿದ:

"ಅಳಬೇಡ ಚೆಲುವಕ್ಕಾ! ಒಡತಿಯ ಅಭಿಮಾನರಕ್ಷಣೆಗಾಗಿ, ಆಳಿ ಮರಣವನ್ನಪ್ಪಬೇಕೆನ್ನುವ ತನ್ನ ಕರ್ತವ್ಯಧರ್ಮವನ್ನವಳು ಪಾಲಿಸಿ ಹೋಗಿದ್ದಾಳೆ. ಅವಳಿಗಾಗಿ ನಾವು ಅಳುವ ಕಾರಣವೇ ಇಲ್ಲ! ನಮಗಾಗಿ ನಾವು ಅಳಬೇಕು ಇಷ್ಟೆ! ನೀನು ಸಮಾಧಾನ ತಂದುಕೊಳ್ಳು. ಆಕೆ ಮೊನ್ನೆಯ ದಿನವೇ ನನಗೆ ಹೇಳಿದ್ದಳು. ಚೆಲುವಬ್ಬೆ ಕುಮಾರನಾಯಕರ ಮದುವೆಯ ಪ್ರಸಂಗವನ್ನು, ನಾನು ಯಾವ ಲೋಕದಲ್ಲಿಯೇ ಇದ್ದರೂ ನೋಡಿ ಆನಂದಪಡುತ್ತೇನೆ—ಎಂದು. ಮಂಗಲವತಿಯಾಗಲಿರುವ ನೀನು ಕಣ್ಣೀರು ಹಾಕದಿರುವಂತೆ ಹೇಳಲೂ ನನಗೆ ತಿಳಿಸಿದ್ದಾಳೆ."

"ಅಯ್ಯೋ ನನ್ನ, ತಾಯೀ, ಭೋಗಮ್ಮಾ!.." ಎಂದು ಚೆಲುವಾಂಬೆ ಕೂಗಿ ಕೂಗಿ ಅಳಲುತೊಡಗಿದಳು.

ಭೀಮಣ್ಣ "ಅಮ್ಮಾ ನೀನು ಅಳುವನ್ನು ನಿಲ್ಲಿಸು ! ಅಪ್ಪಾಜಿಯವರ ಅಸ್ವಾಸ್ಥ್ಯದ ಕಡೆಗೆ ಲಕ್ಷ್ಯವನ್ನು ಕೊಡು! ಸಮಾಧಾನ ತಂದುಕೋ" ಎಂದು ಅವಳನ್ನು ಸಂತವಿಟ್ಟು ಹೇಳಿದ:

"ನಾನೀಗ ಮನೆಗೆ ಹೋಗಿ ಒಂದು ಮೈಲಿಗೆ ತೊಳೆದುಕೊಂಡು ಬರುತ್ತೇನೆ. ನೀನು ಹೀಗೆ ಅಳುತ್ತ ಕುಳಿತರೆ ನನ್ನ ಆಣೆ ನಿನಗೆ" ಎಂದು ಹೇಳಿ ಭೀಮಣ್ಣ ಮನೆಗೆ ಹೊರಟು ಹೋದ. ಚೆಲುವಬ್ಬೆಯ ಜೀವವು, ಶೋಕ-ಸಮಾಧಾನಗಳ ಮೇಲೆ ಕುಳಿತು ಉಯ್ಯಾಲೆಯಾಡತೊಡಗಿತ್ತು!

ಇದೀಗ ಬೋನಗಿತ್ತಿ ಭೋಗಬ್ಬೆಯ ಕಥೆ, ದೇವಪ್ಪಗೌಡರು ಸಂಪೂರ್ಣವಾಗಿ ಚೇತರಿಸಿಕೊಂಡು ಎದ್ದ ಮೇಲೆ, ಚೆಲುವಬ್ಬೆ ಎಲ್ಲ ಸಂಗತಿಯನ್ನೂ ಅವರಿಗೆ ತಿಳಿಸಿದಳಂತೆ. ಆಕೆಯ ಉತ್ತರಕರ್ಮವನ್ನೂ ವಿಜೃಂಭಣೆಯಿಂದ ಮಾಡಿಸಿದಳಂತೆ. ಮುಂದೆ ಪ್ರತಿವರ್ಷ ಪೌಷ್ಯಶುದ್ಧ ಪಂಚಮಿಯನ್ನು ಭೋಗಬ್ಬೆಯ ಸ್ಮಾರಕ ದಿನವೆಂದು ಆಚರಿಸುವ ರೂಢಿಯನ್ನು ಹಾಕಿಸಿದಳಂತೆ. ಅದೇ 'ಬೋನಗಿತ್ತಿಯ ಹಬ್ಬ' ಎಂಬ ಹೆಸರಿನಿಂದ, ಚೆಳ್ಳಕೆರೆಯ ದೇಸಾಯರಲ್ಲಿ ಇದುವರೆಗೂ ಆಚರಣೆಯಲ್ಲಿದೆ.

ನನ್ನ ಕಥೆ ಮುಗಿದೊಡನೆಯೆ ಸಂಶೋಧನಾಧಿಕಾರಿಗಳು ನುಡಿದರು:

"ಅನಂತ ಅಭಿನಂದನೆಗಳು ನಿಮಗೆ ರಾಯರೆ! ನಮ್ಮನ್ನು ಒಂದು ರಸಸೃಷ್ಟಿಯಲ್ಲಿ ಕುಳ್ಳಿರಿಸಿಬಿಟ್ಟಿರಿ. ಭೋಗಬ್ಬೆಯಂತಹ ತ್ಯಾಗಮೂರ್ತಿಗಳ ಕಥೆಗಳು ನಮ್ಮ ಇತಿಹಾಸದ ಸ್ಮೃತಿಯಿಂದ ಎಷ್ಟು ಮರೆಯಾಗಿ ಹೋಗಿವೆಯೋ! ಇಂತಹ ಇತಿಹಾಸ ಹೊರಗೆ ಬಂದರೆ, ನಮ್ಮ ನಾಡಿಗರಿಗೆ ಅದೊಂದು ಜೀವನದೀಪವಾದೀತು ! ನಾನು ಆ ವನಪಾಲನಾಯಕರಿಗೆ ನಿಮ್ಮ ಹೆಸರನ್ನು ತಿಳುಹುತ್ತೇನೆ. ನಿಮಗೆ ಸಲ್ಲಬೇಕಾದ ಶ್ರೇಯಸ್ಸು ನಿಮಗೆ ಸಲ್ಲಲಿ!"

ಸಹಾಯಕ ಸಂಶೋಧಕರೊಬ್ಬರು ಆತುರ ಧ್ವನಿಯಲ್ಲಿ ಕೇಳಿದರು :

"ಚೆಲುವಬ್ಬೆಯ ಮದುವೆ ಕುಮಾರನಾಯನೊಂದಿಗೆ ಆಗಿರಬಹುದಲ್ಲವೆ?"

ಸಂಶೋಧನಾಧಿಕಾರಿಗಳು ಮೆಲುನಗೆ ನಗುತ್ತ ಹೇಳಿದರು:

"ಮದುವೆಯೂ ಆಗಿರಬಹುದು, ಮಕ್ಕಳೂ ಆಗಿರಬಹುದು; ಮರಿಮಕ್ಕಳನ್ನೂ ಆ ತಾಯಿ ಕಂಡಿರಬಹುದು. ಅದೆಲ್ಲ ನಮಗೆ ಏತಕ್ಕೆ ಬೇಕು? ಬೋನಗಿತ್ತಿಯ ಹಬ್ಬದ ಕಥೆಯ ಮೂಲ ನಮಗೆ ತಿಳಿಯಿತು ಸಾಕು! ಅಂತೂ ಇಂದಿನದು ನಮಗೆ ಸುದಿನದ ದಿನ!"

ಗಡಿಯಾರ 'ಢಣ್. ಢಣ್, ಢಣ್-' ಎಂದು ಆರು ಗಂಟೆಗಳನ್ನು ಬಾರಿಸಿತು. ಸಂಶೋಧನಾಧಿಕಾರಿಗಳ ಅಪೇಕ್ಷೆಯಂತೆ, ನಾವೆಲ್ಲರೂ ಕೂಡಿ ಸಿಟಿ ರೆಸ್ಟೋರೆಂಟಿನ ದಾರಿಯನ್ನು ಹಿಡಿದೆವು. ಭೋಗಬ್ಬೆ ಬೋನಗಿತ್ತಿಯನ್ನು ಕುರಿತ ಮಾತುಗಳಲ್ಲಿಯೇ ನಮ್ಮ ದಾರಿ ಸಾಗಿತ್ತು.



ಅನುಪಮಾ ನಿರಂಜನ



# ೨೧ ವಸಂತಗಳು

ಲೀಲಾವತಿ ಕಣ್ಣು ಅರಳಿಸಿ ಕಿಟಕಿಯ ಪರದೆಯಾಚೆಗೆ ಸುರಿಯುತ್ತಿದ್ದ ಬೆಳಗಿನ ಎಳೆಯ ಬೆಳಕನ್ನು ದಿಟ್ಟಿಸಿದಳು. ಅದು ಶುಭ್ರವಾಗಿತ್ತು; ಸ್ವಚ್ಛಂದವಾಗಿತ್ತು. ದಿನನಿತ್ಯದ ಮಂಜಿನ ಮುಸುಕು ಬೆಳಗನ್ನು ಆವರಿಸಿರಲಿಲ್ಲ. ಅಂದು ತನ್ನ ಪಾಲಿಗೆ ವಿಶೇಷ ದಿನ ಅದಕ್ಕಾಗಿಯೇನು? ಇಪ್ಪತ್ತಾರು ವಸಂತಗಳು ಕಳೆದು ಇಂದು ಹೊಸ ಋತುವಿಗೆ ತಾನು ಅಡಿಯಿರಿಸುತ್ತಿದ್ದೇನೆ. ಚಿಕ್ಕಂದಿನಲ್ಲಿ ಆ ದಿನ ಬಂತೆಂದರೆ, ತನ್ನ ಹುಟ್ಟು ಹಬ್ಬವನ್ನು ಅದೆಷ್ಟು ಸಡಗರದಿಂದ ತಾನು ಆಚರಿಸುತ್ತಿದ್ದೆ! ಗೆಳೆಯರು, ಗೆಳತಿಯರಿಗೆ ಆಹ್ವಾನ, ಬಣ್ಣ ಬಣ್ಣದ ಬೆಲೂನುಗಳ ಶೃಂಗಾರ, ದೊಡ್ಡ ಕೇಕಿನ ಮೇಲೆ ಅಚ್ಚೊತ್ತಿದ್ದ ಅಕ್ಷರಗಳ Happy Birthday Leelavathi, ಹಾಡುಗಳು ನಗು ಚಪ್ಪಾಳೆ ಕೇಕಿನ ಮೇಲೆ ಬೆಳಗಿಸಿದ ಕ್ಯಾಂಡಲ್ ಗಳನ್ನು ಒಂದೇ ಬಾರಿಗೆ ಊದಿ ತಾನು ಆರಿಸಬೇಕು, ಒಂದು, ಎರಡು, ಮೂರು ಹೀಗೆ ಕ್ಯಾಂಡಲ್ ಗಳ ಸಂಖ್ಯೆ ಬೆಳೆದುಕೊಂಡು ಹೋಗಿತ್ತು. ಈಗ ಮೂರು ವರ್ಷಗಳಿಂದ ಈ ಸಂಭ್ರಮವಿಲ್ಲ. ತಂದೆ ತಾಯಿಯರನ್ನು ಬಿಟ್ಟು ದೂರದ ಲಂಡನ್ ನಗರಕ್ಕೆ ತಾನು ಬಂದಿದ್ದ. ತಾನೀಗ ಚಿಕ್ಕ ಹುಡುಗಿಯಲ್ಲ ಎಫ್. ಆರ್. ಸಿ. ಎಸ್. ಪಾಸು ಮಾಡಿಕೊಂಡ ವಿಖ್ಯಾತ ವೈದ್ಯಳು.

ಹುಟ್ಟುಹಬ್ಬದ ದಿನವಾದರೂ ತಾನು ಬೇಗ ಏಳಬೇಕು ಎಂದುಕೊಳ್ಳುತ್ತಾ ದಪ್ಪಗಿನ ಹೊದಿಕೆಯನ್ನು ಬದಿಗೆ ಸರಿಸಿ ಮೇಲೆದ್ದಳು. ಬೆಂಕಿಯ ಗೂಡಿನ ಆರಿಹೋಗುತ್ತಿದ್ದ ಇದ್ದಿಲುಗಳನ್ನು ಕೆದರಿ, ಬಚ್ಚಲುಮನೆಗೆ ಹೋಗಿ ಮುಖ ತೊಳೆದು ಬಂದಳು. ತನ್ನ ನೀಳವಾದ ಕೂದಲನ್ನು ಬಿಡಿಸಿ, ಬಾಚಿ ಜಡೆ ಹೆಣೆದುಕೊಳ್ಳುತ್ತಿರುವಾಗ ಹೊರಗಿನಿಂದ ಕರೆಗಂಟೆಯ ಸದ್ದಾಯಿತು.

ಪಕ್ಕದ ಕೊಠಡಿಯ ಮಾರ್ಗರೆಟ್ ಇರಬೇಕು. ಕೆಲಸಕ್ಕೆ ಹೋಗುವ ಮುನ್ನ ತನಗೆ ಶುಭಾಶಯ ಹೇಳಲು ಬಂದಿದ್ದಾಳೆ, ಎಂದುಕೊಳ್ಳುತ್ತಾ ಲೀಲಾವತಿ ಬಾಗಿಲು ತೆರೆದಳು.

ಮೆಟ್ಟಿಲ ಮೇಲೆ ಯುವಕ ಜಾರ್ಜ್ ಬ್ಯಾರಿಮೂರ್ ನಿಂತಿದ್ದ. ಆರಡಿ ಎತ್ತರದ ಕೆಂಪು ಮೊಗದ ಕಂದು ಕೂದಲಿನ, ನೀಲಿಗಣ್ಣಿನ ಚೆಲುವ. ಅವನು ಧರಿಸಿದ್ದ ಬೂದು ಬಣ್ಣದ ಸೂಟಿಗೆ ಒಪ್ಪುತ್ತಿದ್ದ ದಟ್ಟ ನೀಲಿಯ ಟೈ. ಕೈಗಳಲ್ಲಿ ಹಿಡಿದಿದ್ದ ಡಫೊಡಿಲ್ ಹೂ ಗುಚ್ಛ.

"ಹಲೋ ಜಾರ್ಜ್," ಎಂದಳು ಲೀಲಾವತಿ ಆಶ್ಚರ್ಯ ಸಂತೋಷಗಳಿಂದ.

"ಹಲೋ" ಎಂದು ನಗೆಯನ್ನು ಚೆಲ್ಲಿ ಒಳ ಬಂದ ಜಾರ್ಜ್ ತುಸು ಬಾಗಿ ಹೂಗಳನ್ನು ಲೀಲಾವತಿಗೆ ಅರ್ಪಿಸುತ್ತಾ ಆತ್ಮೀಯತೆಯಿಂದ ನುಡಿದ,

"Many happy returns ಲೀಲಾ"

ಅವಳು ಹೂಗಳನ್ನು ತೆಗೆದುಕೊಂಡು, ಥ್ಯಾಂಕ್ಸ್ ಹೇಳಿದಳು. ಅವುಗಳನ್ನೆತ್ತಿ ಎದೆಗೊತ್ತಿಕೊಂಡು ಮೂಸಿದಳು. ಹಸಿರು ಎಲೆಗಳ ಮಧ್ಯೆ ಅರಳಿ ನಿಂತ ಸುಮಗಳು ಅವಳ ಮನಸ್ಸನ್ನು ತಣಿಸಿದುವು. ಪ್ರತಿಬಾರಿಯೂ ಹುಟ್ಟುಹಬ್ಬಕ್ಕಾಗಿ ತಂದೆ ಕೊಡಿಸುತ್ತಿದ್ದ ಉಡುಗೊರೆಗಳ ನೆನಪಾಯಿತು ಅವಳಿಗೆ. ಒಮ್ಮೆ ಗಡಿಯಾರ ಇನ್ನೊಮ್ಮೆ ಮುತ್ತಿನ ಸರ ಮಗದೊಮ್ಮೆ ಬೆಲೆಬಾಳುವ ಬನಾರಸ್ ಸೀರೆ ಊಹೂ ಈ ಹೂಗಳ ಶ್ರೇಷ್ಠತೆಗೆ ಅವ ಯಾವುವೂ ಸಮನಲ್ಲ.

"ಏನು ಯೋಚಿಸ್ತಿದೀ ಲೀಲ?"

"ಅಪ್ಪ ಅಮ್ಮನ ನೆನಪಾಯ್ತು."

"ನಿಂಗೆ ಇಲ್ಲಿ ಒಬ್ಬಳೇ ಬೇಜಾರು ಅನಿಸ್ತದೇನು? ಅದಕ್ಕೆಂದೇ ನಾ ನಿಮಿಷ ಇಲ್ಲಿಗೆ ಬಂದೆ"

ಲೀಲಾವತಿ ಮಂದಹಾಸ ಬೀರಿ ಕೇಳಿದಳು.

"ಆಸ್ಪತ್ರೆಗೆ ಹೋಗೊಲ್ಲವೇನು?"

"ಇಲ್ಲ."

"ಧನ್ಯವಾದ. ನೀನು ಬಹು ಒಳ್ಳೆಯ ಹುಡುಗ ಜಾರ್ಜ್," ಎಂದು ಹೂಗಳನ್ನು ಟೀಪಾಯಿಯ ಮೇಲಿರಿಸಿ "ಕೂತ್ಕೋ ಈ ಪತ್ರಿಕೆಗಳ್ನ ನೋಡ್ತಿರು! ಹತ್ತು ನಿಮಿಷದಲ್ಲಿ ಟೋಸ್ಟ್ ಮಾಡಿ ತರ್ತೀನಿ," ಎನ್ನುತ್ತಾ ಒಳ ಹೋದಳು.

ಮರಳುತ್ತಿದ್ದ, ನೀರನ್ನು ಕಾಫಿ ಕೆಟಲಿಗೆ ಸುರಿದು ಟೋಸ್ಟರನ್ನು ಸಿದ್ಧಗೊಳಿಸಿ ಲೀಲಾವತಿ 'ಜಾರ್ಜ್ ಒಳ್ಳೆಯ ಹುಡುಗ' ಎಂದು ಮತ್ತೆ ಅಂದುಕೊಂಡಳು. ಭಾರತ ಬಿಟ್ಟು ಓದುವ ಹಟದಿಂದ ಆ ನಗರಕ್ಕೆ ಬಂದಿದ್ದ ತನಗೆ ಮೊದಲ ವರ್ಷ ಏಕಾಕಿತನ ಅಂಟಿಕೊಂಡಿತ್ತು. ಹಲವು ಬಾರಿ ಊರಿಗೆ ಮರಳೋಣ ಎಂಬ ಅನಿಸಿಕೆಯಾಗುತ್ತಿತ್ತು. ಹಾಗೆ ಯೋಚಿಸಿದೊಡನೆ ತಾಯಿಯ ಹಟ ಅವಳ ಕಣ್ಣ ಮುಂದೆ ನಿಲ್ಲುತ್ತಿತ್ತು. 'ಎಂ. ಬಿ. ಬಿ. ಎಸ್. ಓದಿದ್ದು ಸಾಲದೆ? ಇನ್ನಾದ್ರೂ ಲೀಲೂಗೆ ಮದ್ವೆ ಮಾಡೀಂದ್ರೆ. ಇಪ್ಪತ್ತೆರಡು ದಾಟಿದ್ರೂ ಇನ್ನೂ ಓದೋದು ಏನು ಚೆನ್ನ? ಅದೂ ದೂರದ ವಿಲಾಯತಿಯಲ್ಲಿ? ಬೇಡವೇ ಬೇಡ. ಇರೋಳೊಬ್ಳು ಮಗ್ಳು. ನಮ್ಮ ಕಣ್ಮುಂದೇನೇ ಇರ್ಲಿ!,' ತಂದೆ ಮಾತ್ರ ಯಾವಾಗಲೂ ತನ್ನ ಕಡೆಯೆ. 'ನಿಜವಾಗ಼್ಲೂ ಎಫ್. ಆರ್. ಸಿ. ಎಸ್. ಮಾಡ್ಕೋಬೇಕು ಅಂತ ನಿಂಗೆ ಆಸೆಯಿದ್ರೆ ಖಂಡಿತ ಹೋಗು ಲೀಲು. ನಿನ್ನ ಬಯಕೆಗೆ ನಾನು ಅಡ್ಡಿ ಬರೋದಿಲ್ಲ', ಎಂದಿದ್ದರು ತಂದೆ. ಕುಂಟುತ್ತಾ ಸಾಗಿತ್ತು ಮೊದಲ ವರ್ಷ.

…ಒಂದು ದಿನ ಕಾಲೇಜಿಗೆ ಹೋಗಲು ತಡವಾಗಿ ಯಾವ ವಾಹನವೂ ಸಿಕ್ಕದೆ ತಾನು ಚಡಪಡಿಸುತ್ತಾ ನಿಂತಿದ್ದಾಗ ತನ್ನ ಕಾರಿನಲ್ಲಿ ಹೋಗುತ್ತಿದ್ದ ಜಾರ್ಜ್ ದಾರಿಯ ಬದಿಗೆ ವಾಹನ ನಿಲ್ಲಿಸಿ ಕೇಳಿದ್ದ,

'ಕಾಲೇಜಿಗೆ ಬರ್ತೀರೇನು?'

'ಹೌದು'

'ಹಾಗಾದ್ರೆ ಹತ್ತಿ. ತಡವಾಗ್ತಿದೆ'

ಸದಾ ಹಸನ್ಮುಖಿ. ಹೆಚ್ಚಿನ ಮಾತಿಲ್ಲ. ಆದರೆ ಸ್ನೇಹಮಯಿ. ಅಂದಿನಿಂದ ತಮ್ಮ ಸ್ನೇಹ ಚಿಗುರತೊಡಗಿತ್ತು ಜಾರ್ಜ್ ಸಹ ತನ್ನ ತರಗತಿಯವನೇ. ಬಲು ಚುರುಕು ಹುಡುಗ. ವಿದ್ಯಾರ್ಥಿನಿಯರತ್ತ ಕೊಂಕು ನೋಟವಿಲ್ಲ, ಅಪಹಾಸ್ಯದ ಮಾತಿಲ್ಲ. ತರಗತಿಯಲ್ಲಿ ತನಗೆ ಅರ್ಥವಾಗದ ಪಾಠಗಳನ್ನು ವಿವರಿಸುತ್ತಿದ್ದ. ಶಸ್ತ್ರಕ್ರಿಯೆ ಮಾಡುವಾಗ ತನಗೆ ನೆರವಾಗಿ ಅದೆಷ್ಟೋ ರೀತಿಯ ತೊಂದರೆಗಳನ್ನು ಪರಿಹರಿಸಿದ್ದ. ತಾವಿಬ್ಬರೂ ಒಟ್ಟಿಗೆ ಪರೀಕ್ಷೆ ಓದಿಕೊಳ್ಳುತ್ತಿರುವಾಗ ಒಮ್ಮೆ ಅನಿಸಿತ್ತು ತಾನು ಅವನಲ್ಲಿ ಅನುರಕ್ತಳಾಗಿದೇನೆಯೇ ಎಂದು.

ತಾಯಿ ಅಂದಿದ್ದಳು.

'ಅಲ್ಲಿ ಯಾರನ್ನಾದ್ರೂ ಅವ್ಳು ಮದ್ವೆ ಮಾಡಿಕೊಂಡ್ರೆ ಏನುಗತಿ?'

'ಏನೂ ಹೆದರ್ಕೋ ಬೇಡ. ನಿನ್ನ ಮಗ್ಳು ಹಾಗೆಲ್ಲಾ ಮಾಡೋಳಲ್ಲ ತನ್ನ ಕೆಲ್ಸ ಮುಗಿದೊಡನೆ ಕ್ಷೇಮವಾಗಿ ವಾಪ್ಸು ಬರ್ತಾಳೆ,' ತಂದೆಯ ಉತ್ತರ.

ತಾನು ಕ್ಷೇಮವಾಗಿ ವಾಪ್ಸು ಹೋಗ್ತೇನೆಯೆ? ಕಗ್ಗಂಟಿನಲ್ಲಿ ತಾನು ಸಿಕ್ಕಿಹಾಕಿಕೊಳ್ಳುತ್ತಿಲ್ಲವಷ್ಟೆ?



ಸೀದ ವಾಸನೆ ಬಂದು ಲೀಲಾವತಿ ಸ್ವಿಚ್ ಆಫ್ ಮಾಡಿ ಟೋಸ್ಟರನ್ನು ಕೆಳಗಿಳಿಸಿದಳು. ತಟ್ಟೆಯಲ್ಲಿ ಬ್ರೆಡ್ಡನ್ನೂ ಜ್ಯಾಮ್, ಸಾಸ್‌ಗಳನ್ನೂ ಕಾಫಿ ಕೆಟಲನ್ನೂ ಇಟ್ಟುಕೊಂಡು ಹೊರಗೆ ಬಂದಳು. ಅದನ್ನು ಮೇಜಿನ ಮೇಲಿಡಲು ಜಾರ್ಜ್ ನೆರವಾದ

ಲೀಲಾವತಿ ಬ್ರೆಡ್ಡಿಗೆ ಬೆಣ್ಣೆಯನ್ನು ಹಚ್ಚಿ ಅವನಿಗೆ ಕೊಟ್ಟಳು. ಅವನು ಅದರ ರುಚಿ ನೋಡುತ್ತಾ,

"ಸೊಗಸಾಗಿದೆ. ಡಾಕ್ಟರಾಗಿರುವಾಕೆ ಇಷ್ಟು ಚೆನ್ನಾಗಿ ತಿಂಡಿಯನ್ನೂ ಮಾಡುತ್ತಾಳೆಂದರೆ ಆಶ್ಚರ್ಯದ ಸಂಗತಿ!" ಎಂದು ಹೊಗಳಿದ.

ಅವಳ ಕೆನ್ನೆಗಳು ಕೆಂಪಾದವು.

ಹಿಂದೊಮ್ಮೆ ಜಾರ್ಜ್ ಅಂದಿದ್ದ.

'ಈ ಸೀರೆ ನಿಮಗೆ ಎಷ್ಟು ಚೆನ್ನಾಗಿ ಒಪ್ಪುತ್ತೆ ಅಂತ! ಪ್ರಪಂಚದಲ್ಲಿ ಎಲ್ಲ ಉಡುಪುಗಳಿಗಿಂತ ಭಾರತೀಯ ವಸ್ತ್ರಗಳನ್ನು ಕಂಡ್ರೆ ನಂಗೆ ಅತಿ ಪ್ರೀತಿ'

'ಭಾರತೀಯ ಯುವತಿಯರನ್ನೇ ಕಂಡ್ರೆ?'

'ಅದ್ರಲ್ಲೂ ನಿನ್ನಂಥ ನೀಳ ಜಡೆಯ ಚೆಲುವೆಯರನ್ನು ಕಂಡ್ರೆ ನಾನು ಮೋಸ ಹೋಗೋದ್ರಲ್ಲಿ ಆಶ್ಚರ್ಯವಿಲ್ಲ.'

ಅದನ್ನು ಕೇಳಿ ಅವಳು ಮೆಲುವಾಗಿ ನಕ್ಕಿದ್ದಳು.

'ಏನೇ ಆಗಲಿ ಎರಡು ಸಂಸ್ಕೃತಿಗಳು ಒಟ್ಟಾಗಿ ಬೆರೆಯುವುದು ಸಾಧ್ಯವೇ ಇಲ್ಲ ಜಾರ್ಜ್!'

'ಸಹೃದಯತೆಯಿದ್ದರೆ ಯಾಕೆ ಸಾಧ್ಯವಿಲ್ಲ?'

ಆದರೂ ಅವಳಿಗೆ ನಂಬಿಕೆಯಿಲ್ಲ. ತಾನು ಜಾರ್ಜನಿಗೆ ಯಾವ ರೀತಿಯಿಂದಲೂ ಸಲುಗೆಯನ್ನು ಕೊಡಕೂಡದು. ಎಂದೇ ಇರಲಿ ತಾನು ಹಿಂತಿರುಗಿ ಹೋಗುವವಳು. ಈ ನಗರಕ್ಕೆ ತಾನು ಯಾವಾಗಲೂ ಪರಕೀಯಳೇ ಹೊರತು ಬೇರೆಯಲ್ಲ ಆದರೂ ಅವರಿಬ್ಬರೂ ಜೊತೆಯಾಗಿರುವುದನ್ನು ಕಂಡ ಸಹಪಾಠಿಗಳು ಲೀಲಾವತಿಯನ್ನು ಕೇಳಿದುದುಂಟು:

'ಮಿಸ್ ಲೀಲಾವತಿ, ಜಾರ್ಜ್‌ಬ್ಯಾರಿ ಮೂರರನ್ನು ನೀವು ವಿವಾಹವಾಗುವಿರೇನು?'

ಇಲ್ಲ ಅಥವಾ ಹೌದು ಎಂದು ಒಂದೇ ಮಾತಿನಲ್ಲಿ ಉತ್ತರವನ್ನು ತಾನು ಹೇಳಿಬಿಡಬಹುದಿತ್ತು. ಆದರೂ ಅವರ ಹಾಸ್ಯಕ್ಕೆ ಒಗಟಿನ ಉತ್ತರವೇ ಸರಿಯೆಂದು ತಾನು ಮರುನುಡಿದಿದ್ದೆ:

'ಯಾಕಾಗಬಾರದ್ದು?'

ಅದನ್ನು ನೆನೆದು ಲೀಲಾವತಿ ಮುಗುಳು ನಕ್ಕಳು. ಅವಳ ತುಟಿಗಳಲ್ಲಿ ನಗೆ ಅರಳಿತೆಂದು ಜಾರ್ಜನೂ ಮಂದಸ್ಮಿತನಾದ.

ಲೀಲಾವತಿಯೆಂದಳು:

''ಜಾರ್ಜ್, ಇನ್ನು ನಾಲ್ಕು ದಿವ್ಸಗಳಲ್ಲಿ ನಾನು ಭಾರತಕ್ಕೆ ಹೊರಡ್ತೀನಿ.''

ಜಾರ್ಜ್ ಮೇಜಿನ ಮೇಲಿದ್ದ ಅವಳ ಕೈಯನ್ನು ಹಿಡಿದು ಅನುರಾಗ ತುಂಬಿದ ದೃಷ್ಟಿಯನ್ನು ಅವಳ ಮೇಲೆ ಚೆಲ್ಲಿ ಕೇಳಿದ:

"ಹೋಗ್ಲೇಬೇಕೇ ಲೀಲ?"

ತನ್ನ ಕೈಗಳನ್ನು ಬಿಡಿಸಿಕೊಳ್ಳುತ್ತಾ ಲೀಲಾವತಿ ಅವನತಮುಖಿಯಾಗಿ ಮೆಲ್ಲನೆ ನುಡಿದಳು:

"ಹೌದು ಜಾರ್ಜ್."

"ಹಾಗಾದ್ರೆ ನನ್ನ ಕೋರಿಕೆಯೊಂದಿದೆ. ಇವತ್ತು ನೀನು ಬಿಡುವಾಗಿದೀಯಲ್ಲ? ಹಳ್ಳಿಯಲ್ಲಿರೋ ನನ್ನ ತಾಯಿ ಮನೆಗೆ ಹೋಗ್ಬರೋಣ. ಬರ್ತಿಯ ತಾನೆ?"

ಅಲ್ಲಿಗೆ ತಾನು ಹೋಗುವುದು ಸರಿಯಲ್ಲ ಎನಿಸಿದರೂ ಜಾರ್ಜನ ತಾಯಿಯನ್ನು ನೋಡಬೇಕೆನ್ನುವ ಬಲವತ್ತರವಾದ ಆಸೆ. ಇಂಗ್ಲೆಂಡಿನ ಹಳ್ಳಿಗಳನ್ನು ತಾನಿನ್ನು ಕಾಣುವುದು ಯಾವಾಗಲೋ! ಅವುಗಳ ಚೆಲುವು ಬೆಡಗುಗಳನ್ನು ಈಗಲೇ ಮನದಣಿಯೆ ನೋಡಬೇಕು ಎಂಬ ಬಯಕೆ ಒಂದೆಡೆಗೆ. ಜಾರ್ಜನ ಒತ್ತಾಯದ ಕರೆಯನ್ನು ತಿರಸ್ಕರಿಸುವ ಇಷ್ಟವೂ ಇಲ್ಲ ಅವಳಿಗೆ.

"ಆಗಲಿ," ಎಂದಳು ದೃಢ ನಿರ್ಧಾರದಿಂದ.

ತಾಯಿಗೆ ಕೊಂಡೊಯ್ಯಲೆಂದು ಕೆಲವು ಸಾಮಾನುಗಳನ್ನು ತರಲು ಜಾರ್ಜ್ ಪೇಟೆ ಬೀದಿಗೆ ಹೋದ. ಲೀಲಾವತಿ ಲಗುಬಗೆಯಿಂದ ಸ್ನಾನವುಗಿಸಿ ತಲೆ ಬಾಚಿ ಮತ್ತೆ ಜಡೆ ಹೆಣೆದುಕೊಂಡಳು. [ತುರುಬಿಗಿಂತ ಜಾರ್ಜ್‌ನಿಗೆ ಜಡೆಯೇ ಇಷ್ಟ] ಹವಳದ ಓಲೆ, ಬಳೆ, ನೆಕ್‌ಲೇಸ್‌ಗಳನ್ನು ಧರಿಸಿದಳು. ಬಿಳಿಯ ಒಡಲಿನ ಕೆಂಪು ಜರತಾರೀ ಅಂಚಿನ ರೇಷ್ಮೆ ಸೀರೆಯನ್ನುಟ್ಟಳು. ಡಫೊಡಿಲ್ ಹೂವನ್ನು ಜಡೆಗೆ ಸಿಕ್ಕಿಸಿಕೊಂಡಳು. ಹಣೆಗೆ ದುಂಡಗಿನ ಕುಂಕುಮವನ್ನಿಟ್ಟಳು.




ಸಿಂಗಾರವಾಗಿ ಬಂದ ಅವಳನ್ನು ಕಂಡ ಜಾರ್ಜ್,

"You look like a queen!" ಎಂದು ಉದ್ಗಾರ ತೆಗೆದ.

ಕಾರು ಲಂಡನ್ ನಗರ ದಾಟಿ ಪಶ್ಚಿಮಾಭಿಮುಖವಾಗಿ ತೆರಳಿತು. ಹಲವು ಮೈಲುಗಳು ದಾಟಿದ ಮೇಲೆ ನಗರದ ಗದ್ದಲ ಕಡಮೆಯಾಗಿ ಪ್ರಕೃತಿಯ ವೈಭವ ತಾನೇತಾನಾಗಿ ಗೋಚರಿಸಿತು. ಕಣಿವೆ, ಗುಡ್ಡಗಳು ಹಸಿರು ತುಂಬಿದ ಕಾನನಗಳು, ಮಂಜು ಮುಸುಕಿದ ಶಿಖರಗಳು ಇವನ್ನೆಲ್ಲಾ ದಿಟ್ಟಿಸುತ್ತಾ ಮೌನವಾಗಿ ಕುಳಿತ ಲೀಲಾವತಿಯನ್ನು ಕಂಡ ಜಾರ್ಜ್ ಕೇಳಿದ:

"ನಿನ್ನ ಸ್ನೇಹಿತೆ ಮೂಕಿಯೇನು ಎಂದು ನನ್ನ ತಾಯಿ ಕೇಳಿದ್ರೆ ಏನು ಹೇಳಲಿ?"

"ಅದಕ್ಕೆ ನಾನು ಉತ್ತರ ಕೊಡುತ್ತೇನೆ." ಎಂದಳು ಅವಳು ಅಷ್ಟೇ ವಿನೋದವಾಗಿ.

ಜಾರ್ಜ್ ಇದ್ದಕ್ಕಿದ್ದಂತೆ ಕಾರು ನಿಲ್ಲಿಸಿ ಅವಳ ಬದಿಗೆ ಸರಿದು ಕೇಳಿದ

"ಲೀಲಾ, ನೀನು ಭಾರತಕ್ಕೆ ಹೋಗೋ ಮುನ್ನ ನಾವಿಬ್ರು ನಿಶ್ಚಿತಾರ್ಥ ಮಾಡಿಕೊಳ್ಳೋಣ್ವೆ?"

ಆ ಪ್ರಶ್ನೆ [ಎಷ್ಟೇ] ನಿರೀಕ್ಷಿತವಾದದ್ದಾದರೂ ಲೀಲಾವತಿ ಅದನ್ನು ಕೇಳಿ ಹೌಹಾರಿದಳು. ಯಾಚನೆಯ ಧ್ವನಿಯಲ್ಲಿ ಅವಳೆಂದಳು:

"ಪ್ಲೀಸ್ ಜಾರ್ಜ್, ಅದೊಂದು ವಿಷಯದಲ್ಲಿ ನನ್ನ ಬಲವಂತ ಮಾಡ್ಬೇಡ. ಊರಿಗೆ ಮರಳಿ ತಂದೆ ತಾಯಿಗಳ ಒಪ್ಪಿಗೆ ಪಡೆಯದೆ ಆ ಕೆಲ್ಸ ನಾನು ಮಾಡ್ಲಾರೆ."

"ಅವರು ಒಪ್ಪದೆ ಹೋದ್ರೆ?"

ಆ ಪ್ರಶ್ನೆ ಲೀಲಾವತಿಯನ್ನೂ ಕಾಡಿಸಿತ್ತು. ಅವರು ಒಪ್ಪದಿದ್ದರೂ ಜಾರ್ಜನ ಕೈ ಹಿಡಿಯುವ ಧಾರ್ಷ್ಟ್ಯ ತನ್ನಲ್ಲಿತ್ತೆ? ಚಿಕ್ಕಂದಿನಿಂದ ಒಬ್ಬಳೆ ಮಗಳೆಂದು ಅಕ್ಕರೆಯಿಂದ ಬೆಳೆಸಿ ದೊಡ್ಡವಳನ್ನಾಗಿ ಮಾಡಿದ ಮಾತಾಪಿತೃಗಳಿಗೆ ತಾನು ದ್ರೋಹ ಬಗೆಯುವುದೆ? ತಾಯಿ ಈ ಸಂಬಂಧಕ್ಕೆ ಎಂದಿಗೂ ಒಪ್ಪಿಗೆ ಕೊಡಲಾರಳು. ತಂದೆ?

"ಇನ್ನೆಷ್ಟು ದಿವ್ಸ ನಿನಗಾಗಿ ನಾನು ಕಾಯ್ಬೇಕು ಲೀಲ?"

ಅದೇ ಪ್ರಶ್ನೆಯನ್ನು ತಾಯಿಯೂ ಕೇಳಿದ್ದಳು 'ಗಿರಿಧರ ಇನ್ನೆಷ್ಟು ದಿವ್ಸ ನಿನಗಾಗಿ ಕಾಯ್ಬೇಕು?' ಗಿರಿಧರ ತನಗೆ ದೂರದ ಸಂಬಂಧಿ. ಬಡತನದಲ್ಲೇ ಬೆಳೆದು ಎಂಜಿನೀಯರಿಗ್ ಪದವೀಧರನಾದ ಸಮರ್ಥ. ತಂದೆಯ ಕೃಪಾಕಟಾಕ್ಷದಿಂದ ಅತ್ಯಂತ ಯೋಗ್ಯವಾದ ಹುದ್ದೆಯನ್ನು ಪಡೆದನು. ಅವನದೂ ಜಾರ್ಜನದೇ ರೀತಿಯ ಚೆಲುವು, ನಗೆ. ಶ್ಯಾಮಲಕಾಯ ಆದರೆ ಜಾರ್ಜನಿಗಿಂತ ಸ್ಫುಟವಾದ ಮೂಗು ಕಣ್ಣು, ತುಟಿಗಳು. ತನ್ನನ್ನು ಕಂಡೊಡನೆ ಆದರ ಪ್ರೇಮಗಳು ತುಂಬಿ ತುಳುಕುತ್ತಿದ್ದ ನೋಟ. ತಾನು ಲಂಡನ್ನಿಗೆ ಹೊರಡುವುದು ನಿಶ್ಚಿತವಾದಾಗ ತಾಯಿ ಹೇಳಿದಳು:

'ಗಿರಿಧರನೊಂದಿಗೆ ಮದ್ವೆ ಮಾಡಿಕೊಂಡೇ ಅವಳು ಹೋಗ್ಲಿ.'

'ಮದ್ವೆಯಾದ್ಮೇಲೆ ಓದೋಕಾಗುತ್ತೇನೆ?'

ಹಾಗಾದರೆ? ಗಿರಿಧರನೇ ಸಮಸ್ಯೆ ಪರಿಹರಿಸಿದ್ದ

'ಮೂರು ವರ್ಷಗಳು ಕಾಯುವುದೇನೂ ಹೆಚ್ಚಲ್ಲ. ಲೀಲಾ ಓದು ಮುಗಿಸಿಕೊಂಡು ಬರ್ಲಿ.'

ಅವನ ಸಂಯಮ ಅವಳಿಗಾಗ ಮೆಚ್ಚುಗೆಯಾಗಿತ್ತು. ತನ್ನ ಓದು ಕೊನೆಯ ಘಟ್ಟ ಮುಟ್ಟತೊಡಗಿದಾಗ ತಾಯಿಯಿಂದ ಬಂದ ಆ ಪತ್ರಕ್ಕೆ ಲೀಲಾವತಿ ಮಾರುತ್ತರಿಸಿದ್ದಳು. 'ಗಿರಿಧರ ನನಗಾಗಿ ಕಾಯೋದು ಬೇಡ. ಅವರಿಗಿಷ್ಟವಿದ್ದವರನ್ನ ಮದುವೆಯಾಗ್ಲಿ?'

ಇದರ ಒಳಗುಟ್ಟೇನು? ತಾನು ಅವನ ಮಡದಿಯಾಗಲಾರೆ, ತನ್ನ ಮನಸ್ಸು ಬೇರೆ ಯಾರಿಗೋ ಅರ್ಪಿತವಾಗಿದೆಯೆಂದೆ? ಹಾಗೆ ಬರೆಯಲು ತನಗೇಕೆ ಧೈರ್ಯವಿಲ್ಲ? ತನ್ನ, ಜಾರ್ಜನ ಪ್ರೇಮ ಸಾಕಷ್ಟು ಆಳವಾಗಿಲ್ಲವೆ? ಅವನನ್ನು ವಿವಾಹವಾಗಲು ತಾನೇಕೆ ಹಿಂದೇಟು ಹಾಕುತ್ತಿದೇನೆ? ಸತಿಪತಿಯರ ಪವಿತ್ರ ಬಂಧನಕ್ಕೆ ಬಲವೊಂದೇ ಸಾಕೆ? ಸಂಸ್ಕೃತಿ, ಧರ್ಮಗಳ ಸಮನ್ವಯವೂ ಆಗಬೇಡವೆ? ತಾನು ಡಾಕ್ಟರು. ಇಂಥ ಸಣ್ಣ ವಿಷಯಗಳಿಗೆಲ್ಲಾ ತಾನು ಮಹತ್ವ ಕೊಡಲೇ ಬಾರದು ಆದರೂ ಮನಸ್ಸು ಒಡಂಬಡದು. ಆತುರದ ನಿರ್ಧಾರ ಸರಿಯಲ್ಲ ಸರಿಯಲ್ಲವೇ ಅಲ್ಲ.

ಕಣಿವೆಯಲ್ಲಿನ ಕಾಫಿತೋಟಗಳನ್ನು ಹಾದು ಅವರು ಸಮ ತಟ್ಟು ಪ್ರದೇಶವೊಂದಕ್ಕೆ ಬಂದರು. ಅಲ್ಲಿದ್ದ ಹತ್ತಾರು ಮನೆಗಳಲ್ಲಿ ಉತ್ತರದ ಮೂಲೆಗಿದ್ದ ಮನೆಯತ್ತ ಬೊಟ್ಟು ಮಾಡಿ,

"ಅಲ್ಲೇ ತಾಯಿ ವಾಸಿಸೋದು," ಎಂದ ಜಾರ್ಜ್.

ಇಬ್ಬರೂ ಕೆಳಗಿಳಿದರು. ಸೊಗಸಾದ ಉದ್ಯಾನವನ್ನು ದಾಟಿ ಮನೆಯೊಳಹೊಕ್ಕರು. ಕಪ್ಪು ಪೂಡಲ್ ನಾಯಿಯೊಂದು ಜಾರ್ಜನ ಮೇಲೆ ಜಿಗಿದು ಪರಿಚಯದ ಪ್ರೀತಿಯನ್ನು ಪ್ರದರ್ಶಿಸಿತು. ಒಳಬಾಗಿಲಿನಲ್ಲಿ ಕಂಡ ಬಿಳಿಗೂದಲ ವೃದ್ಧೆಯೊಬ್ಬರು, "ಯಾರು? ಜಾರ್ಜನೇನು?" ಎಂದು ಕೇಳಿದರು.

ಆಕೆ ಕಂದುಬಣ್ಣದ ಫ್ರಾಕನ್ನು ತೊಟ್ಟಿದ್ದರು. ಕಣ್ಣಿಗೆ ಬಿಳಿಯ ಫ್ರೇಮಿನ ಕನ್ನಡಕವೊಂದಿತ್ತು. ಬೊಜ್ಜು ಮೈ. ಕೀಲುನೋವಿನಿಂದಾಗಿ ಆಕೆ ಕುಂಟುತ್ತಾ ನಡೆಯುತ್ತಿದ್ದರು.

ಎದುರಿಗೇ ಬಂದು ನಿಂತ ಆಕೆ ಲೀಲಾವತಿ

ಯನ್ನು ಕೌತುಕದಿಂದ ದಿಟ್ಟಿಸಿದಾಗ ಜಾರ್ಜ್ ಪರಿಚಯ ಮಾಡಿಕೊಟ್ಟ,

"ನನ್ನ ಸ್ನೇಹಿತೆ, ಸಹಪಾಠಿ, ಮಿಸ್ ಲೀಲಾವತಿ ಇವರು ನನ್ನ ತಾಯಿ ಮಿಸೆಸ್ ಬ್ಯಾರಿಮೂರ್"

ಲೀಲಾವತಿ ನೀಡಿದ ಕೈಯನ್ನು ಆಕೆ ಉಪಚಾರಕ್ಕಾಗಿ ಕುಲುಕಿದರು. ಅವರ ಚೂಪು ನೋಟ ತನ್ನನ್ನು ಇಷ್ಟಪಡಲಿಲ್ಲ ಎಂಬುದು ಲೀಲಾವತಿಗೆ ಸ್ಪಷ್ಟವಾಗಿತ್ತು ಅಲ್ಲಿಂದ ಮುಂದೆ ಶ್ರೀಮತಿ ಬ್ಯಾರಿಮೂರ್ ಲೀಲಾವತಿಯೊಂದಿಗೆ ಮಾತನಾಡಲೇ ಇಲ್ಲ ಮಗನೊಂದಿಗೇ ತಮ್ಮ ಸುಖ ದುಃಖ ಹೇಳಿಕೊಂಡರು. ಕೆಲಸದವಳು ತಂದಿತ್ತ ಕಾಫಿ, ಬಿಸ್ಕತ್ತುಗಳನ್ನು ಅವರು ತಿಂದರು.

ಕಡೆಗೊಮ್ಮೆ ಆಕೆ ಮೇಲೆದ್ದು 'ಒಳಗೆ ಬಾ', ಎಂದು ಮಗನನ್ನು ಕರೆದರು. ಅಲ್ಲಿನ ಮಾತು ಕತೆಗಳು ಲೀಲಾವತಿಗೆ ಅಸ್ಪಷ್ಟವಾಗಿ ಕೇಳಿಸಿದುವು.

"ಆ ಹುಡುಗಿ ರೂಪವತಿ ಕೂಡ ಅಲ್ಲ!" ಶ್ರೀಮತಿ ಬ್ಯಾರಿಮೂರರ ದನಿ.

"ನನ್ನ ಪಾಲಿಗೆ ಅವಳು ಅತ್ಯಂತ ಸುಂದರಿ"

"ಅವಸರ ಮಾಡ್ಬೇಡ ಜಾರ್ಜ್, ನೀನವಳನ್ನು ಮದ್ವೆ ಆದ್ರೆ ಮುಂದೇನಾಗ್ಬಹುದು ಯೋಚಿಸು. ನಿಮ್ಮ ಮಕ್ಕಳನ್ನು ಯಾರು ಮದ್ವೆಯಾಗ್ತಾರೆ? ನಮ್ಮ ದೇಶದಲ್ಲಿ ಬೆರಕೆ ಜನಾಂಗಕ್ಕೆ ಯಾವ ಭವಿಷ್ಯವಿದೆ ಹೇಳು? ಇಂದು ಯೌವನದ ಭರದಲ್ಲಿ ಮಾಡಿದ ಒಂದು ತಪ್ಪಿಗಾಗಿ ನೀನು ಇಡೀ ಜೀವಮಾನ ಮರುಗುವಂತಾಗಬಾರ್ದು."

ಇಡೀ ಜೀವಮಾನ ಮರುಗುವಂತಾಗಬಾರದು. ಎಂಬ ಮಾತುಗಳು ಗೋಡೆಗಪ್ಪಳಿಸಿ ಕಣಿವೆ ಬೆಟ್ಟಗಳಲ್ಲಿ ಪ್ರತಿಧ್ವನಿಸಿ ತನ್ನ ಕಿವಿಗೆ ರಾಚಿದಂತೆನಿಸಿತು ಲೀಲಾವತಿಗೆ 'ಬೆರಕೆ ಜನಾಂಗಕ್ಕೆ ನಮ್ಮ ದೇಶದಲ್ಲಿ ಯಾವ ಭವಿಷ್ಯ?' ಲೀಲಾವತಿ ಒಳಗಿನ ಅಳಲನ್ನು ತಡೆಯಲಾರದೆ ಹೊರಗೆ ಉದ್ಯಾನಕ್ಕೆ ಓಡಿದಳು. ಬಿಕ್ಕಿ ಬಿಕ್ಕಿ ಅಳುವ ಮನಸ್ಸಾಯಿತು ಅವಳಿಗೆ. ಆದರೆ ಹಲ್ಲು ಕಚ್ಚಿ ಆ ಸಂಕಟವನ್ನು ತಡೆದುಕೊಂಡಳು.

ಮೊದಲ ಬಾರಿಗೆ ಅವಳಿಗೆನಿಸಿತು, ತಾನು ಮಾಡುತ್ತಿರುವುದು ತಪ್ಪು ಎಂದು ತಮ್ಮ ಮದುವೆಗೆ ಆತನ ತಾಯಿ ಒಪ್ಪಲಾರರು. ತನ್ನ ತಂದೆ ತಾಯಿಯರೂ ಅಷ್ಟೆ. ಆತ ತಾಯಿಯ ಒಪ್ಪಿಗೆಯಿಲ್ಲದಿದ್ದರೂ ತನ್ನನ್ನು ವಿವಾಹವಾಗಲು ಸಿದ್ಧನಿದ್ದ. ಆದರೆ ತಾನು? ಒಂದು ವೇಳೆ ಜಾರ್ಜ್‌ನನ್ನು ತಾನು ಮದುವೆಯಾದರೆ ತನ್ನ ತಾಯ್ನಾಡು ಭಾರತವನ್ನು ಬಿಟ್ಟು ಇಲ್ಲಿಯೇ ನೆಲೆಸಬೇಕು. ತನ್ನಲ್ಲಿ ಸಕಲ ನಂಬಿಕೆಗಳನ್ನೂ ಇಟ್ಟು ಉಸಿರಾಡುತ್ತಿರುವ ತಂದೆ ತಾಯಿಗಳನ್ನು ತೊರೆಯಬೇಕು ತಾನಾಗ ಕುಲಬಾಹಿರಳು. ವಂಶಕ್ಕೆ ಕುಡಿದೀಪದಂತಿರುವ ತಾನು ಇದನ್ನು ಹಿಸುಕಿ ಆರಿಸುವ ಘಾತಕಿಯಾಗುತ್ತೇನೆ. ತಾನು ಬೆಳೆದು ಬಾಳಿದ ಸಂಸ್ಕೃತಿ ಆಚಾರ, ನಡೆನುಡಿಗಳು ನೆಲಸಮವಾಗುತ್ತವೆ ಜಾರ್ಜನ ಧರ್ಮವೇ ತನ್ನ ಧರ್ಮವಾಗಬೇಕು.

ಜಾರ್ಜ್ ಹೊರಗೆ ಬಂದವನು ಒಂಟಿಯಾಗಿ ನಿಂತಿದ್ದ ಲೀಲಾವತಿಯ ಕಳೆಗುಂದಿದ ಮುಖವನ್ನು ಕಂಡು ಹತ್ತಿರ ಬಂದು, ಕ್ಷಮಾಯಾಚನೆಯ ದನಿಯಲ್ಲಿ

"I am sorry Leela. ತಾಯಿ ಯಾವಾಗ್ಲೂ ಹಾಗೇ ಹಳೇಕಾಲದೋಳು, ಅವಳ ಮಾತನ್ನು ನೀನು ಲಕ್ಷಕ್ಕೇ ತಕೋಬೇಡ. ನಡಿ ನಾವಿಲ್ಲಿಂದ ಹೊರಟು ಹೋಗೋಣ," ಎನ್ನುತ್ತಾ ಅವಳ ಕೈ ಹಿಡಿದು ಕರೆದೊಯ್ದನು.

ಕಾರು ಮತ್ತೆ ನಗರಾಭಿಮುಖವಾಗಿ ಹೊರಟಾಗ ಲೀಲಾವತಿಯೆಂದಳು :

"ಆಕೆ ಎಷ್ಟೆಂದ್ರೂ ನಿನ್ನ ತಾಯಿ. ಅವರ ಮಾತನ್ನು ನೀನು ಕೇಳ್ಬೇಕು ಜಾರ್ಜ್"

"ಆ ವಿಷಯ ಮತ್ತೆ ಮಾತಾಡ್ಬೇಡ" ಎಂದು ಸಿಟ್ಟಿನಿಂದ ನುಡಿದ ಜಾರ್ಜ್.

ಒಂದು ವೇಳೆ ತಂದೆ ತಾಯಿಗಳನ್ನೂ ತನ್ನ ಧರ್ಮವನ್ನೂ ತೊರೆದು ತಾನಿಲ್ಲಿ ಬಂದು ನೆಲೆಸುವುದೇ ಆದರೆ ತನಗೆ ಸಿಗುವ ಸ್ವಾಗತವೆಂಥದು? ತಾನು ಎಷ್ಟೆಂದರೂ ವೈದ್ಯಳು ಇನ್ನೊಬ್ಬರ ಹೊಟ್ಟೆಗಳನ್ನು ಶಸ್ತ್ರಕ್ರಿಯೆಗಾಗಿ



ನಿರ್ದಾಕ್ಷಿಣ್ಯವಾಗಿ ಬಗೆದು ಹಾಕುವ ತಾನು, ತನ್ನ ಬಾಳಿನ ಬಗೆಗೆ ಇಷ್ಟೊಂದು ಯಾಕೆ ಚಿಂತೆ ಮಾಡಬೇಕು? ಈ ನಾಡಿನಲ್ಲಿ ತಾನು ನೆಲೆಸಿದರೂ ತಾನು ವರ್ಣೀಯಳು, ಪರಕೀಯಳು. ತನ್ನ ಸಂತಾನ, ಬೆರಕೆ ಜನಾಂಗ!

"ಊಟವನ್ನು ಎಲ್ಲಾದ್ರೂ ಹೋಟೆಲಿನಲ್ಲಿ ಮಾಡೋಣ್ವೆ ಡಿಯರ್?" ಎಂದು ಕೇಳಿದ ಜಾರ್ಜ್.

"ನಂಗ್ಯಾಕೋ ತುಂಬಾ ತಲೆಸಿಡಿತ. ಇದೊಂದು ಬಾರಿ ನನ್ನ ಕ್ಷಮಿಸು ಜಾರ್ಜ್."

"ಪ್ರವಾಸದಿಂದ ಆಯಾಸವಾಗಿರ್ಬೇಕು. ಈಗ ವಿಶ್ರಾಂತಿ ತಕೊ. ನಾಳೆ ಮಧ್ಯಾಹ್ನ ನಿನ್ನ ಕೊಠಡಿಗೆ ಬರ್ತೀನೆ ಸಿದ್ಧವಾಗಿರು."

ಜಾರ್ಜ್ ಬೇಸರದಿಂದಲೇ ಹೊರಟು ಹೋದ ಸಂಕಟ, ಅಪಮಾನಗಳಿಂದ ಕುದಿಯುತ್ತಾ ಲೀಲಾವತಿ ಹಾಸಿಗೆಯಲ್ಲಿ ಮುದುರಿದಳು. ನಿದ್ದೆ ಬರಲಿಲ್ಲವೆಂದು ನಿದ್ದೆಯ ಮಾತ್ರೆಯೊಂದನ್ನು ನುಂಗಿ ಮಲಗಿಬಿಟ್ಟಳು.

ಸಂಜೆಯ ವೇಳೆಗೆ ಕರೆಗಂಟೆ ಅವಳನ್ನು ಎಚ್ಚರಗೊಳಿಸಿತು.

ಈ ಬಾರಿ ಬಾರಿಸಿದವಳು, ನೆರೆ ಕೊಠಡಿಯ ಮಾರ್ಗರೇಟ್. ಹುಟ್ಟುಹಬ್ಬದ ಶುಭಾಶಯ ಗಳನ್ನರ್ಪಿಸಿ "ಶಾಪಿಂಗ್ ಹೋಗ್ಬರೋಣ ಬರ್ತೀಯೇನು ಲೀಲಾ?" ಎಂದು ಅವಳು ಕೇಳಿದಳು.

"ಬರ್ತೀನಿ."

"ಯಾಕೆ ಒಬ್ಳೇ ಇದ್ದಿಯೇನು ಇಡೀ ದಿವ್ಸ? ನಿನ್ನ ಪ್ರಿಯಕರ ಜಾರ್ಜ್ ಬರಲಿಲ್ವೆ ಇವತ್ತು?" ಎಂದ. ಮಾರ್ಗರೆಟ್ ಹಾಸ್ಯಮಾಡಿದಳು.

ಲೀಲಾವತಿ ಮರು ಮಾತನಾಡದೆ ಸೀರೆ ಬದಲಿಸಿ ತಲೆಬಾಚಿಕೊಂಡು ಮಾರ್ಗರೆಟ್ ಜೊತೆಗೆ ಹೊರಟಳು. ದಾರಿಯಲ್ಲಿ ಹೋಗುತ್ತಿದ್ದ ಟ್ಯಾಕ್ಸಿಯೊಂದನ್ನು ಕೂಗಿ ಇಬ್ಬರೂ ಹತ್ತಿದರು.

"ಅಮ್ಮಂಗೆ, ತಂದೆಗೆ ಏನಾದ್ರೂ ಉಡುಗೊರೆ ಕೊಂಡ್ಕೋಬೇಕು. ಸಹಾಯ ಮಾಡ್ತೀಯಾ ಮಾರ್ಗರೆಟ್?"

"ಓ.ಕೆ. ಆದ್ರೆ ನನ್ನನ್ನೂ ನಿಮ್ಮೂರಿಗೆ ಕರ್ಕೊಂಡು ಹೋಗ್ಬೇಕು'"

ಗೆಳತಿಯರಿಬ್ಬರೂ ನಗತೊಡಗಿದರು. ಬೆಳಗಿನ ಚಿಂತೆಯಲ್ಲಾ ಆ ನಗುವಿನ ಹೊಳೆಯಲ್ಲಿ ಕೊಚ್ಚಿಹೋಯಿತು.

ಲೀಲಾವತಿ ಕೊಠಡಿಗೆ ಮರಳುವ ಹೊತ್ತಿಗೆ ಅಂಚೆಯಲ್ಲಿ ಬಂದ ದೊಡ್ಡ ಪ್ಯಾಕೆಟೊಂದು ಅವಳಿಗಾಗಿ ಕಾದಿತ್ತು. ಅದು ತಂದೆ ತಾಯಿಯರು ತನಗೆ ಕಳುಹಿಸಿದ ಜನ್ಮದಿನದ ಉಡುಗೊರೆ ಎಂಬುದು ಅವಳಿಗೆ ತಿಳಿದು ಅವರ ಪ್ರೀತಿಗಾಗಿ ಅವಳ ಹೃದಯ ತುಂಬಿಬಂತು.

ಮರುದಿನ ಜಾರ್ಜ್ ನಿಶ್ಚಿತ ಸಮಯಕ್ಕೆ ಸರಿಯಾಗಿ ಬಂದಿಳಿದ. ಲೀಲಾವತಿಯೂ ಉಲ್ಲಾಸದಿಂದ ಅವನೊಂದಿಗೆ ಕಾರನ್ನು ಏರಿದಳು. ಲಂಡನ್ನಿನ ವೈಭವೋಪೇತ ಹೋಟೇಲೊಂದರಲ್ಲಿ ಮೇಜು ಕಾದಿರಿಸಿ ಬಂದಿದ್ದ ಜಾರ್ಜ್. ಒಳ ನಡೆದ ಈ ಜೋಡಿಯನ್ನು ಬೇರೆ ಜೋಡಿಗಳು ಕುತೂಹಲದ ಕಣ್ಣುಗಳಿಂದ ವೀಕ್ಷಿಸಿದುವು.

ಜಾರ್ಜ್ ಬಿಯರ್ ಕುಡಿಯುತ್ತಿರುವಾಗ ಲೀಲಾವತಿ ಹಣ್ಣಿನ ರಸವನ್ನು ಹೀರಿದಳು.

"ನಿನಗೇನು ಆರ್ಡರ್ ಮಾಡೋಣ?"

"ಬ್ರೆಡ್ ಸ್ಯಾಂಡ್‌ವಿಚ್, ಆಮ್ಲೆಟ್, ಬಿಸ್ಕತ್..."

"ಅಷ್ಟೇನೆ? ನೀನು ಮಾಂಸಾಹಾರವನ್ನು ರೂಢಿ ಮಾಡಿಕೊಳ್ಳೋದು ಒಳ್ಳೇದು ಲೀಲ."

"ಅದರ ಅಗತ್ಯ ನನಗೆ ಕಂಡಿಲ್ಲ."

ಸಸ್ಯಾಹಾರಿ ಲೀಲಾವತಿಗೆ ಅವನು ಮಾಂಸದ ತುಣುಕುಗಳನ್ನು ಅತ್ಯಂತ ಸಂತೋಷದಿಂದ ತಿನ್ನುತ್ತಿರುವುದು ನೋಡಿ ಜಿಗುಪ್ಸೆಯಾಯಿತು. ತನ್ನ ಈತನ ಧರ್ಮಗಳು ಎಂದಿಗಾದರೂ ಒಂದಾಗುವುದು ಸಾಧ್ಯವೇ ಎನಿಸಿತು.

"ನನ್ನ ಹಾಗೂ ನಿನ್ನ ಆಚಾರ ವಿಚಾರಗಳಲ್ಲಿ ಧ್ರುವಗಳ ಅಂತರವಿದೆಯಲ್ಲಾ ಜಾರ್ಜ್. ನಾವು ಒಂದುಗೂಡಿ ಬಾಳುವುದು ಶಕ್ಯವೆ?" ಎಂದು ತನ್ನ ಮನಸ್ಸಿನಲ್ಲಿ ಹೆಡೆಯಾಡಿಸಿದ ವಿಚಾರವನ್ನು ಅವನ ಮುಂದೆ ನೂಕಿದಳು.

"ಒಲವಿಗೆ ಯಾವ ಅಡೆತಡೆಗಳೂ ಇರಬಾರದು ಲೀಲ."

"ಭದ್ರವಾದ ಬುನಾದಿಯಿಲ್ಲದ ಪ್ರೀತಿ ಎಷ್ಟು ದಿನ ಉಳಿದೀತು ಹೇಳು?"

"ನನ್ನ ನಿನ್ನ ರೂಪ ಉಳಿಯುವವರೆಗೆ."

ಆ ಮಾತಿನಿಂದ ಅವಳ ಹೃದಯಕ್ಕೆ ಸಮಾಧಾನವಿಲ್ಲ.

"ಒಂದು ವೇಳೆ ಜಾರ್ಜ್ ನನಗಿಂತ ರೂಪಸಿಯಾದ ಹುಡುಗಿ ಸಿಕ್ಕರೆ..."

"ಅವಳ ಹಿಂದೆ ಹೋಗ್ತೀನಿ." ಎಂದು ವಿನೋದದಿಂದ ನುಡಿದ ಜಾರ್ಜ್.

"ನಮ್ಮ ಮದುವೆಯಾದ ಮೇಲೆ, ನನ್ನ ನಿನ್ನ ನಡೆ ನುಡಿಗಳು. "ಹೊಂದಿಕೆಯಾಗದಿದ್ರೆ ಏನು ಮಾಡೋದು ಜಾರ್ಜ್?"

"ಸರಿ. ಹೊಂದದಿದ್ರೆ ವಿವಾಹ ವಿಚ್ಛೇದನ ಮಾಡಿಕೊಳ್ಳೋಣ!"

ಲೀಲಾವತಿ ಹೆದರಿದಳು.

"ಇದು ಸರಿಯಲ್ಲ ಜಾರ್ಜ್. ಒಂದು ಸಾರೆ ವಿವಾಹವಾದ ಮೇಲೆ ನಾವು ಆಜನ್ಮಪರ್ಯಂತ ಬಂಧಿಗಳು."

"ಅದು ನಿಮ್ಮ ದೇಶದಲ್ಲಿ. ನಮ್ಮ ನಾಡಿನಲ್ಲಿ ನಮಗೆ ಅಂಥ ಶೃಂಖಲೆಗಳಿಲ್ಲ. ಜೊತೆಯಲ್ಲಿದ್ದು ಜಗಳವಾಡೋದಕ್ಕಿಂತ ಬೇರೆ ಬೇರೆಯಾಗಿ ರೋದೇ ಸರಿ ಅನಿಸಿದ್ರೆ ಹಾಗೇ ಇರ್‍ತೀವೆ. ಮತ್ತೆ ಮತ್ತೆ ಮದುವೆಯಾಗಲು ಕೂಡ ನಾವು ಸ್ವತಂತ್ರರು."

"ಇದು ಸರಿಯಲ್ಲ. ನಾನು ಹೀಗ್ಮಾಡ್ಲಾರೆ"

ಜಾರ್ಜ್ ಗಹಗಹಿಸಿ ನಕ್ಕ.

"ನಿನ್ನನ್ನ ಯಾರಾದ್ರೂ ಎಫ್. ಆರ್. ಸಿ. ಎಸ್. ಮಾಡಿದೋಳು ಅಂತಾರಾ ಲೀಲಾ? ಹಳೇಕಾಲದೋಳ ಥರಾ ಮಾತಾಡ್ತೀ. ಸಾಕಿನ್ನ ಈ ಮಾತು ನೀನಿರೋದ ಇನ್ನೆರಡು ದಿನ. ಸಂತೋಷವಾಗಿ ಕಾಲಕಳೆಯೋಣ. ಆಗದಾ?"

ಸಂತೋಷವಾಗಿ ಕಾಲಕಳೆಯೋದು ಎನ್ನೆಷ್ಟ ಜಾರ್ಜ್? ಎಂದುಕೊಂಡಳು ಲೀಲಾವತಿ ನಿನ್ನ ಬಗ್ಗೆ ಇದ್ದ ಪ್ರೇಮದ ಬೇರುಗಳೆಲ್ಲಾ ಬಿರುಕು ಬಿಡತೊಡಗಿರುವಾಗ ಅದು ಪ್ರೀತಿಯೆ ಅಲ್ಲ ಭ್ರಮೆ ಎಂಬ ನಂಬಿಕೆ ನೆಲೆಯೂರತೊಡಗಿದಾಗ ತಾವು ಕಳೆದ ಆನಂದದ ದಿನಗಳು ಮತ್ತೆ ಎಂದೆಂದಿಗೂ ಬರಲಾರವು ಎಂಬುದನ್ನು ನೆನೆದಾಗ ಸಂತೋಷವಾಗಿರೋದು ಸಾಧ್ಯಾನಾ ನನ್ನ ಮರೆತು ಬಿಡು. ನಮ್ಮ ಮದುವೆಯಿಂದ ಯಾರಿಗೂ ಸುಖವಿಲ್ಲ. ಯೌವನದ ಭರದಲ್ಲಿ ಮಾಡುವ ಈ ತಪ್ಪಿಗಾಗಿ ಜೀವಮಾನ ಪರ್ಯಂತ ನಾವು ಕೊರಗುವುದು ಬೇಡ. ನಾವೀಗ ಬರಿಯ ಸ್ನೇಹಿತರಷ್ಟೆ ಇನ್ನೇನೂ ಅಲ್ಲ. ಇನ್ನಾವುದೂ ಅಲ್ಲ.

ಅವಳ ಮೌನವನ್ನು ತಪ್ಪರ್ಥ ಮಾಡಿಕೊಂಡ ಜಾರ್ಜ್ ಪಿಸು ನುಡಿದ:

"ಅಗಲುವಿಕೆ ನನಗೂ ಕಷ್ಟ. ಲೀಲ ಆದ್ರೆ ನಾವಿಬ್ರೂ ಮತ್ತೆ ಸಂಧಿಸೋಣ ಬೇಗ ಆದಷ್ಟು ಬೇಗ"

ಲೀಲಾವತಿಗೆ ಆತನನ್ನು ತಲೆಯೆತ್ತಿ ನೋಡಲೂ ಧೈರ್ಯವಾಗಲಿಲ್ಲ

ಮುಂದಿನೆರಡು ದಿನ ಗೆಳೆಯ ಗೆಳತಿಯರನ್ನು ನೋಡಿ ವಿದಾಯ ಹೇಳುವುದರಲ್ಲೇ ಕಳೆಯಿತು ಯಾವುದರಲ್ಲೂ ಉತ್ಸಾಹವಿಲ್ಲ. ದೊಡ್ಡ ಪದವಿ ಪಡೆದು ತಾಯ್ನಾಡಿಗೆ ಮರಳುವಾಗಿನ ಹೆಮ್ಮೆ ಅವಳಲ್ಲಿರಲಿಲ್ಲ. ಪಪ್ಪೆ ಮೊಗದ ಅವಳನ್ನು ಕಂಡು ಗೆಳತಿಯೊಬ್ಬಳು ತಮಾಷೆಯಾಗಿ ಕೇಳಿದಳು.

"ನಿನ್ನ ಪ್ರಿಯಕರನನ್ನು ಬಿಟ್ಹೋಗ್ತೀಯೆ?"

"ಬಿಟ್ಹೋದೇನು? ಅಲ್ಲೇ ಕರ್ಕೊಳ್ತಾಳೆ!" ಎಂದಳು ಇನ್ನೊಬ್ಬಳು.

"ಅಂಥ ಪುಣ್ಯವಂತೆಯಲ್ಲವೇ, ನಾನು!" ಎಂದು ಲೀಲಾವತಿ ದುಗುಡದಿಂದ ಉತ್ತರಿಸಿದಳು.

ಇನ್ನು ನಾನು ಯೋಚಿಸಲಾರೆ. ಮನೆಗೆ ಮರಳಿ ತಂದೆ ತಾಯಿ ಹೇಳಿದ ಹಾಗೆ ಕೇಳುವ ವಿಧೇಯಳಾಗುತ್ತೇನೆ ನಾನು. ಗಿರಿಧರನನ್ನು ಮದುವೆಯಾಗೆಂದರೆ ಹೂ ಅನ್ನುತ್ತೇನೆ ಆತನನ್ನು ಪ್ರೀತಿಸಲು ಕಲಿಯುತ್ತೇನೆ ಅವನು ನನ್ನನ್ನು ಸುಖಿಯಾಗಿಟ್ಟುಕೊಳ್ಳುತ್ತಾನೆ. ಆಗ ಧರ್ಮ ಸಂಸ್ಕೃತಿಗಳ ತೊಡಕುಗಳ್ಯಾವುವೂ ನನ್ನನ್ನು ಬಾಧಿಸಲಾರವು. ಕಷ್ಟಪಟ್ಟು ಕಲಿತದ್ದಕ್ಕೆ ಸಾರ್ಥಕತೆಯುಂಟುಮಾಡುವುದಕ್ಕಾಗಿ ಯಾವುದಾದರೂ ಆಸ್ಪತ್ರೆಯಲ್ಲಿ ನಾನು ಕೆಲಸ ಮಾಡುತ್ತೇನೆ. ಮನಸ್ಸಿನ ನೋವಲ್ಲ, ದೇಹದ ನೋವಿರುವವರಿಗೆ ಅದರ ಪರಿಹಾರಕ್ಕಾಗಿ ನೆರವಾಗುತ್ತೇನೆ ಇದೇ ನನ್ನ ಬದುಕಿನ ಆದರ್ಶ.

ಹೊರಡುವ ದಿನ

ಲಂಡನ್ನಿನ ವಿಮಾನ ನಿಲ್ದಾಣದಲ್ಲಿ ವಿಮಾನದ ಮೆಟ್ಟಿಲುಗಳ ವರೆಗೂ ಬಂದ ಜಾರ್ಜ್ ಲೀಲಾವತಿಯ ಎರಡೂ ಕೈಗಳನ್ನು ಗಟ್ಟಿಯಾಗಿ ಹಿಡಿದು.

"ಹೋದಕೂಡ್ಲೆ ಕಾಗ್ದ ಬರಿ ಬೇಗ ವಾಪಸ್ಸು ಬಾ ಲೀಲ ಬೇಗ ವಾಪಸ್ಸು ಬಾ" ಎಂದು ಕಳಕಳಿಯಿಂದ ನುಡಿದ.

ಅವಳ ಕಣ್ಣುಗಳಲ್ಲಿ ನೀರೂರಿತು. ಅವಳು ಅವನ ತೆಕ್ಕೆಯಿಂದ ಬಿಡಿಸಿಕೊಂಡು ಸರಸರನೆ ಮೆಟ್ಟಲು ಹತ್ತಿದಳು. ಮೇಲೆ ನಿಂತು ಮುಗುಳು ನಗಲು ಯತ್ನಿಸುತ್ತಾ ಕೈಬೀಸಿದಳು. 'ನೀನು ನನ್ನನ್ನು ಮತ್ತೆ ನೋಡ್ಲಾರೆ ಜಾರ್ಜ್' ಎಂದುಕೊಂಡಳು ದುಃಖ ನಿರಾಶೆಗಳು ಎದೆಯೊತ್ತಿ ಬಂದು ಅವಳು ಆ ದೃಶ್ಯವನ್ನು ತಡೆಯಲಾರದೆ ಆಸನದಲ್ಲಿ ಕುಸಿದು ಕುಳಿತು ಮುಖ ಮುಚ್ಚಿಕೊಂಡಳು.

ವಿಮಾನ ಮೇಲೇರಿತು.





ಧರ್ಮಕ್ಷೇತ್ರವಾದ ಕುರುಕ್ಷೇತ್ರದಲ್ಲಿ ಕೌರವರೂ ಪಾಂಡವರೂ ಯುಯುತ್ಸುಗಳಾಗಿ ಸಮವೇತರಾದಾಗ, ಪಾಂಡವ ಸೈನ್ಯವು ವ್ಯೂಹ ಸನ್ನದ್ಧವಾದುದನ್ನು ನೋಡಿ ದುರ್ಯೋಧನನು ಭೀಷ್ಮಾಚಾರ್ಯರಿಗೆ ವರದಿ ಮಾಡಿದ ಮೇಲೆ ಮುದಿ ಭೀಷ್ಮನು ಸಿಂಹನಾದದಿಂದ ಗರ್ಜಿಸಿ ಶಂಖವನ್ನೂದಲು, ಅದನ್ನು ಕೇಳಿ ಹರ್ಷಪ್ರೇರಿತವಾಗಿ ಇಡಿಯ ಸೈನ್ಯವು ಶಂಖ-ಭೇರಿ—ಪಣವಾನಕ ಗೋಮುಖಗಳ ತುಮುಲ ನಿನಾದವನ್ನೆಬ್ಬಿಸಲು, ಬಿಳಿ ಕುದಿರೆಗಳ ರಥವನ್ನೇರಿದ ಕೃಷ್ಣಾರ್ಜುನರು ದಿವ್ಯಶಂಖಗಳನ್ನೂ ಮಿಕ್ಕವರು ತಂತಮ್ಮ ಶಂಖಗಳನ್ನೂ ಊದುತ್ತಿರುವಾಗ, ಅರ್ಜುನನು 'ಸದ್ದು, ಸದ್ದು' ಎನ್ನುತ್ತ ತನ್ನ ರಥವನ್ನು ಎರಡೂ ಸೈನ್ಯಗಳ ನಡುವೆ ನಿಲ್ಲಿಸುವಂತೆ ಕೃಷ್ಣನಿಗೆ ಹೇಳಿ, ಕೈಯೊಳಗಿನ ಗಾಂಡೀವವನ್ನು ಎತ್ತಿ, ಎಲ್ಲರ ಹಾಜರಿಯನ್ನು ತೆಗೆದುಕೊಂಡು. ಎಲ್ಲರನ್ನೂ ಗುರುತಿಸಿ, ಗುರುತು ಸಿಕ್ಕಿತಾದ್ದರಿಂದ ಎಲ್ಲರೂ ತನ್ನವರೆ ಎಂದು ಹೊಳೆದು, 'ಶಸ್ತ್ರವನ್ನು ಚಲ್ಲುವೆ [ಅಶಸ್ತ್ರ], ಹೊಡೆದರೂ ಹೊಡೆಯುವುದಿಲ್ಲ [ಅಪ್ರತೀಕಾರ], ನನ್ನನ್ನು ಕೊಂದರೂ ಸುಖ, ನಾನು ಯುದ್ಧವನ್ನಾಡುವುದಿಲ್ಲ' ಎಂದು ರಥದಲ್ಲಿ ಕುಳಿತುಬಿಟ್ಟನು. [ಕ್ಷಮಿಸಬೇಕು, ಸಂನಿವೇಶದ ಗಾಂಭೀರ್ಯಕ್ಕಾಗಿ ಮೊದಲ ವಾಕ್ಯವೆ ಅನಿವಾರ್ಯವಾಗಿ ಉದ್ದವಾಯಿತು]. ಇದೇ ಭಗವದ್ಗೀತೆಯ ಪ್ರಾರಂಭ ಈ ಪ್ರಾರಂಭದ ನಿಜಸ್ವರೂಪವನ್ನು ತಿಳಿದುಕೊಳ್ಳಲು ಸಮರ್ಥರಾಗದೆ ಅಂದಿನಿಂದ ಇಂದಿನ ವರೆಗೆ ಅನೇಕ ಆಚಾರ್ಯರು ಏನೇನೊ ಭಾಷ್ಯಗಳನ್ನು ಬರೆದರು. ಸರಿಯಾದ ಅರ್ಥವೆ ಗೊತ್ತಿಲ್ಲದ್ದಕ್ಕೆ ಒಬ್ಬರೊಬ್ಬರಿಗೆ ವಿಪರೀತವಾದ ಅರ್ಥವನ್ನು ಹಚ್ಚಿದರು.

ವೈಜ್ಞಾನಿಕ ಮತ್ತು ಬೌದ್ಧಿಕ ಪ್ರಗತಿಯನ್ನು ಹೊಂದಿದ ಇಂದಿನ ಕಾಲದ ನಮಗೆ ಈಗ ಈ ಸಂನಿವೇಶದ ಸರಿಯಾದ ಅರ್ಥ ಗೊತ್ತಾಗಿದೆ. ಯುದ್ಧವನ್ನಾಡುವ ರಣಾಂಗಣದ ಮೇಲೆ ಶಸ್ತ್ರಸಮೇತನಾಗಿ ಹೋಗಿ ಆಮೇಲೆ ಅರ್ಜುನನು 'ಯುದ್ಧವನ್ನಾಡುವುದಿಲ್ಲ' ಎಂದು ಕುಳಿತುಬಿಟ್ಟನಂತೆ! ಆದರೆ ಅದಕ್ಕೂ ಮುಂಚಿತ ಅರ್ಜುನನ ಅದಕ್ಕೆ ಅನೇಕ ಕಾರಣಗಳನ್ನು ಕೊಟ್ಟನು, ತರ್ಕಬದ್ಧವಾದ ರೀತಿಯಲ್ಲಿ ಆ ಕಾರಣಗಳನ್ನು ಮಂಡಿಸಿದನು, ಬುದ್ಧಿವಂತಿಕೆಯಿಂದ ತನ್ನ ನಿರ್ಣಯವನ್ನು ಸಮರ್ಥಿಸಿಕೊಂಡನು. ಆದರೂ ಇದು ಬುದ್ಧಿಗೇಡಿತನ [ಕಶ್ಮಲ] ಎಂದು ಕೃಷ್ಣನು ಹಳಿದನು. ಯಾಕೆ? ಯುದ್ಧವನ್ನು ಆಡುವುದಿಲ್ಲ ಎಂಬ ನಿರ್ಣಯದಲ್ಲಿ ಬುದ್ಧಿಗೇಡಿತನವಿದೆಯೆ? ಅದಕ್ಕೆ ಕೊಟ್ಟ ಕಾರಣಗಳು ಬುದ್ಧಿಶೂನ್ಯತೆಯ ಲಕ್ಷಣಗಳೆ?

ಕೃಷ್ಣನ ಉಪದೇಶವೇನೆಂಬುದನ್ನು ತಿಳಿದುಕೊಂಡರೆ ಈ ಪ್ರಶ್ನೆಗಳಿಗೆ ಉತ್ತರ ದೊರೆಯುವುದು. ಒಂದು ಮಾತಿನಲ್ಲಿ ಹೇಳುವುದಾದರೆ 'ನೀನ ಸ್ಥಿತಪ್ರಜ್ಞನಾಗು' ಎಂಬುದು ಕೃಷ್ಣನ ಉಪದೇಶ. ಸ್ಥಿತಪ್ರಜ್ಞ ಎಂದರೇನು? ಕೇಳಿರಿ.

'ಪ್ರಜಹಾತಿ ಯದಾ ಕಾಮಾನ್
ಸರ್ವಾನ್ ಪಾರ್ಥ ಮನೋಗತಾನ್।
ಆತ್ಮನ್ಯೇವಾತ್ಮನಾ ತುಷ್ಟಃ
ಸ್ಥಿತಪ್ರಜ್ಞಸ್ತದೋಚ್ಯತೇ॥'

ಮನಸ್ಸಿನೊಳಗಿನ ಎಲ್ಲ ಇಚ್ಛೆಗಳನ್ನೂ ಬಿಟ್ಟುಕೊಟ್ಟು ತನ್ನಷ್ಟಕ್ಕೆ ತಾನೇ ತುಷ್ಟನಾಗಿರುವವನು ಸ್ಥಿತಪ್ರಜ್ಞನು ನೋಡಿದಿರಾ ಕೃಷ್ಣನ ಜಾಣ್ಮೆಯನ್ನು? ಮನುಷ್ಯನಿಗೆ ಮನಸ್ಸೆಂಬುದು ಇರುವುದೆ ಇಚ್ಛೆಗಳನ್ನು ಕಲ್ಪಿಸಿಕೊಳ್ಳಲು. ಇಚ್ಛೆಗಳನ್ನು ಬಿಡುವುದೆಂದರೆ ಮನಸ್ಸೇ ಇಲ್ಲ ಎಂದಂತೆ. ಮನಸ್ಸು ಇಲ್ಲದಲ್ಲಿ ಬುದ್ಧಿ ಎಂಬ ಇಂದ್ರಿಯಕ್ಕೆ ಅವಕಾಶವೆ ಇರುವುದಿಲ್ಲ. ಎರಡು ಇಚ್ಛೆಗಳನ್ನು ಒಂದಕ್ಕೊಂದು ಹೊಂದಿಸಿ ನೋಡುವುದು ಬುದ್ಧಿ ಇಚ್ಛೆಯೆ ಇಲ್ಲ, ಆದ್ದರಿಂದ ಬುದ್ಧಿಯೂ ಇಲ್ಲ ಇದೇ ಅವಸ್ಥೆಯನ್ನೆ 'ಸ್ಥಿತಪ್ರಜ್ಞ' ಅವಸ್ಥೆ ಎನ್ನುವುದು; ಎಲ್ಲಿ ಪ್ರಜ್ಞೆ ಎಂದರೆ ಬುದ್ಧಿ ಸ್ಥಿತವಾಗಿದೆ, ಎಂದರೆ ಹಿಂದೂ ಹೋಗುವುದಿಲ್ಲ ಮುಂದೂ ಹೋಗುವುದಿಲ್ಲ ಅಲ್ಲಿ ಸ್ಥಿತಪ್ರಜ್ಞತೆ ಇದೆ ಎನ್ನಬಹುದು ಸರಳವಾದ ಶಬ್ದಗಳಲ್ಲಿ ಹೇಳುವುದಾದರೆ ಯಾವನು ಬುದ್ಧಿಯನ್ನು ಉಪಯೋಗಿಸುವುದಿಲ್ಲವೊ ಅವನೇ ಸ್ಥಿತಪ್ರಜ್ಞ. 'ಇವರು ನನ್ನವರು, ಇವರನ್ನು ಕೊಂದರೆ ಪಾಪ, ಪಾಪದಿಂದ ನರಕ' ಮುಂತಾಗಿ ಅರ್ಜುನನು ಬುದ್ಧಿಯನ್ನು ಉಪಯೋಗಿಸಿದ್ದಕ್ಕೆ ಅವನನ್ನು ಕೃಷ್ಣನು ಬುದ್ಧಿಗೇಡಿ ಎಂದನು ತಾನು ಯುದ್ಧವನ್ನು ಮಾಡುವುದಿಲ್ಲ ಎನ್ನುವುದು ಬುದ್ಧಿಗೇಡಿತನವಲ್ಲ ನಿಜವಿದ್ದ ಮಾತೆಂದರೆ ಈ ರೀತಿ ವರ್ತಿಸಿದ ಅರ್ಜುನನು ತಾನೊಂದು ಕ್ರಾಂತಿಯನ್ನೇ ನಡೆಸಿದ್ದಾನೆ, ಸಾಮಾಜಿಕ ಜೀವನದ ರೀತಿ-ನೀತಿಗಳಲ್ಲಿ ಹೊಸತನ್ನು ತಂದ ಮೊದಲ ಕ್ರಾಂತಿಕಾರಕನಾಗಿದ್ದಾನೆ ಎಂಬುದನ್ನು ಅರಿಯದೆ ಹೋದನು. ಆ ಅರಿವನ್ನು ಉಂಟುಮಾಡಿದ್ದು ಭಗವದ್ಗೀತೆಯ ಮಹತ್ವ. ಅರ್ಜುನನು ಮಾಡಿದ ಒಂದೇ ಒಂದು ತಪ್ಪೆಂದರೆ ತನ್ನ ನಡತೆಯನ್ನು ಬುದ್ಧಿಪ್ರೇರಿತ ಕಾರಣಗಳಿಂದ ಸಮರ್ಥಿಸಲು ಯತ್ನಿಸಿದ್ದು.

ಯುದ್ಧವನ್ನು ಮಾಡುವದಿಲ್ಲ ಎಂದು ಅರ್ಜುನನು ರಣಾಂಗಣದಲ್ಲಿ ಕುಳಿತುಬಿಟ್ಟನು–ಎಂಬುದರಲ್ಲಿಯೆ ಆ ಕ್ರಾಂತಿ ಅಡಕವಾಗಿದೆ. ಅದರ ಮಹತ್ವವು ನಮಗೆ ಸುಲಭವಾಗಿ ತಿಳಿಯಬೇಕಾದರೆ ಇಂದಿನ ಕಾಲದ ಒಂದು ದೃಷ್ಟಾಂತವನ್ನು ನೋಡಬಹುದು, 'ಬಹುದು' ಯಾಕೆ ದಿನನಿತ್ಯ ನೋಡುತ್ತಿದ್ದೇವೆ ಒಂದು ಕಾರಖಾನೆಯಲ್ಲಿ ಒಂದು ಬೆಳಗಿನಲ್ಲಿ ಕೆಲಸಗಾರರು ಎಂದಿನಂತೆ ಶಸ್ತ್ರ[ಉಪಕರಣ]ಸಮೇತರಾಗಿ ಹೋಗುತ್ತಾರೆ. ಒಳಗೆ ಹೋದ ಮೇಲೆ 'ನಾವು ದುಡಿಯುವುದಿಲ್ಲ' ಎಂದು ಶಸ್ತ್ರಗಳನ್ನು ಚಲ್ಲಿ ಕುಳಿತುಬಿಡುತ್ತಾರೆ. ಸಂಬಳ ದೊರೆಯದೆ ಹೋಗಲಿ, ಪೋಲೀಸರು ಹೊಡೆಯಲಿ ಮಾಲೀಕರು ಕಾರಖಾನೆಯನ್ನು ಮುಚ್ಚಲಿ ನಾವು ದುಡಿಯುವುದಿಲ್ಲ ಎಂದು ಇವರೂ ತಮ್ಮ ಕರ್ಮಕ್ಷೇತ್ರ, ಕಾರಖಾನೆ'ದಲ್ಲಿ ಅರ್ಜುನನ ಧೈರ್ಯದಿಂದಲೆ ಕುಳಿತುಕೊಳ್ಳುತ್ತಾರೆ. ಇದನ್ನೇ ನಾವು

Sit in strike' [ಬೈಠಕ್ ಮುಷ್ಕರ ಎನ್ನುತ್ತೇವೆ. ಹಾಗೆ ಎನ್ನಲು ಕಾರಣವೇನೆಂದರೆ ನಮಗೆ ನಮ್ಮ ಸಂಪ್ರದಾಯದ ಸಂಪರ್ಕವಿಲ್ಲದ್ದಕ್ಕೆ ಬ್ರಿಟಿಶರ ಮತ್ತು ಅವರ ಭಾಷೆಯ ಪ್ರಭಾವಕ್ಕೆ ನಾವು ಒಳಗಾದುದಕ್ಕೆ. ನಮ್ಮ ಸಂಪ್ರದಾಯದ ಶೈಲಿಯಲ್ಲಿಯೆ ಹೇಳುವುದಾದರೆ ಇದು ಸ್ಥಿತಪ್ರಜ್ಞಾವಸ್ಥೆ ಎನ್ನಬಹುದು. "ಕಾರಖಾನೆ ನಮ್ಮದು, ಇದರ ಉತ್ಪಾದನೆ ನಮ್ಮ ದೇಶಕ್ಕೆ ಅಗತ್ಯ" ಎಂದಾಗ ಅರ್ಜುನನಂತೆ ಇವರು ಬುದ್ಧಿಪ್ರೇರಿತ ಕಾರಣಗಳ ಗೊಡವೆಗೆ ಹೋಗುವುದೇ ಇಲ್ಲ. ತಮ್ಮದಿರಲಿ, ಇನ್ನೊಬ್ಬರ ಬುದ್ಧಿಯನ್ನೂ ಬದಿಗಿರಿಸಿ ಇವರು ಸ್ಥಿತಪ್ರಜ್ಞರಾಗುವರು. ಇದು ನಮ್ಮ ಸಂಪ್ರದಾಯ, ಇದೇ ನಮ್ಮ ಸಂಸ್ಕೃತಿ.

ಭಗವದ್ಗೀತೆಯ ಈ ಸಂನಿವೇಶದ ದೃಷ್ಟಾಂತವನ್ನು ಇಷ್ಟೊಂದು ಸುದೀರ್ಘವಾಗಿ ನಾವು ವಿವರಿಸುತ್ತಿರುವುದು ಯಾಕೆ? ಇಂದು ನಮ್ಮ ದೇಶದಲ್ಲಿ ಬುದ್ಧಿಜೀವಿಗಳಿಂದ ಶ್ರಮಜೀವಿಗಳವರೆಗೆ ಎಲ್ಲರೂ ಕಾಲಕಾಲಕ್ಕೆ ಬಾರಿಬಾರಿಗೆ ಹೂಡುವ ಮುಷ್ಕರಗಳ ಮಹತ್ತ್ವವನ್ನು ತಿಳಿದುಕೊಳ್ಳುವುದಕ್ಕ. ಮುಷ್ಕರಗಳೆಂದರೆ ಅದೊಂದು ತರದ ಪಾಪಕೃತ್ಯ, ಅನಿಷ್ಟ ಎಂಬ ಭಾವನೆ ಅನೇಕರಲ್ಲಿ ಮೂಡುತ್ತಿದೆ. ಅದು ತಪ್ಪು. ಮುಷ್ಕರವೆಂಬುದು ಪರದೇಶದಿಂದ ಬಂದ ಪಿಡುಗು ಅಲ್ಲ. ಯಂತ್ರಯುಗಕ್ಕೆ ಅನಿವಾರ್ಯವಾದ ಆಪತ್ತಲ್ಲ, ಪಾಶ್ಚಾತ್ಯರ ಸಂಪರ್ಕದಿಂದ ಬಂದ ದುಶ್ಚಟವಲ್ಲ, ಕೂಲಿಕಾರ-ಬಂಡವಳಗಾರರ ದ್ವೇಷದ ದ್ಯೋತಕವೂ ಅಲ್ಲ, ಮುಷ್ಕರ ಎಂಬುದು ನಮ್ಮ ಸನಾತನ ಸಂಸ್ಕೃತಿಯು ಒಪ್ಪಿಕೊಂಡ ಒಂದು ಮೋಕ್ಷಸಾಧನವಾಗಿದೆ ಎಂಬುದನ್ನು ನಾವು ಅರಿತುಕೊಳ್ಳಬೇಕು. ಕಾಲಕಾಲಕ್ಕೆ ಅದರ ಸ್ವರೂಪದಂತೆ ಅದರ ಹೆಸರೂ ಬದಲಾಗಿದೆ. [ಎಷ್ಟೋ ಸಲ ಪ್ರಾದೇಶಿಕವಾಗಿ ಕೂಡ ಹೆಸರು ಬದಲಾಗಿದೆ ನಮ್ಮಲ್ಲಿಯೆ ಕೆಲವು ಕಡೆ 'ಮುಷ್ಕರ' ಎಂದರೆ, ಕೆಲವು ಕಡೆ 'ಸಂಪು', ಕೆಲವೆಡೆ 'ಸ್ಟ್ರೈಕ್' ಎಂದೂ ಹೇಳುತ್ತಾರೆ.] ಎಷ್ಟೇ ಬದಲಾವಣೆಯಾದರೂ ಅದರ ಬುನಾದಿಯಲ್ಲಿಯ ತತ್ತ್ವ ಒಂದೇ :- ಬುದ್ಧಿಯನ್ನು ಬುದ್ಧಿಪೂರ್ವಕವಾಗಿ ಬದಿಗಿಟ್ಟು ಮಾಡಬೇಕಾದ ಕೆಲಸವನ್ನು ಮಾಡುವುದಿಲ್ಲ ಎಂಬ ವೃತ್ತಿ.

'ಮಾಡಬೇಕಾದ ಕೆಲಸ' ಎಂಬ ಪದಪ್ರಯೋಗದ ಮಹತ್ತ್ವವನ್ನು ಚನ್ನಾಗಿ ಅರಿತುಕೊಳ್ಳಬೇಕು. ಅರ್ಜುನನು ಕ್ಷತ್ರಿಯನು, ಕ್ಷತ್ರಿಯನು ಮಾಡಬೇಕಾದ [ಎಂದರೆ ಸಮಾಜಕ್ಕೆ ತನ್ನ ಋಣ ಎಂದು ಮಾಡಬೇಕಾದ] ಕೆಲಸ ಯುದ್ಧ. ಅದನ್ನು ಮಾಡುವುದಿಲ್ಲ ಎಂದಾಗ ಮುಷ್ಕರ. ಒಂದು ವೇಳೆ ಅರ್ಜುನನು ಕ್ಷತ್ರಿಯನಾಗಿಯೂ 'ನಾನು ವೇದವನ್ನು ಓದುವುದಿಲ್ಲ' ಎಂದರೆ ಅದು ಮುಷ್ಕರವಾಗದು. ಇಂದಿನ ದೃಷ್ಟಾಂತಗಳನ್ನೇ ನೋಡಬಹುದು. ಕಾರಖಾನೆಯ ಕೆಲಸಗಾರರು, ರೈಲು ನೌಕರರು, ಅಂಚೆ ಸಿಬ್ಬಂದಿಯವರು, ಕಚೇರಿಯ ಕ್ಲಾರ್ಕರು, ಶಿಕ್ಷಣಸಂಸ್ಥೆಗಳ ವಿದ್ಯಾರ್ಥಿಗಳು, ಆಸ್ಪತ್ರೆಯ ಡಾಕ್ಟರರು ಕೂಡ ಮುಷ್ಕರವನ್ನು ಹೂಡುವುದನ್ನು ನೋಡಿದ್ದೇವೆ. ಆದರೆ ಸಾಹಿತಿಗಳು ಮುಷ್ಕರವನ್ನು ಹೂಡಿದ ದೃಷ್ಟಾಂತ ಎಲ್ಲಿಯಾದರೂ ಇದೆಯೇ? ಸಾಹಿತಿಗಳಿಗೆ ತತ್ತ್ವತಃ ವಿಚಾರ ಮಾಡಿದಲ್ಲಿ ಮುಷ್ಕರವನ್ನು ಹೂಡುವ ಅಧಿಕಾರವೆ ಇಲ್ಲ. ಅವರು ಮಾಡುವ ಕೆಲಸವೇನು? ಸಾಹಿತ್ಯರಚನೆ ಆದರೆ ಈ ಸಾಹಿತ್ಯರಚನೆ ಎಂಬುದು ಸಮಾಜಧಾರಕವಾದ ಕೆಲಸವೆ ಅಲ್ಲ. ಅಧ್ಯಯನ, ರಕ್ಷಣ, ವ್ಯವಸಾಯ ಮತ್ತು ಶ್ರಮಗೆಲಸ ಇವು ಸಮಾಜಕ್ಕೆ ಪೋಷಕವಾದುವು; ಆದುದರಿಂದ ಈ ನಾಲ್ಕನ್ನು ಅವರವರಿಗೆ ಜನ್ಮದಿಂದಲೂ ಶಿಕ್ಷಣದಿಂದಲೊ ಕರ್ತವ್ಯ ಎಂದು ನಿಯಮಿಸಲ್ಪಟ್ಟಿವೆ. 'ಕರ್ತವ್ಯ' ಎಂದಲ್ಲಿ 'ನ ಕರಿಷ್ಯೇ' ಎಂದು ಮುಷ್ಕರ. ಸಾಹಿತ್ಯರಚನೆ ಇಂತಹ ಕರ್ತವ್ಯಗಳಲ್ಲಿ ಒಂದಾಗಿಲ್ಲ ಎಂಬುದನ್ನು ಲಕ್ಷ್ಯದಲ್ಲಿಡಬೇಕು. ಹೀಗೆ ಕರ್ತವ್ಯಲೋಪವಾದಲ್ಲಿ ಸಮಾಜಕ್ಕೆ ಹಾನಿಯಾಗುವುದು; ಆದುದರಿಂದ ಸಮಾಜಹಾನಿಯೂ ಮುಷ್ಕರದ ಒಂದು ವೈಶಿಷ್ಟ್ಯವಾಗಿದೆ ಒಂದು ಲಕ್ಷಣವಾಗಿದೆ. ಇಂತಹ ಮುಷ್ಕರ ವೈದಿಕಸಂಪ್ರದಾಯದಲ್ಲಿ ಶಾಸ್ತ್ರಸಮ್ಮತವಾಗಿ ನಡೆದುಬಂದಿದೆ ಎಂದು ನಾವಿಲ್ಲಿ ಹೇಳಬಯಸುತ್ತೇವೆ.

ಪುರಾಣಗಳಲ್ಲಿ ವಿಶ್ವಾಮಿತ್ರನ ಕತೆಯನ್ನು ನೀವು ಕೇಳಿರುವಿರಷ್ಟೆ? ಇವನು ಗಾಧಿವಂಶದ ರಾಜನು, ಕ್ಷತ್ರಿಯನು. ಆದರೆ ತನ್ನ ಕ್ಷತ್ರಿಯ ಕರ್ತವ್ಯವನ್ನೇ ತಾನು ಮಾಡುವುದಿಲ್ಲ ಎಂದು ಮುಷ್ಕರವನ್ನು ಹೂಡಿದನು. ಎಂತಹ ಮುಷ್ಕರ! ಅನ್ನ-ನೀರುಗಳನ್ನು ಬಿಟ್ಟನಂತೆ, ಒಂದೇ ಕಾಲ ಮೇಲೆ ನಿಂತನಂತೆ, ಆ ಮೇಲೆ ಎರಡನೆಯ ಕಾಲಿನ ಮೇಲೆ ನಿಂತನಂತೆ, ಇನ್ನೂ ಏನೇನೊ





ಮಾಡಿದನಂತೆ! ಆಗಿನ ಕಾಲದಲ್ಲಿ ಅದಕ್ಕೆ 'ತಪಸ್ಸು' ಎಂಬ ಹೆಸರಿದ್ದಿತು. ಆಗಿನ ಕಾಲದ ಸಮಾಜಪದ್ಧತಿಯಲ್ಲಿ ಅವನಿಗೆ ಬಡತಿ ಬೇಕಾಗಿದ್ದಿತು. ಕ್ಷತ್ರಿಯ ಜಾಗದಿಂದ ಬ್ರಾಹ್ಮಣಜಾಗಕ್ಕೆ ಪ್ರೊಮೋಶನ್ ಬೇಕಾಗಿದ್ದಿತು. ಒಂದೆಡೆ ದೇವ ದೇವತೆಗಳೆಲ್ಲ ಅವನಿಗೆ ವಿರುದ್ಧರಾಗಿದ್ದರು ಇನ್ನೊಂದೆಡೆ ಆಗಿನ ಕಾಲದಲ್ಲಿ ಟ್ರೇಡ್ ಯೂನಿಯನ ಗಳು ಇಲ್ಲದ್ದರಿಂದ ಅವನ ಸಹಜೀವಿಗಳ ಬೆಂಬಲವೂ ಅವನಿಗಿದ್ದಿರಲಿಲ್ಲ. ಈ ಕಾರಣಕ್ಕಾಗಿ ಅವನಿಗೆ ಸಾವಿರಾರು ವರ್ಷಗಳ ವರೆಗೆ ಮುಷ್ಕರವ (ತಪಸ್ಸ)ನ್ನು ನಡೆಯಿಸಬೇಕಾಯಿತು ನಡೆಯಿಸಿದನು ಆ ಬಂಟ. ಇಷ್ಟೇ ಅಲ್ಲದೆ ಕೊನೆಗೆ ಬ್ರಹ್ಮರ್ಷಿ ಜಾಗಕ್ಕೆ ಪ್ರೊಮೋಶನ್ ದೊರಕಿಸಿಕೊಂಡು ಜಯಶೀಲನಾದ! ಮುಷ್ಕರಗಳ ಮೂಲಪುರುಷ ಈ ವಿಶ್ವಾಮಿತ್ರ!

ಇಂದು ನಮ್ಮ ದೇಶದ ಎಲ್ಲ ಭಾಗಗಳಲ್ಲಿ ಸಾಮಾನ್ಯವಾಗಿ ವಿದ್ಯಾರ್ಥಿಗಳು ವರ್ಷಕ್ಕೆ ಎಂಟು ತಿಂಗಳುಗಳಂತೆ ಮುಷ್ಕರ ಹೂಡುತ್ತಾರೆ [ಮಿಕ್ಕ ನಾಲ್ಕು ತಿಂಗಳು ರಜೆಯ ಅವಧಿಯಾದ್ದರಿಂದ ಆ ಬಗ್ಗೆ ಅವರು ಹೊಣೆಗಾರರಲ್ಲ]. ವಿದ್ಯಾರ್ಥಿಗಳ ಈ ನಡತೆಯನ್ನು ಎಲ್ಲರೂ ಖಂಡಿಸತೊಡಗಿದ್ದಾರೆ. ನಿಜವಾಗಿ ಇದು ಅನ್ಯಾಯ, ಶುದ್ಧ ಅನ್ಯಾಯ, ಸಂಪ್ರದಾಯಕ್ಕೆ ವಿರುದ್ಧವಾದ ಅನ್ಯಾಯ ನಮ್ಮ ದೇಶದಲ್ಲಿ ಪ್ರಾಚೀನ ಕಾಲದಿಂದಲೂ ವಿದ್ಯಾರ್ಥಿಗಳಿಗೆ ಮುಷ್ಕರ ಹೂಡುವುದು ಅಧಿಕಾರ ಮಾತ್ರವಲ್ಲ, ಕೆಲವೊಮ್ಮೆ ಕರ್ತವ್ಯ ಎನ್ನಿಸಿದೆ. ಈ ಸಂದರ್ಭದಲ್ಲಿ ಎಲ್ಲರಿಗೂ ಸುಪರಿಚಿತನಾಗಿರಬಹುದಾದ ಪ್ರಲ್ಹಾದನ ಕತೆಯನ್ನು ಲಕ್ಷ್ಯಕ್ಕೆ ತಂದುಕೊಳ್ಳಬೇಕು. ಶಿಕ್ಷಣಸಂಸ್ಥೆಯಲ್ಲಿ ಯಾವುದನ್ನು ಕಲಿಸಬೇಕು ಯಾವುದನ್ನು ಕಲಿಸಬಾರದು ಎಂಬುದರ ಕೊನೆಯ ನಿರ್ಣಯದ ಅಧಿಕಾರ ವಿದ್ಯಾರ್ಥಿಗೆಯೆ ಇದೆ, ಶಿಕ್ಷಕನಿಗೆ ಇಲ್ಲ ಎಂದು ಈ ಕತೆಯು ಸ್ಪಷ್ಟವಾಗಿ ಸಾರುತ್ತಿದೆ. ಶಾಲೆಯಲ್ಲಿ ಶಿಕ್ಷಕನು ಪ್ರಲ್ಹಾದನಿಗೆ 'ಉಮಾರಮಣ ಹರನೆ ಶಿವಾ' ಎಂದು ಕಲಿಸಿದನು;] ಅದು ತಪ್ಪು, 'ರಮಾರಮಣ ಹರಿ ಕೇಶವಾ' ಎಂಬುದೆ ಸರಿಯಾದ ಪಠ್ಯವಿಷಯ ಎಂದನು ಪ್ರಲ್ಹಾದನು. ಶಿಕ್ಷಕನು ಕೇಳಲಿಲ್ಲ, ಪ್ರಲ್ಹಾದನೂ ಜಗ್ಗಲಿಲ್ಲ, ತನ್ನದೆ ಸರಿ ಎಂದು ಮುಷ್ಕರವನ್ನು ಹೂಡಿದನು. ಇಂದು ಹೇಗೆ ವಿದ್ಯಾರ್ಥಿಗಳ ಮುಷ್ಕರವನ್ನು ಮುರಿಯಲು ಪೋಲೀಸರು ಲಾಠೀಚಾರ್ಜ್, ಅಶ್ರುವಾಯು, ಗೋಲೀಬಾರುಗಳನ್ನು ಪ್ರಯೋಗಿಸುವರೊ ಹಾಗೆಯೆ ಅಂದಿನ ಕಾಲದಲ್ಲಿ ಪ್ರಲ್ಹಾದನಿಗೆ ಬೆಟ್ಟದ ತುದಿಯಿಂದ ನೂಕುವುದು ಆನೆಯ ತುಳಿತ, ವಿಷಪ್ರಾಶನ ಮೊದಲಾದ ದಂಡನೆಗಳನ್ನು ಪ್ರಯೋಗಿಸಿದರು. ಇಂದಿನಂತೆ ಅದು ಕಲ್ಲೆಸೆಯುವ ವಿದ್ಯಾರ್ಥಿಗಳ ಮತ್ತು ನಾಗರಿಕರ ಗುಂಪುಗಳು ಪ್ರಲ್ಹಾದನಿಗೆ ಬೆಂಬಲವಾಗಿರಲಿಲ್ಲ. ಅರಮನೆಯದಾಗಲಿ ಊರೊಳಗಿನ ಬೇರೆ ಪ್ರಾಸಾದಗಳದಾಗಲಿ ಒಂದು ಕಿಟಕಿಯ ಗಾಜನ್ನೂ ಪ್ರಲ್ಹಾದನು ಒಡೆಯಲಿಲ್ಲ; ಒಬ್ಬನೇ ದಂಡನೆಯನ್ನು ಎದುರಿಸಿದನು, ಕೊನೆಗೆ ಜಯಶೀಲನಾದನು. ತಾನು ಭಕ್ತನೆನ್ನಿಸಿಕೊಂಡನು, ಅವನ ರಾಜನು ದೈತ್ಯನೆನ್ನಿಸಿಕೊಂಡನು. ಇಂದು ಮುಷ್ಕರ ಹೂಡುವ ವಿದ್ಯಾರ್ಥಿಗಳ ಧ್ವಜ ಚಿಹ್ನೆಯಾಗಬಲ್ಲನು ಭಕ್ತ ಪ್ರಲ್ಹಾದನು.

ಮುಷ್ಕರದ ಇನ್ನೊಂದು ವೈಶಿಷ್ಟ್ಯವೆಂದರೆ ಮುಷ್ಕರ ಹೂಡುವವನು ಸ್ವಾರ್ಥವನ್ನು ಸಾಧಿಸಲು ತೊಡಗಿರುವಾಗಲೂ ತಾನೇ ಕಷ್ಟವನ್ನು ಸಹಿಸುವನಲ್ಲದೆ ಮಿಕ್ಕವರಿಗೆ ತೊಂದರೆಯನ್ನು ಕೊಡುತ್ತಿರಲಿಲ್ಲ. ಹಿಂದಿನ ಕಾಲದಲ್ಲಿ ಈ ಕಾರಣಕ್ಕಾಗಿ ಮುಷ್ಕರವು ವೈಯಕ್ತಿಕವಾಗಿತ್ತು. ಆದರೆ ಅಂದಿನಿಂದ ಇಂದಿನ ವರೆಗೆ ಪ್ರಜಾಪ್ರಭುತ್ವ ಬೆಳೆದಂತೆ ಕಷ್ಟಕ್ಕೆ ಅಧಿಕಾರವೂ ವ್ಯಾಪಕವಾಗಿದೆ; ಇಂದು ವ್ಯಕ್ತಿಯಲ್ಲದೆ ಸಮಾಜವು ಕೂಡ ಕಷ್ಟವನ್ನು ಸಹಿಸಬೇಕಾಗುವುದು. ಇಂದು ಮುಷ್ಕರಗಳಿಂದ ಸಮಾಜಕ್ಕೆ ತೊಂದರೆಯಾದರೆ ಆ ಬಗ್ಗೆ ನಾವು ಕೋಪಿಸಿಕೊಳ್ಳುವುದು ತಪ್ಪು; ಆ ಮಟ್ಟಿಗೆ ನಮ್ಮ ದೇಶದಲ್ಲಿ ಪ್ರಜಾಪ್ರಭುತ್ವ ತತ್ತ್ವ ಬೆಳೆದಿದೆ, ಬೇರೂರಿದೆ ಎಂದು ಸಂತೋಷ ಪಡಬೇಕು. ಸರಕಾರವು ಸ್ವೇಚ್ಛೆಯಿಂದಲೆ ಒಳ್ಳೆಯದನ್ನು ಮಾಡಿದರೆ ಅದು ಪ್ರಜಾಪ್ರಭುತ್ವಕ್ಕೆ ಕಲಂಕ. ಜನರು ಮುಷ್ಕರವನ್ನು ಹೂಡಬೇಕು. ದೇಶಕ್ಕೂ ದೇಶದ ಎಲ್ಲರಿಗೂ ತೊಂದರೆಯಾಗಬೇಕು, ಆ ಮೇಲೆ ಸರಕಾರವು ಯೋಗ್ಯವಾದುದನ್ನು ಮಾಡಬೇಕು. ಅದು ನಿಜವಾದ ಪ್ರಜಾಪ್ರಭುತ್ವದ, ಹೊಣೆಗಾರಿಕೆಯ ಸರಕಾರದ ಲಕ್ಷಣ. ಕಲ್ಲು ಬೀಸಿ, ಕಟ್ಟಡಗಳನ್ನು ಸುಟ್ಟು, ಗುಂಡಿನೇಟಿಗೆ ಸತ್ತು ನಾವು ನಮ್ಮ ಕಾಯಕದಿಂದಲೆ ನಮಗೆ ಬೇಕಿದ್ದುದನ್ನು ಮಾಡಿಕೊಳ್ಳುತ್ತಿದ್ದೇವೆ ಎಂಬುದು ಯಾವ ದೇಶದ ನಾಗರಿಕರಿಗೆ ಹೆಮ್ಮೆ ಎನ್ನಿಸಲಿಕ್ಕಿಲ್ಲ? ಹಾಗೆ ಮಾಡಲು ನಮ್ಮೊಡನೆ ಸಹಕರಿಸುವುದಲ್ಲದೆ, ನಮಗೆ ಪ್ರೋತ್ಸಾಹವನ್ನೂ ಕೊಡುತ್ತಿದೆ ಎಂದು ನಮ್ಮ ಸರಕಾರದ ಬಗ್ಗೆಯೂ ನಾವು ಹೆಮ್ಮೆಯನ್ನು ತಾಳಲೇಬೇಕು. ನಮ್ಮ ಸರಕಾರವೂ ನಮ್ಮ ಸನಾತನ ಸಂಪ್ರದಾಯವನ್ನೆ ನಡೆಸುತ್ತಿದೆ ಸಾಕ್ಷಾತ್ ಪರಮಾತ್ಮನು ಹಾಕಿಕೊಟ್ಟ ದಾರಿಯನ್ನೆ ತುಳಿಯುತ್ತಿದೆ. ಪರಮಾತ್ಮನೆ ಹೇಳಿಲ್ಲವೆ ?

> ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।
> ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ ॥

ದಂಗೆ-ಲೂಟಿ ಕೊಲೆ-ಕೊಳ್ಳೆ ಪರಮಾವಧಿಯನ್ನು ಮುಟ್ಟಿದ ಮೇಲೆಯೆ ಸರಕಾರವು ತನ್ನ ಕರ್ತವ್ಯಕ್ಕಾಗಿ ಅವತರಿಸುವುದು.

ಹಾಗೆ ನೋಡಿದರೆ "ನೀವೆಲ್ಲ ಕೆಟ್ಟು ಹಾಳಾಗುವ ವರೆಗೆ ನಾನು ಬರುವುದೆ ಇಲ್ಲ" ಎಂದು ಪರಮಾತ್ಮನೆ ಮುಷ್ಕರವನ್ನು ಹೂಡಿ ನಮಗೆ ಭಗವದ್ಗೀತೆಯಲ್ಲಿ ಬೋಧಿಸಿದ್ದಾನೆ ಎಂದು ನಾವು ಧೈರ್ಯವಾಗಿ ಹೇಳಬಹುದಲ್ಲ ? ●



ವೀರ ಕಂಪಣರಾಯನು ದಕ್ಷಿಣ ದೇಶದತ್ತ ದಿಗ್ವಿಜಯಕ್ಕೆ ಅಣಿಯಾದಾಗ ವಿಜಯನಗರದಲ್ಲಿ ಮೊಳಗಿದ ಪಯಣ ದುಂದುಭಿಗಳ ಧ್ವನಿಯಿಂದ ಭಯಗೊಂಡು ಕಣ್ಣುಮುಚ್ಚಿದ ಆದಿಶೇಷನು ಏಕಕಾಲಕ್ಕೆ ಅಂಧನೂ ಬಧಿರನೂ ಆದನಂತೆ! ಅಸಂಖ್ಯ ಮಾಂಡಲೀಕ ರಾಜರನ್ನು ಕೂಡಿಕೊಂಡು ಕುಮಾರ ಕಂಪಣನು ದ್ರವಿಡ ನಾಡಿನ ಮೇಲೆ ದಾಳಿಯಿಕ್ಕಿ ಯವನರ ಆಳಿಕೆಗೆ ಪೂರ್ಣವಿರಾಮವನ್ನೀಯಬೇಕೆಂದು ತಂದೆ ಸಮ್ರಾಟ ಬುಕ್ಕರಾಯರು ಆಜ್ಞಾಪಿಸಿದ್ದರು.

ಪಯಣದ ಸಕಲ ಸಿದ್ಧತೆಗಳು ಕೊನೆಗೊಂಡು ಭೇರಿಗಳು ಮೊಳಗುತ್ತಿರುವಾಗ ಕಂಪನು ತಂದೆಯ ಆಶೀರ್ವಾದಕ್ಕೆ ಬಂದಾಗ "ಮಗು, ಯವನರ ದುರಾಡಳಿತೆಯಿಂದ ದಕ್ಷಿಣ ದೇಶದ ವಿದ್ಯೆ, ಶೀಲ, ಸಂಸ್ಕೃತ ಸಂಸ್ಕೃತಿ ಹಾಗು ಕುಲೀನತೆಗಳು ವಿನಾಶದತ್ತ ಮುಖ ಮಾಡಿವೆ. ಧರ್ಮಗ್ಲಾನಿಯಾಗಿ ಕಲಿಕಾಲದ ತಾಂಡವ ನೃತ್ಯವು ನಡೆದಿದೆ. ಮಧುರೆಯ ಶಿವದೇವಾಲಯವಾಗಲಿ ಶ್ರೀರಂಗದ ರಂಗನಾಥಸ್ವಾಮಿಯ ದೇವಾಲಯವಾಗಲಿ ಮುಚ್ಚಿವೆ ಎಂದು ಗುಪ್ತಚಾರರು ವರದಿ ಮಾಡಿದ್ದಾರೆ. ಅಂತಲೆ ನೀನು ತಮಿಳು ನಾಡಿನ ಮೇಲೆ ದಂಡೆತ್ತಿ ಹೋಗಿ ಮಧುರೆಯ ಸುಲ್ತಾನನಾದ ಫಕರುದ್ದೀನ ಮುಬಾರಕ ಶಾನನ್ನು ಮತ್ತು ಅವನಿಗೆ ಬೆಂಬಲವಾಗಿ ನಿಂತಿರುವ ರಾಜಗಂಭೀರ ದುರ್ಗದ ಸಂಭುವರಾಯನನ್ನು ಪರಾಜಿತಗೊಳಿಸಿ ಪ್ರಜೆಗಳು ಶಾಂತಿಯಿಂದ ಬಾಳುವಂತೆ ಮಾಡಬೇಕು. ನೀನಲ್ಲಿ ಸ್ತ್ರೀ, ಮೃಗಯಾ, ಮದಿರೆಗಳ ದಾಸನಾಗಿ ಸರ್ವಸ್ವವನ್ನೂ ಹಾಳುಮಾಡಿಕೊಳ್ಳಬೇಡ ಅಪಾತ್ರರಿಗೆ ರಾಜಾನುಗ್ರಹವನ್ನು ತೋರಿಸಿ ಯಜ್ಞಕುಂಡದಲ್ಲಿ ಅರ್ಪಿಸಬೇಕಾದ ಹವಿಸ್ಸನ್ನು ಸ್ಮಶಾನಚಿತೆಯಲ್ಲಿ ಚಲ್ಲಬೇಡ" ಎಂದು ಉಪದೇಶಿಸಿದರು.

"ಅಪ್ಪಾಜಿ, ನಾನಾರ ಉದರದಲ್ಲಿ ಜನಿಸಿ ಬಂದಿರುವೆನೆಂಬ ಅರಿವು ನನಗಿದೆ ನಿಮ್ಮ ಮತ್ತು ಅಮ್ಮಾಜಿಯವರ ಆಶೀರ್ವಾದ ನನಗಿದ್ದರೆ ಸುಲ್ತಾನನ ರಕ್ತದಿಂದ ನಿಮ್ಮ ಪಾದವನ್ನು ತೊಳೆಯಬಲ್ಲೆ" ಎಂದನು, ಬುಕ್ಕರಾಯನ ಜ್ಯೇಷ್ಠ ಪುತ್ರನಾದ ಕುಮಾರ ಕಂಪನು.

ಅಷ್ಟರಲ್ಲಿ ಮಹಾರಾಣಿ ದೇಪಾಯಿ ಕಂಪಣನ ಹೆಂಡತಿ ಗಂಗಾದೇವಿಯನ್ನು ಕರೆದುಕೊಂಡು ಬಂದು "ಕಂಪಾ ಗಂಗಾದೇವಿಯನ್ನು ಸುರಕ್ಷಿತವಾಗಿ ಕರೆದು ತರುವ ಹೊಣೆ ನಿನ್ನದು" ಎಂದಳು.

"...ಇದೇನು ದೇಪಾಯಿ, ದಿಗ್ವಿಜಯಕ್ಕೆ ಹೊರಟುನಿಂತ ಕಂಪಣನೊಡನೆ ಗಂಗಾದೇವಿಯನ್ನು ಕಳುಹಿಸುತ್ತಿರುವಿ?" ಎಂದರು ಸಮ್ರಾಟರು.

"ಅಹುದಹುದು...ನನ್ನರಸ...! ಸತಿಪತಿಗಳು ಸಹಧರ್ಮಿಗಳಲ್ಲವೆ? ಸಾಕ್ಷಾತ ಸರಸ್ವತಿಯೇ ಆದ ಕವಿಯಿತ್ರಿ ಗಂಗಾದೇವಿಗೆ ಕಾವ್ಯ ಬರೆಯುವ ಮುನ್ನ ಯುದ್ಧವನ್ನು ಪ್ರತ್ಯಕ್ಷವಾಗಿ ನೋಡುವ ಬಯಕೆಯಾಗಿದೆಯಂತೆ ಪಾಪ. ನೋಡಿಬರಲಿ ಎಂದು ನನ್ನಾಶೆ" ಎಂದಳು, ಕಿಲಕಿಲನೆ ನಗುತ್ತ ಮಹಾರಾಣಿ ದೇಪಾಯಿ.

ಕೂಡಲೇ ಕಂಪಣ ಮತ್ತು ಗಂಗಾದೇವಿಯರು ಬುಕ್ಕರಾಯ ಹಾಗು ದೇಪಾಯಿಯವರ ಆಶೀರ್ವಾದ ಪಡೆದು ಅಶ್ವಗಳನ್ನೇರಿ ಸೈನ್ಯದತ್ತ ನಡೆದರು. ಆಗಲೇ ಸೋಮಪ್ಪ ದಂಡನಾಯಕ, ಗಂಡುಗಲಿ ಮರಿಯಪ್ಪ ನಾಯಕ, ದಂಡಾಧಿಪ ಗೋಪಣರಾಯ ಸೈನ್ಯವನ್ನು ಮುನ್ನಡೆಸಿದ್ದರು. ಕಂಪನು ಅವರನ್ನು ಕೂಡಿಕೊಂಡೊಡನೆ ಸೈನ್ಯದ ವೇಗವು ಅಧಿಕವಾಯಿತು ಐದಾರು ದಿವಸಗಳ ಪ್ರಯಾಣವನ್ನು ಮಾಡಿ ವಿಜಯನಗರದ ಗಡಿಯನ್ನು ದಾಟಿ ರಾಜಗಂಭೀರ ದುರ್ಗಕ್ಕೆ ಮುತ್ತಿಗೆಯನ್ನು ಹಾಕಿದರು. ನೋಡು ನೋಡುವಲ್ಲಿ ರಾಜಗಂಭೀರ ದುರ್ಗವು ಕೈವಶವಾಯಿತಲ್ಲದೆ ಸಂಭುವರಾಯನು ಸೆರೆಸಿಕ್ಕನು. ಅವನನ್ನು ಹಲವರು ಜೀವಂತ ಸುಡಬೇಕೆಂದರೆ ಹಲವರು ಕುದಿಯುವ ಎಣ್ಣೆಯಲ್ಲಿ ಕರಿಯಬೇಕೆಂದರು. ಆದರೆ ಕಂಪಣನು ಸಂಭುವರಾಯನಿಗೆ ಜೀವದಾನ ಮಾಡಿ ಇದೆಂದೂ ಯವನರಿಗೆ ಸಹಾಯವನ್ನು ಮಾಡದಿರುವ ಆಶ್ವಾಸನೆಯನ್ನು ಅವನಿಂದ ಪಡೆದನು

ಅಲ್ಲಿಂದ ಸೈನ್ಯವು ಮಧುರೆಯತ್ತ ನಡೆಯಿತು. ಆಗಲೇ ಗುಪ್ತಚಾರರು ಅಲ್ಲಿಂದ ಭಯಾನಕ ವಾರ್ತೆಗಳನ್ನು ತಂದಿದ್ದರು ಆ ಗುಪ್ತಚಾರರ ವರದಿಗಳನ್ನು ಕೇಳಿಕೊಂಡು ಕಂಪಣರಾಯನಿಗೆ ವಿವರವಾಗಿ ಹೇಳುವ ಕಾರ್ಯಭಾರವನ್ನು ಗಂಗಾದೇವಿ ವಹಿಸಿಕೊಂಡಿದ್ದಳು. ಕಂಪಣರಾಯನು ಸೈನಿಕರ ಯೋಗಕ್ಷೇಮವನ್ನು ವಿಚಾರಿಸಿ ಬರುತ್ತಿರುವಾಗ ಗಂಗಾದೇವಿಯು "ನಾವಿನ್ನು ಮಧುರೆಯನ್ನು ಬೇಗನೆ ಮುತ್ತಬೇಕು" ಎಂದಳು

"ಪ್ರಿಯೆ, ನಾವೀಗ ಮಧುರೆಯತ್ತಲೇ ದಂಡಯಾತ್ರೆಗೆ ನಡೆದಿರುವೆವಲ್ಲ" ಎಂದನು.

"ನನ್ನರಸ, ಮಧುರೆಯ ದೇವಾಲಯಗಳೆಲ್ಲಾ ಮುಚ್ಚಿವೆಯಂತೆ ಶ್ರೀರಂಗಕ್ಕೂ ಅದೇ ಸ್ಥಿತಿ ಬಂದೊದಗಿದೆಯಂತೆ ಮೊದಲು ಯಾವ ಮಧುರೆಯ ರಾಜಬೀದಿಗಳಲ್ಲಿ ರಮಣಿಯರ ಪೈಜಣದ ಮಧುರವಾದ ಉಲಿವು ಕೇಳಿ ಬರುತ್ತಿತ್ತೋ ಈಗಲ್ಲಿ ನಾಗರಿಕರಿಗೆ ಹಾಕಿದ ಕೈಬೇಡಿಗಳ ಕರ್ಕಶ ಧ್ವನಿ ಕಿವಿಗಳನ್ನು ಕೊರೆಯುತ್ತಿದೆಯಂತೆ ಯಾವ ತಾಮ್ರಪರ್ಣಿ ನದಿಯ ಪ್ರವಾಹದಲ್ಲಿ ತರುಣಿಯರ ಮೃಗಂಧ ಪರಿತ ಸುವಾಸನೆ ಬರುತ್ತಿತ್ತೋ ಈಗಲ್ಲಿ ರಕ್ತಮಾಂಸ

ಗಳು ಬಿರಿತು ದುರ್ವಾಸನೆ ಬರುತ್ತಿದೆಯಂತೆ. ನನ್ನರಸ...ಗೋಪುರದ ಮೇಲಿದ್ದ ಗೊಂಬೆಗಳನ್ನು ಆವರಿಸಿದ ಜಾಡವು, ಜೀವಕಳೆದು-ಕೊಂಡವರಮೇಲೆ ಆಚ್ಛಾದಿಸಿದ ಶುಭ್ರವಸ್ತ್ರದಂತೆ ಕಂಗೊಳಿಸುತ್ತಿದೆಯಂತೆ...ನಾನಿನ್ನು ...ವರ್ಣಿಸಲಾ...ರೆ" ಎಂದಳು ಗಂಗಾದೇವಿ ಕಣ್ಣೀರು ತುಂಬಿ! ಗುಪ್ತಚಾರರ ವರದಿಗಳಿಂದ ಅವಳ ಕವಿ ಹೃದಯ ಘಾಸಿಗೊಂಡಿತ್ತು!

ಮಧುರೆಗೆ ಬಂದ ಈ ಸುದ್ದಿಯನ್ನು ಕೇಳಿ ಕಂಪಣನ ರಕ್ತವು ಕುದಿಯಹತ್ತಿತು. ಸುಲ್ತಾನನ ರಕ್ತದಿಂದ ತನ್ನ ಖಡ್ಗವನ್ನು ತೋಯಿಸಿ ತಾಮ್ರಪರ್ಣಿ ನದಿಯಲ್ಲಿ ತೊಳೆಯುವತನಕ ತನಗೆ ಸಮಾಧಾನವಿಲ್ಲೆಂದು ಕಂಪಣನು ಸಾರಿದನು. ಸೈನ್ಯ ಆದಾಗಲೇ ಮುನ್ನಡೆದಿತ್ತು.

ವಿಜಯನಗರದ ಸೈನ್ಯವು ಮಧುರೆಯನ್ನು ತಲುಪುತ್ತಲೇ ಸುಲ್ತಾನ ಫಕರುದ್ದೀನ ಮುಬಾರಕನ ಸೈನ್ಯವು ಶತ್ರುಗಳನ್ನು ಎದುರಿಸಲು ಸಿದ್ಧವಾಗಿ ನಿಂತಿತ್ತು. ಎರಡೂ ಸೈನ್ಯಗಳಲ್ಲಿ ತುಮುಲ ಯುದ್ಧವು ನಡೆದಾಗ ಕಂಪಣನು ಸುಲ್ತಾನನ್ನು ಎದುರಿಸಿದನು. ವಿಜಯನಗರ ಸೈನ್ಯದ ಬಾಣಗಳು ಕಾಳರಾತ್ರಿಯ ಕಟಾಕ್ಷದಂತೆ ಯವನ ಸೈನಿಕರ ಮೇಲೆ ಬೀಳುತ್ತಿರುವಾಗ ಕಂಪಣನು ಅಗಸ್ತ್ಯನು ಕಳುಹಿಸಿಕೊಟ್ಟ ಖಡ್ಗದಿಂದ ಫಕರುದ್ದೀನ ಮುಬಾರಕ ಶಾನ ತಲೆಯನ್ನೇ ನೆಲಕ್ಕೆ ಕೆಡವಿದನು. ಆಗ ಯವನರ ಸೈನ್ಯ ಚಲ್ಲಾಪಿಲ್ಲಿಯಾಯಿತು. ಮಧುರೆಯ ಸಮಗ್ರ ಸೈನ್ಯವು ಸೋತು ಶರಣಾಗತವಾದರೂ ಹಲವಾರು ಸೈನಿಕರು ತಪ್ಪಿಸಿಕೊಂಡು ಶ್ರೀರಂಗದಲ್ಲಿದ್ದ ಮಧುರೆಯ ಸುಲ್ತಾನನ ಅಧೀನ ಸುಲ್ತಾನನಾದ ನಜರುದ್ದೀನನ್ನು ಸೇರಲು ಪ್ರಯಾಣ ಬೆಳೆಸಿದರು.

ಶ್ರೀರಂಗದ ಸುಲ್ತಾನನಂತೂ ಕಂಪಣನು ರಾಜಗಂಭೀರ ದುರ್ಗಕ್ಕೆ ಬಂದಾಗಲೇ ರಂಗಸ್ವಾಮಿ ದೇವಾಲಯದ ಹೊರಭಿತ್ತಿಯನ್ನು ಧ್ವಂಸ ಮಾಡಿ ಬದಿಯಲ್ಲಿರುವ ಸಮಯಪುರದಲ್ಲಿ ಆ ಕಲ್ಲುಗಳಿಂದ ಒಂದು ಅರಮನೆಯನ್ನು ಕಟ್ಟಿಸಿದ್ದನು. ಶ್ರೀರಂಗ ದೇವಾಲಯವನ್ನು ನೆಲಸಮ ಮಾಡುವದೇ ಆ ಸುಲ್ತಾನನ ಉದ್ದೇಶವಾಗಿತ್ತು ಮಧುರೆಯಿಂದ ಕೆಲ ಸೈನಿಕರು ಬಂದಾಗ ಅವನ ದುರುದ್ದೇಶಕ್ಕೆ ರೆಕ್ಕೆಗಳು ಬಂದಂತಾದವು. ಶ್ರೀರಂಗದಲ್ಲಿ ಸುಲ್ತಾನನು ದೇವಾಲಯವನ್ನು ಭಗ್ನಗೊಳಿಸುವ ವಾರ್ತೆ ಕಾಳ್ಗಿಚ್ಚಿನಂತೆ ಹರಡಿತು

ಈ ವಾರ್ತೆಯನ್ನು ಕೇಳಿದ ಅರ್ಚಕವೃಂದವು ವಿಮಂಚನೆಗೊಂಡಿತು. ತನ್ಮೂಲಕ ಯವನರ ಅಪವಿತ್ರ ಹಸ್ತಗಳಿಂದ ರಂಗನಾಥಸ್ವಾಮಿಗೆ ಅವಮಾನವಾಗುವದನ್ನು ತಪ್ಪಿಸಲು ವೇದಾಂತ ದೇಶಿಕಾಚಾರ್ಯರು ರಹಸ್ಯವಾಗಿ ಸ್ವಾಮಿಯ ಮೂರ್ತಿಯನ್ನೇ ತೆಗೆದುಕೊಂಡು ಅಂಜನಾದ್ರಿಯತ್ತ ಪ್ರಯಾಣವನ್ನು ಬೆಳೆಸಿದರು. ಸ್ವಾಮಿಗೆ ಶ್ರೀರಂಗದಲ್ಲಿ ದೊರೆಯಬೇಕಾದ ಯಥೋಚಿತ ಅರ್ಚನೆ ತಿರುಪತಿಯಲ್ಲಿ ದೊರೆಯುವಂತಾಯಿತಲ್ಲಾ ಎಂದು ಶ್ರೀರಂಗದವರಿಗೆ ಸಮಾಧಾನವೆನಿಸಿದರೂ ಸ್ವಾಮಿ ತವರೂರನ್ನು ತ್ಯಜಿಸ



ಬೇಕಾಯಿತಲ್ಲ ಎಂದು ಅವರಿಗೆ ಅವರ್ಣನೀಯ ದುಃಖವಾಯಿತು

ದೇವಾಲಯದ ಮೂರ್ತಿಯನ್ನು ಭಗ್ನಗೊಳಿಸಿ. ದೇವಾಲಯವನ್ನೇ ನೆಲಸಮ ಮಾಡಿ ವರ್ಣದ್ವೇಷವನ್ನು ಸಾಧಿಸಬೇಕೆಂದು ದುರಾಲೋಚನೆಯನ್ನು ಮಾಡುತ್ತಿದ್ದ ಸುಲ್ತಾನನಿಗೆ ಮೂರ್ತಿ ಮಾಯವಾದದ್ದನ್ನು ಕೇಳಿ ಕೋಪವು ಇಮ್ಮಡಿಸಿತು. ತತ್‌ಕ್ಷಣವೇ ಸಮಯಪುರದ ತನ್ನ ಅರಮನೆಯಲ್ಲಿ ಅವನೊಂದು ಸಭೆಯನ್ನು ಕರೆದು ಕಾಲವಿಲಂಬ ಮಾಡದೇ ದೇವಾಲಯವನ್ನು ಧ್ವಂಸಗೊಳಿಸಬೇಕೆಂದು ಹೇಳಿ ಸಿದ್ಧತೆ ಮಾಡಲು ಆಜ್ಞಾಪಿಸಿದನು. ಸುಲ್ತಾನನ ಈ ನೀಚ ವಿಚಾರದಿಂದ ವಿಲೋಲಗೊಂಡ ಶ್ರೀರಂಗದವರಿಗೆ ಸುಲ್ತಾನನನ್ನು ಪ್ರತಿಭಟಿಸುವ ಮಾರ್ಗವೇ ತಿಳಿಯದಾಯಿತು

ದೇವಾಲಯವನ್ನು ಭಗ್ನಗೊಳಿಸುವ ಮುನ್ನ ಅದರ ಭವ್ಯತೆಯನ್ನೊಮ್ಮೆ ವೀಕ್ಷಿಸಿ ಅದರ ಕಲಾವೈಭವದ ಮಾಧುರ್ಯವನ್ನೊಮ್ಮೆ ಆಸ್ವಾದಿಸಬೇಕೆಂಬ ಆಶೆಯಾಗಿದ್ದರಿಂದ ಸುಲ್ತಾನನು ಏಕಾಕಿಯಾಗಿ ಅಶ್ವವನ್ನೇರಿ ದೇವಾಲಯಕ್ಕೆ ಬಂದನು ಆಗ ದೇವಾಲಯವು ನಿರ್ಜನವಾಗಿತ್ತು.

ಅಶ್ವದಿಂದಿಳಿದು ಮಹಾದ್ವಾರವನ್ನು ಪ್ರವೇಶಿಸಿ ದೇವಾಲಯದೊಳಕ್ಕೆ ಬರುತ್ತಿರುವಾಗ, ಅದೇ ತಾನೇ ಸ್ವಾಮಿಯ ನರ್ತನ ಸೇವೆಯನ್ನು ಪೂರೈಸಿ ಗೃಹಾಭಿಮುಖವಾಗಿ ನಡೆದ ನರ್ತಕಿ ಮಧುರವಾಣಿ ಸುಲ್ತಾನನ ದೃಷ್ಟಿಗೆ ಎದುರಾದಳು. ಸ್ವಾಮಿ ಆದೆಲ್ಲಿಯೋ ಇರಲಿ ತನ್ನ ಸೇವೆಯನ್ನು ಸ್ವೀಕರಿಸಿ ಸಂತೃಪ್ತನಾಗಿ ದೇವಾಲಯಕ್ಕೆ ಬಂದೊದಗಿದ ವಿಪತ್ತನ್ನು ನಿವಾರಿಸಬಹುದೆಂದು ಭಾವಿಸಿದ್ದ ಮಧುರವಾಣಿ ದೇವಾಲಯದಲ್ಲಿ ಯಾರಿರದಿದ್ದರೂ ತಾನರ್ಪಿಸುವ ಸೇವೆಗೆ ಚ್ಯುತಿಯನ್ನು ತಂದಿರಲಿಲ್ಲ.

ಮಧುರವಾಣಿಯ ಗೆಜ್ಜೆಗಳ ಮಧುರ ಧ್ವನಿ, ಅದಕ್ಕಿಂತಲೂ ಮಧುರತರವಾದ ಅವಳ ಅನುಪಮ ಸೌಂದರ್ಯ ಸುಲ್ತಾನನ ಪಾದಗಳು ಮುಂದಕ್ಕೆ ಚಲಿಸದಂತೆ ಮಾಡಿದವು ಸೌಭಮತ್ತು ಸುಂದರತೆಗಳಿಗೆ ತನ್ನ ದೇಶವಾದ ಪರ್ಶಿಯಾ ಒಂದೇ ಹೆಸರಾದುದೆಂದು ಕಲ್ಪಿಸಿದ್ದ ನಜೀರುದ್ದೀನನಿಗೆ ಮಧುರವಾಣಿಯ ಮೋಹಕ ರೂಪವು ಕಣ್ಣು ತೆರೆಸಿತು. ಸುಲ್ತಾನನು ಒಂದು ಹೆಜ್ಜೆಯನ್ನು ಮುಂದಕ್ಕೆ ಇಟ್ಟೊಡನೆಯೇ ಮಧುರವಾಣಿಯ ಗೆಜ್ಜೆಗಳ ಧ್ವನಿ ನಿಂತಿತು ಅವಳಿಗೆ ಕಾಲರೂಪಿಯೇ ತನ್ನೆಡೆ ನಡೆದು ಬರುವಂತೆ ಭಾಸವಾಯಿತು.

ಸುಲ್ತಾನನು ನಿಂತಲ್ಲಿಯೇ ನಿಂತು ದರ್ಪದಿಂದ "ನೀನಾರು?" ಎಂದನು

"ರಂಗನಾಥಸ್ವಾಮಿಯ ನರ್ತನ ಸೇವೆಗೆ ನಿಯಮಿತಳಾಗಿರುವ ದೇವದಾಸಿ ನಾನು ನನಗೆ ಮಧುರವಾಣಿ ಎಂಬ ಅಭಿದಾನ" ಎಂದಳು, ಭಯಗ್ರಸ್ತಳಾದ ಮಧುರವಾಣಿ

"ಭಯಪಡುವ ಕಾರಣವಿಲ್ಲ ಮಧುರವಾಣಿ ನಾನಾರೆಂಬುದನ್ನು ನೀನು ಅರಿತಿರುವೆಯಾ"? ಎಂದನು, ಸುಲ್ತಾನ

"ಅರಿಯಬಲ್ಲೆ ದೊರೆ ತಾವು ಶ್ರೀರಂಗದ ಸುಲ್ತಾನರು. ತಮಗೆ ಪ್ರಣಾಮ ಸಲ್ಲಿಸದಿದ್ದುದು ಅನುಚಿತವಾಯಿತೇನೋ ಈ ದಾಸಿಯನ್ನು ಕ್ಷಮಿಸಬೇಕು" ಎಂದಳು

"ಅದಿರಲಿ ಮಧುರವಾಣಿ ನಿನಗೆ ಅಲ್ಲಾ ಸ್ವರ್ಗಸಮಾನ ಸ್ವರೂಪತೆಯನ್ನು ದಯಪಾಲಿಸಿದ್ದಾನೆ. ದಿಲ್ಲಿಯ ಸಮ್ರಾಟರ ಅರಮನೆಯನ್ನು ಅಲಂಕರಿಸಬೇಕಾದ ನೀನು ಈ ಕಲ್ಲು ದೇವರ ಸೇವೆಯಿಂದ ನಿನ್ನ ತಾರುಣ್ಯವನ್ನೇ ವ್ಯಯಿಸುತ್ತಿರುವಿಯಲ್ಲಾ ನನ್ನ ಝನಾನಾ ಸೇರಲು ನೀನು ಮನಸ್ಸು ಮಾಡಿದರೆ ಸಮಯಪುರದ ಅರಮನೆಯೊಂದಿಗೆ ನನ್ನ ಉಳಿದ ಹತ್ತೂ ಬೀಬೀ ಸಾಹೇಬಾರನ್ನು ನಿನ್ನ ಪಾದಗಳಿಗೆ ಕೆಡವುತ್ತೇನೆ" ಎಂದನು ಪೀಠೆಯನ್ನು ತೀಡುತ್ತ ಸುಲ್ತಾನನು.

ಆ ಕ್ಷಣ ಮಧುರವಾಣಿ ಯೋಚಿಸಿ "ಸುಲ್ತಾನ್ ಈ ದೇವದಾಸಿಗೆ ತಾವು ಮಹಾರಾಣಿಯ ಪಟ್ಟವನ್ನು ದಯಪಾಲಿಸಿದರೆ ಅವಳದನ್ನು ನಿರಾಕರಿಸಬಹುದೆ? ಸುಲ್ತಾನರ ಸುಖ ದಾಸಿಗೆ ಈ ದಾಸಿಯು ತನ್ನ ದೇಹವನ್ನೀಯುದಿದ್ದರೆ ಬೇರಾರಿಗೆ ನಾನರ್ಪಿಸಲಿ ಜಹಾಪನಾ?" ಎಂದಾಗ, ನಜೀರುದ್ದೀನನು ಉನ್ಮಾದಗೊಂಡನ. ಬೇಟೆ ಬಯಸುವ ಪೂರ್ವದಲ್ಲಿಯೇ ಸಾಧಿಸಬಹುದೆಂದು ಸುಲ್ತಾನ ಕನಸಿನಲ್ಲಿಯೂ ನೆನೆಸಿರಲಿಲ್ಲ. ಸುಲ್ತಾನನಿಗೆ ಸ್ವರ್ಗವು ಪಾದದಡಿಯಲ್ಲಿಯೇ ಬಂದಂತಾಯಿತು. ಅವಳ ರೂಪಕ್ಕೆ ಮಾರುಹೋದ ನಜೀರುದ್ದೀನನಿಗೆ ದೇವಾಲಯದ ಉಳಿದ ಭಾಗವನ್ನು ನೋಡುವ ಮನಸ್ಸೇ ಆಗಲಿಲ್ಲ. ಯಾವಾಗ ಮಧುರವಾಣಿಯನ್ನು ತನ್ನ ಅಂತಃಪುರಕ್ಕೆ ಕರೆದುಕೊಂಡು ಹೋದೇನೋ ಎಂಬಾತುರತೆಯಲ್ಲಿ ಅವನು ತನ್ನ ಉದ್ದೇಶವನ್ನೇ ಮರೆತನು.

"...ಹಾಗಾದರೆ ಮಧುರವಾಣಿ...ನಾವೀಗಲೇ ಅಂತಃಪುರಕ್ಕೆ ಹೊರಡೋಣವೇ? ಮಧುರವಾಣಿ ನೀನು ನಿನ್ನನ್ನು ದಾಸಿ ಎಂದು ಕರೆದುಕೊಳ್ಳಬೇಡ. ಕಾಶ್ಮೀರಂಗೆ ಗುಲಾಬಿ ಹೂವಿನ ಸೌಂದರ್ಯ ಮಲ್ಲಿಗೆಯ ಸೌರಭ ಕಂಡ ಹಳಿಯದೇನೋ!...ಮಧುರವಾಣಿ ನಾನೇ ನಿನ್ನ ಗುಲಾಮನಾಗಿದ್ದೇನೆ..." ಎಂದನು ಭ್ರಾಂತಗೊಂಡ ಸುಲ್ತಾನ.

"ಜಹಾಪನಾ...ನೀವು ಹೀಗೆ ಮಾತನಾಡಬಾರದು. ನಿಮ್ಮ ಚರಣಸೇವಕಿ ನಾನು ನಿಮ್ಮ ಅಧಿಕಾರ ನನ್ನನ್ನು ಮಣಿಸಿದೆ ಆದರೆ ನನ್ನದೊಂದು ಕೋರಿಕೆ ಇದೆ."

"ನಿನ್ನ ಕೋರಿಕೆಯನ್ನು ಸಲ್ಲಿಸಲು ಈ ಸುಲ್ತಾನನಿಗೆ ಆಗದೇ? ಒಂದೇಕೆ ಸಾವಿರಾರು ಕೋರಿಕೆಗಳನ್ನು ಕೇಳು ಆದೇಕೆ ಈ ಸುಲ್ತಾನನೇ ನಿನ್ನ ದಾಸನಾಗಿರುವಾಗ ಅವನ ಮೇಲೆ ನೀನು ಬೇಕಾದ ಅಧಿಕಾರವನ್ನು ನಡೆಸಬಲ್ಲೆ. ನೀನೇ ಮಧುರಾ ಸುಲ್ತಾನರ ಅಧೀನ ಸುಲ್ತಾನಾ. ಈ ನಜೀರುದ್ದೀನ ನಿನ್ನಾಜ್ಞೆಯನ್ನೇ ಪಾಲಿಸುವ ಗುಲಾಮ. ಮಧುರವಾಣಿ ಈ ರಾತ್ರಿಯೇ ನೀನ ನನ್ನವಳಾಗಬೇಕು ನಡೆ ...ನನ್ನ ಅಶ್ವವು ನಮ್ಮನ್ನೇ ಕಾಯುತ್ತಿದೆ ಬೇಕಿದ್ದರೆ ಮೇಣೆಯನ್ನೇ ತರಿಸಲೇನು ? ಉಟ್ಟ ವಸ್ತ್ರದಿಂದ ನನ್ನ ಅಂತಃಪುರಕ್ಕೆ ಬರಬೇಕು " ಎಂದು ಅಂಗಲಾಚಿದನು.

"ಜಹಾಪನಾ ನಾನಿನ್ನು ನನ್ನ ಮನೆಯ ಹೊಸ್ತಿಲನ್ನು ತುಳಿಯುವ ಪ್ರಮೇಯವೇ ಇಲ್ಲ. ಈ ರಾತ್ರಿ ಏಕೆ ಈ ಕ್ಷಣವೇ ಈ ಮಧುರವಾಣಿ ನಿಮ್ಮವಳು. ಆದರೆ...ನನ್ನ ಕೋರಿಕೆಯನ್ನು ಮಾತ್ರ ತಾವು ನಡೆಸಿಕೊಡಬೇಕು" ಎಂದು, ಮತ್ತೆ ಪ್ರಾರ್ಥಿಸಿದಳು ಮಧುರವಾಣಿ.

"ಹೇಳು ಪ್ರಿಯಾ ನಿನ್ನ ಹೆಸರು ಕೂಡ ಅದೆಷ್ಟು ಮಧುರವಾಗಿದೆ. ಹೇಳುವಲ್ಲಿ ವಿಲಂಬ ಮಾಡಿ ಕಾಲಹರಣದಿಂದ ವಿರಹವ್ಯಥೆಯನ್ನು ಹೆಚ್ಚಿಸಬೇಡ" ಎಂದನು.

".....ಏನಿಲ್ಲ......ಜಹಾಪನಾ...... ಬರುವ ಪೌರ್ಣಿಮೆಯ ಬೆಳದಿಂಗಳಿನಲ್ಲಿ ನನ್ನ ಕುಲದೈವವಾದ ರಂಗನಾಥ ಸ್ವಾಮಿಗೆ ನಾನು ನರ್ತನ ಸೇವೆಯನ್ನು ಸಲ್ಲಿಸಬೇಕೆಂದು ಹರಕೆಯನ್ನು ಹೊತ್ತಿದ್ದೇನೆ ಅದೋ ಅಲ್ಲಿ ಕಾಣುವ ಮಂಟಪದಲ್ಲಿ ನಾನು ನರ್ತಿಸಬೇಕು ನನ್ನ ಸ್ವಾಮಿ ನನ್ನ ಸೇವೆಯನ್ನು ಸ್ವೀಕರಿಸಬೇಕು. ಅದೊಂದೇ ನನ್ನಾಶೆ"

"ಇದರಲ್ಲೇನು ಚಿನ್ನ! ನಾನೆಂದುಕೊಂಡಿದ್ದೆ ನೀನು ಹತ್ತುಲಕ್ಷ ವರಹಗಳನ್ನು ಕೇಳಬಹುದೆಂದು..." ಎಂದು, ಗಹಗಹಿಸಿ ನಕ್ಕನು ಸುಲ್ತಾನ ಆಗಲೇ ಅವನು ಮಧುರವಾಣಿಯ ಮೃದುವಾದ ಹಸ್ತಗಳನ್ನು ತನ್ನ ಹಸ್ತಗಳಲ್ಲಿ ತೆಗೆದುಕೊಂಡಿದ್ದನು. ಮಧುರವಾಣಿ ಅದಕ್ಕೆ ಪ್ರತಿಭಟಿಸಿರಲಿಲ್ಲ.

"ಆದರೆ......ಸುಲ್ತಾನ......ಇನ್ನು ಮೂರು ದಿವಸಗಳಲ್ಲಿ ಬರುವ ಅಮಾವಾಸ್ಯೆಯ ರಾತ್ರಿಯಂದೇ ತಾವು ಈ ದೇವಾಲಯವನ್ನು ಉಧ್ವಸ್ತ ಮಾಡುವಿರೆಂದು ಕೇಳಿಬಲ್ಲೆ." ಎಂದಳು, ತನ್ನ ತಲೆಯನ್ನು ಸುಲ್ತಾನನ ದೇಹದ ಮೇಲೆ ಚೆಲ್ಲುತ್ತ.

"ಅಹುದಹುದು ಮಧುರವಾಣಿ. ಅದಕ್ಕೆಂದೇ ನಾನಿಲ್ಲಿ ಬಂದದ್ದು."

"ಹಾಗಾದರೆ ನನ್ನ ಕೋರಿಕೆಯನ್ನು ನೀವು ಪೂರೈಸುವದು ಹೇಗೆ? ಬರುವ ಪೌರ್ಣಿಮೆಯಂದು ನನ್ನ ಸೇವೆ ಮುಗಿದನಂತರ ನೀವು ದೇವಾಲಯವನ್ನು ನನ್ನೆದುರೇ ನೆಲಸಮ ಮಾಡಿರಿ. ನನ್ನ ಆತಂಕವಿಲ್ಲ. ನನ್ನ ಹರಕೆಯನ್ನು ಸ್ವಾಮಿಗೆ ಸಲ್ಲಿಸದೆ ಹೋದರೆ ಸ್ವಾಮಿ ನನ್ನ ಮೇಲೆ ಮುನಿಯಬಹುದು. ನನ್ನ ಮೇಲೆ ಮುನಿದರೆ ಅದರ ಪರಿಣಾಮ ನಿಮ್ಮ ಮೇಲೆ ಆಗಬಹುದಲ್ಲ. ನಿಮ್ಮ ಹಿತವೇ ನನ್ನ ಹಿತ! ಜಹಾಪನಾ, ನಾನು ಸುಲ್ತಾನಳಲ್ಲವೇನು!! ನನ್ನ ಮಾತಿನಲ್ಲಿ ಆಜ್ಞೆಯಿಲ್ಲ, ಕೋರಿಕೆ ಇದೆ..." ಎಂದು ಕಣ್ಣರಳಿಸಿ ಮಧುರವಾಣಿ ಮೃದುವಾದ ಬೆರಳುಗಳನ್ನು ಸುಲ್ತಾನನ ದೇಹದ ಮೇಲೆ ತೀಡಿದಾಗ ಸುಲ್ತಾನನು ಸೋತೇ ಹೋದನು. ಮತ್ತೆ ಮೆಲ್ಲನೆ ಮಧುರವಾಣಿ "ಜಹಾಪನಾ ತಾವೇ ಇದರೊಡೆಯರೆಂದ ಮೇಲೆ ಬೇಕಾದಾಗ ಇದನ್ನು ಕೆಡವಬಹುದಲ್ಲ" ಎಂದಳು.

"ಆಗಲಿ....ಮಧುರವಾಣಿ.... ಇದಂತ್ಲೇನು! ಬರುವ ಪೌರ್ಣಿಮೆಯಂದು ಈ ದೇವಾಲಯದಲ್ಲಿ ನಿನ್ನ ನರ್ತನವಾಗಲಿ, ಆಮೇಲೆ ಇದನ್ನು ಭಗ್ನಗೊಳಿಸುವೆ ಸುಲ್ತಾನಳ ಈ ಕೋರಿಕೆಯನ್ನು ಸಲ್ಲಿಸದಿದ್ದರೆ ನಾನೇಕೆ ಸುಲ್ತಾನನಾಗಬೇಕು! ಆದರೆ...ಮಧುರವಾಣಿ ನೀನು ನನ್ನ ಅರಮನೆಗೆ ಮಾತ್ರ ಬರಬೇಕು" ಎಂದನು.

"...ಇದನ್ನೇನು ನುಡಿಯುವಿರಿ ಜಹಾಪನಾ! ತಮ್ಮನ್ನು ನಂಬಿದ ನಾನು ಬೇರೆಲ್ಲಿ ಹೋಗಲಿ! ಸುಲ್ತಾನ...ನನ್ನದಿನ್ನೊಂದು...ಕೋ...ರಿ...ಕೆ. ರಂಗನಾಥ ಸ್ವಾಮಿಗೆ ಪೌರ್ಣಿಮೆಯಂದು ನರ್ತನಸೇವೆಯನ್ನು ಸಲ್ಲಿಸುವೆನೆಂಬ ಹರಕೆಯನ್ನು ಹೊತ್ತಿದ್ದರಿಂದ, ಅದು ಪೂರೈಸುವವರೆಗೂ ತಾವು ನನ್ನನ್ನು ಧರ್ಮಾಂತರಗೊಳಿಸಬಾರದು. ಧರ್ಮಾಂತರ ಹೊಂದದಿದ್ದರೂ ಪೌರ್ಣಿಮೆಯ ವರೆಗೂ ನಾನು ಅಭಿಸಾರಿಕೆಯಾಗಿ ನಿಮ್ಮ ಸುಖಕ್ಕಾಗಿ ಈ ದೇಹವನ್ನರ್ಪಿಸಬಲ್ಲೆ. ದೇಹದೊಂದಿಗೆ ನನ್ನ ಮನಸ್ಸೂ ನಿಮ್ಮನ್ನೇ ಸೇರಿದೆ ಜಹಾಪನಾ! ಇಲ್ಲಿ ನಿಂತು ವಿಲಂಬಮಾಡಿ ಪ್ರಯೋಜನವೇ." ಎಂದವಳೇ ಮಧುರವಾಣಿ ಸುಲ್ತಾನನ ಕೈಹಿಡಿದುಕೊಂಡು ದೇವಾಲಯದಿಂದ ಹೊರಬಂದಳು ಅವನೊಂದಿಗೆ ಅಶ್ವವನ್ನೇರಿ ಶ್ರೀರಂಗದ ರಾಜಬೀದಿಯಲ್ಲಿ ಹೋದಳು. ಮಧುರವಾಣಿ ಸುಲ್ತಾನನೊಂದಿಗ ಒಂದೇ ಅಶ್ವದಲ್ಲಿ ಸಮಯಪುರದ ಅರಮನೆಗೆ ತೆರಳುವದನ್ನು ಅವಲೋಕಿಸಿದ ಶ್ರೀರಂಗದ ಸಹಸ್ರಾರು ಚಕ್ಷುಗಳು ಅವಜ್ಞೆಯಿಂದ ಆವರು ಹೋದ ಬೀದಿಯನ್ನೇ ನೋಡುತ್ತಿದ್ದವು ಆದರೆ ಮಧುರವಾಣಿ ನಗೆಸೂಸುತ್ತ ಗೆಲುವಿನಿಂದಲೇ ಕುಳಿತಿದ್ದಳು.

ಶ್ರೀರಂಗದವರಿಗೆ ಮಧುರವಾಣಿಯ ಈ ಅನುಚಿತ ವರ್ತನೆ ಆಘಾತವನ್ನು ತಂದಿತು ಯಾವ ಸುಲ್ತಾನನು ದೇವಾಲಯವನ್ನೇ ಉಧ್ವಸ್ತಗೊಳಿಸಲು ಪಣತೊಟ್ಟಿರುವನೋ, ಅವನನ್ನೇ ದೇವದಾಸಿ ಮಧುರವಾಣಿ ಅಭಿಸಾರಿಕೆಯಾಗಿ ಅನುಸರಿಸುತ್ತಿರುವದು ಶ್ರೀರಂಗದವರಿಗೆ ನಾಚಿಕೆಯಿಂದ ತಲೆತಗ್ಗಿಸಿ ಮಾಡುವಂತಾಯಿತು. ಅರ್ಧ್ಯಗರಾರೋ "ಅಹಿಂಸೆಯನ್ನು ಬೋಧಿಸುವರು. ಸೂಳೆಗೆ ನೀತಿಯನ್ನು ಬೋಧಿಸುವದು ಬೋರ್ಗಲ್ಲ ಮೇಲೆ ನೀರೆರೆದಂತಲ್ಲವೇ" ಎಂದು ಆಡಿಕೊಳ್ಳುತ್ತಿರುವದು ಅಲ್ಲಿಲ್ಲಿ ಕೇಳಬರುತ್ತಿತ್ತು

ಆದರೆ ಮಧುರವಾಣಿ ಆದಾಗಲೇ ಸಮಯಪುರದ ಅಂತಃಪುರವನ್ನು ಸೇರಿದ್ದಳು ಅವಳೀಗ ಸುಲ್ತಾನಾ ಆಗದಿದ್ದರೂ ಆಗುವ ಅರ್ಹತೆ.

ಯನ್ನು ಪಡೆದಿದ್ದಳು. ಅಂದೇ ರಾತ್ರಿ ಮದಿರೆಯಿಂದ ಉನ್ಮತ್ತನಾದ ಸುಲ್ತಾನನ ಸುಖಕ್ಕೆ ಮಧುರವಾಣಿ ತನ್ನ ಹೆಣ್ತನವನ್ನು ಬಲಿಗೊಟ್ಟಳು. ಮರುದಿವಸ ಪ್ರಾತಃಕಾಲದಲ್ಲಿ ಮಧುರವಾಣಿ ಸುಲ್ತಾನಾ ಆಗಿ ಸುಲ್ತಾನನನ್ನೇ ಸೇವಕನನ್ನಾಗಿ ಮಾಡಿದಳು. ಸುಲ್ತಾನನನ್ನು ಸೆರೆಹಿಡಿಯಬಂತಹ ಅಪೂರ್ವ ಲಾವಣ್ಯವತಿಯಿತ್ತು. ಶ್ರೀರಂಗನಾಥನನ್ನು ಮಧುರವಾಣಿ ಮನಸ್ಸಿನಲ್ಲಿಯೇ ನೆನೆಸಿ ಸಹಸ್ರಾರು ಪ್ರಣಾಮಗಳನ್ನು ಸಲ್ಲಿಸಿದಳು.

ಸುಲ್ತಾನ ನಜೀರುದ್ದೀನನು ಮಧುರವಾಣಿಯ ಸೌಂದರ್ಯವನ್ನೀಂಟುವಲ್ಲಿ ತನ್ನನ್ನು ತಾನೇ ಮರೆತಿದ್ದನಲ್ಲದೆ ತನ್ನ ಸೈನಿಕರಿಗೆ ದೇವಾಲಯವನ್ನು ಪೌರ್ಣಮಿಯ ವರೆಗೂ ಭಗ್ನಗೊಳಿಸಬಾರದೆಂದು ಆಜ್ಞಾಪಿಸಿದ್ದನು.

ಮರುದಿವಸ ಮಧುರವಾಣಿ ಸುಲ್ತಾನನು ಸಂತೋಷದಲ್ಲಿರುವದನ್ನು ಗುರುತಿಸಿ "...ನನ್ನೊಡೆಯ......ಪಂಡಿತನೂ ಸಮರ್ಥನೂ ಆದ ನನ್ನನ್ನು ಬಲ್ಲ ಸಿಂಗಪ್ಪನೆಂಬವನು ತಮ್ಮ ಸೇವೆಯಲ್ಲಿರಬೇಕೆಂದು ಬಯಸಿದ್ದಾನೆ. ಅವನು ತಮಗೆ ನನ್ನಷ್ಟೇ ವಿಧೇಯನಾಗಿ ಇರುವನೆಂಬ ಆಶ್ವಾಸನೆಯನ್ನು ನಾನು ಕೊಡಬಲ್ಲೆ. ಕಾಲಾಂತರದಲ್ಲಿ ಅವನು ತುರುಕ ಧರ್ಮವನ್ನು ಸ್ವೀಕರಿಸಬಹುದು. ಅವನಿಗೀಗ ದಾರಿದ್ರ್ಯವಿಂಟಿದ್ದರಿಂದ ಯಾಚಕನಾಗಿ ಬಂದಿದ್ದಾನೆ. ನೀವು ಮನಸ್ಸುಮಾಡಿ ಅವನಿಗೆ ಆಶ್ರಯವನ್ನೀಯಬೇಕು" ಎಂದಳು.

"ಇದಾವ ಮಹಾ ಮಾತನ್ನು ಹೇಳುತ್ತಿರುವಿ ಮಧುರವಾಣಿ. ನೀನೇ ಅವನನ್ನು ನಿಯಮಿಸಿ ನನಗೆ ಹೇಳಬೇಕಿತ್ತು" ಎಂದನು, ನಜೀರುದ್ದೀನನು. "ಅದು...ಹೇಗೆ...ಸಾಧ್ಯ! ಸುಲ್ತಾನರಾದ ತಾವು ನಿಯಮಿಸಬೇಕು. ನೀವು ದಾತೃ. ನಾನು ಯಾಚಕಳು. ಭಾರ್ಯಳಾದ ನಾನು ಸುಲ್ತಾನರಂತೆ ಅಧಿಕಾರವನ್ನು ನಡೆಸುವದು ಹೇಗೆ ನನ್ನರಸ" ಎಂದಳು. ಕ್ಷಣಕಾಲ ತಡೆದು "ನೀವಿತ್ತ ಉಚ್ಛಿಷ್ಟವನ್ನುಂಡು ನಿಮ್ಮ ಭೋಗಕ್ಕೆ ಜನ್ಮವೆತ್ತಿಬಂದ ನನಗೆ ಸಿಂಹಾಸನ ನಿಲುಕಲಾರದ ವಸ್ತು" ಎಂದಳು.

"ಮಧುರವಾಣಿ, ನಿನ್ನ ಮಾತಿನಲ್ಲಿ ಅದೆಂತಹ ಮಧುರತೆ ಇದೆ. ಸಿಂಗಪ್ಪನನ್ನು ಇಂದಿನಿಂದಲೇ ನಾನು ಅಂತಃಪುರದ ಅಧಿಕಾರಿ ಎಂದು ನಿಯಮಿಸಿದ್ದೇನೆ." ಎಂದನು, ಸುಲ್ತಾನ. ಸುಲ್ತಾನ ನುಡಿದಿದ್ದೇ ಆಜ್ಞೆ, ಬೇರೆ ಲಿಖಿತ ಆಜ್ಞೆ, ಅದಕ್ಕೆ ಬೇಕಿಲ್ಲಿಲ್ಲ.

ಸಿಂಗಪ್ಪನು ಅಂತಃಪುರದ ಅಧಿಕಾರವನ್ನು ವಹಿಸಿಕೊಂಡು ಕಾರ್ಯವನ್ನು ಪ್ರಾರಂಭಿಸಿ ಎರಡೇ ದಿವಸಗಳಲ್ಲಿ ದೇಹಾಲಸ್ಯವೆಂದು ಸುಲ್ತಾನರಿಗೆ ಹೇಳಿ ಶುಶ್ರೂಷೆ ಪಡೆಯುವದಕ್ಕಾಗಿ ಶ್ರೀರಂಗಕ್ಕೆ ಹೋಗಿ ಬರಲು ಆಜ್ಞೆಯನ್ನು ಪಡೆದನು. ಆ ಎರಡು ದಿವಸಗಳಲ್ಲಿ ಅವನು ಮಧುರವಾಣಿಯೊಂದಿಗೆ ಏದೆಷ್ಟೋ ಕಾಲ ಮಾತನಾಡಿಯೇ ಆಡುತ್ತಿದ್ದನು. ತರುವಾಯ ಸಿಂಗಪ್ಪನು ಮಧುರವಾಣಿಯ ಆಜ್ಞೆ ಪಡೆದೇ ಅಂತಃಪುರವನ್ನು ಬಿಟ್ಟನು. ಆ ಕಾಲ ತುರ್ಕರಿಗೆ ವಿಧಿಸಲಾಗಿದ್ದ ಕರಮನೆಯು ಆ ಮಹತ್ವದ ಹುದ್ದೆ ಹಿಂದುವಾದ ಸಿಂಗಪ್ಪನಿಗೆ ಹೋದದ್ದು ಅಂತಃಪುರದ ಸೇವಕವರ್ಗದಲ್ಲಿ ಅಸಮಾಧಾನವನ್ನುಂಟುಮಾಡಿತ್ತು. ಆದರೆ ಯಾರೂ ಅಧರದಿಂದ ಅಧಿಕವಾಗಿ ಮಾತನಾಡುವಂತಿರಲಿಲ್ಲ.

ಸುಲ್ತಾನರಂತೂ ಮಧುರವಾಣಿಯನ್ನು ಕ್ಷಣಕಾಲ ಕೂಡ ಅಗಲಿರುತ್ತಿರಲಿಲ್ಲ. ಮಧುರವಾಣಿ ಕೂಡ ಅಷ್ಟೇ! ಸುಲ್ತಾನರ ಬೆನ್ನಿಗಂಟಿಯೇ ಇರುತ್ತಿದ್ದಳು.

ಪೌರ್ಣಿಮೆ ಇನ್ನೊಂದು ವಾರವಿರುವಾಗ ಮಧುರವಾಣಿ "ಜಹಾಪನಾ, ಇಂದು ರಾತ್ರಿ ಚದುರಂಗವನ್ನಾಡೋಣವೇ? ಚದುರಂಗವನ್ನಾಡದೆ ಅದೆಷ್ಟೋ ದಿವಸಗಳಾದವು ನನ್ನರಸ" ಎಂದಳು.

"ಮಧುರವಾಣಿ ನಿನಗೆ ಅಲ್ಲಾ ಸುಂದರತೆಯೊಂದಿಗೆ ಪಾಂಡಿತ್ಯವನ್ನೂ ದಯಪಾಲಿಸಿದ್ದಾನೆ. ಚದುರಂಗಕ್ಕೆ ಆಹ್ವಾನಿಸಿದರೆ ಯಾರು ಒಲ್ಲೆನೆಂದಾರು! ಅದರಲ್ಲಿಯೂ ಮಧುರವಾಣಿಯ ಮುಖಾರವಿಂದವನ್ನು ವಿಲೋಕಿಸುತ್ತ ಚದುರಂಗವನ್ನಾಡುವದೆಂದರೆ ನಾನು ನಿರಾಕರಿಸಬಹುದೆ!" ಎಂದನು, ಸುಲ್ತಾನ ನಜೀರುದ್ದೀನ.

"ಜಹಾಪನಾ, ಜೀವಂತ ಚದುರಂಗಗಳನ್ನೇ ನಡೆಸಿ ನಿಷ್ಣಾತರಾದ ನೀವು ಈ ಆಟವನ್ನಾಡುವಲ್ಲಿ ಚತುರರೇ ದು. ನಿಮ್ಮ ದಾಸಿ ಸೋಲುತ್ತಿದ್ದಳು. ಅಂದಮೇಲೆ ನಾನಂತೂ ಸೋಲುವಲ್ಲಿ ಸಂಶಯವಿಲ್ಲ. ಆದರೂ ನಿಮ್ಮನ್ನೊಮ್ಮೆ ಸೋಲಿಸುವ ತನಕ ನೀವು ನನ್ನೊಡನೆ ಆಡುತ್ತಲೇ ಇರಬೇಕು. ರಾತ್ರಿ ಅರಳಿತೆಂದು ಆಟವನ್ನು ಬಿಡಬಾರದು" ಎಂದಳು, ನಗುತ್ತ.



"ಆಗಲಿ... ನಿನ್ನಿಚ್ಛೆಯೇ... ನನ್ನಿಚ್ಛೆ...!"

ರಾತ್ರಿ ಅರಳುತ್ತಿದ್ದಂತೆ ಚದುರಂಗಗಳು ಉರುಳಿ ಮತ್ತೆ ಪಟ್ಟಕ್ಕೆ ಬರುತ್ತಿದ್ದವು. ಸುಲ್ತಾನ ಮತ್ತು ಮಧುರವಾಣಿ ಕಾಯಿಗಳನ್ನು ನಡೆಸುವಲ್ಲಿ ತನ್ಮಯರಾದಾಗ ಸಮುಖಪುರವು ನಿದ್ರೆಯ ತೊಟ್ಟಿಲಲ್ಲಿ ತೂಗುತ್ತಿತ್ತು ಕೂಡಲೇ ಅರಮನೆಯಿಂದ ಅನತಿದೂರದಲ್ಲಿ ಸೈನಿಕರ ಕೂಗು, ಅಶ್ವಗಳ ಖುರಪುಟಗಳ ಧ್ವನಿ ಕೇಳಿ ಬರಹತ್ತಿತು ಚದುರಂಗದಾಟ ಮಧ್ಯದಲ್ಲಿಯೇ ನಿಂತಿತು ಮಧುರವಾಣಿ ಹೆದರಿದ ಹರಿಣಿಯಂತೆ "ಜಹಾಪನಾ, ಅಧಮರಾರೋ ಕೋಲಾಹಲವನ್ನೆಬ್ಬಿಸಿದ್ದಾರೆ ಕಾವಲಗಾರರಿಂದ ಪೂರ್ಣ ವಿವರಗಳು ತಿಳಿಯುವವರೆಗೂ ನೀವು ಈ ಅಂತಃಪುರದಿಂದ ಕದಲಬಾರದು. ನನಗೇಕೋ ಅಂಜಿಕೆ ಅನಿಸುತ್ತದೆ ಪ್ರಿಯತಮಾ... ನೀವು... ಹೋದರೆ... ನನಗಾರು ರಕ್ಷಕರು...?" ಎಂದು ಅವಳು ಸುಲ್ತಾನನನ್ನು ಅಪ್ಪಿಕೊಂಡು ಅಳಹತ್ತಿದಳು.

ಸುಲ್ತಾನನು ಮಧುರವಾಣಿಯ ಬೆನ್ನಮೇಲೆ ಕೈಯಾಡಿಸುತ್ತ "ಮಧುರವಾಣಿ, ನಾನಿರುವಷ್ಟು ಕಾಲ ನಿನಗಾರ ಭಯ! ನಿನ್ನನ್ನು ಅನಾಥಳನ್ನಾಗಿ ಮಾಡಿ ನಾನಿಲ್ಲಿಂದ ಹೋಗಲಾರೆ" ಎಂದು ಮೆಲ್ಲನೆ ಅವಳ ಗಲ್ಲಗಳೆರಡನ್ನೂ ಹಿಡಿದು ರಮಿಸಹತ್ತಿದನು.

ಆಗಲೇ ಸೈನಿಕರ ಕೋಲಾಹಲವು ಅಂತಃಪುರವನ್ನೇ ತಲುಪಿತ್ತು. ಶಸ್ತ್ರಗಳ ತಾಕಲಾಟದ ಧ್ವನಿ ಆರೋಹಕ್ಕೇರುತ್ತಿರುವಂತೆ ಸುಲ್ತಾನನು ಅಸ್ವಸ್ಥನಾಗಿ "ಮಧುರವಾಣಿ, ನಾನಿನ್ನು ಬರಲೇನು. ನೀನು ಅಂಜುವ ಕಾರಣವಿಲ್ಲ ನಾನಿರದಿದ್ದರೂ ನನ್ನ ಭದ್ರಪಡೆಯವರು ಇರುವರಲ್ಲ" ಎಂದು ಖಡ್ಗವನ್ನು ಸರಿಪಡಿಸಿಕೊಂಡನು. ಆಗ ಮಧುರವಾಣಿ "ಜಹಾಪನಾ, ನನ್ನ ಜೀವಕ್ಕಾಗಿ ನಾನು ಅಂಜಿಲ್ಲ. ನಿಮ್ಮ ರಕ್ಷಣೆಯೇ ನನಗೆ ಚಿಂತೆ. ಕಾವಲುಗಾರರನ್ನು ಕರೆಸಿ ವಿಷಯ ತಿಳಿಯಬೇಕಿತ್ತು" ಎಂದಳು.

"...ಇಲ್ಲಿಲ್ಲ... ನಾನೇ... ನೋಡುವೆ" ಎಂದವನೇ ಸುಲ್ತಾನನು ಅಲ್ಲಿಂದ ಹೊರಟನು. ಅವನು ಹತ್ತಾರು ಹೆಜ್ಜೆಗಳನ್ನು ಹಾಕಿದ್ದನೋ ಇಲ್ಲವೊ "ಜೈ ಮಹಾದೇವ" ಎಂಬ ಜೈಜೈಕಾರಗಳು ಅರಮನೆಯನ್ನೇ ನಡುಗಿಸುವಂತೆ ಪ್ರತಿಧ್ವನಿಸಹತ್ತಿದವು ಅದನ್ನು ಕೇಳಿದ ಮಧುರವಾಣಿ ಮನಸ್ಸಿನಲ್ಲಿ "ಸಿಂಗಪ್ಪ ಗೋಪಣರಾಯನ ಸೈನ್ಯವನ್ನು ಕರೆದುಕೊಂಡು ಬಂದುದಕ್ಕೆ ನಿನಗೆ ನೂರು ಪ್ರಣಾಮಗಳು" ಎಂದುಕೊಂಡಳು

ಅಷ್ಟರಲ್ಲಿಯೇ ಸುಲ್ತಾನನು ಕಂಪಣರಾಯನ ಸೈನ್ಯದ ಬಂಧಿಯಾಗಿದ್ದನು. ಸಿಂಗಪ್ಪನು ದಂಡಾಧಿಪತಿ ಗೋಪಣರಾಯನನ್ನು ಕರೆದುಕೊಂಡು ಮಧುರವಾಣಿಯತ್ತ ಬಂದು ಪರಸ್ಪರರ ಪರಿಚಯವನ್ನು ಮಾಡಿಕೊಟ್ಟನು. ಆಗ ಮಧುರವಾಣಿ ನಮಸ್ಕರಿಸಿ "ಸ್ವಾಮಿಯ ದೇವಾಲಯವು ತಾವು ದಂಡೆತ್ತಿ ಬಂದುದರಿಂದ ಅಖಂಡವಾಗಿ ಉಳಿಯಿತು. ಈ ದಾಸಿಯೊಬ್ಬಳ ಮಾತಿಗೆ ಬೆಲೆಯಿತ್ತು ತಾವು ಬಂದುದಕ್ಕೆ ವೈಯಕ್ತಿಕವಾಗಿ ನಾನಾಗಲಿ ಅಥವಾ ಶ್ರೀರಂಗದವರಾಗಲಿ ಯಾವ ರೀತಿ ತಮ್ಮ ಉಪಕಾರವನ್ನು ತೀರಿಸಬೇಕೋ ನನಗೆ ತಿಳಿಯದಾಗಿದೆ" ಎಂದಳು.

"ಮಧುರವಾಣಿ ಇದರ ಶ್ರೇಯಸ್ಸು ನಿಜಕ್ಕೂ ನಿನಗೇ ಸಲ್ಲಬೇಕು ಸುಲ್ತಾನನನ್ನು ನೀನು ಮೋಹಿಸಿ ನಿನ್ನ ಪ್ರೇಮ ಪಾಶದಿಂದ



ಫ್ಯಾಷನ್ ಪ್ರವೀಣೆ ಕುಂಡಧರೆ

ಅವನನ್ನು ಬಂಧಿಸಿ ಅವನಿಂದ ಈ ಹದಿನೆಂಟು ದಿವಸಗಳ ಅವಧಿಯನ್ನು ಪಡೆಯದೇ ಹೋಗಿದ್ದರೆ ನಾನು ಬರುವ ಮುನ್ನವೇ ಸ್ವಾಮಿಯ ದೇವಾಲಯವು ಭಗ್ನವಾಗಿ ಹೋಗುತ್ತಿತ್ತಲ್ಲ" ಎಂದು ಗೋಪಣರಾಯನು ಮುಕ್ತಕಂಠದಿಂದ ಮಧುರವಾಣಿಯನ್ನು ಪ್ರಶಂಸಿಸಿದನು.

ಪೌರ್ಣಿಮೆಯಂದು ದೇವಾಲಯದಲ್ಲಿ ಗೋಪಣರಾಯನ ಅಧ್ಯಕ್ಷತೆಯಲ್ಲಿ ಮಧುರವಾಣಿಯನ್ನು ಸಮಸ್ತರ ಸಮ್ಮುಖದಲ್ಲಿ ಗೌರವಿಸಿದಾಗ ಅವಳು ಆನಂದಭರಿತಳಾಗಿ "ಸ್ವಾಮಿಯ ಅನುಗ್ರಹದಿಂದ ಈ ದೇವದಾಸಿಗೆ ಗೌರವವು ಲಭಿಸಿತು ಆದರೆ ಸುಲ್ತಾನನೊಡನೆ ನಾನಾಡಿದ ನಾಟಕಕ್ಕೆ ಯಾವ ಶಿಕ್ಷೆ ಕಾದಿದೆಯೋ!" ಎಂದು ವಿಷಾದಿಸಿದಳು. ನೆರೆದವರೆಲ್ಲಾ "ನೀನು ನಿರ್ದೋಷಿ" ಎಂದು ಕೂಗಿದರು.

ನಂತರ ಗೆಜ್ಜೆಗಳನ್ನು ಕಟ್ಟಿಕೊಂಡು ಮಧುರವಾಣಿ ನರ್ತನಕ್ಕಿಳಿದಳು. ಅವಳ ಮುಖದಲ್ಲಿ ಅಂದು ಅಪೂರ್ವವಾದ ತೇಜಸ್ಸಿತ್ತು. ಬೆಳದಿಂಗಳು ಅರಳಿದಂತೆ ಅವಳ ನರ್ತನಕ್ಕೆ ಅವರ್ಣನೀಯ ಸೊಬಗು ಬರಹತ್ತಿತು. ನರ್ತಿಸಿ ನರ್ತಿಸಿ ಮಧುರವಾಣಿ ಕುಸಿದು ನೆಲಕ್ಕೆ ಬಿದ್ದಳು ತಾರಕಕ್ಕೇರಿದ ಮದ್ದಲೆ ಒಮ್ಮೆಲೇ ನಿಂತಿತು ತಾಳಗಳ ಧ್ವನಿ ಮೌನವನ್ನಾವರಿಸಿತು. ಗೋಪಣರಾಯನು ಬೇರೆ ದಾಸಿಯರೊಂದಿಗೆ ಮಧುರವಾಣಿಯತ್ತ ಧಾವಿಸಿ ಶೈತ್ಯೋಪಚಾರ ನಡೆಸಿದನು ಆದರೆ ಅವಳಾಗಲೇ ಇಹಲೋಕಯಾತ್ರೆಯನ್ನು ಪೂರೈಸಿದ್ದಳು. ಅವಳ ಸೆರಗಿನಲ್ಲಿ ಕಟ್ಟಿದ ಕಾಗದವನ್ನು ಉಚ್ಚಿ ದಾಸಿಯು ಗೋಪಣರಾಯನ ಕೈಯಲ್ಲಿತ್ತಾಗ ಅದರಲ್ಲಿ ಅವಳು ತನ್ನೆಲ್ಲ ಆಸ್ತಿಯನ್ನೂ ದೇವರಿಗೆ ದತ್ತಿಬಿಟ್ಟ ಉಲ್ಲೇಖವಿತ್ತು. ಅಂದು ಶ್ರೀರಂಗದವರು ಅದೆಷ್ಟು ಕಣ್ಣೀರು ಸುರಿಸಿದರೆಂದರೆ ಕಾವೇರಿಗೆ ನೆರೆ ಬರುವಂತಾಯಿತಂತೆ! ಮಧುರವಾಣಿಯ ಈ ಅಮೂಲ್ಯ ಸೇವೆಗೆ ಶ್ರೀರಂಗವು ಕಣ್ಣೀರಿನ ಹೊರತೂ ಬೇರೇನನ್ನೂ ಕೊಡಲು ಸಮರ್ಥವಾಗಲಿಲ್ಲವಂತೆ!!

ಮುಂದೆ ಗೋಪಣರಾಯನು ಕಂಪಣನ ಆಜ್ಞೆಯಂತೆ ಅಂಜನಾದ್ರಿಯಿಂದ ರಂಗನಾಥಸ್ವಾಮಿಯ ಮೂರ್ತಿಯನ್ನು ತಂದು ಪ್ರತಿಷ್ಠಾಪಿಸಿದನು ಅದನ್ನು ನೋಡಿ ಆನಂದದಿಂದ ವೀರ ಕಂಪಣರಾಯನು ಮತ್ತು ಅವನ ಧರ್ಮಪತ್ನಿ ಗಂಗಾದೇವಿ "ಮಧುರವಾಣಿಯಂತಹ ಅಸಂಖ್ಯ ನಿಃಸ್ವಾರ್ಥ ಜೀವಿಗಳು ನಮ್ಮ ಬೆಂಬಲಕ್ಕಿದ್ದುದರಿಂದಲೇ ಕಾಲಿಯಾಮರ್ದನದಿಂದ ಯಮುನೆಯನ್ನು ರಕ್ಷಿಸಿದಂತೆ ತುರ್ಕರಿಂದ ತಮಿಳನಾಡಿನ ಸಂಸ್ಕೃತಿಯನ್ನು ಅಖಂಡವಾಗಿ ಉಳಿಸಿದಂತಾಯಿತು" ಎಂದರು ನಂತರ "ಮಧುರಾ ವಿಜಯಂ" ಕಾವ್ಯವನ್ನು ಬರೆಯುತ್ತಿರುವ ಗಂಗಾದೇವಿ "ನನ್ನರಸ, ಮಧುರವಾಣಿ ಚಂದ್ರಿಕೆಯನ್ನರಸಿ ಹೋಗದೆ ಚಂದ್ರಿಕೆಯೇ ಮಧುರವಾಣಿಯನ್ನರಸಿ ಬಂದಳು. ಎಲ್ಲವೂ ಸ್ವಾಮಿ ಶ್ರೀರಂಗನಾಥನ ಸಂಕೇತ" ಎಂದಳು. ಆಗ ವೀರ ಕಂಪಣನು "ದೇವಿಯ ಮಾತುಗಳು ಯಾವಾಗಲೂ ಕಾವ್ಯಮಯವಾಗಿರುತ್ತವೆ" ಎಂದಾಗ ನೆರೆದವರೆಲ್ಲಾ ನಕ್ಕರು ಆ ನಗುವಿನಿಂದ ಶ್ರೀರಂಗವೇ ನಕ್ಕಂತಾಯಿತು! ಶ್ರೀರಂಗದ ನಗು ತಮಿಳುನಾಡನ್ನೇ ಆವರಿಸಿತು!



# ಇಷ್ಟು ಒಳ್ಳೆಯ ಹನ್ನೆರಡು ಫೋಟೋಗಳನ್ನು ತೆಗೆಯಿರಿ...




## .ಈ ಕೆಮೆರಾ ಕೊಂಡುಕೊಂಡ ದಿನ




# ಕ್ಲಿಕ್ III

*ಫೋಟೋ ತೆಗೆಯಲು ಪ್ರಾರಂಭಿಸುವುದಕ್ಕೆ ಉತ್ತಮ*
*ಸದಾ ಉಪಯೋಗಿಸಿಕೊಂಡಿರಲು ಅನುಪಮ!*

- ಗುರಿಹಿಡಿದು ಕ್ಲಿಕ್ ಮಾಡಿದರಾಯಿತು! ಸರಿಪಡಿಸಿಕೊಳ್ಳುವ ರಗಳೆಯಿಲ್ಲ, ತಪ್ಪಾಗುವ ಸಂಭವವಿಲ್ಲ.
- ಪ್ರತಿಯೊಂದು '120' ರೋಲ್‌ನಿಂದ 12 ದೊಡ್ಡ (6×6 ಸೆ.ಮಿ.) ಫೋಟೋಗಳನ್ನು ತೆಗೆಯಬಹುದು.
- ಎವರ್-ರೆಡಿ ಕೇಸ್, ಪೋರ್ಟ್ರೇಯಟ್ ಲೆನ್ಸ್ ಮತ್ತು ಫ್ಲಾಶ್‌ಗನ್-ಇವುಗಳಿಗೆ ಪ್ರತ್ಯೇಕ ಬೆಲೆ.

ಆಗ್ಫಾದವರ ಮೇಲ್ವಿಚಾರಣೆಯಲ್ಲಿ ತಯಾರಿಸುವವರು:
ದಿ ನ್ಯೂ ಇಂಡಿಯಾ ಇಂಡಸ್ಟ್ರೀಸ್ ಲಿಮಿಟೆಡ್, ಬರೋಡಾ



*ಪ್ರಕಾಶಮಾನ ಪ್ರಿಂಟ್‌ಗಳಿಗೆ*
*ಮತ್ತು ಎನ್‌ಲಾರ್ಜ್‌ಮೆಂಟ್‌ಗಳಿಗೆ*
*ಆಗ್ಫಾ ಫೋಟೋ ಪೇಪರ್ ಬಳಸಿರಿ.*




ಸೋಲ್ ಡಿಸ್ಟ್ರಿಬ್ಯೂಟರ್ಸ್:
ಆಗ್ಫಾ-ಗೆವರ್ಟ್ ಇಂಡಿಯಾ ಲಿಮಿಟೆಡ್,
ಬೊಂಬಾಯಿ • ನವ ದೆಹಲಿ • ಕಲ್ಕತ್ತ • ಮದರಾಸು

CMAG-105-203 KN

# ಕಣ್ವಕೇಶನ್

–: ಪಾತ್ರಸೃಷ್ಟಿ :–

| | | |
|---|---|---|
| ಕಣ್ವ ಮಹರ್ಷಿ | : | ಕುಲಪತಿ |
| ದುಷ್ಯಂತ | : | ಮಹಾಕುಲಪತಿ |
| ವಿಶ್ವಾಮಿತ್ರ | : | ಮುಖ್ಯ ಅತಿಥಿ |
| ದೂರ್ವಾಸ | : | ಆಮಂತ್ರಿತ ಅಭ್ಯಾಗತ |
| ಶಾಂರ್ಗರವ, ಶಾರದ್ವತ | : | ಕಣ್ವಾಶ್ರಮದ ವಿದ್ಯಾರ್ಥಿಗಳು |
| ಶಕುಂತಲಾ, ಪ್ರಿಯಂವದಾ, ಅನಸೂಯಾ | : | ಕಣ್ವಾಶ್ರಮದ ವಿದ್ಯಾರ್ಥಿನಿಯರು |

ಮತ್ತು ಒಬ್ಬ ಭಟ

[ ಒಂದು ಋಷ್ಯಾಶ್ರಮ. ರಂಗದ ಮಧ್ಯದಲ್ಲಿ ಸ್ವಲ್ಪ ಹಿಂದಕ್ಕೆ ಒಂದು ಆಲದ ಮರವಿದೆ. ಅದರ ನೆರಳಿನಲ್ಲೊಂದು ವಿಶಾಲವಾದ ಶಿಲಾಪೀಠವಿದೆ. ಅದರ ಮೇಲೆ ಮೂರು ಕೃಷ್ಣಾಜಿನಗಳಿವೆ. ಅವುಗಳ ಮೇಲೆ ಬ್ರಹ್ಮರ್ಷಿ ವಿಶ್ವಾಮಿತ್ರ, ಮಹಾರಾಜ ದುಷ್ಯಂತ ಹಾಗೂ ಕುಲಪತಿ ಕಣ್ವ ಮಹರ್ಷಿಗಳು ಆಸೀನರಾಗಿದ್ದಾರೆ. ಮುಖ್ಯ ಶಿಲಾಪೀಠದಿಂದ ತುಸು ದೂರದಲ್ಲಿ ಎಡಕ್ಕೊಂದು ಬಲಕ್ಕೊಂದು ಚಿಕ್ಕ ಶಿಲಾಪೀಠಗಳಿವೆ. ಆದರೆ ಅವು ಬರಿದಾಗಿವೆ. ]

[ ತೆರೆ ಮೇಲೇರಿದಾಗ ರಂಗದ ಎರಡೂ ಪಕ್ಕಗಳಿಂದ ಯಜ್ಞಧೂಮವು ಸುಳಿದುಬರುತ್ತಿರುವುದು ಕಾಣುತ್ತಿದೆ. ಹಿನ್ನೆಲೆಯಲ್ಲಿಂದ ವೇದಮಂತ್ರಘೋಷ ಕೇಳಬರುತ್ತಲಿದೆ. ನಂತರ ಶಾಂರ್ಗರವ, ಶಾರದ್ವತ, ಪ್ರಿಯಂವದೆ ಮತ್ತು ಅನಸೂಯೆ ಪ್ರವೇಶಿಸುವರು- ಮಧ್ಯದ ಪೀಠದ ಮೇಲೆ ಕುಳಿತಿರುವ ವ್ಯಕ್ತಿಗಳು ಮರೆಯಾಗುವಂತೆ ಅವರೆದುರುಗಡೆ ಸಾಲಾಗಿ ಪ್ರೇಕ್ಷಕರನ್ನೆದುರಿಸಿ ನಿಂತು ಕರ ಜೋಡಿಸಿ ಶಿರಬಾಗಿ ವಂದಿಸಿ ಸ್ವಾಗತಗೀತೆಯನ್ನು ಹಾಡತೊಡಗುವರು. ]

ವೃಂದಗಾನ : ಸ್ವಾಗತವು ಸ್ವಾಗತವು ಈ ಕಣ್ವಕೇಶನ್ನಿಗಾಗತರೆ । ಕಣ್ವಮುನಿ ಕುಲಪತಿಗಳಾಶ್ರಮವ ನೈದಿದಭ್ಯಾಗತರೆ । ಸ್ವಾಗತವು ರಾಜಾಧಿರಾಜ ದುಷ್ಯಂತರಿಗೆ । ದೊರೆಗಳಿಗೆ ವರಮಹಾಕುಲಪತಿಗೆ । ಆಶ್ರಮದ ಪೋಷಕ ಪ್ರಭುಗಳಿಗೆ । ಸ್ವಾಗತವು ಬ್ರಹ್ಮರ್ಷಿಯಾದ ವಿಶ್ವಾಮಿತ್ರ ಮುನಿಪಂಗೆ । ನಿರ್ವಿಘ್ನವಾಗಲೀ ಸಭೆಯೆಂದು ದಯೆ ಬರಲಿ ಗಣಪಂಗೆ ॥

( ಮತ್ತೊಮ್ಮೆ ಪ್ರೇಕ್ಷಕರಿಗೆ ಶಿರ ಬಾಗಿ ವಂದಿಸಿ ಹೋಗಿ ಕುಳಿತುಕೊಳ್ಳುವರು. ಶಾಂರ್ಗರವ, ಶಾರದ್ವತರು ಬಲಬದಿಯ ಶಿಲಾಪೀಠದ ಮೇಲೆ ಮತ್ತು ಅನಸೂಯೆ, ಪ್ರಿಯಂವದೆಯರು ಎಡಬದಿಗಿರುವುದರ ಮೇಲೆ. ಆಮೇಲೆ ದುಷ್ಯಂತ ಮಹಾರಾಜ ತನ್ನ ಬಲಗಡೆಗೆ ಕುಳಿತಿರುವ ವಿಶ್ವಾಮಿತ್ರನಿಗೆ ಭಾಷಣವನ್ನಾರಂಭಿಸಲು ಸಂಜ್ಞೆ ಮಾಡುತ್ತಾನೆ. ಕಣ್ವಋಷಿಗಳು ಅದನ್ನು ಕಡೆಯಾಗಿ ನೋಡುತ್ತಾನೆ. ಆದರೆ ಅಷ್ಟರಲ್ಲಿ ಮಾತು ಮುಗಿದಿದೆ. ವಿಶ್ವಾಮಿತ್ರನಾಗಲೇ ಭಾಷಣಕ್ಕೆಂದು ಎದ್ದುನಿಂತಿದ್ದಾನೆ. ಆಮೇಲೆ ಕಣ್ವರು ದುಷ್ಯಂತನಿಗೆ ಏನನ್ನೋ—ಬಹುಶಃ ಕಣ್ವಕೇಶನ್ನಿನ ಕಾರ್ಯಪರಂಪರೆಗನುಚಿತವಾಗಿ ಅರಸ ಆಜ್ಞೆ ಮಾಡಿದುದನ್ನು —ವಿವರಿಸುತ್ತಿರುವುದೂ ಅದಕ್ಕೆ ಅರಸ ಅಸಹಾಯತೆಯಿಂದ ಭುಜಗಳನ್ನೇರಿಸಿದುದೂ ಕಾಣುತ್ತಿದೆ.

ವಿಶ್ವಾಮಿತ್ರ : [ಒಂದು ತಾಡವೋಲೆಯನ್ನು ಓದಿ ನೋಡುತ್ತ ಪ್ರೇಕ್ಷಕರನ್ನುದ್ದೇಶಿಸಿ] ಮಹಾಕುಲಪತಿ ದುಷ್ಯಂತ ಮಹಾರಾಜರೆ, ಕುಲಪತಿ ಕಣ್ವ ಮಹರ್ಷಿಗಳೇ, ಹಾಗೂ ನನ್ನ ಸ್ನಾತಕ ಮಿತ್ರರೆ: ನೀವಿಂದು ಕಣ್ವಕೇಶನ್ನಿನ ಮುಖ್ಯ ಅತಿಥಿಯೆಂದು ನನ್ನನ್ನಾಮಂತ್ರಿಸಿ ನನ್ನ ಮೇಲೆ ಮಹದುಪಕಾರನನ್ನು ಮಾಡಿದ್ದೀರಿ. ಅಲ್ಲದೆ ಲಜ್ಜೆಯಿಂದ ನಾನು ತಲೆ ತಗ್ಗಿಸುವಂತೆಯೂ ಮಾಡಿದ್ದೀರಿ. ಏಕೆಂದರೆ ಕಣ್ವಾಶ್ರಮದಲ್ಲಿ ಹನ್ನೆರಡು ವರುಷ ಅಧ್ಯಯನ ಮಾಡಿ ಸ್ನಾತಕರಾಗಿ ಪದವಿಯನ್ನು ಪಡೆಯಲು ಸಿದ್ಧರಾಗಿ ಕುಳಿತಿರುವ ನಿಮ್ಮೆದುರು ನಿಂತು ಮಾತನಾಡಲು ನಾನು ಸುತರಾಂ ಅಯೋಗ್ಯನು. ನಿಮಗೆಲ್ಲ ಗೊತ್ತು:

ನಾನು ಸ್ವತಃ ಸುಶಿಕ್ಷಿತನಲ್ಲವೆಂದು; ಎಂದರೆ ಇಂತಹ ಯಾವುದೊಂದು ಆಶ್ರಮದಲ್ಲಿ ಶಿಕ್ಷಣ ಪಡೆದವನಲ್ಲ ನಾನು. ನನ್ನ ಪೂರ್ವಾಶ್ರಮದಲ್ಲಿ ನಾನೊಬ್ಬ ಕ್ಷತ್ರಿಯ ರಾಜನಾಗಿದ್ದೆ. ಆ ಮೇಲೆ ಸ್ವಪ್ರಯತ್ನದಿಂದ ಉಗ್ರ ತಪಸ್ಸನ್ನಾಚರಿಸಿ ವಿಶ್ವಾಮಿತ್ರನೆಂದು ತ್ರಿಭುವನಖ್ಯಾತನಾದೆ. ಆದುದರಿಂದ ಆಶ್ರಮಗಳಲ್ಲಿ ನಡೆಯುವ ಶಿಕ್ಷಣಪದ್ಧತಿಯ ಬಗೆಗೆ ನನಗೇನೂ ತಿಳಿಯದು. ಆದರೂ, ಶಿಕ್ಷಣವೆಂದರೆ ಬಹುಶಃ ಅದೂ ಒಂದು ಬಗೆಯ ಉಗ್ರ ತಪವೇ ಇರಬೇಕೆಂದು ನನ್ನ ಭಾವನೆ.

[ಹಿನ್ನೆಲೆಯಲ್ಲಿ ಚಪ್ಪಾಳೆ ಸದ್ದು] ನನ್ನ ನೆಚ್ಚಿನ ವಿದ್ಯಾರ್ಥಿ ಮಿತ್ರರೇ, ವಿದ್ಯಾರ್ಜನೆಯೆಂದರೆ ಅದೊಂದು ಕಠಿಣ ತಪಸ್ಸೆಂಬುದನ್ನು ಲಕ್ಷ್ಯದಲ್ಲಿಡಿರಿ. ಅಂತೆಯೇ ತಪಸ್ಸನ್ನಾಚರಿಸುವಾಗ ಸಾಮಾನ್ಯವಾಗಿ ವಿಘ್ನಗಳೆಲ್ಲ ವಿದ್ಯಾರ್ಥಿಗಳ ವಿದ್ಯಾರ್ಜನೆಯ ಕಾಲದಲ್ಲಿ ಬಂದೇ ಬರುತ್ತವೆ. ತಪೋವಿಘ್ನಗಳು ಅಪ್ಸರೆಯರ ರೂಪದಲ್ಲಿ ಬರುವುದು ವಾಡಿಕೆ. ಎಂದಹಾಗೆಯೇ, ಅಪ್ಸರೆಯರು ಬರಲಿ ಎಂಬ ಆಸೆಯಿಂದಲೇ ತಪಕ್ಕೆ ಕುಳಿತುಕೊಳ್ಳುವವರೂ ಇದ್ದಾರೆ. ಆ ಮಾತು ಬೇರೆ. ಆದರೆ ಮಿತ್ರರೆ, ನೀವು ಮಾತ್ರ ಇಂತಹ ವಿಘ್ನಗಳ ಬಗೆಗೆ ಸದಾ ಜಾಗರೂಕರಾಗಿರಬೇಕು. ಮೊದಮೊದಲು ನಿಮಗವು ವಿಘ್ನಗಳೆಂದು ಗೊತ್ತೇ ಆಗುವುದಿಲ್ಲ. ಏಕೆಂದರೆ ಅವು ಬರುವುದು ಮನಮೋಹಕವಾದ ರೂಪಿನಲ್ಲಿ. ತಪಸ್ವಿಗಳಿಗವು ಕಾಣಿಸಿಕೊಳ್ಳುವದು ನಯನ ಮನೋಹರಿಯರಾದ ಅಪ್ಸರೆಯರಾಗಿ; ಮತ್ತು ತಪಸ್ವಿನಿಯರೆದುರು ಪ್ರತ್ಯಕ್ಷವಾಗುವುದು ಸುಂದರ ರಾಜಕುಮಾರರಾಗಿ. ಆದರೆ ಕಣ್ವರ ಆಶ್ರಮದಲ್ಲಿ ಇಂತಹವೆಲ್ಲ ನಡೆಯುವುದಿಲ್ಲವೆಂದು ನನ್ನ ನಂಬುಗೆ. ಆದುದರಿಂದಲೇ ಇರಬೇಕು ನೂರಾರು ಜನ ವಿದ್ಯಾರ್ಥಿ ವಿದ್ಯಾರ್ಥಿನಿಯರು ನಿಮ್ಮ ಶಿಕ್ಷಣವನ್ನು ಪೂರ್ತಿಗೊಳಿಸಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಸ್ನಾತಕ ಪದವಿ ಪಡೆಯಲು ಅರ್ಹರಾಗಿ ಆತುರರಾಗಿ ಕುಳಿತಿರುವಿರಿ. ನಾನಿನ್ನು ಬಹಳ ಹೊತ್ತು ನಿಮ್ಮ ಪದವೀಲಾಭ ಮಾರ್ಗದಲ್ಲಿ ಕಂಟಕನಾಗಿ




ನಿಲ್ಲದೆ ನಿಮ್ಮನ್ನೆಲ್ಲ ಹೃತ್ಪೂರ್ವಕವಾಗಿ ಆಶೀರ್ವದಿಸಿ ವಿರಮಿಸುತ್ತೇನೆ.

(ಕುಳಿತುಕೊಳ್ಳುವ. ಮುನ್ನಿನಂತೆ ಹಿನ್ನೆಲೆಯಲ್ಲಿ ಚಪ್ಪಾಳೆ.)

ದುಷ್ಯಂತ : (ಮೇಲೆದ್ದು ಪ್ರೇಕ್ಷಕರನ್ನುದ್ದೇಶಿಸಿ) ಕ್ಷಮಿಸಬೇಕು. ಇಂದಿನ ಕಣ್ವಕೇಶನ್ನಿನ ಕಾರ್ಯಕಲಾಪದಲ್ಲಿ ಒಂದು ಸ್ವಲ್ಪ ವ್ಯತಿಕ್ರಮವಾಯಿತು. ನಾನು

ಮೊದಲಿಗೆ ಪದವೀದಾನವನ್ನು ಮಾಡಿ ಆ ಮೇಲೆ ಮುಖ್ಯ ಅತಿಥಿಗಳನ್ನು ಭಾಷಣ ಮಾಡಲು ಕೇಳಿಕೊಳ್ಳಬೇಕಾಗಿತ್ತು. ಆದರೆ, ಏಕೋ ನನಗದು ಮರೆತು ಹೋಯಿತು. ನನಗೆ ಈ ವಯಸ್ಸಿನಲ್ಲಿ ಇಂತಹ ಮರೆವಿರುವುದನ್ನು ಕಂಡು ನಿಮಗೆ ಆಶ್ಚರ್ಯವಾಗಬಹುದು.

**ಶಾರ್ಙ್ಗರವ :** (ಮಧ್ಯದಲ್ಲಿ) ಏನಾಶ್ಚರ್ಯವಿಲ್ಲ.

**ದುಷ್ಯಂತ :** (ಕೋಪದಿಂದ ಕಣ್ಣುರಳಿಸಿ ಅವನ ಕಡೆಗೆ ನೋಡಿ ಆ ಮೇಲೆ ಅಲಕ್ಷಿಸಿ) ಇನ್ನು ಮೇಲೆ ಪದವೀದಾನವು ಪ್ರಾರಂಭವಾಗಲಿ.

(ಕುಳ್ಳಿರುವ)

**ಕಣ್ವ :** (ಮೇಲೆದ್ದು ತಾಡವೋಲೆಯೊಂದನ್ನು ನೋಡುತ್ತ, ಪ್ರೇಕ್ಷಕರನ್ನುದ್ದೇಶಿಸಿ) ಶ್ರೀ ಮಹಾಕುಲಪತಿಗಳೇ, ಈ ಶಾರ್ಙ್ಗರವ, ಶಾರದ್ವತ, ಅನಸೂಯಾ, ಪ್ರಿಯಂವದಾ ಮತ್ತು ಇನ್ನೂ ನೂರು ವಿದ್ಯಾರ್ಥಿಗಳು ಈ ಆಶ್ರಮದಲ್ಲಿ ಹನ್ನೆರಡು ವರುಷ ಅಧ್ಯಯನ ಮಾಡಿ ಸ್ನಾತಕ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಸ್ನಾತಕ ಪದವಿಗೆ ಯೋಗ್ಯರೆನಿಸಿದ್ದಾರೆ. ಅವರಲ್ಲಿ ಕೆಲವರನ್ನು ತಮ್ಮೆದುರು ಉಪಸ್ಥಿತಗೊಳಿಸಲಾಗಿದೆ. ತಾವು ಅವರಿಗೆಲ್ಲ ಸ್ನಾತಕ ಪದವಿಯನ್ನು ಪಾಲಿಸಬೇಕು (ಕುಳ್ಳಿರುವ)

**ದುಷ್ಯಂತ :** (ಮೇಲೆದ್ದು ಒಂದು ಪಕ್ಕದೆಡೆಗೆ ನೋಡಿ) ಈ ಪದವೀದಾನಕ್ಕೆ ಆಶ್ರಮದ ಗುರುವರ್ಗದ ಸಮ್ಮತಿಯಿದೆಯೆಂದುಕೊಳ್ಳಲೇ?

**ಧ್ವನಿಗಳು:** (ನೇಪಥ್ಯದಲ್ಲಿ) ತಥಾಸ್ತು...

**ದುಷ್ಯಂತ :** (ತಾಡವೋಲೆಯೊಂದನ್ನೋದುತ್ತ) ಇಲ್ಲಿ ಉಪಸ್ಥಿತರಾಗಿರುವ ನಿಮಗೆಲ್ಲ ನಾನೀಗ ಸ್ನಾತಕ ಪದವಿಯನ್ನು ದಯಪಾಲಿಸಿದ್ದೇನೆ. ಮತ್ತು ನಿಮ್ಮ ಬಾಳಿನಲ್ಲೆಂದೆಂದಿಗೂ ಕಾಯಾ ವಾಚಾ ಮನಸಾ ಈ ಪದವಿಗರ್ಹರಾಗಿರಿ ಎಂದು ನಿಮಗಾದೇಶವಿತ್ತಿದ್ದೇನೆ. ಮತ್ತು ಇಲ್ಲಿ ಉಪಸ್ಥಿತರಾಗಿಲ್ಲದ ವಿದ್ಯಾರ್ಥಿಗಳಿಗೆ ನಾನೀ ಪದವಿಯನ್ನು— (ತಪ್ಪು ಮಾಡಿದವನಂತೆ ತಡೆದು) ಏನು? ಏನಿದು ಕಣ್ವಮಹರ್ಷಿಗಳೆ, ಇದೇನು? ವಿದ್ಯಾರ್ಥಿಗಳ ಅನುಪಸ್ಥಿತಿಯಲ್ಲಿ ಅವರಿಗೆ ಪದವೀದಾನ ಮಾಡುವ ಹೊಸ ಪರಿಪಾಠ? ನಾನೆಂದೂ ಇಂತಹ ಪದ್ಧತಿಯ ಹೆಸರನ್ನೇ ಕೇಳಿದವನಲ್ಲ ನೀವೆಂದಾದರೂ ಇಂತಹ ವಿಚಿತ್ರ ಉಪಕ್ರಮವನ್ನು ಕಂಡಿದ್ದಿರಾ ವಿಶ್ವಾಮಿತ್ರ ಬ್ರಹ್ಮರ್ಷಿಗಳೆ?

**ವಿಶ್ವಾಮಿತ್ರ :** ನಾನು ಮೊದಲೇ ಹೇಳಲಿಲ್ಲವೆ ಸ್ವಾಮಿ, ನನಗೆ ಶಿಕ್ಷಣ ಸಂಸ್ಥೆಗಳ ಅನುಭವವಿಲ್ಲವೆಂದು!

**ದುಷ್ಯಂತ :** ಅದು ನಿಜ; ಆದರೆ ನಾನಿಂತಹ ಎಷ್ಟೋ ಕಣ್ವಾಶ್ರಮಗಳಲ್ಲಿ ಪದವೀಪ್ರದಾನವನ್ನು ನೆರವೇರಿಸಿದ್ದೇನೆ. ಆದರೆ ವಿದ್ಯಾರ್ಥಿಯ ಅನುಪಸ್ಥಿತಿಯಲ್ಲಿ ಮಾತ್ರ ಪದವಿ ಕೊಟ್ಟುದೆಂಬುದೇ ಇಲ್ಲ.

**ಕಣ್ವ :** ಮಹಾಪ್ರಭು, ನಿಯಮಗಳಿಗೆ ಅಪವಾದವಿರುವುದಿಲ್ಲವೆ? ಇದೊಂದು ಅಪವಾದವೆಂದು ಗಣಿಸಿ ತಾವು ದಯವಿಟ್ಟು ಪದವೀದಾನ ಮಾಡಬೇಕು ಎಂದು ನನ್ನ ವಿನಮ್ರ ಬೇಡಿಕೆ

**ದುಷ್ಯಂತ :** ಓಹೋ, ತಮ್ಮ ಆಶ್ರಮದಲ್ಲಿ ಅಪವಾದಕ್ಕೂ ಅವಕಾಶವಿದೆಯೇನು? ನಾನು ಅನೇಕ ಆಶ್ರಮಗಳನ್ನು ಕಂಡಿರುವೆನಾದರೂ ಇಂತಹ ವಿಶಿಷ್ಟವಾದ ಆಶ್ರಮವನ್ನು ಕಂಡುದೇ ಇದೇ ಮೊದಲು. ಏಕೆಂದರೆ ನಾನೀ ಆಶ್ರಮಕ್ಕೆ ದರ್ಶನವಿತ್ತಿರುವುದು ಇದೇ ಮೊದಲು.

**ಶಾರ್ಙ್ಗರವ :** ಅದೇಕೆ ಮಹಾಸ್ವಾಮಿ, ಹಿಂದೊಮ್ಮೆ ಬಂದಿದ್ದಿರಲ್ಲ; ಒಂಬತ್ತು ತಿಂಗಳ ಹಿಂದೆ!

**ದುಷ್ಯಂತ :** ಒಂಬತ್ತು ತಿಂಗಳ ಹಿಂದೆ?

**ಶಾರ್ಙ್ಗರವ :** ಅಹುದು ಸ್ವಾಮೀ, ಒಂಬತ್ತು ತಿಂಗಳ ಹಿಂದೆ ತಾವಿಲ್ಲಿಗೆ ದಯಮಾಡಿಸಿಹೋಗಿದ್ದಾಗಿತ್ತು; ಅರ್ಥಾತ್ ಪದವೀದಾನಕ್ಕಾಗಿ ಅಲ್ಲ-

**ಶಾರದ್ವತ :** ಮದುವೀ ಕಾರಣಕ್ಕಾಗಿ!

**ದುಷ್ಯಂತ :** ಕುಲಪತಿ ಕಣ್ವಮಹರ್ಷಿಗಳೇ, ಆಶ್ರಮದ ನಿಯಮಗಳಿಗಪವಾದಗಳಿವೆಯೆಂಬುದು ನನಗೀಗಲೀಗ ಖಚಿತವಾಗತೊಡಗಿದೆ. ತಾವು ಸ್ವಲ್ಪ ಇವುಗಳಿಗೆ ಗಮನ ಕೊಟ್ಟು ವಿದ್ಯಾರ್ಥಿಗಳು ಶಿಷ್ಯ ಸಮುದಾಚಾರ ಬಿಟ್ಟು ನಡೆಯದಂತೆ ನೋಡಿಕೊಳ್ಳುವುದೊಳ್ಳೆಯದು. ಇಲ್ಲವಾದರೆ ವಿದ್ಯಾರ್ಥಿಗಳ ಹೊಣೆಗೇಡಿ ವರ್ತನೆ ಮುಂದೊಂದು ದಿನ ನಮ್ಮೆಲ್ಲರ ತಲೆತಿನ್ನುವ ಮಹಾಸಮಸ್ಯೆಯಾಗಿ ನಿಲ್ಲುವುದರಲ್ಲಿ ಸಂಶಯವಿಲ್ಲ.

**ಶಾರ್ಙ್ಗರವ :** ಮಹಾಪ್ರಭು, ಹೊಣೆಯರಿತು ನಡೆಯುವ ಪಾಠವನ್ನು ಹಿರಿಯರಿಂದ ಕಿರಿಯರು ಕಲಿಯಬೇಕು. ಹಿರಿಯರದನ್ನು ತಮ್ಮ ನಡತೆಯಿಂದಲೇ ಕಲಿಸಬೇಕು. ಅವರೇ ಮೇಲ್ಪಂಕ್ತಿ ಹಾಕಿಕೊಡಬೇಕು. ಮಹಾಕುಲಪತಿಗಳು ಸ್ವತಃ ತಾವೇ ಈ ಆಶ್ರಮಕ್ಕೆ ಈ ಮೊದಲು ಬಂದಿದ್ದಿಲ್ಲವೆಂದು ಸಾಧಿಸುವರಾದರೆ ಅವರ ಅಸತ್ಯವಾದಿತ್ವವನ್ನು ವಿದ್ಯಾರ್ಥಿಗಳು ಅನುಕರಿಸಲಾರರೇ?

**ದುಷ್ಯಂತ:** ಕೇಳಿಲ್ಲಿ, ಕೊನೆಯ ಸಲ ಹೇಳುತ್ತೇನೆ. ನಾನೀ ಮೊದಲು ಇಲ್ಲಿಗೆ ಬಂದಿರಲಿಲ್ಲ

**ಶಾರ್ಙ್ಗರವ :** ನಾನು ಬೇಕಾದರೆ ಎಷ್ಟು ಸಲವಾದರೂ ಹೇಳುತ್ತೇನೆ. ನೀವಿಲ್ಲಿಗೆ ಈ ಮೊದಲು ಬಂದಿದ್ದಿರಿ, ಮತ್ತು ಒಂದು ಮಹಾಪರಾಕ್ರಮವನ್ನೂ ಮಾಡಿದಿರಿ—ಅದೂ ಕುಲಪತಿಗಳು ಗುರುಕುಲದಲ್ಲಿಲ್ಲದಿದ್ದಾಗ.

**ದುಷ್ಯಂತ :** (ಕನಲಿ) ಕುಲಪತಿಗಳೇ, ಏನಿವನು ಇದೆಲ್ಲ ಅಸಂಯಮದಿಂದ ಗಳಹುತ್ತಿರುವುದು?

**ಕಣ್ವ :** ಏನು ಮಾಡುವುದು ಮಹಾಪ್ರಭೂ, ಅವನು ನುಡಿದಿದ್ದೆಲ್ಲ ನಿಜವೇ ಎಂದು ಒಪ್ಪದೆ ವಿಧಿಯಿಲ್ಲ. ಕೆಲ ಮಾಸಗಳ ಮುನ್ನ ನಾನಿಲ್ಲದಾಗ ಇಲ್ಲಿಗೆ ಬಂದು ತಾವು ತೋರಿದ ಅಸಂಯಮದಿಂದಾಗಿ ನಮ್ಮೊಬ್ಬ ವಿದ್ಯಾರ್ಥಿನಿಗೀಗ ಅನುಪಸ್ಥಿತಿಯಲ್ಲಿ ಪದವೀದಾನ ಮಾಡಬೇಕಾದ ಪ್ರಸಂಗ ಒದಗಿ ಬಂದಿದೆ.

**ದುಷ್ಯಂತ :** ಯಾರಾ ವಿದ್ಯಾರ್ಥಿನಿ?

**ಕಣ್ವ :** ಅವಳ ಹೆಸರು ಶಕುಂತಲೆ!

**ದುಷ್ಯಂತ :** ಆ್ಞ? ಶಕುಂತಲೆ ಶಕುಂತಲೆ! ಈ ಹೆಸರನ್ನು ಈ ಮೊದಲೆಲ್ಲಿಯೊ ಕೇಳಿದಂತಿದೆ! ಇರಲಿ, ಏನಾದರೇನಂತೆ! ನನ್ನ ನಿಯಮಕ್ಕೆ ಯಾರೂ ಅಪವಾದವಾಗಕೂಡದು. ಅನುಪಸ್ಥಿತಿಯ ಪದವೀದಾನ, ವೆಂಬುದಕ್ಕೆ ನನ್ನ ಅನುಮತಿಯಿಲ್ಲ. ಆದುದರಿಂದ ಅವಳಿಲ್ಲಿಗೆ ಸ್ವತಃ ಬರಲೇಬೇಕು.

**ಕಣ್ವ :** ಮಹಾರಾಜರ ಅಪ್ಪಣೆ. ಅನಸೂಯೆ, ಪ್ರಿಯಂವದೆ, ಹೋಗಿ ಶಕುಂತಲೆಯನ್ನು ಕರೆದುಕೊಂಡು ಬನ್ನಿರಿ.

**ಅನುಸೂಯಾ :**
**ಪ್ರಿಯಂವದಾ :** } ಕುಲಪತಿಗಳ ಅಪ್ಪಣೆ.

( ಇಬ್ಬರೂ ಹೋಗುವರು )

**ದುಷ್ಯಂತ :** ಆ ವಿದ್ಯಾರ್ಥಿನಿ ಇಲ್ಲಿಗೆ ಬರಲು ಎಷ್ಟು ಸಮಯವಾಗಬಹುದು?

**ಕಣ್ವ :** ಸಾಕಷ್ಟು ಸಮಯವೇ ಆದೀತು ಮಹಾಪ್ರಭು. ಅವಳೀಗ ಬೇಗ ಬೇಗ ನಡೆಯುವ ಸ್ಥಿತಿಯಲ್ಲಿಲ್ಲ.

**ದುಷ್ಯಂತ :** ಅವಳ ಹೆಸರು...ಏನೋ ಎಂದಿರಲ್ಲ?

**ಕಣ್ವ :** ಶಕುಂತಲಾ.

**ದುಷ್ಯಂತ :** ಓ. ಹೌದಲ್ಲವೇ...ಶಕುಂತಲಾ! ಸರಿ. ನಾವಿನ್ನು ಅವಳು ಬರುವವರೆಗೆ ಕಾಯುವಾ.

**ಕಣ್ವ :** ಅಲ್ಲಿಯವರೆಗೆ, ಮಹಾಪ್ರಭು, ತಾವೊಂದು ಕಾರ್ಯ ಜರುಗಿಸಬಹುದು. ವಿಶೇಷ ಗುಣಗಳನ್ನು ಪಡೆದು ಮಹಾ ಪರಿಣತರೆಂದೆನಿಸಿಕೊಂಡಿರುವ ಇಬ್ಬರು ವಿದ್ಯಾರ್ಥಿಗಳಿಗೆ ಚತುರ ಪಂಡಿತ ಪ್ರಶಸ್ತಿಗಳನ್ನು ದಯಪಾಲಿಸಬಹುದು.

**ದುಷ್ಯಂತ :** ಆಗಬಹುದು. ಅವರನ್ನಿಲ್ಲಿಗೆ ಕರೆಯಿರಿ;

**ಕಣ್ವ :** ಅವರಿಲ್ಲಿಯೇ ಇದ್ದಾರೆ ಮಹಾಪ್ರಭೂ, ಇದೇ ಈ ಶಾರ್ಙ್ಗರವ ಮತ್ತು ಶಾರದ್ವತ.

**ದುಷ್ಯಂತ :** ಓಹೋ, ಇವರೋ? ಇವರು ನಿಮ್ಮ ಚತುರ ಪಂಡಿತರೋ? ಸಂತೋಷ. ಆದರೆ ಅವರ ಪಾಂಡಿತ್ಯದೊಡನೆ ಸ್ವಲ್ಪ ಶಿಷ್ಟಾಚಾರವೂ ಸೇರಿದ್ದರೆ ಚೆನ್ನಾಗಿತ್ತು.

ಶಾರ್ಙ್ಗರವ : ಶಿಷ್ಟಾಚಾರದ ಕೊರತೆ ನಮ್ಮಲ್ಲಿಲ್ಲ ಮಹಾಪ್ರಭು. ಅದಕ್ಕೊಂದು ಉದಾಹರಣೆ ಹೇಳಲೇ? ಮೂರು ನವ ಯವ್ವನೆಯರು ಎದೆಯ ಬಟ್ಟೆಗಳನ್ನು ಸಡಿಲಿಸಿ ಸರಿಪಡಿಸಿಕೊಳ್ಳುತ್ತಿರುವಾಗ ಮರದ ಮರೆಯಲ್ಲಿ ನಿಂತು ಕದ್ದು ನೋಡುವ ಕೀಳು ಲಂಪಟತನ ನಮ್ಮಲ್ಲಿಲ್ಲ.

ದುಷ್ಯಂತ : ಕುಲಪತಿಗಳೇ, ಅವನು ಗಳಹುತ್ತಿರುವುದು ನಿಮಗಾದರೂ ಅರ್ಥವಾಯಿತೇ?

ಕಣ್ವ : ಆಯಿತು ಮಹಾಪ್ರಭು. ಮತ್ತೇನೂ ಇಲ್ಲ, ಅವನು ಹೇಳುತ್ತಿರುವುದಿಷ್ಟೆ. ನಾನಿಲ್ಲದಾಗ ತಾವಿಲ್ಲಿಗೆ ದಯಮಾಡಿಸಿದಾಗ-

ದುಷ್ಯಂತ : (ನಡುವೆಯೇ) ಮತ್ತೆ ಅದೇ ಮಾತು! ನೀವೂ ಅದನ್ನೇ ಆಡುವಿರಾ? ಹಾಗಾದರೆ ನಾನೀಗ ನಿಮ್ಮ ವಿದ್ಯಾರ್ಥಿಗಳಿಗೆ ಚತುರ ಪಂಡಿತ ಪ್ರಶಸ್ತಿಗಳನ್ನೇ ದಯಪಾಲಿಸುವುದೇ.

ಶಾರದ್ವತ : ನಮಗೂ ಅವು ಬೇಡವೇ ಬೇಡ ಮಹಾರಾಜರೇ. ಏಕೆಂದರೆ ಮಹಾರಾಜಾಧಿರಾಜ ದುಷ್ಯಂತ ಎಂಬ ಮುದ್ರೆಯೊತ್ತದೆ ಆ ಪ್ರಶಸ್ತಿ ಪತ್ರಗಳಿಗೇನು ಬೆಲೆ?

ದುಷ್ಯಂತ : ಏನು? ನನ್ನ ಹೆಸರಿನ ಮುದ್ರೆಯೇ?

ಶಾರದ್ವತ : ಅದನ್ನು ನಿಮ್ಮ ಉಂಗುರದ ಮೇಲೆ ಕೆತ್ತಲಾಗಿತ್ತು; ಆ ಉಂಗುರವೀಗ ನಿಮ್ಮ ಬಳಿಯಲ್ಲಿಲ್ಲ.

ದುಷ್ಯಂತ : ಅಯ್ಯೋ ದೇವರೇ! ಅದು,



ಉಂಗುರ ಕಳೆದು ಹೋಗಿರುವುದೇನೋ ನಿಜ. ಆದರದು ನಿನಗೆ ಹೇಗೆ ಗೊತ್ತಾಯಿತು? ಮತ್ತು ಆ ಉಂಗುರ ಈಗ ಎಲ್ಲಿದೆ?

ಶಕುಂತಲೆ : (ಪ್ರವೇಶಿಸುತ್ತ) ಶಕ್ರಾವತಾರ ತೀರ್ಥದಲ್ಲಿ-
(ಅನುಸೂಯೆ, ಪ್ರಿಯಂವದೆಯರೂ ಅವಳ ನಂತರ ಪ್ರವೇಶಿಸಿದ್ದಾರೆ)

ದುಷ್ಯಂತ : ಏನೆಂದೆ? ಎಲ್ಲಿ? ಎಲ್ಲಿದೆ ಉಂಗುರ?

ಶಕುಂತಲೆ : ಶಕ್ರಾವತಾರ ತೀರ್ಥವೆಂಬ ಸರೋವರದಲ್ಲಿ. ನಾನು ಸ್ನಾನ ಮಾಡುತ್ತಿದ್ದಾಗ ಉಂಗುರ ನನ್ನ ಬೆರಳಿನಿಂದ ಜಾರಿ ನೀರಿನೊಳಕ್ಕೆ ಬಿದ್ದಿತು.

ದುಷ್ಯಂತ : ಅದಿರಲಿ. ನೀನು ಯಾರು? ಮತ್ತು ಆ ಉಂಗುರ ನಿನ್ನ ಬೆರಳಿನಲ್ಲಿದ್ದುದು ಹೇಗೆ?

ಕಣ್ವ : ದೊರೆಗಳೇ, ಇವಳೇ ಶಕುಂತಲೆ-ಅನುಪಸ್ಥಿತಿಯಲ್ಲಿ ಪದವಿ ಪಡೆಯಬೇಕೆಂದು ಬಯಸಿದ ವಿದ್ಯಾರ್ಥಿನಿ.

ದುಷ್ಯಂತ : (ಶಕುಂತಲೆ ಗರ್ಭಿಣಿ ಎಂಬುದನ್ನು ಗಮನಿಸಿ, ಕಣ್ವರಿಗೆ, ವ್ಯಂಗವಾಗಿ) ಓಹೋ. ಕುಲಪತಿಗಳೇ ಇವಳು ಇಂಥವಳು ನಿಮ್ಮ ಗುರುಕುಲದಲ್ಲಿ ವಿದ್ಯಾರ್ಥಿನಿಯೇ? ವಿದ್ಯಾರ್ಥಿನಿಯಲ್ಲವೇ!! ಈಗ ಗೊತ್ತಾಯಿತು, ಅವಳು ತಾನಿಲ್ಲಿಗೆ ಬರದೆ ಅನುಪಸ್ಥಿತಿಯಲ್ಲಿ ಪದವಿಯನ್ನು ಪಡೆಯಬೇಕೆಂದು ಏಕೆ ಬಯಸಿದಳೆಂದು. ಅವಳಿಗೆ ತಾನು ಮಾಡಿದ ಪಾಪವನ್ನು ಮುಚ್ಚಬೇಕಾಗಿತ್ತು. ಅದಕ್ಕಾಗಿಯೇ ಇಲ್ಲಿಗೆ ಬರಲು ಹಿಂಜರಿದಳು. ಕುಲಪತಿಗಳೇ ಕಟ್ಟುನಿಟ್ಟಾದ ನಿಮ್ಮ ಮೇಲ್ವಿಚಾರಣೆಯಿರುವ ಈ ಆಶ್ರಮದಲ್ಲಿ ಇಂಥ ಅವ್ಯಾಪಾರಗಳೆಲ್ಲ ನಡೆಯುತ್ತಿವೆಯೇ? ಇದೇ ಏನು ನೀವು ಇಲ್ಲಿದ್ದುಕೊಂಡು ಮಾಡುವ ಪರಾಂಬರಿಕೆ?

ಕಣ್ವ : ಇಲ್ಲ ಮಹಾಪ್ರಭು. ಇದು ನಡೆದುದು ನಾನು ಆಶ್ರಮದಿಂದ ಹೊರಗೆ ಹೋಗಿದ್ದಾಗ.

ಅನಸೂಯೆ : ಮತ್ತು ಮಹಾಪ್ರಭುಗಳು ಆಶ್ರಮದ ಒಳಗೆ ಬಂದಿದ್ದಾಗ!

ದುಷ್ಯಂತ : ಮುಚ್ಚು ಬಾಯಿ! ಏನಿದು ಕುಲಪತಿಗಳೇ, ಉದ್ಧಟತನದಲ್ಲಿ ಈ ಆಶ್ರಮದ ಹುಡುಗಿಯರು ಹುಡುಗರನ್ನೂ ಮೀರಿಸುವ ಹಾಗಿದೆಯಲ್ಲಾ? ಅದೂ ಸಾಲದೆ (ಶಕುಂತಲೆಯನ್ನು ತೋರಿಸಿ) ಕಣ್ವ ಮಹರ್ಷಿಗಳೇ ಕಾಣುತ್ತಿದೆಯೇ: ಈ ನಿಮ್ಮ ಶಿಷ್ಯೆ, ಶಕುಂತಲೆ ಗರ್ಭಿಣಿಯಾಗಿದ್ದಾಳೆ! ಆಶ್ರಮದಲ್ಲಿ ನೀವು ಕಲಿಸಿಕೊಡುತ್ತಿರುವ ನೀತಿ ನಡಾವಳಿ ಇದೇಯೋ? ನೀವು ಗುರುಕುಲದ ಕುಲಪತಿಗಳಾದದ್ದು ಸಾರ್ಥಕವಾಯಿತು!

ವಿಶ್ವಾಮಿತ್ರ : ಅವರ ಮೇಲೇಕೆ ರೇಗುವಿರಿ ಮಹಾಕುಲಪತಿಗಳೇ? ನಾನು ಹೇಳುವುದನ್ನು ಕೇಳಿರಿ. ಶಿಷ್ಯರ ತಪ್ಪಿಗೆ ಗುರುಗಳ ಮೇಲೆ ದೋಷ ಹೊರಿಸುವುದು ಸರಿಯಾದುದಲ್ಲ. ಈ ಹುಡುಗಿಯ ದುರಾಚಾರದ ಹೊಣೆಯನ್ನು ಕುಲಪತಿಗಳಾದ ಮಾತ್ರಕ್ಕೆ ಕಣ್ವರ ತಲೆಗೆ ಕಟ್ಟುವುದಾದರೆ ಮಹಾಕುಲಪತಿಗಳಾದ ತಾವು ಅವರಿಗಿಂತಲೂ ಹೆಚ್ಚಿನ ಹೊಣೆಯನ್ನು ಹೊರಬೇಕಾಗುತ್ತದೆ.

ಪ್ರಿಯಂವದ : ಅಷ್ಟೇಕೆ, ಇದರ ಹೊಣೆ ಸಂಪೂರ್ಣವಾಗಿ ಮಹಾರಾಜರದೇ!

ವಿಶ್ವಾಮಿತ್ರ : [ಅವಳ ಮಾತನ್ನು ಲಕ್ಷಿಸದೆ] ಶೀಲ, ಚಾರಿತ್ರ್ಯ, ಸದಾಚಾರಗಳನ್ನು ಗುರುಗಳು ಪುಸ್ತಕ ಮುಖೇನ ಕಲಿಸುವುದು ಅಸಾಧ್ಯ. ಅವುಗಳನ್ನೆಲ್ಲ ಮಕ್ಕಳು ತಮ್ಮ ತಂದೆ-ತಾಯಿಗಳನ್ನು ನೋಡಿ ಕಲಿಯಬೇಕಾಗುತ್ತದೆ, ಕಲಿಯುತ್ತಾರೆ. ಶೀಲ, ಚಾರಿತ್ರ್ಯಾದಿಗಳು ರಕ್ತಗತವಾಗಿ ಬರುವ ಗುಣಗಳು. ಆದ್ದರಿಂದ ಈ ಬಾಲಿಕೆ ಮಾಡಿರುವ ಈ ಪಾಪದ ಹೊಣೆ ಅವಳ ತಂದೆ-ತಾಯಿಗಳದು ಎಂದೇ ನನ್ನ ಅಭಿಪ್ರಾಯ. [ಕಣ್ವರಿಗೆ] ಈಕೆಯ ಜನನೀಜನಕರಾರು?

ಕಣ್ವ : ಈಕೆಯ ತಂದೆ ಮಹಾಪ್ರತಾಪಶಾಲಿಯಾದ ಬ್ರಹ್ಮರ್ಷಿ-

ವಿಶ್ವಾಮಿತ್ರ : [ನಗುತ್ತಾ] ಓಹೋ, ಬ್ರಹ್ಮರ್ಷಿ! ಆದರೂ ಇಂತಹ ಮಗಳಿಗೆ ಜನ್ಮವಿತ್ತ; ಮತ್ತು ಇಂತಹ ನೀತಿ ನಡಾವಳಿಗಳನ್ನು ಕಲಿಸಿಕೊಟ್ಟ!! ಸರಿ, ಯಾರವನು?

ಕಣ್ವ : ಅದೇ ನಾನು ಹೇಳುತ್ತಿದ್ದೆನಲ್ಲ ಈಕೆಯ ತಂದೆ ಬ್ರಹ್ಮರ್ಷಿ; ಅವನು ಯಾರೆಂದರೆ-

ವಿಶ್ವಾಮಿತ್ರ : [ನಡುವೆಯೆ] ಮತ್ತಿನ್ನಾರು? ವಸಿಷ್ಠನೇ ಇರಬೇಕು.

ಕಣ್ವರು : [ಗಡುಸಾಗಿ] ಅಲ್ಲ; ಅವನ ಹೆಸರು ವಿಶ್ವಾಮಿತ್ರ!!

ವಿಶ್ವಾಮಿತ್ರ : ಕಣ್ವಮಹರ್ಷಿಗಳೇ, ನೀವು ಯಾರೊಡನೆ ಮಾತನಾಡುತ್ತಿರುವಿರೆಂಬುದು ನಿಮಗೆ ಗೊತ್ತಿದೆಯೇ?

ಕಣ್ವ : ಇದೆ. ಶಕುಂತಲೆಯ ತಂದೆಯೊಡನೆ!

ವಿಶ್ವಾಮಿತ್ರ : (ರವಿವರ್ಮನ ವಿಶ್ವಾಮಿತ್ರ-ಮೇನಕಾ ಚಿತ್ರದಲ್ಲಿರುವಂತೆ ಕೈಯೆತ್ತಿ ನಿಂತು) ಶಾಂತಂ ಪಾಪಂ, ಶಾಂತಂ ಪಾಪಂ. ಇಂಥ ಮಾತನ್ನಾಡಿದ ನೀವು ಈ ವಿಶ್ವಾಮಿತ್ರನ ಪರಮ ಪ್ರಚಂಡ ಕೋಪಾಗ್ನಿಗೆ ಆಹುತಿಯಾಗುವಿರೆಂಬ ಅರಿವಿರಲಿಲ್ಲವೇ ನಿಮಗೆ? ನನ್ನ ಶಾಪದ

ಪ್ರತಾಪದ ಬಗೆಗೆ ನಿಮಗಾರೂ ಹೇಳಿಯೇ ಇಲ್ಲವೆ? ನನ್ನ ಕೋಪಕ್ಕೆ ಬಲಿಯಾಗಿ ಸಾಮ್ರಾಜ್ಯವನ್ನು ಕಳೆದುಕೊಂಡು ಕಾಶಿಯಲ್ಲಿ ಸುಡಗಾಡು ಕಾಯ್ದ ಹರಿಶ್ಚಂದ್ರನನ್ನು ಕೇಳಿರಿ! ನನ್ನ ತಪಶ್ಶಕ್ತಿಯ ಪ್ರತಾಪವನ್ನು ಕಾಣಬೇಕಾದರೆ ಅದೋ ತಲೆಯೆತ್ತಿ ನೋಡಿರಿ, ಮುಗಿಲಲ್ಲಿ ತ್ರಿಶಂಕುವಿಗಾಗಿ ನಾನು ನಿರ್ಮಿಸಿದ ಪ್ರತಿಸ್ವರ್ಗ ಗೋಚರಿಸುವುದು! ಅದೂ ಅಲ್ಲದೆ, ಸಾವಿರಾರು ವರ್ಷಗಳ ಹಿಂದೆ ನಾನು ಘೋರವಾದ ತಪಸ್ಸನ್ನಾಚರಿಸುತ್ತಿದ್ದಾಗ, ಬ್ರಹ್ಮರ್ಷಿಪದವಿಯನ್ನು ಪಡೆಯಲೆಂದಿದ್ದಾಗ ಏನಾಯಿತು ಗೊತ್ತೆ?



ನನ್ನ ಉಗ್ರತಪಸ್ಸಿಗೆ ಹೆದರಿದ ದೇವೇಂದ್ರ ಸ್ವರ್ಗದಲ್ಲಿನ ತನ್ನ ಅಪ್ಸರೆಯರಲ್ಲೊಬ್ಬಳಾದ ರಂಭೆಯೆಂಬುವಳನ್ನು ನನ್ನ ತಪೋಭಂಗ ಮಾಡಲೆಂದು ಕಳಿಸಿದ. ಕೋಪಗೊಂಡ ನಾನು, ನೀನು ಸಾವಿರ ವರ್ಷ ಕಲ್ಲಾಗೆಂದು ರಂಭೆಗೆ ಶಾಪವಿತ್ತೆ. ತಿಳಿಯಿತೇ! ರಂಭೆ ಒಂದು ಸಾವಿರ ವರ್ಷಗಳವರೆಗೆ ಕಲ್ಲಾಗಿ, ಕಗ್ಗಲ್ಲಾಗಿ, ನಿರ್ಜೀವ ಶಿಲೆಯಾಗಿ ಬಿದ್ದುಕೊಂಡಿದ್ದಳು ಭೂಮಿಯ ಮೇಲೆ.

ಕಣ್ವ : (ಶಾಂತವಾಗಿ) ಸರಿ, ಆಮೇಲೆ? ಆಮೇಲೇನಾಯಿತು?

ವಿಶ್ವಾಮಿತ್ರ : (ತಡವರಿಸುತ್ತಾ) ಆ...ಆ... ಆಮೇಲೆ? ಏ... ಏ... ಏನಾಯಿತು ಎಂದರೆ...

ಕಣ್ವ : ಏನಾಯಿತೆಂದು ನಾನು ಹೇಳುತ್ತೇನೆ ಕೇಳಿರಿ. ಆಮೇಲೆ ದೇವೇಂದ್ರ ತನ್ನ ಇನ್ನೊಬ್ಬ ಅಪ್ಸರೆಯನ್ನು ನಿಮ್ಮ ಬಳಿಗೆ ಕಳುಹಿಸಿಕೊಟ್ಟ. ಅವಳ ಹೆಸರು ಮೇನಕೆ.

ವಿಶ್ವಾಮಿತ್ರ : (ಗೊಂದಲಕ್ಕೆ ಸಿಕ್ಕಿ ತಡವರಿಸುತ್ತಾ) ಮೇನ...ಹಂ... ಏನು, ಏನಂದಿರಿ?

ಕಣ್ವ : (ದೃಢಸ್ವರದಲ್ಲಿ) ಮೇನಕಾ !

ವಿಶ್ವಾಮಿತ್ರ : ಮೇನಕಾ ! ಅಹುದಹುದು. ಅಕ್ಷರಶಃ ನಿಜ. ಅವಳ ಹೆಸರು ಮೇನಕೆ. ಆದರೆ ಅದು ನಿಮಗೆ ಹೇಗೆ ಗೊತ್ತಾಯಿತು? ಅಯ್ಯೋ, ನನ್ನ ಮೂರ್ಖತನವೇ ! ನೀವು ತ್ರಿಕಾಲಜ್ಞಾನಿಗಳಾದ ಮಹರ್ಷಿಗಳು. ನಿಮಗೆ ತಿಳಿಯದುದು ಯಾವುದಿದೆ!

ಕಣ್ವ : ಅದೇ, ಆ ತ್ರಿಕಾಲಜ್ಞಾನಬಲದಿಂದಲೇ ನಾನು ತಿಳಿದುಕೊಂಡೆ. ಮೇನಕೆ ಒಂದು ಹೆಣ್ಣು ಮಗುವನ್ನು ಹೆತ್ತು ಕಾಡಿನಲ್ಲಿ ಬಿಸುಟು ಹೋಗಿದ್ದಾಳೆ ಎಂದು. ನಾನು ಹೋಗಿ ಆ ನಿಷ್ಪಾಪ ಅನಾಥ ಮಗುವನ್ನು ಕೈಗೆತ್ತಿಕೊಂಡು ನನ್ನ ಆಶ್ರಮಕ್ಕೆ ತಂದೆ, ನನ್ನ ಮಗಳಂತೆ ಬೆಳಸಿದೆ.

ವಿಶ್ವಾಮಿತ್ರ : ಮತ್ತೆ ಅವಳನ್ನು ಶಕುಂತಲೆಯೆಂದು ಕರೆದಿರಿ, ಅಲ್ಲವೇ? ಸರಿ, ಸರಿ... ಹಾಗಾದರೆ ಇವಳೇ ಮೇನಕೆಯ ಮಗಳು ಶಕುಂತಲೆ--

ಕಣ್ವ : (ಮಧ್ಯದಲ್ಲಿಯೇ) ಬ್ರಹ್ಮರ್ಷಿಗಳೇ, ಬರಿ ಮೇನಕೆಯೊಬ್ಬಳ ಮಗಳು ಮಾತ್ರವಲ್ಲ--

ವಿಶ್ವಾಮಿತ್ರ : ಗೊತ್ತು ಗೊತ್ತು ಮಹರ್ಷಿಗಳೇ, ತಾವು ಹೇಳಬೇಕೆಂದಿರುವುದು ಗೊತ್ತಾಯಿತು. ಇವಳು ನನ್ನ ಮಗಳು, ಆಯಿತೆ? ಇದನ್ನು ನಾನು ತುಂಬಾ ಹೆಮ್ಮೆಯಿಂದ ಒಪ್ಪಿಕೊಳ್ಳುತ್ತೇನೆ. ಶಕುಂತಲೆ, ಬಾರಮ್ಮ ಮಗು, ಬಾ ಇಲ್ಲಿ, (ಶಕುಂತಲೆ ವಿಶ್ವಾಮಿತ್ರನ ಬಳಿಗೆ ಹೋಗುವಳು. ಅವನು ಮುದ್ದಾಡುವನು) ಎಲ್ಲ ಅವಳ ತಾಯಿಯದೇ ರೂಪು! ಕುಲಪತಿ ಕಣ್ವ ಮಹರ್ಷಿಗಳೇ, ತಾವೀಗ ನನಗೆ ಕಳೆದು ಹೋಗಿದ್ದ ಮಗುವನ್ನು ಮರಳಿ ದೊರಕಿಸಿ ಕೊಟ್ಟದ್ದೀರಿ, ಅದಕ್ಕಾಗಿ ತಮ್ಮ ಉಪಕಾರವನ್ನು ಎಷ್ಟು ಸ್ಮರಿಸಿದರೂ ಕಡಿಮೆಯೇ. ಆದರೆ ಇವಳ ಪತಿದೇವನನ್ನುಳಿದು ಬರಿ ಇವಳನ್ನು ಮಾತ್ರ ತೋರಿಸಿಕೊಟ್ಟ ನಿಮ್ಮ ಪುಣ್ಯಕೃತಿ ಪರಿಪೂರ್ಣವಾಗಲಿಲ್ಲ. ನನ್ನ ಅಳಿಯನಾರೆಂಬುದು ಇದೀಗ ತಿಳಿಯಲೇ ಬೇಕು--ಅದೂ ಇವಳು ಈ ಸ್ಥಿತಿಯಲ್ಲಿರುವಾಗ--

ಕಣ್ವ : ಅದನ್ನು ಶಕುಂತಲೆಯೇ ಹೇಳುವುದು ಲೇಸು.

ವಿಶ್ವಾಮಿತ್ರ : ಒಳ್ಳೆಯ ಉಪಾಯ. ಮಗೂ ಶಕುಂತಲೆ, ನಿನ್ನ ಗಂಡನ ಹೆಸರು ಹೇಳಮ್ಮಾ ?

ಶಕುಂತಲೆ : ಅಪ್ಪಾ, ಜನ್ಮತಃ ಪಾಪವನ್ನೇ ಅರಿಯದ ಮುಗ್ಧ ಬಾಲಿಕೆಯೊಬ್ಬಳನ್ನು ಮಹಾರಾಣಿಯನ್ನಾಗಿ ಮಾಡುತ್ತೇನೆಂದು ಹೇಳಿ ವಂಚಿಸಿ ಗುಟ್ಟಾಗಿ ಗಾಂಧರ್ವವಿಧಿಯಿಂದ ಮದುವೆಯಾಗಿ...ಆಮೇಲೆ... ಮತ್ತು...ಆಮೇಲೆ (ಸಗದ್ಗದ) ಅವಳನ್ನು ಮರೆತುಬಿಟ್ಟು ಅನಾಥಳನ್ನಾಗಿ ಮಾಡಿದ ಘಾತುಕನ ಹೆಸರನ್ನಾದರೂ ಹೇಗೆ ಉಚ್ಚರಿಸಲಿ?

ವಿಶ್ವಾಮಿತ್ರ : ಏನು? ತಾನಾಗಿ ಮೆಚ್ಚಿ ವಿಧಿಪೂರ್ವಕವಾಗಿ ಕೈ ಹಿಡಿದ ಹೆಂಡತಿಯನ್ನೇ ಮರೆತು ದೂರೀಕರಿಸುವ ಗಂಡಂದಿರಿದ್ದಾರೆಯೇ ಈ ಜಗತ್ತಿನಲ್ಲಿ ?

ಶಕುಂತಲೆ : ಅಪ್ಪಾ, ನವಜಾತ ಶಿಶುವನ್ನು ಕಾಡಿನಲ್ಲಿ ಬಿಸುಟ ಹೋಗುವ ತಂದೆತಾಯಿಗಳಿರಬಹುದಾದರೆ ಕೈ ಹಿಡಿದ ಹೆಂಡತಿಯನ್ನು ತಿರಸ್ಕರಿಸುವ ಗಂಡಂದಿರೇಕಿರಬಾರದು ? (ತೀಕ್ಷ್ಣವಾಗಿ ಅವನ ಕಣ್ಣಲ್ಲಿ ಕಣ್ಣಿಟ್ಟು ನೋಡುವಳು)

ವಿಶ್ವಾಮಿತ್ರ : (ಅವಳ ನೋಟವನ್ನೆದುರಿಸಲಾರದೆ) ಸಾಕು ಸಾಕಿನ್ನು ಮಗಳೆ! ಇಂತೇಕೆ ನುಡಿದೆನ್ನ ನಾಚಿಸುವೆ ಶಕುಂತಲೆ! ಈಗಲಾದರೂ ಹೇಳಿಬಿಡು ನಿನ್ನನ್ನು ತಿರಸ್ಕರಿಸಿದ ಆ ದುರಾಚಾರಿಯ ಹೆಸರನ್ನು; ಈ ಕೂಡಲೇ ನನ್ನ ಶಾಪದಿಂದ ಸುಟ್ಟು ಭಸ್ಮ ಮಾಡುವೆ ಅವನನ್ನು.

ಶಕುಂತಲೆ : ಆಮೇಲೆ? ಆ ಭಸ್ಮವನ್ನು ತೆಗೆದುಕೊಂಡು ನಾನೇನು ಮಾಡಲಿ ಅಪ್ಪಯ್ಯಾ? ಅದನ್ನು ಮೈಗೆ ಲೇಪಿಸಿಕೊಂಡು ನಿನಗೆ ತಕ್ಕ ಮಗಳೆನಿಸಲೇ ?

ವಿಶ್ವಾಮಿತ್ರ : ಅಯ್ಯೋ. ನಿನಗಿನ್ನು ಹೇಗೆ ತಿಳಿಸಿ ಹೇಳಲಿ? ಹಾಗಲ್ಲ ಕೇಳು ಮಗಳೇ, ನಾನವನನ್ನು ಶಪಿಸುವುದು ಅವನು ನಿನ್ನನ್ನು ಪತ್ನಿಯೆಂದು ಸ್ವೀಕರಿಸಲು ನಿರಾಕರಿಸಿದ ಪಕ್ಷದಲ್ಲಿ ಮಾತ್ರ.

ಶಕುಂತಲೆ : ತಂದೆಯೇ. ನನ್ನ ತಾಯಿ ನಿನ್ನನ್ನು ಪ್ರೀತಿಸಿದುದು ದೇವೇಂದ್ರನ ಒತ್ತಾಯಕ್ಕಾಗಿ. ಹಾಗೆಯೇ ನನ್ನ ಪತಿಯೂ ನಿನ್ನ ಶಾಪದ ಭಯಕ್ಕಾಗಿ ನನ್ನನ್ನು ಪ್ರೀತಿಸುವುದಾದರೆ ಅದು ನನಗೆ ಬೇಡ. ಮತ್ತು ನಿನ್ನ ಘೋರವಾದ ಕೋಪಾಗ್ನಿಗೆ ನನ್ನ ನಾಥನನ್ನು ಬಲಿ ಕೊಡಲೂ ನಾನು ಸಮ್ಮತಿಸಲಾರೆ. ಏಕೆಂದರೆ ದೊಡ್ಡದೊಂದು ಸಾಮ್ರಾಜ್ಯದ ಸಂರಕ್ಷಣೆಯ ಗುರುತರ ಹೊಣೆ ಆತನ ಮೇಲಿದೆ. ಆದ್ದರಿಂದ ಪೂಜ್ಯ ಪಿತನೇ, ಕೈಯ್ಯೊಡ್ಡಿ ಬೇಡಿಕೊಳ್ಳುತ್ತೇನೆ. ನನ್ನ ನಾಥನೆಷ್ಟೇ ಚಿತ್ತಚಂಚಲನೆನಿಸಿದ್ದರೂ ನೀನವನನ್ನು ಮನ್ನಿಸಿಬಿಡು. ನಾನವನ ಮೇಲೆ ಮೋಹಗೊಂಡುದು ತಪ್ಪಾಯ್ತು! ಇನ್ನು ಕೋಪಗೊಂಡರೆ ಇನ್ನೊಂದು ತಪ್ಪಾಗುವುದೋ ಏನೋ, ಯಾರು ಬಲ್ಲರು?

ಅನಸೂಯಾ : ಕೂಡದು. ಶಕುಂತಲೆ, ಇಂಥ ಕ್ಷಮಾಗುಣ ಸಲ್ಲದು. ನಿನ್ನೀ ದುಃಸ್ಥಿತಿಯನ್ನು ನೋಡಲಾರೆ. (ವಿಶ್ವಾಮಿತ್ರನಿಗೆ) ಭಗವನ್, ಇವಳ ನಾಥ-ಇದೋ ಇಲ್ಲಿ ಕುಳಿತಿರುವ ದುಷ್ಯಂತ ಮಹಾರಾಜರು.

ದುಷ್ಯಂತ : (ಪರಮಾಶ್ಚರ್ಯದಿಂದ) ಏನು? ನಾನು?!

ವಿಶ್ವಾಮಿತ್ರ : ಇವರೇ? (ಆನಂದದಿಂದ) ಹಾಂ...ಹಾಂ, ಚನ್ನಾಗಿದೆ ಆಯ್ಕೆ. ಯೋಗ್ಯನನ್ನೇ ವರಿಸಿದ್ದೀಯಾ ಶಕುಂತಲೆ! ಸರಿ, ನೀನೀತನಲ್ಲಿ ಅನುರಾಗಗೊಂಡಿದ್ದು ಎಲ್ಲಿ? ಯಾವಾಗ? ಹೇಗೆ? ಓ, ನಾಚಬೇಡ ಹೇಳು ಮಗಳೇ.

ಅನಸೂಯಾ : ಭಗವನ್, ಇವಳು ಮಹಾಪ್ರಭುಗಳು ತೋರಿದ ಸಾಹಸ ಸಾಮರ್ಥ್ಯಗಳನ್ನು ಕಂಡು ಅವರ ಮೇಲೆ ಮೋಹಗೊಂಡಳು.

ಶಕುಂತಲೆ : (ಅವಳನ್ನು ದೂರುತ್ತಾ) ಅನಸೂಯೇ !

ವಿಶ್ವಾಮಿತ್ರ : ಅದೇನು ಸಾಹಸ? ಎಂಥ ಸಾಮರ್ಥ್ಯವದು ?

ಅನಸೂಯಾ : ಭಗವನ್ ಮಹಾಕುಲಪತಿಗಳಾದ ಮಹಾರಾಜರು ಒಂದು ಮಹಾಶೌರ್ಯದ ಕಾರ್ಯವನ್ನೆಸಗಿ ಶಕುಂತಲೆಯ ಮನವನ್ನು ಸೂರೆಗೊಂಡರು.

ವಿಶ್ವಾಮಿತ್ರ : ಓ, ಹಾಗೇನು! ಆ ಮಹಾಶೌರ್ಯದ ಕಾರ್ಯವನ್ನಷ್ಟು ಬಣ್ಣಿಸು ?

ಅನಸೂಯಾ : ಏನು ಹೇಳಲಿ ಭಗವನ್. ನಮ್ಮ ಶೂರ ಧೀರ ಮಹಾಪ್ರಭುಗಳು ಒಂದು ನೀಚ ದುಂಬಿಯನ್ನ ಕ್ಷಣದಲ್ಲಿ ಕೊಂದು ಹಾಕಿದರು !

ವಿಶ್ವಾಮಿತ್ರ : ಏನನ್ನು, ಏನನ್ನು ಕೊಂದು ಹಾಕಿದರು? ಏನದು?

ಅನಸೂಯಾ : ದುಂಬಿ (ಸ್ಪಷ್ಟಪಡಿಸುತ್ತ) ದುಂ...ಬೀ...ಬೀ ದುರುಳ ದುಂಬಿಯೊಂದು ನಮ್ಮ ಸಖಿ ಶಕುಂತಲೆಯ ಮೂಗಿನ ಮೇಲೆ ಕುಳಿತುಕೊಳ್ಳಲು ಪ್ರಯತ್ನಿಸಿತು. ಆಗ ಶಕುಂತಲೆ ದೀನಳಾಗಿ "ರಕ್ಷಿಸಿರಿ, ರಕ್ಷಿಸಿರಿ, ಯಾರಾದರೂ ನನ್ನನ್ನು ಈ ಕ್ರೂರ ಕೀಟದಿಂದ ರಕ್ಷಿಸಿರಿ" ಎಂದು ಹಲುಬತೊಡಗಿದಳು. ನಾನು ಸುತ್ತ ಮುತ್ತ ನೋಡಿದೆ. ನಮ್ಮ ಈ ಮಹಾರಾಜರು ಮರದ ಮರೆಗೆ ನಿಂತುಕೊಂಡು ನಮ್ಮನ್ನೇ ಹಸಿದ ಕಣ್ಣುಗಳಿಂದ ನೋಡುತ್ತಿದ್ದುದು ಕಂಡಿತು. ಆಗ ನಾನು ಶಕುಂತಲೆಗೆ "ದುಷ್ಯಂತ ಮಹಾರಾಜರನ್ನು ಕೂಗಿ ಕರೆ, ಅವರೇ ನಿನ್ನನ್ನು ರಕ್ಷಿಸುವರು" ಎಂದ ನಕ್ಕು ನುಡಿದೆ. ಮರುಕ್ಷಣದಲ್ಲಿಯೇ ನಮ್ಮ ದಯಾಳು ಧರ್ಮಸ್ವರೂಪರಾದ ಮಹಾರಾಜರು ಶರವೇಗದಿಂದ ಜಿಗಿದು ಬಂದು ನಮ್ಮೆದುರಿಗೆ ನಿಂತರು. ನೋಡು ನೋಡುತ್ತಿರುವಷ್ಟರಲ್ಲಿ ಆ ದುಷ್ಟದುಂಬಿಯನ್ನು ತಮ್ಮ ಕೈಗಳಲ್ಲಿ ಸೆರೆಹಿಡಿದು ತಮ್ಮ ಚಂಡಪ್ರಚಂಡ ಭುಜಾದಂಡಗಳ ಬಲವನ್ನೆಲ್ಲಾ ಉಪಯೋಗಿಸಿ ಅದನ್ನು ನಿಮಿಷ ಮಾತ್ರದಲ್ಲಿ ಸಂಹರಿಸಿಬಿಟ್ಟರು. ಆ ಪರಾಕ್ರಮವನ್ನು ನೋಡಿ ನಿಬ್ಬೆರಗಾದ ನಮ್ಮ ಶಕುಂತಲೆ ಸಹಜವಾಗಿ ಮೆಚ್ಚಿ ಮರುಳಾದಳು.

ಶಕುಂತಲೆ : (ಕೋಪದಿಂದ) ಅನಸೂಯೆ ನಿನಗೆ ನನ್ನ ಮೇಲೆ ಅಸೂಯೆ!

ವಿಶ್ವಾಮಿತ್ರ : (ತಲೆದೂಗುತ್ತ) ಓಹೋ ದೊರೆಗಳು ತೋರಿದ ಪ್ರಚಂಡ ಪರಾಕ್ರಮ ಇಷ್ಟು ಅದ್ಭುತವಾದುದೋ! ಚೆನ್ನಾಗಿದೆ! ಯಾರ ಹೆಸರನ್ನು ಕೇಳಿದರೆ ಅಧೋಲೋಕದ ರಕ್ಕಸರ ಎದೆಗುಂಡಿಗೆಗಳು ಬಿರಿಯುತ್ತಿದ್ದವೋ, ಆ ಪುರೂರವನ ಮರಿ ಮೊಮ್ಮಗನೆಸಗಿದ ಮಹಾಶೌರ್ಯ ಸಾಹಸದ ಕೃತಿಯನ್ನು ಕಂಡು ಪುರೂರವ ಸ್ವರ್ಗದಲ್ಲಿಯೇ ಕಣ್ಣೀರಿಟ್ಟಿರಬೇಕು.

ಶಾಂರ್ಗರವ : ಭಗವನ್, ಈ ಪುರೂರವ ಎಂದರಾರು ?

ದುಷ್ಯಂತ : ನಿನ್ನ ಅಜ್ಞಾನಕ್ಕಷ್ಟು ಬೆಂಕಿ ಬಿತ್ತು. ಈ ಆಶ್ರಮದಲ್ಲಿದ್ದುಕೊಂಡು ಇಪ್ಪತ್ತು ವರ್ಷ ವ್ಯಾಸಂಗ ಮಾಡಿದ್ದೀಯಾ, ಮಹಾರಾಜರ ವಂಶಪ್ರವರಗಳು ಗೊತ್ತಿಲ್ಲವೇ ? ನಮ್ಮ ಮುತ್ತಾತರಾದ ಪ್ರತಾಪಶಾಲಿ ಪುರೂರವರ ಹೆಸರು ಕೇಳಿಲ್ಲವೇ ?

ಶಾಂರ್ಗರವ : ತಮಗೆ ತಮ್ಮ ಮುತ್ತಾತರ ಹೆಸರಾದರೂ ನೆನಪಿದೆಯಲ್ಲ ಎಂದು ಸಂತೋಷವಾಯಿತು. ಆದರೆ ನನಗೆ ಬೇಕಾದುದು : ಕೇಶಿ ಎಂಬ ರಾಕ್ಷಸನನ್ನು ಸಂಹರಿಸಿ ಸ್ವರ್ಗದಪ್ಸರೆ ಊರ್ವಶಿಯನ್ನು ಸಂರಕ್ಷಿಸಿದ ಪುರೂರವ ಮಹಾರಾಜ ಇವನೇಯೋ ಎಂಬ ವಿಚಾರ.

ದುಷ್ಯಂತ : ಇವನೇ! ಅಲ್ಲದೆ ಮತ್ತಿನ್ನಾರಿಗೆ ಅಂಥ ಸಾಹಸ ಸಾಧ್ಯವಾದೀತು? ಅವನ ವಿಕ್ರಮವನ್ನು ಮೆಚ್ಚಿಯೇ ಊರ್ವಶಿ ಅವನಲ್ಲನುರಾಗಗೊಂಡಳು! ಮತ್ತು ಪುರೂರವ ಮಹಾರಾಜ ಅವಳನ್ನು ಮದುವೆಯಾದ.

ಶಕುಂತಲಾ : ಗುಟ್ಟಾಗಿ, ಗಾಂಧರ್ವವಿಧಿಯಿಂದಾಗಿರಬೇಕು!

ಶಾಂರ್ಗರವ : ಅಲ್ಲದೆ ಮತ್ತೇನು? ಆಮೇಲಿನ ಕತೆ ಕೇಳು. ಮದುವೆಯಾದ ಮೇಲೆ ಊರ್ವಶಿಗೊಂದು ಮಗುವಾಯಿತು. ಆದರೆ ಅದನ್ನವಳು ಪುರೂರವನಿಗೆ ತಿಳಿಯದಂತೆ ಗುಟ್ಟಾಗಿ ಚ್ಯವನ ಋಷಿಗಳ ಆಶ್ರಮಕ್ಕೆ ಕಳಿಸಿಬಿಟ್ಟಿದ್ದಳು.

ಶಾರದ್ವತ : ಗುಟ್ಟಾಗಿ ಕಾರ್ಯಮಾಡುವುದು ತಲೆ ತಲಾಂತರದಿಂದ ಬಂದ ಗುಣ ಹಾಗಾದರೆ! ಇವರ ಇನ್ನೊಬ್ಬ ಪೂರ್ವಜ ಯಯಾತಿ ಶರ್ಮಿಷ್ಠೆಯೊಡನೆ ಗುಪ್ತ ಸಂಬಂಧ ಬೆಳೆಸಿರಲಿಲ್ಲವೆ? ಆದರೂ, ನೆನಪಿದೆಯೇ ಶಾಂರ್ಗರವ, ನಮ್ಮ ರಾಜರ್ಷಿ ದುಷ್ಯಂತ ಮಹಾರಾಜರು ಅದೆಷ್ಟು ಧೈರ್ಯದಿಂದ ತಮ್ಮ ಪೂರ್ವಜರು ಅವರ ದಿವ್ಯ ಭವ್ಯ ವಂಶ ಪರಂಪರೆ, ಮತ್ತು ತಮ್ಮ ಸ್ವಂತದ (ವ್ಯಂಗ್ಯವಾಗಿ) ನಿಷ್ಕಳಂಕ ಪರಿಶುದ್ಧ ಚಾರಿತ್ರ್ಯದ ಬಗೆಗೆ ಜಂಭ ಕೊಚ್ಚಿಕೊಂಡರು, ನಾವು ಶಕುಂತಲೆಯನ್ನು ಇವರ ಅರಮನೆಗೆ ಕರೆದುಕೊಂಡು ಹೋಗಿ ಇವಳನ್ನು ಸ್ವೀಕರಿಸಬೇಕೆಂದು ಬೇಡಿಕೊಂಡಾಗ?

ದುಷ್ಯಂತ : ಶಕುಂತಲೆಯನ್ನು, ನಮ್ಮ ಅರಮನೆಗೆ? ಯಾವಾಗ ಕರೆದುಕೊಂಡು ಬಂದಿದ್ದಿರಿ?

ಕಣ್ವ : ಏನು? ಅದನ್ನು ಕೂಡ ಮರೆತುಬಿಟ್ಟಿರಾ? ಮಹಾಕುಲಪತಿಗಳು ಆಲಿಸಬೇಕು. ಸುಮಾರು ಆರು ತಿಂಗಳ ಹಿಂದೆ ಶಕುಂತಲೆಗೆ ಪುಂಸವನ ವಿಧಿಯನ್ನು ಮಾಡಿಸಿ, ಈ ನನ್ನಿಬ್ಬರು ನೆಚ್ಚಿನ ಶಿಷ್ಯರು ಮತ್ತು ಪೂಜ್ಯ ಗೌತಮಿಯೊಡನೆ ಅವಳನ್ನು ರಾಜಧಾನಿಗೆ ನಿಮ್ಮ ಅರಮನೆಗೆ ಕಳಿಸಿಕೊಟ್ಟಿದ್ದೆ ನಾನು. ಆದರೆ ನೀವು ಕಲ್ಲೆದೆಯವರಾಗಿ ಅವರನ್ನವಮಾನಿಸಿ ನೋಯಿಸಿ ಹಿಂದೆ ಕಳಿಸಿದಿರಿ.

ದುಷ್ಯಂತ : ಕಿಮಿದಮುಪನ್ಯಸ್ತಂ?

ಕಣ್ವ : ಅಯ್ಯೋ ದೇವರೇ! ಇದೆಲ್ಲವೂ ಉಪನ್ಯಾಸವೆನಿಸಿತೇ? ಸರಿ ಸರಿ. ನಿನ್ನಂಥವರು ರಾಜರ್ಷಿ ಎನಿಸಿಯೇ ಜಂಬೂದ್ವೀಪವು ಈ ಸ್ಥಿತಿಗೆ ಬಂದಿತು.



ದುಷ್ಯಂತ : ಕುಲಪತಿಗಳೇ. ಹೆಣ್ಣು ಕೋಗಿಲೆ ಬೇರೆ ಪಕ್ಷಿಗಳ ಗೂಡಿನಲ್ಲಿ ತನ್ನ ತತ್ತಿಗಳನ್ನಿಡುವುದರಿಂದ ಹೆಂಗಸರು ಮಾತ್ರ ಧೂರ್ತರೆಂದು ತಿಳಿದಿದ್ದೆ ನಾನು. ಈಗ ನಿಮ್ಮೀ ಉಪನ್ಯಾಸವನ್ನು ಕೇಳಿ ಧೂರ್ತತನದಲ್ಲಿ ಗಂಡಸರೇನೂ ಕಡಿಮೆಯಿಲ್ಲವೆಂದು ಸಿದ್ಧವಾಯಿತು.

ಶಕುಂತಲೆ : ಅದಕ್ಕೆ ಬೇರೆ ದೃಷ್ಟಾಂತ ಬೇಕೆ?

ಕಣ್ವ : ಮಹಾಕುಲಪತಿಗಳೇ ನೀವೆಂದ ಮಾತಿನ ಅರ್ಥವೇನು? ನಾನು ಸುಳ್ಳು ಹೇಳಿದೆನೆಂದಲ್ಲವೇ? ಈ ಧಾರ್ಷ್ಟ್ಯಕ್ಕೆ ನಿಮಗೀಗ ಶಿಕ್ಷೆಯಾಗಲೇಬೇಕು. ಹಿಡಿಯಿರಿ ಶಾಪವನ್ನು.

ಶಕುಂತಲೆ : ತಡೆಯಿರಿ ಅಪ್ಪಾ, ದುಡುಕಬೇಡಿರಿ.

ವಿಶ್ವಾಮಿತ್ರ : ಸ್ವಲ್ಪ ತಾಳಿರಿ ಕುಲಪತಿಗಳೇ. ನನ್ನ ಮಗಳನ್ನು ತಿರಸ್ಕರಿಸಿ ಅಪರಾಧವೆಸಗಿರುವ ಅರಸನು ತಂದೆಯಾದ ನನ್ನನ್ನೂ ಅಪಮಾನಪಡಿಸಿದಂತೆ. ಆದುದರಿಂದ ಅವನಿಗೆ ಶಾಪ ಕೊಡುವ ಸುಯೋಗವನ್ನು ನನಗೆ ದಯಪಾಲಿಸಿರಿ. ಮೇಲಾಗಿ, ನಿಮಗೆ ಗೊತ್ತಿದೆಯಲ್ಲವೇ, ಶಾಪ ಕೊಡುವುದರಲ್ಲಿ ನನ್ನದು ಎತ್ತಿದ ಕೈ; ಶೀಘ್ರ ಕೋಪದಲ್ಲಿ ದೂರ್ವಾಸರ ನಂತರ ನಾವೇ!

ಶಾರ್ಙ್ಗರವ : (ದೂರದಲ್ಲೇನೋ ಕಂಡಂತೆ, ಬಲಪಕ್ಕದೊಳಕ್ಕೆ ಕೈ ತೋರಿಸುತ್ತಾ, ಕಣ್ವರಿಗೆ) ಗುರುಗಳೇ, ಅದೋ ಅಲ್ಲಿ ನೋಡಿ: ಮಹಾಮುನಿಗಳಾದ ದೂರ್ವಾಸರೇ ಚಿತ್ತೈಸುತ್ತಿದ್ದಾರೆ.

ಕಣ್ವ : (ಆ ಕಡೆಗೆ ನೋಡಿ) ಬಹಳ ಒಳ್ಳೆಯದಾಯಿತು. ತಮ್ಮ ಶಾಪಾಟೋಪದ ಅವಶ್ಯಕತೆ ಎಲ್ಲಿದೆ ಎಂಬುದು ದೂರ್ವಾಸರಿಗೆ ದಿವ್ಯ ಜ್ಞಾನದಿಂದಾಗಿ ತಕ್ಷಣ ತಿಳಿದುಬಿಡುತ್ತದೆ.

ದುಷ್ಯಂತ : (ತನ್ನಷ್ಟಕ್ಕೆ) ಅಯ್ಯೋ ದೇವರೇ, ಇನ್ನೇನು ಗತಿ? ಈ ಸಮಯದಲ್ಲಿ ದೂರ್ವಾಸ ಮುನಿಗಳು ಬರುತ್ತಿದ್ದಾರೆಂದ ಮೇಲೆ ನನ್ನ ಗತಿ ಮುಗಿದಂತೆಯೆ. ಈಗೇನು ಮಾಡಲಿ? ಸರಿ ಇದೇ ಅಂತಿಮ ಉಪಾಯ. (ಎಡಬದಿಯ ತುದಿಯಲ್ಲಿರುವ ಶಕುಂತಲೆಯ ಬಳಿಗೆ ಬರುವ. ಉಳಿದೆಲ್ಲರೂ ದೂರ್ವಾಸರನ್ನೆದುರುಗೊಳ್ಳಲು ರಂಗದ ಬಲ ತುದಿಗೆ ಬಂದಿದ್ದಾರೆ) ಶಕುಂತಲೆ, ಪ್ರಸನ್ನಳಾಗು ಈ ದೀನನ ಮೇಲೆ ದಯದೋರು. ನಾನು ನಿಜವಾಗಿಯೂ ನಿರ್ದೋಷಿ ಆತ್ಮಸಾಕ್ಷ್ಯವಾಗಿ ಹೇಳುತ್ತೇನೆ. ಈಗಲೂ, ಈ ಘಳಿಗೆಯಲ್ಲೂ, ನಿನ್ನನ್ನು ಹಿಂದೆ ಎಂದಾದರೂ ಮದುವೆಯಾಗಿದ್ದೆನೆಂಬ ಸಂಗತಿಯೇ ನೆನಪಾಗಲೊಲ್ಲದು ನನಗೆ. ಅದು ಹೋಗಲಿ ನಾನು ನಿನ್ನನ್ನು ಮದುವೆಯಾಗಿದ್ದರೇನು, ಇಲ್ಲದಿದ್ದರೇನು! ಈಗ ನೀನು ಹೇಗಿದ್ದರೂ ಸ್ನಾತಕಳಾಗಿರುವೆ. ನಿನಗೆ ಬೇಕಾದರೆ ನಿನ್ನ ಪದವಿಯನ್ನು ಅನುಪಸ್ಥಿತಿಯಲ್ಲೇ ದಯಪಾಲಿಸುವೆ. ಓ ಹೌದಲ್ಲವೇ--ಈಗ ಅದರ ಅವಶ್ಯಕತೆಯೇ ಇಲ್ಲ ನೀನೀಗಾಗಲೇ ಉಪಸ್ಥಿತಳಾಗಿರುವೆ. ನೋಡು, ಪದವೀಧರಳಾದ ನಿನಗೆ ಇದೇ ಆಶ್ರಮದಲ್ಲಿ ಶಿಕ್ಷಕಿಯ ಕೆಲಸ ಕೊಡುವೆ ನನ್ನ ಮಾತನ್ನು ನಂಬು---

ಶಕುಂತಲೆ : ಹಿಂದೊಮ್ಮೆ ನಂಬಿದ್ದೆ.

ದುಷ್ಯಂತ : ಅದು ನನಗೆ ನೆನಪಿಲ್ಲ. ಈಗ ಮಾತ್ರ ನೀನು ನಿನ್ನ ಸಾಕು ತಂದೆಗೆ ಭಾರವಾಗದ ಹಾಗೆ ನಿನ್ನನ್ನು ಸ್ವತಂತ್ರಳನ್ನಾಗಿ ಮಾಡುವೆ. ತಿಳಿಯಿತಲ್ಲವೇ? ನಿನಗಿನ್ನು ಯಾರ ಹಂಗೂ ಇಲ್ಲ. ಪತಿಯ ರಕ್ಷಣೆಯೂ ನಿನಗೆ ಬೇಡ. ಆದುದರಿಂದ ನನ್ನ ಅವಶ್ಯಕತೆಯೂ ನಿನಗೆ ಇಲ್ಲ ಎಂದಮೇಲೆ ನಾನು ನಿನ್ನ ಪತಿಯೆಂದು ಸಾಧಿಸುವ ಆವಶ್ಯಕತೆ ಏನು? ಇದೋ ನೋಡು. ಕರ ಜೋಡಿಸಿ ಬೇಡಿಕೊಳ್ಳುತ್ತೇನೆ. ದಯವಿಟ್ಟು ದೂರ್ವಾಸರಿಗೆ ಏನನ್ನೂ ಹೇಳಬೇಡ. ಅಷ್ಟೇಕೆ, ನಿನ್ನೆದುರು ಮಂಡಿಯೂರಿ ಪಾದ ಮುಟ್ಟಿ ಬೇಡಿಕೊಳ್ಳುತ್ತೇನೆ. (ಹಾಗೆ ಮಾಡಿ, ಆಶ್ಚರ್ಯದಿಂದ ತನ್ನೆದೆಯನ್ನು ಮುಟ್ಟಿಕೊಂಡು ಮೇಲೇಳುತ್ತಾ, ಸ್ವಗತ) ಇದೇನು? ಈ ಪಾದಗಳನ್ನು ಹಿಂದೊಮ್ಮೆ ಮುಟ್ಟಿದ್ದಂತೆ ಅನುಭವವಾಗುತ್ತಿದೆಯಲ್ಲ!

ದೂರ್ವಾಸ : (ಪ್ರವೇಶಿಸುತ್ತಾ) ಕ್ಷಮಿಸಬೇಕು ಕುಲಪತಿಗಳು; ತಮ್ಮ ಆಮಂತ್ರಣ ತಡವಾಗಿ ತಲುಪಿದ್ದರಿಂದ ತಡವಾಗಿ ಬರೋಣವಾಯಿತು. ತಡವಾಗಿ ತಂದ ಆ ದೂತನಿಗೆ ಶಾಪ ಕೊಡುವಷ್ಟು ಕೋಪ ಬಂದಿತ್ತು ನನಗೆ (ಶಕುಂತಲೆಯನ್ನೂ ಅವಳ ಪಾದದೆಡೆ ಕುಳಿತಿರುವ ದುಷ್ಯಂತನನ್ನೂ ನೋಡಿ) ಓಹೋ, ಮಹಾಕುಲಪತಿ ದುಷ್ಯಂತ ಮಹಾರಾಜರು! ಪತ್ನಿಯನ್ನು ಪ್ರಸನ್ನಗೊಳಿಸುವ ಪ್ರಯತ್ನದಲ್ಲಿದ್ದಂತೆ ಕಾಣುತ್ತದೆ!

ಕಣ್ವ : ದೂರ್ವಾಸ ಋಷಿಗಳೇ, ಶಕುಂತಲೆ ತಮ್ಮ ಪತ್ನಿ ಅಲ್ಲವೆಂದು ಮಹಾಕುಲಪತಿಗಳು ವಾದಿಸಿದ್ದಾರೆ ಆದುದರಿಂದ, ಅವಳು ದುಷ್ಯಂತ ಪತ್ನಿ ಅಲ್ಲ; ಬರಿ ನನ್ನ ಮಗಳು

ವಿಶ್ವಾಮಿತ್ರ : ಅಲ್ಲ ಸ್ವಾಮಿ, ಅವಳು ನನ್ನ ಮಗಳು. ಇದೇ ಈ ದುಷ್ಯಂತ ಮಹಾರಾಜರು ಅವಳನ್ನು ಮದುವೆಯಾಗಿದ್ದರಂತೆ; ಈಗ ಅದನ್ನು ಅಲ್ಲಗಳೆಯುತ್ತಿದ್ದಾರೆ. ಇನ್ನೇನು, ನಾನವರಿಗೆ ಶಾಪ ಕೊಡುವುದರಲ್ಲಿದ್ದೆ. ಅಷ್ಟರಲ್ಲಿಯೇ ತಾವು ದಯಮಾಡಿಸಿದಿರಿ. ಯೋಗ್ಯ ಸಮಯಕ್ಕೆ ಬಂದಿರಿ ತಾವು. ಆದುದರಿಂದ ಅರಸನಿಗೆ ಶಾಪ ಕೊಡುವ ಸತ್ಕಾರ್ಯವನ್ನು ನನಗಿಂತ ಚೆನ್ನಾಗಿ ನೆರವೇರಿಸಬಲ್ಲ ತಮಗೆ ಒಪ್ಪಿಸಿದ್ದೇನೆ.

ದೂರ್ವಾಸ : ವಿಶ್ವಾಮಿತ್ರ ಬ್ರಹ್ಮರ್ಷಿಗಳೇ, ನನ್ನ ಅಲ್ಪ ಸಾಮರ್ಥ್ಯವನ್ನು ಹೊಗಳಿ ತಾವಾಡಿದ ವಿಶ್ವಾಸದ ಮಾತುಗಳಿಗಾಗಿ ಸೇವಕ ಕೃತಜ್ಞನಾಗಿದ್ದಾನೆ. ಆದರೆ ತಮ್ಮಲ್ಲಿ ನನ್ನ ವಿನಂತಿ ಇದು. ತಾವು ದಯವಿಟ್ಟು ದೊಡ್ಡ ಮನಸ್ಸು ಮಾಡಿ ದುಷ್ಯಂತ ಮಹಾರಾಜರನ್ನು ಕ್ಷಮಿಸಬೇಕು.

ವಿಶ್ವಾಮಿತ್ರ : (ಸಖೇದ ಆಶ್ಚರ್ಯದಿಂದ) ಏನು? ದೊಡ್ಡ ಮನಸ್ಸು? ಕ್ಷಮೆ! ದೂರ್ವಾಸರೇ, ತಮ್ಮ ಬಾಯಿಂದ ಇಂಥ ಮಾತು? ಚಂಡ ಸೂರ್ಯನಿಂದ ಬೆಳುದಿಂಗಳು? ಹಾವಿನ ಹೆಡೆಯಿಂದ ಅಮೃತವರ್ಷವೆ? ಮೇರು ಚಲಿಸಿತೇ? ಅಗ್ನಿ ಶೀತಲವಾಯಿತೇ? ಏನು? ಕಲಿಕಾಲ ಈಗಲೇ ಪ್ರಾರಂಭವಾಯಿತೇ!

ದೂರ್ವಾಸ : ಶಾಂತರಾಗಿ, ವಿಶ್ವಾಮಿತ್ರರೇ, ಶಾಂತರಾಗಿ. ನನ್ನ ಮಾತನ್ನು ಆಲಿಸಿ. ನಿಮ್ಮ ಅಳಿಯ ಮರೆತಿದ್ದರೆ ಅದಕ್ಕೆ ಕಾರಣ ನಾನು.

ವಿಶ್ವಾಮಿತ್ರ : ಏನು ಏನು? ಅದಕ್ಕೆ ನೀವು ಕಾರಣರೇ? ಅದು ಹೇಗೆ? ಮರೆತುಬಿಡೆಂದು ಶಾಪ ಕೊಟ್ಟಿದ್ದಿರಾ?

ದೂರ್ವಾಸ : ಹಾಗೇನಿಲ್ಲ. ಆದರೆ...ಓ, ಅದೊಂದು ದೊಡ್ಡ ಕತೆ.

ಕಣ್ವ : ಪೀಠದ ಮೇಲೆ ಕುಳಿತುಕೊಳ್ಳೋಣವೇ ಆರ್ಯರೇ?

(ಮೂವರು ಮುನಿಗಳು ಕುಳಿತುಕೊಳ್ಳುವರು. ದುಷ್ಯಂತ ಸಮೇತ ಉಳಿದೆಲ್ಲರೂ ನಿಂತುಕೊಳ್ಳುವರು.)

ದೂರ್ವಾಸ : ನೋಡಿರಿ, ಅದೆಂದರೆ ಹೀಗಾಯಿತು. ಸುಮಾರು ಏಳು ತಿಂಗಳ ಹಿಂದೆ ನಾನೊಂದು ಯಜ್ಞವನ್ನು ಹಮ್ಮಿಕೊಂಡೆ. ಕೋಪಾಟೋಪ ಯಜ್ಞವೆಂದು ಅದಕ್ಕೆ ಹೆಸರು.

ವಿಶ್ವಾಮಿತ್ರ : ಗೊತ್ತು ಗೊತ್ತು. ಕೋಪವನ್ನು ಆಟೋಪದಲ್ಲಿಟ್ಟುಕೊಳ್ಳುವುದಕ್ಕಾಗಿ ಯಜ್ಞ.

ದೂರ್ವಾಸ : ಅಹುದು ಅದೇ ಯಜ್ಞ. ಅದನ್ನು ನೆರವೇರಿಸುವುದಕ್ಕಾಗಿ ನನಗೆ ದ್ರವ್ಯ ಬೇಕಾಗಿತ್ತು. ಸರಿ. ನಮ್ಮ ಮಹಾರಾಜರು ಧನ ಸಹಾಯ ಮಾಡಬಹುದೆಂದು ರಾಜಧಾನಿಗೆ ಹೊರಟೆ. ಅರಮನೆಯನ್ನು ತಲುಪಿ ಮಹಾರಾಜರ ಅತಿಥಿ ಸ್ವಾಗತ ಮಂದಿರಕ್ಕೆ ನಡೆದೆ. ಮಹಾರಾಜರು ಒಳಗೆ ಕುಳಿತಿದ್ದರು, ಮತ್ತು ನಾನು ಬಂದುದನ್ನು ಪ್ರತೀಹಾರಿ ಉದ್ಘೋಷಿಸಿದಳು. ಆದರೆ ಮಹಾರಾಜ ಮೇಲೆದ್ದು ಬಂದು ನನ್ನನ್ನು ಸ್ವಾಗತಿಸಲಿಲ್ಲ. ಕೈವಿಡಿದು ಕರೆದೊಯ್ದು ಉಚ್ಚಾಸನದ ಮೇಲೆ ಕುಳ್ಳಿರಿಸಲಿಲ್ಲ. ಅರ್ಘ್ಯಪಾದ್ಯಾದಿಗಳನ್ನೊಪ್ಪಿಸಲಿಲ್ಲ. ಅಷ್ಟೇಕೆ, ನಾನು ಸಮೀಪ ಹೋಗಿ ಎದುರಿಗೆ ನಿಂತರೂ ಈತ ನನ್ನನ್ನು ಕಣ್ಣೆತ್ತಿ ಕೂಡಾ ನೋಡಲಿಲ್ಲ. ನನಗೆ ಕೋಪ ಬಂತು.

ವಿಶ್ವಾಮಿತ್ರ : ಸಹಜ. ಆ ಮೇಲೇನಾಯಿತು?

ದೂರ್ವಾಸ : ಆ ಮೇಲೆ. ನಾನು ನೋಡಿದೆ. ಅರಸನು ಸಮಾಧಿಸ್ಥಿತಿಯಲ್ಲಿದ್ದು ಅವುದೋ ಮಂತ್ರ ಜಪಿಸುತ್ತಿರುವಂತೆ ತೋರಿತು. ಬಾಗಿ ಕಿವಿಗೊಟ್ಟು ಕೇಳಿದೆ. ಏನಾಶ್ಚರ್ಯ! ಪಿಸುದನಿಯಲ್ಲಿ ಅರಸ ಜಪಿಸುತ್ತಿದ್ದ ಮಂತ್ರ "ಶಕುಂತಲಾ, ಶಕುಂತಲಾ"!

ಶಕುಂತಲೆ : (ಸಂತೋಷದಿಂದ) ನಿಜವೇ! ನಿಜವೇ! ನಿಜವಾಗಿಯೂ ಆರ್ಯಪುತ್ರ ನನ್ನ ಹೆಸರನ್ನು ಉಚ್ಚರಿಸುತ್ತಿದ್ದನೇ?

ವಿಶ್ವಾಮಿತ್ರ : (ಕೋಪದಿಂದ) ಶಕುಂತಲೇ, ಸುಮ್ಮನಿರು.

ದೂರ್ವಾಸ : ಈ ರೀತಿ ಅರಸನು ಸವಿ ನೆನಪಿನಲ್ಲಿ ಸಮಾಧಿಸ್ಥನಾಗಿದ್ದಾಗ ನಾನವನ ನಡತೆಯನ್ನು ಅಪಮಾನವೆಂದು ಬಗೆದೆ. ತಿರಸ್ಕಾರವೆಂದು ತಿಳಿದೆ. ಕೂಡಲೇ ಕಡುಕೋಪದಿಂದ ನನ್ನ ಯೋಗದಂಡವನ್ನೆತ್ತಿ ನನ್ನೆಲ್ಲ ಶಕ್ತಿಯನ್ನುಪಯೋಗಿಸಿ ಅರಸನ ತಲೆಯ ಮೇಲಪ್ಪಳಿಸಿದೆ.

(ಶಕುಂತಲೆ ಹೃದಯದ್ರಾವಕವಾಗಿ ಚೀರುವಳು. ದುಃಖವನ್ನು ಅದುಮಿಕೊಳ್ಳುತ್ತಾ ಕೈಗಳಿಂದ ಮುಖವನ್ನು ಮುಚ್ಚಿಕೊಂಡು ಬಿಕ್ಕಳಿಸುತ್ತಿರುವಳು.)

ದೂರ್ವಾಸ : (ಮುಂದುವರಿಸುತ್ತಾ) ಆಗ ಅರಮನೆಯ ಸ್ತ್ರೀ ಪುರುಷರೆಲ್ಲ ಇದೇ ರೀತಿ ಚೀರಿದರು, ಬಿಕ್ಕಳಿಸತೊಡಗಿದರು. ಅರಸನು ಮೂರ್ಛೆ ಹೋದುದನ್ನು ಕೇಳಿ ಆತನ ಮಂತ್ರಿಗಳೆಲ್ಲ ಓಡಿಬಂದರು. ರಾಜವೈದ್ಯರನ್ನು ಕೂಡಲೇ ಕರೆಸಲಾಯಿತು. ಅವರೆಲ್ಲ ಎಡೆಬಿಡದೆ ಶ್ರಮಿಸಿದ ಮೇಲೆ ಗಾಯವನ್ನೆಲ್ಲ ಮದ್ದಿನಿಂದ ತುಂಬಿದ ಮೇಲೆ ಮೆಲ್ಲ ಮೆಲ್ಲಗೆ ಅರಸನಿಗೆ ಕಳೆದ ಸ್ಮೃತಿ ಮರಳಿತು. ನಿಧಾನವಾಗಿ ಆತ ಕಣ್ಣು ಬಿಟ್ಟು ನೋಡಿದಾಗ ಮೊದಲು ಕಂಡುದು ನನ್ನ ಮುಖವನ್ನು.

ಕಣ್ವ : ಏನೆಂದರು? ನಿಮ್ಮನ್ನು ಅವಮಾನಗೊಳಿಸಿದ್ದಕ್ಕಾಗಿ ಕ್ಷಮೆ ಕೇಳಿದರೆ ಮಹಾರಾಜರು?

ದೂರ್ವಾಸ : ಇಲ್ಲ. ಯಾರು ನೀವ? ಎಂದು ಕೇಳಿದರು. ನನ್ನನ್ನಾಗಲಿ ಅಥವಾ ಸುತ್ತ ನೆರೆದಿದ್ದವರಲ್ಲಿ ಯಾರನ್ನೇ ಆಗಲಿ ಮಹಾರಾಜರು ಗುರುತಿಸಲಿಲ್ಲ.

ಕಣ್ವ : ಅಯ್ಯೋ! ಅದು ವಿಸ್ಮರಣರೋಗ.

ವಿಶ್ವಾಮಿತ್ರ : ತಲೆಗಾದ ಗಾಯದಿಂದ ಮೆದುಳಿಗೆ ಪೆಟ್ಟು ಬಿದ್ದು ಅದರ ಕಾರ್ಯವೇ ನಿಂತು ಹೋಗಿದೆ!

ದೂರ್ವಾಸ : ಅಹುದು. ನನಗೆ ಅಯ್ಯೊ ಎನಿಸಿತು. ಅರಸನ ಬಿರಿಗಣ್ಣುಗಳನ್ನು ಕಂಡು ನಾನು ನಡುಗಿಹೋದೆ. ಓ ದೇವರೇ! ಕೆಂಡ ಕಾರುವ ಕಣ್ಣುಗಳನ್ನೆದುರಿಸಬಹುದು, ಆದರೆ ಭಾವಶೂನ್ಯವಾಗಿ ನಿರ್ಜೀವವಾಗಿ ದುರುಗುಟ್ಟುವ ಉನ್ಮತ್ತನ ಕಲ್ನೋಟವನ್ನು ಎದುರಿಸುವುದು ಕಠಿಣ. ಅರಸನ ಆ ಅಸಹಾಯ, ಶೂನ್ಯದೃಷ್ಟಿಯನ್ನು ಕಂಡು ಕಲ್ಲು ಕೂಡ ಕರಗಬಹುದಿತ್ತು. ನನ್ನೆದೆ ಕರಗಿತು... ಈಗ ನಿಮ್ಮ ಮನಸ್ಸು ಕೂಡ ಕರಗಬೇಕು, ಬ್ರಹ್ಮರ್ಷಿಗಳೆ! ದುಷ್ಯಂತ ಮಹಾರಾಜರನ್ನು ಕ್ಷಮಿಸಲಾರಿರಾ?

ವಿಶ್ವಾಮಿತ್ರ : ಕ್ಷಮಿಸದೆ ಏನು? ನನ್ನ ಜಾಮಾತೃ ನಿರ್ದೋಷಿ. ಅವರ ಆ ವಿಸ್ಮೃತಿರೋಗವೇ ಇಷ್ಟೆಲ್ಲ ಅನಾಹುತಕ್ಕೆ ಕಾರಣ. ಆದರೆ ಆ ರೋಗಕ್ಕೆ, ಕಾರಣ ನೀವು ದೂರ್ವಾಸರೇ! ನೀವೋ ನಿಮ್ಮ ಆ ಕೋಪಾಟೋಪ ಯಜ್ಞವೋ! ನಿಮ್ಮನ್ನು ಕ್ಷಮಿಸಲು ಸಾಧ್ಯವಿಲ್ಲ. ಮಹಾರಾಜರ ಸ್ಮರಣಶಕ್ತಿಯನ್ನೂ ನನ್ನ ಮಗಳ ಬಾಳನ್ನೂ ಹಾಳು ಮಾಡಿದ ನಿಮ್ಮನ್ನು ಸುಮ್ಮನೆ ಬಿಡುವೆನೆ? ನಿಮ್ಮ ಪಾಪಕ್ಕೆ ಪ್ರಾಯಶ್ಚಿತ್ತವಾಗಲೇ ಬೇಕು. ನನ್ನ ಶಾಪಕ್ಕೆ ನೀವು ಬಲಿಯಾಗಲೇಬೇಕು.

ದೂರ್ವಾಸ : ಶಾಪ ನನಗೆ! ಈ ಮಹಾ ತೇಜಸ್ವಿ ದೂರ್ವಾಸ ಮಹಾಮುನಿಗೆ! ಶಾಪ ಕೊಡುವ ಶಕ್ತಿ ಯಾರಿಗಿದೆ? ಧೈರ್ಯ ಯಾರಿಗೆ?

(ಜಿಗಿದೆದ್ದು ನಿಲ್ಲುತ್ತಾನೆ)

ವಿಶ್ವಾಮಿತ್ರ : (ಪುಟಿದೆದ್ದು ನಿಲ್ಲುತ್ತಾ) ಆ ಶಕ್ತಿ ಮೂರು ಲೋಕಗಳನ್ನು ನಡುಗಿಸಬಲ್ಲ ಶಕ್ತಿಶಾಲಿ ಬ್ರಹ್ಮರ್ಷಿ ವಿಶ್ವಾಮಿತ್ರನಿಗಿದೆ!

(ಎರಡು ಅಗ್ನಿಪರ್ವತಗಳು ಒಂದನ್ನೊಂದು ಎದುರಿಸಿದಂತೆ ನಿಲ್ಲುತ್ತಾರೆ. ಅಷ್ಟರಲ್ಲಿ ರಾಜದೂತನೊಬ್ಬ ಅತ್ಯುತ್ಸಾಹದಿಂದ ಪ್ರವೇಶಿಸಿ ತವಕದಿಂದ ಮಾತನಾಡುತ್ತಾ ಅರಸನ ಕಡೆಗೆ ನಡೆಯುತ್ತಾನೆ.)

ರಾಜದೂತ : ಮಹಾಪ್ರಭೂ. ಮಹಾಪ್ರಭೂ, ಕಳ್ಳ ಸಿಕ್ಕ. ತಮ್ಮ ಮುದ್ರೆಯುಂಗುರವನ್ನು ಕದ್ದ ಅವನು ಅದನ್ನು ಮಾರಲು ಪ್ರಯತ್ನಿಸುತ್ತಿದ್ದಾಗಲೆ ಅವನನ್ನು ಸೆರೆಹಿಡಿದುಬಿಟ್ಟೆವು. ಇದೋ, ನಿಮ್ಮ ಮುದ್ರೆಯುಂಗುರ. ಮಹಾಪ್ರಭೂ, ತಮ್ಮ ಮಹಾಘನನಾಮವನ್ನೂ ರಾಜ್ಯದ ಲಾಂಛನವನ್ನೂ ಕೆತ್ತಿರುವ ಮುದ್ರೆಯುಂಗುರ! ಪವಿತ್ರ ಪ್ರಶಸ್ತಿಪತ್ರಗಳಿಗೆ



ಮಡದಿಯೆನ್ನುವ ಹೆಸರೇ ಹಾಗೆ. ಇರುವುದು ಮೂರು ಸರಳಕ್ಷರ. ದೀರ್ಘ ಇಲ್ಲ; ಒತ್ತು ಇಲ್ಲ. ಮಹಾಪ್ರಾಣ ಮೊದಲೇ ಇಲ್ಲ. ಅನುನಾಸಿಕಾಂಶದಿಂದ ಮೊದಲಾದ ಎರಡು ಅಲ್ಪಪ್ರಾಣಾಕ್ಷರ ಮಾತ್ರ! ಆದರೆ ಇರುವುದು ರುದ್ರ ಭಯಂಕರ. ಬೃಹದಾಕಾರದ ಆನೆಯನ್ನು ಸತಾಯಿಸುವ ಇರುವೆ ಇರುತ್ತದಾದರೂ ಎಷ್ಟು ಮತ್ತೆ? ಹೆಬ್ಬಾವ ಸೀಳುವ ಧೀರನೂ ಸಿಂಹದ ಕೂಡ ಚಿನ್ನಾಟವಾಡುವ ಕಲಿಗಳೂ ಮಡದಿಯ ಮುಂದೆ ಬಾಲ ಮುದುರಿಕೊಳ್ಳುವುದನ್ನು ಕೇಳಿದ್ದೇವೆ. ಸಿಂಹದ ಕೂಡ ಆಟವಾಡಿದ ದುಷ್ಯಂತಪುತ್ರ ಮುಂದೆ ಭರತ ಚಕ್ರವರ್ತಿಯಾಗಿ ಮೆರೆದರೂ ಮಡದಿಯಾಗಿ ಬಂದವಳ ಸೆರಗಿನ ಬೀಸಿಗೆ ಬೆದರಲಿಲ್ಲ ಎನ್ನುವುದಕ್ಕೆ ಏನು ಸಾಕ್ಷಿಯಿದೆ? ಅಗ್ನಿಮಿತ್ರ ಇರಾವತಿಯ ಮುಂದೆ ಹೇಗೆ ತೊಯ್ದ ಬೆಕ್ಕಾಗಿರುತ್ತಾನೆ? ಬ್ರಹ್ಮ ಹಾಕಿದ ಪರಂಪರೆಗೆ ಇವರೇಕೆ ಹೊರತಾಗಬೇಕು?...ಒಮ್ಮೆ ಒಂದು ಕಾಲೇಜಿನ ಪ್ರಿನ್ಸಿಪಾಲರೊಬ್ಬರ ಮನೆಗೆ ಹೋಗಿದ್ದೆ. ಊಟದ ವೇಳೆ ಊಟಕ್ಕೂ ಎದ್ದೆ. ಭವ್ಯ ನಿಲುವು ಪ್ರಿನ್ಸಿಪಾಲರದು. ಅವರು, ನಾನು ಮತ್ತು ಅವರ ಮಡದಿ ಊಟಕ್ಕೆ ಕುಳಿತೆವು. ಆಗ ಬೆಕ್ಕೊಂದು ಅಡಿಗೆ ಮನೆ ನುಗ್ಗಿತು. ಕೂಡಲೇ ಶ್ರೀಮತಿ ಪ್ರಿನ್ಸಿಪಾಲ್ ಜೋರಾಗಿ ಹುಶ್ ಹುಶ್ ಎಂದರು. ಪ್ರಿನ್ಸಿಪಾಲರು ಆಗ 'ನೀನು ಹುಶ್ ಎಂದರೆ ಬೆದರಿ ಓಡಲು ಅದೇನು ನಾನೇ!'—ಎಂದರು ಬಾಯ್ತುಂಬ ನಗುತ್ತ. 'ಹಾಂ ಒಳ್ಳೇ ಬೆದರೋರು, ಸಾಕು ಒಳ್ಳೆ' ಶ್ರೀಮತಿಯವರು ಗದರಿ. ಮತ್ತೆ ನನ್ನ ಕಡೆ ನೋಡಿ, 'ಇವರು ನನಗೆ ಬೆದರುತ್ತಾರೇನ್ರಿ?' ಎಂದು ಖಡಾಖಂಡಿತ ಕೇಳಿದರು. ಸ್ವಲ್ಪ ಕಕ್ಕಾಬಿಕ್ಕಿ ಆಯ್ತು ನನಗೆ. ಏನೇ ಆಗಲಿ. ಈ ಸಂದರ್ಭದಲ್ಲಿ ಸತ್ಯವನ್ನೇ ಹೇಳೋಣ (ಹೇಗೂ ಊಟ ಮುಗಿಯುತ್ತ ಬಂದಿತ್ತು!)—ಎಂದು ಧೈರ್ಯ ತಂದುಕೊಂಡು 'ಹೌದರಿ ಹೆದರಲೇಬೇಕಲ್ಲ! ಹೆಂಡತಿಗೆ ಹೆದರದ ಭೂಪನನ್ನು ಈ ಭೂಮಂಡಳ ಇನ್ನೂ ಕಂಡಿಲ್ಲ' ಎಂದೆ. ಆ ಎಂದು ಆ ಇಬ್ಬರು ದಂಪತಿಗಳು ಬೆಚ್ಚಿದ ಸಮಯದಲ್ಲಿಯೇ ಕೊನೆಯ ತುತ್ತನ್ನು ಹಾಕಿಕೊಂಡು ತಟ್ಟೆಯಲ್ಲಿಯೇ ಕೈ ತೊಳೆಯುತ್ತ ಲಾಯನ್ ಟೇಮರನ (Lion tamer) ವಿಷಯ ಹೇಳಿದೆ-

'ಅದೊಂದು ದೊಡ್ಡ ಸರ್ಕಸ್ಸು. ಅವರಿಮ ಕಸರತ್ತುಗಳ ಆಶ್ಚರ್ಯಕ್ಕಿಂತಲೂ ಹುಲಿ, ಚಿರತೆ, ಆನೆ, ಸಿಂಹ ಮುಂತಾದ ಹಿಂಸ್ರ ಪ್ರಾಣಿಗಳ ಆಟವಾಡಿಸುವ ಗತ್ತಿಗಾಗಿ ಅದು ಬಹಳ ಪ್ರಸಿದ್ಧಿ ಪಡೆದಿತ್ತು. ಅದರಲ್ಲೂ ಸಿಂಹಗಳನ್ನು ಆಡಿಸುವ ಆ ಆಟಗಾರನ ಧೈರ್ಯ-ಸಾಹಸಗಳಿಗೆ ನೋಟಕರು ಬೆರಗಾಗಿ ಬಿಡುತ್ತಿದ್ದರು. ಸರ್ಕಸ್ ನೋಡಿ ಬಂದವರೆಲ್ಲ ಏನವನ ಧೈರ್ಯ ಅಬ್ಬಾ! ಎಂದು ಬಾಯ್ತುಂಬ ಹೊಗಳುತ್ತಿದ್ದರು. ಸಿಂಹಗಳ ಕೂಡ ಹೀಗೆ ಆಟವಾಡುವ ಈತನಿಗೆ ಇವನ ಮಡದಿ ತುಂಬ ಹೆದರುತ್ತಿರಬೇಕು; ಇವನೇ ಧನ್ಯ ಎಂದು ಅನೇಕ 'ಅಮ್ಮಾ' ಅವರ ಗಂಡಂದಿರು ಅಸೂಯೆಪಟ್ಟುದೂ ಉಂಟು. ಆದರೆ ಒಮ್ಮೆ ಏನಾಯಿತೆಂದರೆ ಅಂದು ಸರ್ಕಸ್ಸಿನ ಆಟಕ್ಕೆ ಬಿಡುವು. ತನ್ನ ಗೆಳೆಯರೊಂದಿಗೆ ಈ ಲಾಯನ್ ಟೇಮರ್ ಕ್ಲಬ್ಬಿನಲ್ಲಿ ವಿನೋದವಾಡುತ್ತ ತಲ್ಲೀನನಾಗಿದ್ದ. ಆಡುವುದು, ಕುಡಿಯುವುದು ಎಲ್ಲ ಮೋಜು ಆಯಿತು. ಎಲ್ಲರೂ ತಂತಮ್ಮ ಮನೆಗಳಿಗೆ ಹೊರಟರು. ಆಗ ಸಮಯ ಮಧ್ಯರಾತ್ರಿ ಮೀರಿತ್ತು. ಇಷ್ಟರಲ್ಲಿಯೇ ಈ ಟೇಮರ್ ಮನೆ ಸೇರಬೇಕಿತ್ತು. ಹಾಗೆಂದು ಮಡದಿಯ ಆರ್ಡರ್ ಆಗಿತ್ತು. ಆದರೆ ಮಡದಿಯ ಆಜ್ಞೆಯನ್ನು ಧಿಕ್ಕರಿಸುವ ಸಮಯವೊಂದಿದೆಯಲ್ಲ, ಅದು ಕೈಮೀರಿ ಹೋಗಿತ್ತು. ಈ ಅವೇಳೆಯಲ್ಲಿ ಮನೆಗೆ ಹೋಗಿ ಮಡದಿಯನ್ನು ಎಬ್ಬಿಸಿ, ಎದುರಿಸಲೇ? ನೆನೆಸಿಕೊಂಡೇ ಅವನು ಗಡಗಡ ನಡುಗಿದ. ಛೇ, ಧೈರ್ಯ ಸಾಲದು. ಬೀಸುವ ದೊಣ್ಣೆ ತಪ್ಪಿದರೆ ಸಾಕು, ನಾಳೆ ನೋಡುವ! ಎಂದಂದುಕೊಂಡು, ನಿದ್ರೆ ಬರುತ್ತಿದ್ದುದರಿಂದ ನೇರವಾಗಿ ಸರ್ಕಸ್ ಥಿಯೇಟರಿಗೆ ಬಂದು ತಾನು ಆಟವಾಡಿಸುವ ಸಿಂಹಗಳ ಪಂಜರು ತೆಗೆದು ಒಂದು ಸಿಂಹದ ಬೆನ್ನ ಮೇಲೆ ಹಾಯಾಗಿ ನಿದ್ರಿಸತೊಡಗಿದ... ಇಡಿ ರಾತ್ರಿ ಮನೆಗೆ ಬರದ ಗಂಡನನ್ನು ಹುಡುಕಿಕೊಂಡು, ಕೆರಳಿದ ಮಡದಿ, ಎಲ್ಲೆಲ್ಲೂ ಹೋದಳು, ಸಿಕ್ಕಲಿಲ್ಲ. ಕೊನೆಗೆ ಇಲ್ಲಿ ಕಂಡು ಸರ್ರನೆ ಸಿಂಹಶಾಯಿಯಾದ ತನ್ನ ಗಂಡನೆಂಬ ಪಿಳ್ಳೆಯನ್ನು ಈಚೆಗೆಳೆದು, ಕೈಯಲ್ಲಿಯ ಪೊರಕೆಯಿಂದ ಒಮ್ಮೆ ಗುಮ್ಮಿದಳು. ಬಾಥ್ ರೂಮಿನಲ್ಲಿ ನಾಗರಹಾವು ಕಂಡವರು ಹೌಹಾರಿ ಹೊರಗೆ ಓಡುವಂತೆ. ಇವನು ಬೆದರಿ ಒಮ್ಮೆಲೆ ಹೊರಗೆ ಓಡಿದ. ಅವನ ಹಿಂದೆ ಸಿಂಹಗಳೆಲ್ಲ ಓಡಿದವು. ಇವನೇನೋ ತನ್ನ ಮಡದಿಯ ಕೈಯಲ್ಲಿ ಮತ್ತೆ ಸಿಕ್ಕ. ಆದರೆ ಓಡಿಹೋದ ಸಿಂಹಗಳು ಮಾತ್ರ ಈ ವರೆಗೂ ಸಿಕ್ಕಿಲ್ಲವಂತೆ. ... ಈ ಸರ್ಕಸ್ಸಿನ ಲಾಯನ್ ಟೇಮರ್ ಏಕೆ, ಎಲ್ಲ ಗಂಡಸರ ಅವಸ್ಥೆಯೂ ಹೆಚ್ಚು ಕಡಿಮೆ ಹೀಗೆಯೇ. ಹೌದೆಂದು ಪ್ರಿನ್ಸಿಪಾಲ್ ದಂಪತಿಗಳು ಸಮ್ಮತಿ ಸೂಚಿಸಿದರು. ನನಗಷ್ಟೆ ಸಮಾಧಾನ. ಅಲ್ಲ, ಎನ್ನುವವರು, ಅತಿಥಿಗಳ ಮಧ್ಯೆ ಊಟಕ್ಕೆ ಕುಳಿತ ಗಂಡ ತುಪ್ಪ ಕೇಳಿ. ಏನು ಎಂದು ಮಡದಿ ಗದರಿಕೊಂಡಾಗ, 'ಏನೂ ಇಲ್ಲ ತುಪ್ಪ. ಅಲ್ಲ ಉಪ್ಪು' ಎಂದು ಗಡಬಡಿಸಿ, ಕೊನೆಗೆ 'ಅನ್ನ ಸುಡುತ್ತಿದೆ. ಉಫ್. ಉಫ್, ಎಂದ, ಎಂಬ ಕಥೆ ಜ್ಞಾಪಿಸಿಕೊಳ್ಳಬೇಕು.

ಮಡದಿಯಾಗಿ ಬರುವವಳು ಗಂಡಸಿನ ಬಾಳಿನಲ್ಲಿ ಹರ್ಷವನ್ನು ಇಮ್ಮಡಿ-ನೂರ್ಮಡಿಗೊಳಿಸುತ್ತಾಳೆಂದೂ ಅವನ ವ್ಯಾಕುಲಗಳಲ್ಲಿ ಪಾಲ್ಗೊಂಡು ಅವುಗಳನ್ನು ಅರ್ಧಕ್ಕಿಳಿಸಿ ಭಾರವನ್ನು ಹಗುರಗೊಳಿಸುತ್ತಾಳೆಂದೂ ಹೇಳುತ್ತಾರೆ. ಆದರೆ ಹಾಗೆ ಹೇಳುವವರಿಗೆ ಮಡದಿಯ ಕಲ್ಪನೆಯೇ ಇಲ್ಲ-ಎಂದು ಅನುಕಂಪಿಸಬೇಕು ಅಷ್ಟೆ. ಇಂಥ ಮೊದ್ದಿಗೆ ಅನುಕಂಪವೆ ಮದ್ದು ಅಲ್ಲವೆ?

ಮಡದಿ, ಬರುವ ಮೊದಲು ಎಷ್ಟು ಸಭ್ಯ, ಎಷ್ಟು ಮುಗ್ಧ! ನತವದನೆಯಾಗಿ ಲಜ್ಜಾವತಿಯಾಗಿ ಹಸೆಯ ಮೇಲೆ ಜೊತೆಯಲ್ಲಿ ಕುಳಿತಾಗ,

ನಸುನಸುವ ಓರೆನೋಟದಿಂದ ಗಂಡನತ್ತ ನೋಡುವಾಗ ಅವಳ ಮುಗ್ಧ ಚೆಲುವು ರಂಜಿತವಾಗಿ ಆಕೆ ಇನ್ನೂ ಮುದ್ದಾಗಿ ಕಾಣುತ್ತಾಳೆ. 'ಇಂಥವಳನ್ನು ಪಡೆದ ನಾನೇ ಧನ್ಯ' ಎಂದು ಪ್ರತಿಯೊಬ್ಬ ಗಂಡಸೂ ಆಗ ಅಂದುಕೊಳ್ಳುತ್ತಾನೆ. ಆದರೆ ಅದು ಬರಿ ಭ್ರಮೆ ಎಂದು ತಿಳಿಯಲು ಬಹಳ ಕಾಲ ಬೇಕಿಲ್ಲ. ಸಪ್ತಪದಿಯ ಸಂದರ್ಭದಲ್ಲಿ, ಇವಳ ಒಂದೊಂದು ಹೆಜ್ಜೆ ಮುಂದಡಿ ಇಡುವ ಗಂಡಸನ್ನು ತನ್ನ ಅಧೀನದಲ್ಲಿ ತಕ್ಕೊಳ್ಳುವ ತೂಕದ ಹೆಜ್ಜೆ; ಇದನ್ನರಿಯದು ಗಂಡಸು. ಪುರೋಹಿತರ ಗಿಳಿಪಾಠದಂತೆ, ನಾತಿ ಚರಾಮಿ ನಾತಿ ಚರಾಮಿ ಎಂದು ಶಪಥಗೈಯುತ್ತದೆ. ಇದು ಅನಿವಾರ್ಯವೇ ! ಯಾಕೆಂದರೆ ಮಡದಿಯಿಲ್ಲದ ಬಾಳು, ಬಾಳಲ್ಲ !

ಮಡದಿಯ ಪದವಿ ದೊರೆಯುವತನಕ ಕನ್ಯೆಯಾದವಳು ಅಂಗುಷ್ಠದಿಂದ ನೆಲ ಕೆದರುತ್ತ ಸೆರಗನ್ನ ಹೊಸೆಯುವುದನ್ನು ಎಲ್ಲರೂ ಕಂಡಿದ್ದೇವೆ. ಅದೂ ಪರ[ಇಂದು ಪರ ನಾಳೆ ತೆಪರ!] ಪುರುಷನೊಂದಿಗೆ ಸಂಭಾಷಿಸುವಾಗ ಪಾಪ, ತುಂಬ ನಾಚಿಕೆ ಎಂದು ಅಂದುಕೊಳ್ಳುತ್ತೇವೆ. ಆದರೆ ಅದು ಮದುವೆಯಾಗುವ ಗಂಡಸನ್ನು ಪಳಗಿಸುವ ತಯಾರಿ ಎಂದು ನನ್ನ ಅಂಬೋಣ. ಹಂಸಗಮನೆಯಾಗಿ ಬಂದವಳು, ಎಷ್ಟು ಬೇಗ ಹಿಂಸ್ರಗಮನ ಸಿಂಹಕಂಠಿಯಾಗುತ್ತಾಳೆ ! ಮೊದಮೊದಲು ಮಾತು ಬರುತ್ತದೋ ಇಲ್ಲವೊ ಎನ್ನುವಷ್ಟು ಮಿತಭಾಷಿಣಿ. ಮಾತನಾಡಿದರೂ ಬಹು ಮೆತ್ತಗೆ-ಮೃದುಭಾಷಿಣಿ. ಒಮ್ಮೆ ತನ್ನ ಹಿಡಿತದಲ್ಲಿ ಗಂಡನನ್ನು ತಂದುಕೊಂಡಳೆಂದರೆ, ಮನೆ ಮಾತಿನ ಮಳೆಯ ಮಲೆನಾಡಾಗುತ್ತದೆ. ಚಿರಾಪುಂಜಿ ಕಾಡಾಗುತ್ತದೆ. ಆಕೆಯ ಗುಡುಗು ಸಿಡಿಲುಗಳ ಆರ್ಭಟಕ್ಕೆ ಗಂಡಸು ತತ್ತರಿಸಿ ಹೋಗುತ್ತಾನೆ. ಇದಕ್ಕೆ ವ್ಯತಿರಿಕ್ತ ಇಲ್ಲವೇ?- ಎಂದು ಕೇಳುತ್ತೀರೇನೋ-ಇದ್ದರೆ, ಅಪರೂಪ-ನಿಮ್ಮಂತೆ! ಮದುವೆಯಾದ ಹೊಸದರಲ್ಲಿ, ಸಾಕ್ರೆಟಿಸ್ ತನ್ನ ಹೆಂಡತಿ ತನ್ನೊಂದಿಗೆ ಬಹಳಷ್ಟು ಮಾತಾಡಬೇಕು ಎಂದು ಬಯಸಿದ್ದಂತೆ ! ಆದರೆ ಮುಂದೆ.........ಒಬ್ಬ ಮಹಾಶಯನಿಗೆ ಕರ್ಮವಶಾತ್ ಮೂಕಿ ಮಡದಿ ಸಿಗುತ್ತಾಳೆ. ಅವಳ ಪ್ರೀತಿ ವಿಶ್ವಾಸಗಳಿಗೆ ಮಾರು ಹೋದ ಆತ, ಅಗಾಧ ವೈದ್ಯಕೀಯ ಚಿಕಿತ್ಸೆಯಿಂದ ಅವಳಿಗೆ ವಾಕ್‌ಶಕ್ತಿ ದೊರಕಿಸಿಕೊಡುತ್ತಾನೆ, ಮೊದಲಸಲ ಆಕೆ ಇಷ್ಟಗಲ ಬಾಯಿ ತೆರೆದು ಪ್ರಿಯಾ ಎಂದು ಸಂಬೋಧಿಸಿದಾಗ, ಸ್ವರ್ಗವನ್ನು ಒದ್ದು ಇವ ಹಾರಹೊಡೆದಿದ್ದನಂತೆ. ಮುಂದೆರಡು ದಿನಗಳಲ್ಲಿ ಆಕೆ ಎಷ್ಟು ವಾಚಾಳಿ ಆದಳೆಂದರೆ ಈತ ದೇವರಲ್ಲಿ ಮೊರೆಯಿಡುತ್ತಾನೆ—ಪ್ರಭೂ, ಹೇಗಾದರೂ ಮಾಡಿ ನನ್ನ ಮಡದಿಯನ್ನ ಮೊದಲಿನಂತೆ ಮೂಕಿಯನ್ನಾಗಿ ಮಾಡು-ಎಂದು. ಇವನ ಮೊರೆ ಕೇಳಿದ ದೇವರು ಪ್ರತ್ಯಕ್ಷನಾಗಿ, 'ಅಯ್ಯಾ ಭಕ್ತವರೇಣ್ಯ ! ನಿನ್ನ ಸಂಕಟ ತಿಳಿದು ನನಗೆ ಅತೀವ ವ್ಯಥೆಯಾಗಿದೆ. ಆದರೆ ಏನು ಮಾಡುವುದು? ಇದು ಈಗ ನನಗೆ ಮೀರಿದ್ದು. ನನ್ನ ಮಡದಿ ಕೂಡ ತುಂಬ ವಾಚಾಳಿ. ಆದ್ದರಿಂದ ನಾನೇ ಕಲ್ಲಾಗಿ ನಿನಗೆ ದೇವರಾಗಿದ್ದೇನೆ. ನೀನು ಕಿವುಡನಾಗಿ ಬದುಕಿಕೋ ಹೋಗು!'- ಎಂದು ಹೇಳಿ ಕಳಿಸುತ್ತಾನೆ. ಅಂತೆಯೇ a deaf husband is a good husband ಎಂಬ ಗಾದೆ ಬಂದಿರಬೇಕು. 'ಮತ್ತೊಂದು ಕೇಳದಂತೆ ಕಿವುಡನ ಮಾಡಯ್ಯಾ ತಂದೆ'- ಎಂದು ಬಸವಣ್ಣನವರಿಗೆ ಹೊಳೆಯಲು ಮಡದಿಯೇ ಏಕೆ ಕಾರಣವಾಗಿರಬಾರದು- ಎಂದು ಕೇಳಿದರೆ ಏನು ಹೇಳಬೇಕು? ಆದರೆ ನಾವು ಕೇಳಿವೆಂದರೂ ಆಕೆ ತನ್ನ ಧರ್ಮದ ಉಪದೇಶವನ್ನು ನಮಗೆ ನೀಡುವ ಗುರು. ಆದ್ದರಿಂದ ನಾವು ಸದಾ ಕಿವುಡಾಗಿಯೇ ಇರಲು ಬರುವಂತಿಲ್ಲ. ಮಳೆ ಬಂದಾಗ ಕಾರಿನ ವೈಪರ್ ಆನ್ ಮಾಡುವಂತೆ, ಹೊತ್ತು ನೋಡಿ ನಾವು ಕಿವುಡಾಗಬೇಕು. ಅಷ್ಟೆ.

ಮನೆ ತುಂಬಿಸಿಕೊಂಡು, ಮನ ತುಂಬಿಸಿಕೊಂಡು ಗಂಡನ ಮನೆಗೆ ಬರುವ ಮಡದಿ, ತವರು ಮನೆಯದೆಲ್ಲವನ್ನೂ ಬಿಟ್ಟುಕೊಟ್ಟು, ಕೇವಲ ಮಡದಿ ಪಟ್ಟಕತ್ತಿಯೊಂದನ್ನು ಹಿಡಿದು ಬರುತ್ತಾಳೆ. ಅಲ್ಲಿ ಹೂವಾಗಿರುತ್ತಾಳೆ. ಕೈಯಲ್ಲಿ ಪಟ್ಟಕತ್ತಿ ಬಂದ ಕ್ಷಣದಿಂದಲೇ ವಜ್ರವಾಗುತ್ತಾಳೆ. ಅದು ಥಳ ಥಳ ಹೊಳಪುಳ್ಳದಾದರೂ ಕಾಠಿಣ್ಯ ಕಡಿಮೆ ಏನಲ್ಲ. ಅಳ್ಳೆದೆಯ ಗಾಜಿನೆದೆಯನ್ನು ಅದು ಬೇಕಾದಾಗ ಕೊರೆಯಬಲ್ಲದು. ತನ್ನ ಕುಲ, ಗೋತ್ರ, ಹೆಸರು- ತೊರೆದು, ಗಂಡನ ಕುಲ ಗೋತ ವಹಿಸಿ, ಅವನಿಟ್ಟ ಹೆಸರು ಧರಿಸಿ, ದತ್ತಕ ಬಂದ ಬಗೆಯ ಹಕ್ಕು ಆಕೆ ಪ್ರಸ್ತಾಪಿಸತೊಡಗಿದರೆ ನಮಗೆ ದೂರು ಇರಬಾರದು ನಿಜ; ಆದರೆ ಅದರ ಬಿಸಿ ನೇರವಾಗಿ ನಮಗೇ ತಾಗಿ ಅವಳಾಸರೆಗೆ ನಾವೇ ಅಂಟಿಕೊಳ್ಳುವ ಅವಸ್ಥೆಗಾಗಿ ಯೋಚಿಸಬೇಕಾಗಿದೆ, ಅಷ್ಟೆ. ಇಲ್ಲದಿದ್ದರೆ, ನರಸಿಂಹಸ್ವಾಮಿಯೊಂದಿಗೆ ನಾವೂ ಹಾಡಬಹುದು- ಹೆಂಡತಿಯೊಬ್ಬಳು ಬಳಿಯೊಳಗಿದ್ದರೆ, ನನಗದೆ ಕೋಟಿ ರೂಪಾಯಿ ಅನೇಕ ಸಲ ಈ ಕೋಟಿ, 'ಖೊಟ್ಟಿ' ಆಗುವುದನ್ನು ಆ ಸ್ವಾಮಿ ತಾನೇ ಏನು ಬಲ್ಲ! ಹೀಗೆಂದ ಮಾತ್ರಕ್ಕೆ ನಾನು ಒಬ್ಬ ಮಡದಿ-ದ್ವೇಷಿ ಎಂದು ಯಾರಾದರೂ ತಪ್ಪು ಭಾವಿಸಿದರೆ ಅವರಿಗಾಗಿ ಇದೋ ನನ್ನ ಮರುಕಗಳು! ನಾನು ಅವಳನ್ನು ಬಾಳಿನ ಅಧಿದೈವತ ಎಂದು ಬಗೆಯುತ್ತೇನೆ. ದೈವತವೆ ಅಲ್ಲವೆ ನಮ್ಮನ್ನು ಸತ್ವಪರೀಕ್ಷೆಗಳಿಗೆ ಒಡ್ಡುವುದು? ಹಾಗೆ ಮಡದಿಯಾದವಳು ನಮ್ಮ ಸತ್ವವನ್ನು ಪರೀಕ್ಷಿಸಿ ಪರೀಕ್ಷಿಸಿ ನಮ್ಮನ್ನು ಪಾಲನೆ ಮಾಡುತ್ತಾಳೆ- ಎಂದು ಹೇಳ ಹೊರಟವ ನಾನು.

ನ ಸ್ತ್ರೀ ಸ್ವಾತಂತ್ರ್ಯಮರ್ಹತಿ ಎಂದು ಮನುವನ್ನು ಆರೋಪಿಸುತ್ತೇವೆ. ಆದರೆ ಅವನಷ್ಟು 'ಸ್ತ್ರೀಪರ' ಇನ್ಯಾರೂ ಇಲ್ಲ. ಸ್ತ್ರೀ, ಪತ್ನಿಯಾಗಿ ಗೃಹ ಸೇರುವಾಗ ಮತ್ತು ಆ ಮೇಲೆ, ಅವಳು ತರುವ ಧನ- ಅದು ಹೊನ್ನಾಗಿರಬಹುದು ಇಲ್ಲವೆ ಮಣ್ಣಾಗಿರಬಹುದು. ಅದು ಸ್ತ್ರೀಧನ. ಗಂಡಸಿಗೆ ಅದರ ಮೇಲೆ ಹಕ್ಕಿಲ್ಲ. ಅವಳು ದಾನ ಧರ್ಮದಿಂದ ವ್ರತ ನಿಯಮಗಳಿಂದ ಗಳಿಸುವ ಪುಣ್ಯದಲ್ಲಿ ಗಂಡಸಿಗೆ ಕಿಂಚಿತ್ತೂ ಪಾಲಿಲ್ಲ. ಆದರೆ ಅದೇ ಗಂಡಸು ಗಳಿಸಿದ್ದರಲ್ಲಿ, ಅದು ಧರ್ಮವೇ ಆಗಿರಲಿ, ಧನವೇ ಆಗಿರಲಿ, ಪುಣ್ಯವೇ ಆಗಿರಲಿ ಅವಳಿಗೆ ಸಮಪಾಲು ಉಂಟು. ಮತ್ತು ಅವಳು ಪಾಪ ಸಂಚಯಿಸಿದರೆ, ಅದರಲ್ಲಿ ಪ್ರಾಯಶ್ಚಿತ್ತಕ್ಕಾಗಿ ಗಂಡಸೂ ಪಾಲುಗೊಳ್ಳಬೇಕು. ಅದೇ ಗಂಡಸಿನ ಪಾಪದಲ್ಲಿ ಅವಳು ಪಾಲುಗಾರಳಾಗಲಾರಳು, ಪ್ರಾಯಶ್ಚಿತ್ತಕ್ಕೆ ಏಕೆ, ಸಹಾನುಭೂತಿಗೂ ಪಾಲುಗಾರಳಾಗಲು ಆಕೆಗೆ ಅಧಿಕಾರವಿಲ್ಲ. ಆಕೆ ಸಮ್ಮತಿಸಿದರೂ ಧರ್ಮ ಸಮ್ಮತಿಸುವುದಿಲ್ಲ. ಈ ಮಾತಿಗೆ ಇನ್ನಷ್ಟು ಪುಷ್ಟಿ ಆಂಗ್ಲ ಗಾದೆಯಲ್ಲಿ Better half- ಎಂಬಲ್ಲಿ ಇದೆ. ಬಲ ಪಕ್ಷವೇ ಭಾಗ್ಯ. ಅಬಲೆಯಾದರೂ ಬಲಪಕ್ಷ ಆಕೆಯದು, ಸಬಲನೆನ್ನಿಸಿಕೊಂಡರೂ ನಿರ್ಬಲ ಈ ಗಂಡಸು. ಇದೇ ಗಂಡ ಹೆಂಡಿರ ಜ್ಯಾಮಿತಿ.

ಪ್ರಪಂಚದಲ್ಲಿ ಜರುಗಿದ ಪ್ರಳಯಗಳಿಗೆಲ್ಲ ಮಡದಿಯೇ ಮೂಲ ಕಾರಣ ಎಂಬುದನ್ನು ಪುರಾಣ ಇತಿಹಾಸ ಸಾರಿ ಸಾರಿ ಹೇಳುತ್ತವೆ. ಮಡದಿಯ ಮುನಿಸಿಗೆ ಬಲಿಯಾದ ದಶರಥ







ಯುವರಾಜ ರಾಮನನ್ನು ವನವಾಸಕ್ಕೆ ಅಟ್ಟಿದ. ಅದೇ ರಾಮಾಯಣ. ದ್ರೌಪದಿ ಕೆರಳಿ ಮುಡಿಗೆದರಿದಾಗಲೆ ಕುರುಕ್ಷೇತ್ರ ರಣರಂಗ ಸಿದ್ಧವಾಯಿತು. ಅದೇ ಮಹಾಭಾರತ. ಆ ಗಾರ್ಡನ್‌ದಲ್ಲಿ ಆದಂ ಎಂದು ಈವಳನ್ನು ಮೋಹಿಸಿ ಮಡದಿಯೆಂದು ಸ್ವೀಕರಿಸಿದನೋ, ಅಂದೇ ಜಗತ್ತು ಪ್ರಮೀಳಾಪ್ರಪಂಚವಾಯಿತು. ಮತ್ತು ಈ ಪ್ರಪಂಚ ಮಾಯಾಸಾಗರವೆನಿಸಿತು. ಇದರಾಚೆ ಸಾರಲೆಂದೇ, ಸನ್ಯಾಸಾಶ್ರಮ ರೂಪಿತವಾಯಿತು. ಆದರೇನು, ಮೋಕ್ಷದಾಯಕರೆಲ್ಲರೂ ಮಡದಿಯ ಹಿಂಬಾಲಕರೇ !

ಮನೆ-ಮಡದಿಯ ಕಿಟಕಿಟಗೆ ಬೇಸತ್ತು ಒಬ್ಬ ಸನ್ಯಾಸಿ ಆದ. ತಪಸ್ಸು ಮಾಡುತ್ತ ಮಾಡುತ್ತ ಮರಣ ಹೊಂದಿದ. ಮೋಕ್ಷದ ಹಾದಿಯೇ ಮರಣ ಅಲ್ಲವೇ? ಶರೀರ ಬಂಧನದಿಂದ ಬಿಡುಗಡೆ ಪಡೆದ ಅವನು ನೇರವಾಗಿ ಸೃಷ್ಟಿಕರ್ತ ಬ್ರಹ್ಮನಲ್ಲಿಗೆ ಹೋದ. ಅಲ್ಲಿ ಕಂಡದ್ದೇನು? ಬ್ರಹ್ಮ ತನ್ನ ಹೆಂಡತಿಯ ಕಾಲೊತ್ತುತ್ತ ಕುಳಿತಿದ್ದ. ಆಕೆ ಹಾಯಾಗಿ ವೀಣೆ ನುಡಿಸುತ್ತಿದ್ದಳು. 'ಥತ್' ಎಂದು ವಿಷ್ಣುವಿನ ಬಳಿ ಬಂದ. ಅಲ್ಲಿಯೂ ಅದೇ ಅವಸ್ಥೆ. ಕನಲಿದ ಲಕ್ಷ್ಮಿಯನ್ನು ಒಲಿಸಲು ನಾನಾ ತರದ ಡೊಂಬರಾಟಗಳಲ್ಲಿ ಅತ ತೊಡಗಿದ್ದ. ಮತ್ತೆ 'ಥತ್'-ಎಂದು ಶಿವನೇ ಸೈ ಎನ್ನುತ್ತ ಅಲ್ಲಿಗೆ ಬಂದ. ಅವನೋ ತನ್ನ ಸ್ವಂತಿಕೆಯನ್ನೇ ಕಳಕೊಂಡು ಅರ್ಧನಾರೀಶ್ವರ ನಟನಾಗಿ ನರ್ತಿಸುತ್ತಿದ್ದ. ಮತ್ತೊಮ್ಮೆ ಥತ್-ಎಂದು ತನಗೆ ಸನ್ಯಾಸ ನೀಡಿದ ಗುರುವಿನ ಬಳಿ ಓಡಿದ ಅಲ್ಲಿಯೂ ಅದೇ ಪಾಡು, ಅವರು ಮತ್ತೆ ಗೃಹಸ್ಥಿಗಳಾಗಿ, ಮಡದಿಯ ತೊಡೆಯ ಮೇಲೆ ತಲೆಯಿಟ್ಟು ಮೋಕ್ಷಚಿಂತನೆಯಲ್ಲಿದ್ದರು. ಇವರೆಲ್ಲರಿಗೆ ಇಲ್ಲದ ಸನ್ಯಾಸ ತನಗೇಕೆಂದು ಬಂದ ಮಡದಿಯನ್ನು ಕಟ್ಟಿಹಾಕಿಕೊಂಡು With retrospective effect ದೀಕ್ಷೆ ಪಡೆದು ಮನೆ ಸೇರಿ ಮಡದಿವಂತನಾದನು. ಜನಪದ ಗೀತೆಯೊಂದು ಹೇಳುತ್ತದೆ-

'ಮಡದೀಯ ಬಡದಾನ, ಮನದೊಳಗ
ಮರುಗ್ಯಾನ
ಒಳಗ್ಹೋಗಿ ಕಾಲ ಹಿಡಿದಾನ-ಕೇಳ್ಯಾನ
ನಾ ಹೆಚ್ಚೊ, ನಿನ್ನ ತವರ್‍ಹೆಚ್ಚೊ' ಅಂತ

ಇಲ್ಲಿ ಒಂದು ಶಬ್ದ ತಪ್ಪಿ ಬಿದ್ದಿದೆಯೆಂದು ನನ್ನ ಅನುಮಾನ. ಅವ ಮರುಗಿರಲಿಕ್ಕಿಲ್ಲ. ಬೆದರಿರಬೇಕು. ಅದು ಬೆದರ್‍ಯಾನ-ಅಂತ ಇರಬೇಕು. ಇವನೊಬ್ಬನೇ ಏಕೆ, ಜಗತ್ತಿನ ಎಂಥೆಂಥ ವೀರಾಧಿವೀರರು ಮಡದಿಗೆ ಬೆದರಿ ಬಾಳಿಲ್ಲ!

ಚಂಚಲತೆಯೇ ಮಹಿಳೆಯಾದರೆ, ಪ್ರಾಮಾಣಿಕ ಚಂಚಲತೆಯೇ ಮಡದಿಯಾಗುತ್ತಾಳೆ. ಆಕೆ ಗಂಡಸನ್ನು ಇಷ್ಟೇಕೆ ಆಟವಾಡಿಸುತ್ತಾಳೆ ಎಂದರೆ ಆಕೆ ಪ್ರಾಮಾಣಿಕವಾಗಿ ಆತನನ್ನು ದೇವರೆಂದು ಭಾವಿಸುತ್ತಾಳೆ. ನನ್ನ ದೇವರು ನಾ ಬಯಸಿದಂತಿರಬೇಕು? ಎಂದು ಆಕೆ ಹಂಬಲಿಸಿದರೆ ತಪ್ಪೇನು ? ಭಕ್ತರ ಕೈಗೊಂಬೆ ದೇವರು ಆದರೆ, ಮಡದಿಯ ಕೈಗೊಂಬೆ ಮಾಡಿಕೊಂಡವ ಯಾಕಾಗಬಾರದು? ಆವಳು ಹೇಳದೆ ಧರ್ಮವ ಕಲಿಸುವ ಧರ್ಮಗುರು, ಹೇಳದೇ ತನ್ನದನ್ನೇ ಸಾಧಿಸುವ ಕುಲಗುರು, ಹೇಳದೆ ಕೇಳದೆ ರಾಜ್ಯವಾಳುವ ರಾಜಗುರು! ಅಂತೂ ಕೊನೆಗೆ ಬ್ರಹ್ಮ ಈ ಗಂಡುಸನ್ಯಾಳಲು ಒಂದು ಬ್ರಹ್ಮದಂಡವನ್ನು ಸೃಷ್ಟಿಸಿಯೇ ಬಿಟ್ಟ! ಆ ಬ್ರಹ್ಮದಂಡವೇ ಮಡದಿ!! ಹೀಗೆಂದು ನಿಮ್ಮ ನಿಮ್ಮ ಮಡದಿಯರಿಗೆ ಹೇಳುವ ಧೈರ್ಯ ನಿಮಗಿದೆಯೇ ?

## ನವ್ಯ ರೀತಿ

ಹಲ್ಲೊ, ಹಲ್ಲೊ ಎಂದು ಹಲ್ಲು
ಕಿರಿಯುತಲಿ।
ಕಂಡವರ ಕೈ ಕುಲುಕಿಸುವ
ನವ್ಯ ರೀತಿ ॥
ಟಾ ಟಾ, ಬಾಯ್ ಬಾಯ್ ಎಂದು
ಇಷ್ಟಗಲ ಬಾಯ್‌ಮಾಡಿ ।
ನಮ್ಮ ಸಂಪ್ರದಾಯದ
ಮರೆವುದೆಂಥ ನೀತಿ ॥

—ಎಂ. ಗೋವಿಂದ






(ವಿಕ್ರಮ ಸಂವತ್ ೨೦೨೫ರ ಅರ್ಥಾತ್ ಶಕೆ ೧೮೯೦ ಕಾರ್ತಿಕ ಶು. ೧ ಮಂಗಳವಾರದಿಂದ ಶಕೆ ೧೮೯೧ ಅಶ್ವೀನ ಬ. ೩೦ ರವಿವಾರದ ವರೆಗಿನ ಅಂದರೆ ತಾ. ೨೨--೧೦--೧೯೬೮ ರಿಂದ ತಾ. ೯--೧೧--೧೯೬೯ ರ ವರೆಗಿನ ಭವಿಷ್ಯ.)

ಸೂಚನೆ— ಈ ವರ್ಷಭವಿಷ್ಯವನ್ನು ಸ್ಥೂಲಮಾನದಿಂದ ಬರೆದದ್ದಾಗಿದೆ. ವ್ಯಕ್ತಿಗತ ಭವಿಷ್ಯವನ್ನು ಆವರವರ ಜನ್ಮಕುಂಡಲಿಯ ಮೇಲಿಂದ ಹೇಳಬೇಕು. ಅಂದರೇ ಅದು ಹದಿನಾರಾಣೆ ಮನವರಿಕೆಯಾಗಬಲ್ಲದು. ಆದರೂ ತಮ್ಮ ಜನ್ಮರಾಶಿಗೆ ಈ ವರ್ಷವು ಎಂಥೆಂಥ ಇಷ್ಟಾನಿಷ್ಟ ಫಲಗಳನ್ನು ಕೊಡಬಹುದು ಎಂಬುದರ ಕಲ್ಪನೆ ಈ ಭವಿಷ್ಯದಿಂದ ಉಂಟಾಗುತ್ತದೆ. ಅಲ್ಲದೆ ಪ್ರತಿಯೊಬ್ಬರೂ ತಮ್ಮ ಜನ್ಮರಾಶಿಯಂತೆ ಜನ್ಮಲಗ್ನದ ಮೇಲಿಂದಲೂ ಭವಿಷ್ಯವನ್ನು ಹೊಂದಿಸಿ ನೋಡಬೇಕು. ಅಂದರೆ ವಿಶೇಷ ಮನವರಿಕೆಯಾಗುವದು. ಅದರಂತೆ ಸ್ತ್ರೀಯರು ತಮ್ಮ ನೈಸರ್ಗಿಕ ದೇಹ-ಭೇದಗಳನ್ನು ಗಮನಿಸಿ ಫಲ ತಾರತಮ್ಯಗಳನ್ನು ಹೊಂದಿಸಿಕೊಂಡು ಓದಿದರೆ ಅವರಿಗೂ ಮನವರಿಕೆಯಾಗದಿರದು.)



## ಮೇಷ

ಈ ವರ್ಷವು ಈ ರಾಶಿಯವರಿಗೆ ತ್ರಾಸದಾಯಕವಾಗಿದ್ದು ಮಾನಸಿಕ ಕ್ಲೇಶ ಉಳಿದು ಅಪೇಕ್ಷಿತ ಕಾರ್ಯದಲ್ಲಿ ನಿರೀಕ್ಷೆಗಿಂತ ಕಡಿಮೆ ಯಶದಾಯಕವಾಗಿದೆಂಬುದು ಅನುಭವಕ್ಕೆ ಬರದಿರದು.

ವರ್ಷಾರಂಭದಲ್ಲಿ ರಾಶಿಸ್ವಾಮಿ ಮಂಗಳನು ಪಂಚಮನಾಗಿದ್ದು ದೈವೀ ಕೃಪೆಗೆ ಪಾತ್ರವಾದ ತ್ರಿಕೋಣದಲ್ಲಿ ಹಾಗೂ ಮಿತ್ರ ಹಾಗೂ ಬಲಿಷ್ಠ ರಾಶಿಯಾದ ಸಿಂಹದಲ್ಲಿ ಇರುವದರಿಂದ ಮತ್ತು ಪಂಚಮೇಶ ರವಿ ಹಾಗೂ ಸುಖೇಶಚಂದ್ರ ಇವರ ಪೂರ್ಣದೃಷ್ಟಿಯು ಈ ರಾಶಿಯ ಮೇಲೆ ಇರುವದರಿಂದ, ಸದ್ಯ ಇರುವ ಸಾಡೇಸಾತಿ(ಶನಿಕಾಟ)ಯ ಪ್ರಭಾವದಿಂದ ಅನೇಕ ಪ್ರಕಾರದ ಕಷ್ಟಗಳನ್ನು ಅನುಭೋಗಿಸಬೇಕಾಗುವದು. ಅನಪೇಕ್ಷಿತ ಸಂಕಟಗಳನ್ನು ಎದುರಿಸಬೇಕಾಗುವದು. ಆದರೂ ಪ್ರಕೃತಿ ಚನ್ನಾಗಿ ಉಳಿಯುವದು. ಶಾರೀರಿಕ ಹಾಗೂ ಬೌದ್ಧಿಕ ಸಾಮರ್ಥ್ಯದ ಬಲದಿಂದ ಕೊನೆಗೊಮ್ಮೆ ಎಲ್ಲ ಕಷ್ಟನಿಷ್ಠುರಗಳಿಂದ ಪಾರಾಗುವಿರಿ. ಆರೋಗ್ಯಕ್ಕೆ ಫೆಬ್ರುವರಿ ೨೮ ರ ವರೆಗಿನ ಹಾಗೂ ಸಪ್ಟೆಂಬರ್ ೧ ರ ನಂತರದ ಅವಧಿಯು ಬಹಳ ಉತ್ತಮವಿದೆ. ಆದರೆ ವೃಶ್ಚಿಕದಲ್ಲಿ ಫೆಬ್ರುವರಿ ೧೮ ರಿಂದ ಅಗಸ್ಟ ೩೧ ರ ವರೆಗೆ, ಅಂದರೆ ಸುಮಾರು ಆರೂವರೆ ತಿಂಗಳ ಕಾಲ, ಅದರಲ್ಲಿಯೂ ಎಪ್ರಿಲ್ ೨೬ ರಿಂದ ಜುಲೈ ೧೨ ರ ವರೆಗೆ ಮಂಗಳನು ವಕ್ರಿ ಇರುವದರಿಂದ, ಯಾರ ಜನ್ಮಕುಂಡಲಿಯಲ್ಲಿ ಶನಿ-ಮಂಗಳ ಯುತಿ ಅಥವಾ ಪರಸ್ಪರ ದೃಷ್ಟಿಯೋಗವಿರುವದೋ ಅಂಥವರಿಗೆ ಈ ಮೇಲಿನ ಅವಧಿಯಲ್ಲಿ ವಾಹನದಿಂದ, ಗಿಡದ ಮೇಲಿಂದ, ಅಟ್ಟದ ಮೇಲಿಂದ, ದಿನ್ನೆ ಗುಡ್ಡಗಳ ಮೇಲಿಂದ, ಬಿದ್ದು ಅಪಘಾತಕ್ಕೀಡಾಗುವ ಸಂಭವ ಬಹಳಷ್ಟಿದೆ. ಆದರೂ ಮಂಗಳನು ರಾಶಿಸ್ವಾಮಿಯಾಗಿ ಅಷ್ಟಮೇಶನೂ ಆಗಿರುವದರಿಂದ ಮೃತ್ಯುಭಯ ಇಲ್ಲ. ನಾಲ್ಕೈದು ವಾರ ಅಪಾಯ ಅನುಭೋಗಿಸಬೇಕಾದೀತು ಅಷ್ಟೆ.

ದಿ. ೨೮ ಡಿಸೆಂಬರದಿಂದ ದಿ. ೧೮ ಫೆಬ್ರುವರಿಯ ವರೆಗೆ ಹೆಂಡತಿಯ ಪ್ರಕೃತಿಗೆ ಅನುಕೂಲವಿಲ್ಲ. ಆದರೆ ಇತರ ಅವಧಿಯು ಉತ್ತಮವಿದ್ದು ಅಷ್ಟಮದಲ್ಲಿರುವ ಜಾಯೇಶ ಶುಕ್ರನು ದೇಹೇಶನಾದ ಮಂಗಳನೊಂದಿಗೆ ಶುಭಯೋಗ ದೃಷ್ಟಿ, ಕೇಂದ್ರದಿಂದಿರುವದರಿಂದ ಪ್ರಪಂಚದಲ್ಲಿಯ ಎಲ್ಲ ಚಿಕ್ಕದೊಡ್ಡ ವಿಷಯಗಳಲ್ಲಿ ನಿಮ್ಮಿಬ್ಬರಲ್ಲಿ ಮತ್ತೈಕ್ಯ ಉಳಿಯುವದು. ಜನೆವರಿ ೨೬ ರಿಂದ ಮಾರ್ಚ ೪, ಎಪ್ರಿಲ್ ೧ರಿಂದ ಮೇ ೩೧ ಮತ್ತು ಕದಾಚಿತ್ ಅಕ್ಟೋಬರ್ ೧೧ ರಿಂದ ನವೆಂಬರ್ ೪ ರ ಸುಮಾರಕ್ಕೆ ನಿಮ್ಮ ಅಥವಾ ನಿಮ್ಮ ಹೆಂಡತಿಯ ಪ್ರವಾಸ ಯೋಗದಿಂದ ನಿಮ್ಮ ಸಹವಾಸದಲ್ಲಿ ಅಂತರ ಉಂಟಾಗುವ ಸಂಭವವಿದ್ದರೂ ಉಳಿದ ವೇಳೆಯಲ್ಲಿ ಸಹವಾಸವು ಸದಾ ಘಟಿಸುವದು ಮತ್ತು ಹೆಂಡತಿಗೆ ಮನೆಯ ಹಾಗೂ ಹೊರಗಿನ ಜನರು ಅನೇಕ ವಿಷಯಗಳಲ್ಲಿ ಅನುಕೂಲರಾಗಿಯೇ ನಡೆದುಕೊಳ್ಳುವರು.

ಈ ರಾಶಿಯ ಸ್ತ್ರೀ-ಪುರುಷರ ವಿವಾಹವಾಗದೆ ಇದ್ದು ಅವರು ಆ ವಿಚಾರದಲ್ಲಿದ್ದರೆ ಅವರನೇ ಗುರುವಿನ ಮೂಲಕ ಬಾಸಿಂಗ ಬಲ ಅಷ್ಟೊಂದಿಲ್ಲ. ವಿವಾಹಕ್ಕಾಗಿ ಮಹಾ ಪ್ರಯತ್ನ ನಡೆಸಬೇಕಾಗುವದು. ಅನೇಕರ ಲಗ್ನ ನಿಶ್ಚಯವಾಗಿದ್ದರೂ ನಿಂತುಹೋಗಬಹುದು, ಅಥವಾ ಅನಿವಾರ್ಯ ಕಾರಣಗಳಿಂದಾಗಿ ಮುಂದಿನ ವರ್ಷದ ವರೆಗೆ ಮುಂದೆ ಬೀಳಬಹುದು. ಅದರಲ್ಲಿಯೂ ನವೆಂಬರ್ ೯ ರಿಂದ ಡಿಸೆಂಬರ್೪, ೨೯ ರಿಂದ ಜನೆವರಿ ೨೬, ಮೇ ೩೧ ರಿಂದ ಜೂನ್ ೨೯ ಅಥವಾ ಅಗಸ್ಟ ೨೨ ರಿಂದ ಸಪ್ಟೆಂಬರ್ ೧೬ ರ ವರೆಗಿನ ಅವಧಿಯು ವಿವಾಹ ನಿಶ್ಚಯಕ್ಕೆ ಅಥವಾ ಆಗುವುದಕ್ಕೆ ಅನುಕೂಲವಿದೆ. ಅನೇಕಕಡೆಗಳಲ್ಲಿ ವರನಿಗಿಂತ ವಧುವೇ ನಿರಾಕರಿಸುವ ಪ್ರಸಂಗ ಇದೆ. ಆದರೆ ಲಗ್ನವಾಗುವ ಸಂದರ್ಭಗಳಲ್ಲಿ ವಧೂವರರು ರೂಪ ಗುಣಗಳಲ್ಲಿ ಅನುರೂಪರಾಗಿರುತ್ತಾರೆಂದೇ ಹೇಳಬಹುದು!

ಈ ರಾಶಿಯವರ ಮಗ ಅಥವಾ ಮಗಳು ಈ ವರ್ಷ ಲಗ್ನವಾಗುವದಿದ್ದಲ್ಲಿ ಗುರುವು ಬಹಳೇ ಅನುಕೂಲನಿರುತ್ತಾನೆ. ನಿಮ್ಮ ಮಗಳ ವಿವಾಹವು ಯೋಗ್ಯ ವರನೊಂದಿಗೆ ಆಗುವದು. ಬರತಕ್ಕ ನಿಮ್ಮ ಸೊಸೆಯೂ ಮಗನಿಗೆ ಅನು

ಜ್ಯೋತಿಷಿ:
ಶ್ರೀ ಕೃಷ್ಣಶಾಸ್ತ್ರಿ ಭಿಡೆ
ಭವಿಷ್ಯಕಥನ ಕಾರ್ಯಾಲಯ, ಕಪಿಲೇಶ್ವರ ದೇವಾಲಯದ ಹತ್ತರ, ಮಂತ್ರಿಕೊಪ್ಪ ಕಟ್ಟಡ, ಬೆಳಗಾವಿ.

ರೂಪಳಾಗಿಯೇ ಇರುವಳು. ನಿಮ್ಮ ಮನಸ್ಸಿಗೊಪ್ಪುವ ಅಳಿಯ ಅಥವಾ ಸೊಸೆ ದೊರೆಯುವದರಿಂದ ನಿಮ್ಮ ಜಾಣ್ಮೆಯ ಬಗ್ಗೆ ನಿಮಗೆ ಸ್ವಲ್ಪ ಹೆಮ್ಮೆಯೆನಿಸಬಹುದು. ಸಂತತಿಯ ಉತ್ಕರ್ಷಕ್ಕೆ ಈ ವರ್ಷ ಬಹಳೇ ಉತ್ತಮವಾಗಿದೆ. ಆದರೆ ಜುಲೈ ೩೧ ರಿಂದ ಬರುವ ಐದನೇ ರಾಹುವು ಅನೇಕರ ಪ್ರಕೃತಿಗೆ ಕ್ಲೇಶಕಾರಕ. ಮತ್ತೆ ಕೆಲವರು ಅನೇಕ ಯೋಗ್ಯ ವಿಷಯಗಳಲ್ಲಿ ಕೂಡ ನಿಮ್ಮೊಂದಿಗೆ ಸಿಡುಕಿನಿಂದ ವರ್ತಿಸುವರು. ಅಥವಾ ನಿಮ್ಮ ಸಾಡೇಸಾತಿಯ ಪ್ರಭಾವದಿಂದ ನಿಮಗೆ ಹಾಗೆ ಅನಿಸುವದು.

ಉದ್ಯೋಗ-ವೃತ್ತಿಗಳಿಗೆ ಈ ವರ್ಷ ಆರನೇ ಗುರುವು ಭಾಗ್ಯೇಶನೂ ವ್ಯಯೇಶನೂ ಆಗಿರುವದರಿಂದ ಉದ್ದಿಮೆದಾರರಿಗಿಂತ ನೌಕರಿಯಲ್ಲಿದ್ದವರಿಗೆ ಹೆಚ್ಚು ಒಳ್ಳೆಯ ಕಾಲವಿದೆ. ಅನೇಕರಿಗೆ ಶನಿಯು ಜನ್ಮರಾಶಿಗೆ ಬಂದ ನಂತರ ಅಂದರೆ ಮಾರ್ಚ್ ೭ರ ನಂತರದ ಕಾಲದಲ್ಲಿ, ವಿಶೇಷತಃ ಸಪ್ಟೆಂಬರ್ ೧ರಿಂದ ಅಕ್ಟೋಬರ್ ೨೦ ರ ಒಳಗೆ ನೌಕರಿಯಲ್ಲಿ ಮೇಲಿನ ಗ್ರೇಡು, ಬಡತಿ ಕೂಡ ದೊರೆಯಬಹುದು. ಆದರೆ ಆಗ ಕೆಲಸದಲ್ಲಿ ಬದಲಾವಣೆ ಅಥವಾ ಬೇರೆ ಸ್ಥಳಕ್ಕೆ ವರ್ಗವಾಗುವ ಸಂಭವವಿದ್ದು ಆ ಬದಲಿ ಕೆಲಸ ಅಥವಾ ಊರು ನಿಮಗೆ ಅಷ್ಟೊಂದು ಹಿಡಿಸಲಿಕ್ಕಿಲ್ಲ.

ಸ್ವತಂತ್ರ ಉದ್ಯೋಗದಲ್ಲಿದ್ದವರಿಗೆ ಸಾಡೇಸಾತಿಯ ೧೨ನೇ ಶನಿ ಇರುವದರಿಂದ ಮಾರ್ಚ್ ೭ರ ವರೆಗೆ ಧಂದೆ, ಉದ್ಯೋಗಗಳು ಚನ್ನಾಗಿ ನಡೆದು, ನಿರೀಕ್ಷೆಯಂತೆ ಲಾಭ ದೊರೆತರೂ ವೆಚ್ಚವು ಅದಕ್ಕಿಂತ ಹೆಚ್ಚಿಗೆ ಆಗುವದರಿಂದ ಮತ್ತು ಅನೇಕ ಸರಕಾರಿ ಅಡಚಣಿಗಳನ್ನು ಎದುರಿಸಬೇಕಾಗುವದರಿಂದ ಕ್ಷಣಕ್ಷಣಕ್ಕೆ ಧನಾಭಾವ ನಿಮ್ಮನ್ನು ಪೀಡಿಸುವದು. ಆದರೆ ಅನೇಕರ ವೆಚ್ಚವು ಕಡಿಮೆಯಾಗಿ ಪ್ರತಿಷ್ಠೆ ಹೆಚ್ಚುವದು. ಇದ್ದ ಸಾಲವೂ ಕಡಿಮೆಯಾಗುತ್ತ ಹೋಗುವದು. ಶ್ರಮಜೀವಿಗಳಿಗಿಂತ ಬುದ್ಧಿಜೀವಿಗಳಿಗೆ ಉದ್ಯೋಗಿಗಳಿಗೆ ಈ ವರ್ಷ ಹೆಚ್ಚು ತ್ರಾಸದ್ದಾಗಿದೆ. ಅದರಲ್ಲಿಯೂ ನವೆಂಬರ್ ೯ ರಿಂದ ಜನೆವರಿ ೨೬, ಮಾರ್ಚ್ ೪ ರಿಂದ ಎಪ್ರಿಲ್ ೧, ಜೂನ್ ೨೯ ರಿಂದ ಜುಲೈ ೨೭, ಅಗಸ್ಟ್ ೨೨ ರಿಂದ ಅಕ್ಟೋಬರ್ ೧೧ ಈ ಅವಧಿಯು ಯಶಲಾಭಗಳ ಪ್ರಾಪ್ತಿಗೆ ಹೆಚ್ಚು ಅನುಕೂಲ. ಆದರೂ ಸ್ಥಾವರ, ಜಂಗಮ ಆಸ್ತಿ ಸಂಪಾದಿಸುವ ಯೋಗ ಇಲ್ಲವೇ ಇಲ್ಲ. ಬಹಳವಾದರೆ ಹಳೆಯದನ್ನು ಮುರಿಸಿ ಹೊಸದನ್ನಾಗಿಸುವ ಪ್ರಸಂಗವನ್ನು ನಿರುಪಾಯದಿಂದ ಒಪ್ಪಿಕೊಳ್ಳಬೇಕಾದೀತು. ಆಪ್ತರ, ಮಿತ್ರರ ಆಧಾರವೂ ದೊರೆಯುವದಿಲ್ಲ. ಶನಿಕಾಟವೇ ಕಾರಣ. ಅಲ್ಲಲ್ಲಿ ಬೇಕಾಗಿಯೋ ಬೇಡವಾಗಿಯೋ ಅಡಚಣಿಗಳನ್ನು ಸಾಡೇಸಾತಿಯು ತಂದೊಡ್ಡುವದು. ಈ ಶನಿಕಾಟ ಪೀಡೆಯ ಪರಿಹಾರಾರ್ಥ ೨೩೦೦೦ ಶನಿ ಜಪ ಮಾಡಬೇಕು. ಕನಿಷ್ಠ ಎರಡೂವರೆ ಕಿಲೋ ಎಳ್ಳೆಣ್ಣೆಯನ್ನು ಒಮ್ಮೆಯಾದರೂ ಶನಿವಾರದಂದು ಕಪ್ಪು ಬ್ರಾಹ್ಮಣನಿಗೆ ದಾನ ಮಾಡಬೇಕು.

ದಾವೆ-ಖಟ್ಲೆ, ಖಾಸಗಿ ಸ್ಪರ್ಧೆಗಳಲ್ಲಿ ಮಾರ್ಚ್ ೭ ರಿಂದ ಜುಲೈ ೩೦ ರ ವರೆಗೆ ಪ್ರಶಂಸನೀಯ ಯಶಸ್ಸು ದೊರೆಯುವ ಯೋಗವಿದೆ ಮಾರ್ಚ್ ೭ಕ್ಕೆ ಮುಂಚಿತವಾಗಿ ನಿಮ್ಮ ಪ್ರತಿಸ್ಪರ್ಧಿಗಳಲ್ಲಿ ಕೆಲವರು ದಿವಂಗತರಾಗುವ ಸಂಭವವೂ ಇದೆ.

ಈ ರಾಶಿಯ ಗರ್ಭವತಿಯರು ಜುಲೈ ೩೦ ರೊಳಗಾಗಿ ಪ್ರಸೂತರಾದರೆ ಸುಖ ಪ್ರಸೂತಿಯಾಗಿ ಕನ್ಯಾರತ್ನ ಪ್ರಾಪ್ತವಾಗುವದು. ಜುಲೈ ೩೦ ರ ನಂತರ ಹೆರಿಗೆಯು ತ್ರಾಸದ್ದಾದರೂ ಪುತ್ರೋತ್ಸವವಾಗುವ ಸಂಭವವಿದೆ.

ಮಾರ್ಚ್ ೭ ರಿಂದ ಜುಲೈ ೩೦ ರ ಅವಧಿಯಲ್ಲಿ ಪರೀಕ್ಷೆಗೆ ಕಟ್ಟುವ ವಿದ್ಯಾರ್ಥಿಗಳು ಖಂಡಿತವಾಗಿ ಉತ್ತೀರ್ಣರಾಗುವರು. ಆದರೆ ಮಾರ್ಚ್ ೭ಕ್ಕಿಂತ ಮೊದಲು ಪರೀಕ್ಷೆಯಿದ್ದವರು ಉತ್ತೀರ್ಣರಾಗುವದು ಅತ್ಯಂತ ಕಠಿಣ. ಜುಲೈ ೩೦ ರ ನಂತರ ಪರೀಕ್ಷೆಯಿದ್ದವರು ಕೆಳ ವರ್ಗದಲ್ಲಿ ಪಾಸಾಗುವರು.




ಈ ವರ್ಷದಲ್ಲಿ ಈ ರಾಶಿಯವರಿಗೆ ಮೊದಲಿನ ಆರು ತಿಂಗಳು ಅತ್ಯುತ್ತಮ, ನಂತರದ ಆರು ತಿಂಗಳು ನೀಚತಮ ಫಲ ದೊರಯಲಿದೆ.

ರಾಶಿಸ್ವಾಮಿ ಶುಕ್ರನು ವರ್ಷಾರಂಭದಲ್ಲಿ ಏಳನೆಯವನಾಗಿರುವದರಿಂದ ಆತನ ದೃಷ್ಟಿಯು ಈ ರಾಶಿಯ ಮೇಲೆ ಸಂಪೂರ್ಣವಾಗಿದೆ. ಅಲ್ಲದೆ ಮೃತ್ಯುಸ್ವಾಮಿ ಗುರು ಐದನೆಯವನಾಗಿ ಇಡೀ ವರ್ಷ ಈ ರಾಶಿಯನ್ನು ನೋಡುತ್ತಿದ್ದಾನೆ ಮತ್ತು ಮಾರ್ಚ್ ೭ ರ ವರೆಗೆ ಭಾಗ್ಯೇಶನಾದ ಶನಿಯು ದೃಷ್ಟಿಯು ಈ ರಾಶಿಯ ಮೇಲಿರುವದರಿಂದ ಪ್ರಕೃತಿಯ ಕಿರಿಕಿರಿ ಇರಲಾರದು. ಆದರೂ ಜುಲೈ ೩೧ ರ ನಂತರ ಕೆಲವರ ಪ್ರಕೃತಿ ಕೆಡುವ ಸಂಭವವಿದೆ. ಈ ರಾಶಿಗೆ ಮಾರ್ಚ್ ೭ ರಿಂದ ಶನಿಕಾಟ (ಸಾಡೇಸಾತಿ) ಪ್ರಾರಂಭವಾಗುತ್ತದೆ ಶನಿಯು ನೀಚರಾಶಿಯಾದ ಮೇಷದಲ್ಲಿ ಹನ್ನೆರಡನೆಯವನಾಗಿ ವ್ಯಯಸ್ಥಾನದಲ್ಲಿ ಬರುವದರಿಂದ ಮಾನಸಿಕ ತ್ರಾಸವು ಅತಿ ಹೆಚ್ಚಾಗುವದು ಕ್ಷುಲ್ಲಕ ಕಾರಣಗಳಿಗಾಗಿ ಕೂಡ ಮನಸ್ಸು ಪ್ರಕ್ಷುಬ್ಧವಾಗಿ ಅತ್ಯಾಚಾರಕ್ಕೆಳಸಬಹುದು ಆದ್ದರಿಂದ ಹನ್ನೆರಡನೆ ಶನಿಯಿರುವ ವರೆಗೆ ಜಾಗರೂಕತೆಯಿಂದಿರಬೇಕು. ಅಶುಭಫಲ ನಿವಾರಣೆಗಾಗಿ ಜಪಪೂಜಾದಿಗಳಿಂದ ಶನಿಯ ಆರಾಧನೆ ಸತತ ನಡೆಸಿರಬೇಕು. ಈ ರಾಶಿಯವರಿಗೆ ಶನಿಕಾಟದ ಏಳೂವರೆ ವರ್ಷಗಳಲ್ಲಿ ಮೊದಲಿನ ಎರಡೂವರೆ ವರ್ಷಗಳೇ ವಿಶೇಷ ತ್ರಾಸದಾಯಕವಾಗಿವೆ! ತಥಾಪಿ ಈ ವರ್ಷವು ಐದನೇ ಗುರುವಿನಿಂದಾಗಿ ಅಷ್ಟೊಂದು ತಾಪದಾಯಕವಾಗಲಾರದು. ಅಲ್ಲದೆ ವರ್ಷಾರಂಭದಲ್ಲಿ ಬುಧನು ಗುರುಸಹಿತ ಪಂಚಮದಲ್ಲಿ ಅಂದರೆ ಕನ್ಯಾರಾಶಿಯಲ್ಲಿರುವದರಿಂದ, ಅದು ಅವನ ಸ್ವಂತ ಹಾಗೂ ಉಚ್ಚರಾಶಿಯಾಗಿರುವದರಿಂದ ಪ್ರಾಪಂಚಿಕ ಸುಖವು ಸಾಕಷ್ಟು ಸಮಾಧಾನಕಾರಕವಿದೆ!

ಭಾಯರ್ಾಸ್ಥಾನದಲ್ಲಿ ಶುಕ್ರನು ಸ್ತ್ರೀಸುಖಕಾರಕನಿದ್ದು ಸುಖಕಾರಕ ಚತುರ್ಥ ಸ್ಥಾನದಲ್ಲಿರುವ ಭಾರ್ಯೇಶ ಮಂಗಳನ ದೃಷ್ಟಿಯಲ್ಲಿರುವದರಿಂದ ಒಟ್ಟಿಗೆ ಸ್ತ್ರೀಸುಖ ಚನ್ನಾಗಿ ದೊರೆಯುವದು. ಆದರೆ ಜುಲೈ ೩೦ ಕ್ಕೆ ನಾಲ್ಕನೆ ರಾಹು ಗೋಚರನಾಗುವದರಿಂದ ಹೆಂಡತಿಯ ಸ್ವಭಾವವು ಸಿಡುಕಿನದಾಗುತ್ತ ಹೋಗುವದು; ಆಪ್ತರು ನೆರೆಹೊರೆಯವರೊಂದಿಗೆ ಅಸೂಯೆ ಪ್ರದರ್ಶಿಸುತ್ತ, ಮನೆಯನ್ನೂ, ಊರನ್ನೂ ಬದಲಿಸುವ ಮಾತುಗಳನ್ನಾಡಹತ್ತುವರು. ಆಕೆಯ ಪ್ರಕೃತಿಗೂ ಡಿಸೆಂಬರ್ ೧೮ರಿಂದ ಫೆಬ್ರುವರಿ ೧೮ ಮತ್ತು ಅಗಸ್ಟ್ ೧೬ರಿಂದ ಸಪ್ಟೆಂಬರ್ ೧೬ರ ವರೆಗಿನ ಅವಧಿಯು ಸ್ವಲ್ಪ ತ್ರಾಸದಾಯಕವಾಗುವದು.

ವಿವಾಹಾಕಾಂಕ್ಷಿಗಳಿಗೆ ಈ ವರ್ಷ ಉತ್ತಮ ಬಾಸಿಂಗಬಲ ಇದ್ದು ಅನೇಕರ ಮದುವೆ ಮಾರ್ಚ್ ೭ ರ ಒಳಗಾಗಿಯೆ ಅನಾಯಾಸವಾಗಿ ವಿಜೃಂಭಣೆಯಿಂದ ಜರಗುವುದು. ಅಲ್ಲದೆ ವಧುವರರು ಅನುರೂಪರಾಗಿರುತ್ತಾರೆ. ಮಾರ್ಚ್ ೭ ರ ನಂತರ ವಿವಾಹವಾಗುವವರು ಕುಸು ಸಿಡುಕಿನವರಾಗಿದ್ದು ತಮಗಿಂತ ಸತ್ಯಪ್ರಿಯರಾಗಿರುತ್ತಾರೆ.

ಈ ರಾಶಿಯವರ ಮಕ್ಕಳ ಲಗ್ನವಾಗುವದಿದ್ದರೆ ಬಾಸಿಂಗಬಲ ಚನ್ನಾಗಿದೆ. ಆದರೆ ಬೀಗರ ಆರ್ಥಿಕ ಸ್ಥಿತಿ ನಿಮ್ಮಷ್ಟು ಚನ್ನಾಗಿರಲಾರದು! ಅಳಿಯ ಅಥವಾ ಸೊಸೆ ನಿಮ್ಮ ಮನಸ್ಸಿಗೆ ಬಂದರೂ ಇತರರಿಗೆ ಹಾಗೆನಿಸಲಿಕ್ಕಿಲ್ಲ. ಸಂತತಿಯ ಉನ್ನತಿಗೆ ಈ ವರ್ಷ ಬಹಳ ಚನ್ನಾಗಿದ್ದು ಅವರಲ್ಲೊಬ್ಬರು, ಎರಡನೆಯವರ ವೆಚ್ಚದಿಂದ ಪರದೇಶಕ್ಕೆ ಹೋಗುವ ಯೋಗವೂ ಇದೆ. ವಿಶೇಷತಃ ನವೆಂಬರ್ ೩ ರ ವರೆಗೆ, ನಂತರ ನವೆಂಬರ್ ೨೪ ರಿಂದ ಡಿಸೆಂಬರ್ ೧೨, ಜನೆವರಿ ೧ ರಿಂದ ಮಾರ್ಚ್ ೯, ಎಪ್ರಿಲ್ ೨೭ ರಿಂದ ಜುಲೈ ೧೯, ಅಗಸ್ಟ್ ೨೨ ರಿಂದ ಅಕ್ಟೋಬರ್ ೨೯ ರ ವರೆಗಿನ ಅವಧಿಯು ನಿಮ್ಮ ಮಕ್ಕಳ ಉನ್ನತಿಗೆ ಪೋಷಕವಾಗಿದೆ.

ಉದ್ಯೋಗ-ವೃತ್ತಿಯವರಿಗೆ ಮಾರ್ಚ್ ೭ರ ವರೆಗೆ ಪ್ರಸಂಸನೀಯ ಯಶಸ್ಸು ದೊರೆಯುವದು. ಭಾಗ್ಯೇಶ ಹಾಗೂ ಕರ್ಮೇಶನಾದ ಶನಿಯು ಲಾಭಸ್ಥಾನದಲ್ಲಿರುವದರಿಂದ ಮತ್ತು ರಾಹು ಮುಕ್ತನಾಗಿ ಲಾಭೇಶನಾದ ಪಂಚಮ ಗುರು ಹಾಗೂ ಧನೇಶನಾದ ಬುಧ, ಸಪ್ತಮೇಶ ಮಂಗಳ ಇವರ ದೃಷ್ಟಿಪಾತ್ರನಾಗಿರುವದರಿಂದ ಪ್ರಗತಿ, ಪ್ರತಿಷ್ಠೆ, ಲಾಭ ಇವು ಹೇರಳವಾಗಿ ಲಭಿಸುವಂತಿವೆ. ಆದರೆ ವರ್ಷಾರಂಭದಲ್ಲಿ ಆತ್ಮಕಾರಕ ರವಿ ಹಾಗೂ ಮನಕಾರಕ ಚಂದ್ರ ಇವರು ರಿಪುಸ್ಥಾನದಲ್ಲಿರುವದರಿಂದ ಈ ಕಾಲದಲ್ಲಿ ತಿಳಿದೊ ತಿಳಿಯದೆಯೊ ಅನೇಕ ತಪ್ಪುಗಳು ಘಟಿಸುವವು. ಇವುಗಳಿಂದಲೇ ಶನಿಕಾಟ ಪ್ರಾರಂಭದ ನಂತರ ತೊಂದರೆ ಹೆಚ್ಚುವದು. ಹನ್ನೆರಡನೆಯ ಶನಿ ಬಂದರೂ ಆತನ ದೃಷ್ಟಿಯು ಕೀರ್ತಿಸ್ಥಾನದ ಮೇಲೆ ಇರುವದರಿಂದ ಅಪ್ರತಿಷ್ಠೆ ಅಪಕೀರ್ತಿಗಳುಂಟಾಗದೆ ಸಮಾಜದಲ್ಲಿ ಆದರ

ಗೌರವಗಳು ಮೊದಲಿನಂತೆ ಉಳಿಯುವವು. ಶ್ರಮಜೀವಿಗಳಿಗಿಂತ ಬುದ್ಧಿಜೀವಿಗಳಿಗೆ ಕಡಿಮೆ ತೊಂದರೆ. ನೌಕರದಾರರಿಗೆ ವರ್ಗವಾದರೆ ಅಕಾಲದಲ್ಲಿ, ಅನುಕೂಲವಿಲ್ಲದ ಸ್ಥಳಕ್ಕೆ, ಅದು ಕೂಡ ಶನಿಕಾಟ ಪ್ರಾರಂಭವಾದ ನಂತರ ಆಗಬಹುದು. ಅದರಲ್ಲಿಯೂ ನವೆಂಬರ್ ೩ ರ ವರೆಗಿನ ಮತ್ತು ನಂತರದ ಡಿಸೆಂಬರ್ ೧೨ ರಿಂದ ಮಾರ್ಚ್ ೯ ರ ವರೆಗಿನ ಕಾಲಾವಧಿಯು ಯಶ ಲಾಭಗಳಿಗೆ ಉತ್ತಮವಾಗಿದ್ದಷ್ಟೇ ಏಪ್ರಿಲ್ ೯ ರಿಂದ ಜುಲೈ ೧೯, ಅಗಸ್ಟ ೪ ರಿಂದ ೨೨ ರ ವರೆಗಿನ ಕಾಲವು ಕಠಿಣವಾಗಿದೆ. ಮೊದಲಿನ ಆರು ತಿಂಗಳುಗಳಲ್ಲಿ ಸಂಪಾದಿಸಿದ್ದನ್ನು ನಂತರದ ಆರು ತಿಂಗಳುಗಳಲ್ಲಿ ಕಳೆದುಕೊಳ್ಳುವ ಭೀತಿಯಿದೆ. ಆದರೂ ಐದನೆಯ ಗುರುವಿನಿಂದಾಗಿ ಕ್ಷೇತ್ರ ಸಂದರ್ಶನ ಮತ್ತು ವಿಶೇಷ ಧರ್ಮಕಾರ್ಯ ನಡೆಯುವದು. ಮನೆಯ ಜನರಿಂದ ಸುಖ ದೊರೆತರೂ ಹೊರಗಿನವರಿಂದ ದ್ವೇಷಾಸೂಯೆಗಳೇ ನಿಮ್ಮ ಪಾಲಿಗಿವೆ. ವಾಹನಗಳು ಕೆಟ್ಟುಹೋಗಿ ವಿಶೇಷ ವೆಚ್ಚ ಸಹಿಸಬೇಕಾಗುವದು. ನಂಬಿದವರೇ ನಿಮಗೆ ಕೈತೋರಿಸಿಯಾರು!

ದಾವೆ—ಫಿರ್ಯಾದಿ ಮತ್ತಿತರ ಸ್ಪರ್ಧೆಯ ಕಾರ್ಯಗಳಲ್ಲಿ ಫೆಬ್ರುವರಿ ೧೮ರಿಂದ ಏಪ್ರಿಲ್ ೨೬ ಮತ್ತು ಅಕ್ಟೋಬರ್ ೨೦ ರ ನಂತರದ ಕಾಲವು ಯಶದಾಯಕ. ಸಪ್ಟೆಂಬರ್ ೧೬ ರಿಂದ ಅಕ್ಟೋಬರ್ ೨೦ ರ ವರೆಗಿನ ಅವಧಿಯಲ್ಲಿ ನಿಮ್ಮ ಪ್ರತಿಸ್ಪರ್ಧಿಗಳ ಪಿರಾಟ ಹೆಚ್ಚುವದು

ಬಸುರಿಯರಲ್ಲಿ ಬಹಳಷ್ಟು ಸ್ತ್ರೀಯರಿಗೆ ಕನ್ಯಾರತ್ನ ಪ್ರಾಪ್ತಿಯಿದೆ. ನವೆಂಬರ್ ೩ರ ವರೆಗಿನ ಮತ್ತು ನವೆಂಬರ ೨೪ ರಿಂದ ಡಿಸೆಂಬರ್ ೧೨, ಜನೆವರಿ ೧ ರಿಂದ ಮಾರ್ಚ್ ೯, ಏಪ್ರಿಲ್ ೨೬ ರಿಂದ ಜುಲೈ ೧೯, ಅಗಸ್ಟ ೨೨ ರಿಂದ ಅಕ್ಟೋಬರ್ ೨೯ ಅತ್ಯಂತ ಸುಲಭ ಪ್ರಸೂತಿಯಾಗುವದು.

ಮಾರ್ಚ್ ೭ ರ ಪೂರ್ವದಲ್ಲಿ ಪರೀಕ್ಷೆ ಇದ್ದವರು ಖಂಡಿತ ಪಾಸಾಗುವರು, ಇಷ್ಟೇಕೆ, ಅನೇಕರು ಪ್ರಥಮ ಇಲ್ಲವೆ ದ್ವಿತೀಯ ವರ್ಗದಲ್ಲಿ ಉತ್ತೀರ್ಣರಾಗುವರು. ಮಾರ್ಚ್ ೧೦ ರಿಂದ ಏಪ್ರಿಲ್ ೯, ಜುಲೈ ೧ ರಿಂದ ೧೯, ಅಥವಾ ಅಗಸ್ಟ ೨೨ ರಿಂದ ಅಕ್ಟೋಬರ್ ೨೯ ರ ಅವಧಿಯಲ್ಲಿ ಪರೀಕ್ಷೆಗೆ ಕಟ್ಟುವವರು ಕನಿಷ್ಠ ಗುಣಗಳನ್ನಾದರೂ ಪಡೆದು ಪಾಸಾಗುವರು.




ಈ ವರ್ಷವು ಈ ರಾಶಿಯವರಿಗೆ ಉತ್ತಮ ಅಭಿವೃದ್ಧಿಕಾರಕವಿದೆ. ಕೆಲವೊಂದು ವಿಷಮಗಳನ್ನು ಬಿಟ್ಟರೆ, ಪ್ರಾಪಂಚಿಕಸುಖವೂ ಸಾಕಷ್ಟು ಸಮಾಧಾನಕಾರಕವಿದೆ.

ಈ ರಾಶಿಯವರಿಗೆ ಈ ವರ್ಷವು ಬಹಳಷ್ಟು ವಿಷಯಗಳಲ್ಲಿ ಸುಖಕಾರಕವಿದೆ. ರಾಶಿಸ್ವಾಮಿ ಬುಧನು ಚತುರ್ಥ-ಸುಖದಾಯಕ ಸ್ಥಾನದಲ್ಲಿರುವದರಿಂದ ಮತ್ತು ಉಚ್ಚನಾಗಿರುವದರಿಂದ ಮತ್ತು ಗುರುವಿನಿಂದ ಯುಕ್ತನಾಗಿರುವದರಿಂದ ಪ್ರಕೃತಿಯು ನಿರೋಗಿಯಾಗಿ ಉಳಿದು ಕಠಿಣ ಮತ್ತು ದುರ್ಲಭ ಕಾರ್ಯಗಳನ್ನು ಮಾಡುವ ಉತ್ಸಾಹ ತೋರಿಬರುವದು. ೧೧ ನೇ ಶನಿಯು ಮಾರ್ಚ್ ೭ ರಂದು ಲಾಭಸ್ಥಾನಕ್ಕೆ ಬಂದ ನಂತರದ ಕಾಲವು ತುಂಬ ಸಮಾಧಾನದ್ದೂ ಕೌಟುಂಬಿಕ ಉತ್ಕರ್ಷದ್ದೂ ಆಗಿರುವದು.

ಭಾಗ್ಯೇಶನಾದ ಗುರುವು ಸ್ವೋಚ್ಚ ಬುಧನಿಂದ ಯುಕ್ತನಾಗಿರುವದರಿಂದ ಹೆಂಡತಿಯೊಡನೆ ಒಮ್ಮತ ಉಳಿದು ಮಹತ್ವದ ಕೆಲಸಗಳಲ್ಲಿ ಆಕೆಯ ಸಲಹೆ ಸಹಾಯಗಳು ಪ್ರಯೋಜನಕಾರಿಯೆನಿಸುವವು. ಆಕೆಯ ಬಗೆಗೆ ಆದರ ಅಭಿಮಾನ ಕಂಡುಬರುವದು. ಆದರೆ ಆರನೇ ಶುಕ್ರ ಮತ್ತು ನೆಪ್‌ಚೂನನ ಪರಿಣಾಮವಾಗಿ ಕೀಳು ಹೆಂಗಸಿನ ಬಗ್ಗೆ ಆಶೆ ಹುಟ್ಟಿ ಬೆಳೆಯುವದು. ಇದು ದೀರ್ಘಕ್ಕೂ ಹೋಗಬಹುದು. ಗುರು-ಕೇತು ಕೂಡಿರುವದರಿಂದ ಹೆಂಡತಿಗೆ ಏಪ್ರಿಲ್ ೨೬ರಿಂದ ಜುಲೈ ೧೨ರ ಅವಧಿಯಲ್ಲಿ ತಲೆಶೂಲೆ, ಟೊಂಕ ಶೂಲೆಗಳಿಂದ ವಿಶೇಷ ತೊಂದರೆ.

ಈ ವರ್ಷದಲ್ಲಿ ವಿವಾಹವಾಗಲಿರುವವರಿಗೆ-ನಾಲ್ಕನೇ ಗುರುವಿನಿಂದಾಗಿ ಬಾಸಿಂಗ ಬಲ ಅಷ್ಟೊಂದಿಲ್ಲ. ಆದರೆ ೧೧ನೇ ಗುರು ಬಂದನಂತರ ಸ್ವಲ್ಪ ಪ್ರಯತ್ನದಿಂದ ವಿವಾಹ ಖಂಡಿತವಾಗಿ ಆಗುವದು. ಅನೇಕರಿಗೆ ಆಪ್ತರಲ್ಲಿಯೆ ವಧು-ವರರು ದೊರೆಯುವ ಸಂಭವ ಹೆಚ್ಚಾಗಿದೆ. ವಧು-ವರರು ಅನುಕೂಲವಾಗಿರುತ್ತಾರೆ. ಆದರೆ

ವಿವಾಹ ಗೊತ್ತಾದ ನಂತರ ವೈರಿಗಳು ಅದರಲ್ಲಿ ಕೆಲವೊಂದು ವಿಘ್ನಗಳನ್ನು ಉಂಟುಮಾಡ ಬಹುದು ಎಂಬ ಭೀತಿಯನ್ನು ೪ನೇ ಕೇತುವು ತೋರಿಸುತ್ತಿದ್ದಾನೆ. ನಂತರ ಆ ಗೊತ್ತಾದ ವಿವಾಹವೇ ನಡೆಯುವದು ಎಂದು ಚತುರ್ಥದಲ್ಲಿ ಇರುವ ಗುರು-ಬುಧ ಇವರ ಪ್ರಬಲ ಯುತಿ ಹೇಳುತ್ತದೆ.

ಈ ರಾಶಿಯವರ ಮಕ್ಕಳ ಲಗ್ನವಾಗುವ ದಿದ್ದಲ್ಲಿ ಅವರಿಗೆ ಬಾಸಿಂಗ ಬಲ ಇಲ್ಲವೆಂದೇ ಹೇಳಬಹುದು. ಆದರೂ ನವೆಂಬರ್ ೯ ರಿಂದ ಡಿಸೆಂಬರ್ ೪, ಡಿಸೆಂಬರ್ ೨೯ರಿಂದ ಜನವರಿ ೨೬, ಸಪ್ಟೆಂಬರ್ ೧೬ ರಿಂದ ಅಕ್ಟೋಬರ್ ೧೬ ಈ ಅವಧಿ ಯಲ್ಲಿ ಕೆಲವರ ವಿವಾಹವು ಆಗಬಹುದು. ಆದರೆ ದೊರೆವ ಸೊಸೆಯಾಗಲಿ ಅಳಿಯನಾಗಲಿ ನೀವೆಣಿಸಿದಷ್ಟು ನಿಮ್ಮ ಮನಸ್ಸಿಗೆ ಒಪ್ಪಿಗೆಯಾಗ ಲಿಕ್ಕಿಲ್ಲ.

ಸಂತತಿಯ ಉತ್ಕರ್ಷಕ್ಕೆ ಹನ್ನೊಂದನೆಯ ಶನಿಯು ಬಂದ ನಂತರ ಒಳ್ಳೆಯ ಅವಕಾಶ ಲಭಿಸುವವು. ಕನ್ಯೆಯರಲ್ಲಿ ಒಬ್ಬಳು ಬಹಳೇ ಉತ್ಕರ್ಷ ಹೊಂದುವಳು. ಆದರೆ ಅವರಿಂದ ನಿಮಗೆ ಅಷ್ಟೊಂದು ಸುಖ-ಪ್ರೇಮ ದೊರೆಯ ಲಾರದು. ಅವರಲ್ಲೊಬ್ಬರು ನಿಮ್ಮ ಮನಸ್ಸಿನ ವಿರುದ್ಧ ನಡೆದುಕೊಳ್ಳುವರು. ಆದರೆ ಇವೆಲ್ಲ ಹೊರಗೆ ಬೊಬ್ಬಾಟವಾಗದೆ ಮನೆಯಲ್ಲಿಯೆ ನಡೆಯುವವು.

ಉದ್ಯೋಗ-ವೃತ್ತಿಗಳಿಗೆ ಈ ವರ್ಷವು ಅತ್ಯು ತ್ತಮವಾಗಿದ್ದು ೧೧ನೇ ಶನಿ ಬಂದನಂತರ ಅಂದರೆ ಮಾರ್ಚ್ ೬ ರಿಂದ ಈ ಮಾತಿನ ಅನುಭವ ಭರದಿಂದ ಉಂಟಾಗಹತ್ತುವದು. ಜುಲೈ ೩೦ಕ್ಕೆ ೩ನೇ ಕೇತು ಹಾಗೂ ೯ನೇ ರಾಹು ಬಂದನಂತರ ಪರಿಸ್ಥಿತಿಯಲ್ಲಿ ಬಹಳಷ್ಟು ಬದಲಾವಣೆ ಕಂಡು ಬರುವದು. ಎಣಿಸಿದ ಕೆಲಸಗಳೆಲ್ಲ ಈಡೇರು ವವು. ಉದ್ಯೋಗದಲ್ಲಿ ನಿರೀಕ್ಷೆಗಿಂತ ಅತಿ ಹೆಚ್ಚು ಧನಲಾಭ-ಯಶಸ್ಸು ದೊರೆಯುವದು. ನೌಕರ ದಾರರಿಗೆ ಅಕಸ್ಮಾತ್ ಮೇಲಿನ ಗ್ರೇಡ್ ದೊರೆತು ಆನಂದವಾಗುವದು. ವರ್ಗವಾದರೂ ಸುಖಕರ ಹಾಗೂ ಲಾಭದಾಯಕ ಸ್ಥಳಕ್ಕೆ ಆಗು ವುದು. ಆದರೆ ಕೈಕೆಳಗಿನ ಒಬ್ಬಿಬ್ಬರಿಂದ ದ್ವೇಷ-ತ್ರಾಸ ಸಹಿಸಬೇಕಾದೀತು. ಡಿಸೆಂಬರ್ ೧೮ರಿಂದ ಫೆಬ್ರುವರಿ ೧೮ ಮತ್ತು ಸಪ್ಟೆಂಬರ್ ೧೭ರ ನಂತರ ಎಲ್ಲ ಅವಧಿಯು ಲಾಭದೃಷ್ಟಿಯಿಂದ ಅತ್ಯುತ್ತಮ ವಾಗಿದೆ. ಸ್ಥಾವರ ಜಂಗಮ ಆಸ್ತಿ ಸ್ವಲ್ಪ ಗಳಿಸ ಬಹುದು. ವಾಹನಸುಖವೂ ಮನಸ್ಸಿನಂತೆ ದೊರೆತು, ಶುಭಕಾರ್ಯಕ್ಕಾಗಿ ದೂರದ ಪ್ರವಾಸ ಸಂಭವಿಸಬಹುದು. ೪ ನೇ ಗುರುವಿನಿಂದಾಗಿ ಅಕಸ್ಮಾತ್ ಕ್ಷೇತ್ರ ಸಂದರ್ಶನವೂ ಆಗಬಹು ದಾಗಿದೆ. ಮಿತ್ರರು ಪ್ರೀತಿಯಿಂದ ನಡೆದುಕೊಳ್ಳು ವರು. ಆದರೆ ೩ನೇ ಕೇತು ಬಂಧುದ್ವೇಷಕಾರಿ ಯಾಗಿದ್ದಾನೆ.

ದಾವೆ-ಫಿರ್ಯಾದಿ ಮುಂತಾದ ಖಾಸಗಿ ಸ್ಪರ್ಧೆ ಯ ಕೆಲಸಗಳಲ್ಲಿ ನೂರಕ್ಕೆ ೬೦ರಷ್ಟು ಯಶ ದೊರೆಯುವದು. ಸ್ನೇಹಿತರ ಮಧ್ಯಸ್ಥಿ ಇದಕ್ಕೆ ಕಾರಣವಾಗುವದು. ಆದರೆ ಆಪ್ತ ಸ್ತ್ರೀಯೊಬ್ಬ ಳಿಂದ ಅಧಿಕ ದ್ವೇಷ ಕಂಡುಬಂದು ಅದು ನಿಮ್ಮ ಮನಸ್ಸನ್ನು ಬಹಳ ನೋಯಿಸುವದು.

ಬಸುರಿಯರಿಗೆ ಮಾರ್ಚ್ ೬ ರ ವರೆಗೆ ಹೆರಿಗೆಯಾದರೆ ಕನ್ಯೆ ಹಾಗೂ ನಂತರ ಹೆರಿಗೆ ಆದರೆ ಪುತ್ರಪ್ರಾಪ್ತಿ ಆಗುವ ಸಂಭವ ಹೆಚ್ಚಾ ಗಿದೆ. ಅಕ್ಟೋಬರ್ ೨೯ ರಿಂದ ಡಿಸೆಂಬರ್ ೧೮ ಮತ್ತು ಅಕ್ಟೋಬರ್ ೨೦ರ ನಂತರದ ಅವಧಿ ಯಲ್ಲಿ ಹೆರಿಗೆ ತುಸು ಕಷ್ಟಕಾರಕ.

ವಿದ್ಯಾರ್ಥಿಗಳ ಪರೀಕ್ಷೆಯು ಮಾರ್ಚ್ ೬ರ ನಂತರ ಆದರೆ ಅವರಲ್ಲಿ ಅನೇಕರು ಪಾಸು ಆಗು ತ್ತಾರೆ. ಜುಲೈ ೩೦ ರ ನಂತರ ಪರೀಕ್ಷೆಗೆ ಕಟ್ಟು ವವರಲ್ಲಿ ಮೊದಲನೆ ಅಥವಾ ಎರಡನೇ ವರ್ಗ ದಲ್ಲಿ ಪಾಸಾಗುತ್ತಾರೆ.



## ಕರ್ಕ

ಈ ರಾಶಿಯವರಿಗೆ ಈ ವರ್ಷದಲ್ಲಿ ಸ್ವಲ್ಪ ಗೃಹಕಲಹ, ಅಲ್ಪ ಸಂಗ್ರಹ ಕಂಡು ಬಂದರೂ ಅಧಿಕ ಉನ್ನತಿ, ಅಪೇಕ್ಷಿತ ಯಶಸ್ಸು, ಹೇರಳ ಲಾಭ, ಶತ್ರುವಿಜಯ ಹೀಗೆ ಉತ್ತಮ ಫಲಕಾರಕವಾಗಿದೆ.

ವರ್ಷಾರಂಭದಲ್ಲಿ ಈ ರಾಶಿಸ್ವಾಮಿ ಚಂದ್ರನು [ಪ್ರತಿ ವರ್ಷದಂತೆ] ತುಲಾದಲ್ಲಿದ್ದು ಸುಖೇಶ ಶುಕ್ರನು ಐದನೆಯವನಾಗಿದ್ದಾನೆ. ಮೃತ್ಯು ಸ್ವಾಮಿ ಶನಿಯು ಒಂಬತ್ತನೆ ಆಯುರ್ವರ್ಧಕ ಸ್ಥಾನದಲ್ಲಿ. ಮಿತ್ರರಾಶಿಯಾದ ಮೀನದಲ್ಲಿದ್ದು ಗುರುವಿನಿಂದ ನೋಡಲ್ಪಡುತ್ತಿರುವದರಿಂದ ಪ್ರಕೃತಿಗೆ ಪ್ರಾರಂಭದಲ್ಲಿ ಬಹಳೇ ಉತ್ತಮ. ಆದರೆ ಜುಲೈ ೩೦ರಿಂದ ೮ ನೇ ರಾಹು ಬರುವದ ರಿಂದ ಅಲ್ಪ ಸ್ವಲ್ಪ ಕ್ಲೇಶವಾಗುವ ಸಂಭವ ವಿದೆ. ಕೆಲವರಿಗೆ ಪಿಶಾಚಬಾಧೆಯೂ ಆಗ ಬಹುದು. ಆದ್ದರಿಂದ ನಿತ್ಯದಲ್ಲಿ ರಾಮರಕ್ಷೆ, ಮಹಿಮ್ನಸ್ತೋತ್ರ ಪಠಣ ಮಾಡಬೇಕು. ಇತರ ವಿಷಯಗಳಲ್ಲಿ ಉತ್ತಮ ಸುಖ.

ಭಾರ್ಯೇಶನೂ ಶನಿಯೇ ಆಗಿ ೯ನೆಯ ಶುಭಸ್ಥಾನದಲ್ಲಿರುವದರಿಂದ, ಮಾರ್ಚ್ ೬ ರ ನಂತರ ಆತನು ದಶಮನಾದರೂ ಆತನ ದೃಷ್ಟಿಯು ಭಾರ್ಯಾಸ್ಥಾನದ ಮೇಲೆಯೆ ಇರುವದರಿಂದ ಹೆಂಡತಿಯ ಪ್ರಕೃತಿ ಯಾವಾ ಗಲೂ ಉತ್ತಮವಾಗಿರುವದು. ಶನಿಯು ಹತ್ತ ನೆಯವನಾದ ನಂತರ ಹೆಂಡತಿಯೊಡನೆ ಒಮ್ಮ ತವು ಮೊದಲಿಗಿಂತಲೂ ಅಧಿಕವಾಗುವದು. ಪ್ರಾಪಂಚಿಕ ವಿಷಯಗಳಲ್ಲಿ ನಿಮಗಿಂತ ನಿಮ್ಮ ಹೆಂಡತಿಯ ವಿಚಾರಗಳೇ ಅಧಿಕ ಫಲದಾಯಕ ವೆನಿಸುವವು. ಆದರೆ ಜುಲೈ ೩೦ ರಿಂದ ೨ ನೇ ಕೇತು ಬರುವದರಿಂದ ನಿಮ್ಮ ಕೆಲವೊಂದು ವ್ಯವಹಾರದ ಬಗ್ಗೆ ಅಥವಾ ಶೀಲದ ಬಗ್ಗ ಆಕೆ ಯಲ್ಲಿ ಆಗಾಗ ಸಂಶಯವುಂಟಾಗುವದು.

ಇನ್ನೂ ಅವಿವಾಹಿತರಾಗಿದ್ದು ಈ ವರ್ಷ ಲಗ್ನ ಮಾಡಿಕೊಳ್ಳಬೇಕೆನ್ನುವವರಿಗೆ ಮಾರ್ಚ್ ೬ ರ ವರೆಗೆ ವಿಶೇಷ ಉತ್ತಮ ಅನಂತರ ಮಧ್ಯಮ. ಬಾಸಿಂಗ ಬಲವಿರುವದು. ಆದ್ದರಿಂದ ವಿಶೇಷ ಪ್ರಯತ್ನವಿಲ್ಲದೆ ಲಗ್ನ ಕೂಡಿಬರು ವದು. ಆದರೆ ೧೦ ನೇ ಶನಿಯಿದ್ದಾಗ ಲಗ್ನ ಗೊತ್ತುಮಾಡಿದರೆ ಆಕಸ್ಮಿಕ ವಿಘ್ನದಿಂದ ಗೊತ್ತಾದ ಮುಹೂರ್ತವನ್ನು ಮುಂದೆ ಹಾಕ ಬೇಕಾಗುವದು. ಆದರೆ ಒಂಬತ್ತನೆ ಶನಿ ಇದ್ದಾಗ ಆಗುವ ವಿವಾಹಗಳಿಗಿಂತ ಹತ್ತನೆ ಶನಿ ಬಂದಾಗ ಆಗುವ ಲಗ್ನಗಳಲ್ಲಿ ವಧುವರರು ಹೆಚ್ಚು ಅನುರೂಪರಾಗಿರುತ್ತಾರೆ.

ಮಕ್ಕಳ ಲಗ್ನ ಮಾಡುವವರಿದ್ದರೆ ಅದಕ್ಕೂ ಗುರುಬಲ ಚನ್ನಾಗಿದೆ. ಆದರೆ ಅದಕ್ಕಾಗಿ ಸ್ವತಃ ಪ್ರಯತ್ನಿಸುವದಕ್ಕಿಂತ ಮಧ್ಯಸ್ಥರ ಮುಖಾಂ ತರ ಸ್ವಲ್ಪ ಆಸ್ಥೆಯಿಂದ ಪ್ರಯತ್ನಿಸಿದಲ್ಲಿ ಯಶ ಸ್ವಿಯಾಗುವಿರಿ. ದೊರೆಯುವ ಅಳಿಯ ಅಥವಾ ಸೊಸೆ ಸುಸ್ವರೂಪಿ. ಜಾಣ ಹಾಗೂ ವಿನಯ ಸಂಪನ್ನರು ಇರುವದರಿಂದ ಎಲ್ಲರಿಗೂ ಮೆಚ್ಚುಗೆ ಯವರಾಗುವರು. ಸಂತತಿಯ ಉತ್ಕರ್ಷಕ್ಕೆ ಈ ವರ್ಷ ಬಹಳ ಉತ್ಸಾಹದಾಯಕ. ಅವರ ಲ್ಲೊಬ್ಬರು ವಿಶಿಷ್ಟ ಕಲೆಯಲ್ಲಿ ಶಿಕ್ಷಣ ಕ್ರಮ ದಲ್ಲಿ ವಿಶ್ವವಿಖ್ಯಾತಿ ಸಂಪಾದಿಸಬಹುದು. ಅನೇ ಕರಿಂದ ನಿಮಗೂ ಸುಖ ದೊರೆಯುವದು. ಆದರೆ ಜುಲೈ ೩೦ ಕ್ಕೆ ಬರುವ ೨ ನೇ ಕೇತುವಿ ನಿಂದಾಗಿ ಬಂಧು ಭಗಿನಿಯರಲ್ಲಿ ಅಲ್ಪ ಸ್ವಲ್ಪ ವಿರಸ ತಲೆದೋರಬಹುದು.

ಭಾಗ್ಯಸ್ಥಾನದಲ್ಲಿ ಮಾರ್ಚ್ ೬ ರ ವರೆಗೆ ಶನಿಯೂ ಜುಲೈ ೩೦ ರ ವರೆಗೆ ರಾಹುವೂ ಇದ್ದುದರಿಂದ ಮತ್ತು ಗುರುವು ಇಡೀ ವರ್ಷ ಪರಾಕ್ರಮ ಸ್ಥಾನದಲ್ಲಿರುವದರಿಂದ ಆತನ ಪೂರ್ಣ ದೃಷ್ಟಿ ಈ ಸ್ಥಾನದ ಮೇಲಿದೆ. ಕರ್ಮೇಶನಾದ ಮಂಗಳನ ದೃಷ್ಟಿಯೂ ಇಲ್ಲಿಯೆ ಇದೆ. ಆದ್ದ ರಿಂದ ಉದ್ಯೋಗ ಧಂದೆಗಳಲ್ಲ ಬಹಳ ಪ್ರಗತಿ. ಪ್ರತಿಷ್ಠೆ ದೊರೆತು, ಲಾಭಸ್ಥಾನದ ಮೇಲೆ ಸ್ವಸ್ವಾಮಿ ಶುಕ್ರನ ಹಾಗೂ ಭಾಗ್ಯೇಶ ಗುರು ವಿನ ದೃಷ್ಟಿಯಿರುವದರಿಂದ ದುಸ್ಸಾಧ್ಯ ಕೆಲಸ ಗಳೂ ಶ್ರಮಕ್ಕಿಂತ ಬುದ್ಧಿಯ ಬಲದಿಂದಲೇ ಸಾಧ್ಯವಾಗುವವು. ಎರಡನೆ ಕೇತು ಬರುವ ವರೆಗೆ ಹೇರಳ ಧನಸಂಗ್ರಹಕ್ಕೂ ಅವಕಾಶ ದೊರೆಯುವದು.

ಉದ್ಯೋಗ ಧಂದೆಗಳಲ್ಲಿದ್ದವರಿಗೆ ಮಾರ್ಚ್ ೬ ರ ನಂತರದ ಕಾಲವು ಅತ್ಯಂತ ಉತ್ಕರ್ಷ ದ್ದಾಗುವದು. ಪತ್ತು, ಪ್ರತಿಷ್ಠೆ ವಿಶೇಷ ಹೆಚ್ಚು ವವು. ನೌಕರಿಯಲ್ಲಿರುವವರಿಗೆ ೧೦ ನೇ ಶನಿ ಬಂದ ನಂತರ ದೂರದ ಸ್ಥಳಕ್ಕೆ ವರ್ಗ ಆಗಿ ನಿರುತ್ಸಾಹವೆನಿಸಿದರೂ ಲಾಭ ಮಾತ್ರ ಇಮ್ಮಡಿ ಮುಮ್ಮಡಿ ಆಗುವದು. ನೌಕರಿಯಲ್ಲಿಯೆ ಇರಲಿ, ಧಂದೆಯಲ್ಲಿಯೇ ಇರಲಿ, ಹತ್ತನೇ ಶನಿ ಮಾತ್ರ ನಿಮ್ಮ ಬಗೆಗೆ ಲೋಕಾಭಿಪ್ರಾಯವನ್ನು ವಿರೋಧಿ ಹಾಗೂ ಕಲುಷಿತಗೊಳಿಸುವನು ಎಂಬ ಭೀತಿ ಇದೆ. ಹಾಗೆಯೆ ೨ ನೇ ಕೇತು ಮತ್ತು ೮ ನೇ ರಾಹು ಬಂದ ನಂತರ ವ್ಯರ್ಥ ನಿರರ್ಥಕ ಖರ್ಚು ವಿಶೇಷವಾಗುವದು. ಲಾಭದ ಪ್ರಮಾಣದಿಂದ ಸಂಗ್ರಹ ಕಡಿಮೆ ಎನಿಸುವದು. ಅನಾವಶ್ಯಕ ವಸ್ತುಗಳ ಸಂಗ್ರಹ ಹೆಚ್ಚುವದು. ವಾಹನಸುಖ ಉತ್ತಮ. ಹೊಸ ವಾಹನ

ಕೊಂಡುಕೊಳ್ಳಬಹುದು. ಕನಿಷ್ಠ ಎರಡು ಸಲ ಯಾತ್ರೆ ಘಟಿಸುತ್ತದೆ. ಬೇರೆ ದ್ರವ್ಯ ಅಂಥ ನೆಯೂ ನಡೆಯುವದು. ಮಿತ್ರಸುಖ ಉತ್ತಮ. ಅವರಲ್ಲಿ ಸ್ನೇಹಿತೆಯರೂ ಇರಬಹುದು.

ದಾವೆ-ಫಿರ್ಯಾದಿ ಸ್ಪರ್ಧೆಗಳಲ್ಲಿ ನೂರಕ್ಕೆ ೯೦ ರಷ್ಟು ಯಶ. ಅವುಗಳಲ್ಲಿ ಅರ್ಧದಷ್ಟು ಸಂಧಾನದಿಂದ ಬಗೆಹರಿಯುವವು. ಸಪ್ಟೆಂಬರ್ ೧ರಿಂದ ಅಕ್ಟೋಬರ್ ೩೦ರ ಅವಧಿಯಲ್ಲಿ ಬಲಾಢ್ಯ ಶತ್ರುವಿನ ನಾಶವಾಗುವದು.

ಗರ್ಭವತಿಯರಿಗೆ ಡಿಸೆಂಬರ್ ೧ ರಿಂದ ಫೆಬ್ರುವರಿ ೧೫, ಎಪ್ರಿಲ್ ೨೬ ರಿಂದ ಜುಲೈ ೧೨ ರ ಅವಧಿಯಲ್ಲಿ ಹೆರಿಗೆ ಆದರೆ ಕ್ಲೇಶಕಾರಕವಾಗುವ ಸಂಭವವಿದೆ. ಮಾರ್ಚ್ ೭ ರ ಮೊದಲು ಕನ್ಯಾ ಪ್ರಾಪ್ತಿ, ತದನಂತರ ಪುತ್ರೋತ್ಸವದ ಯೋಗ ವಿದೆ.

ಮಾರ್ಚ್ ೭ ರ ನಂತರ ಪರೀಕ್ಷೆ ಇರುವವರು ಖಂಡಿತ ಉತ್ತೀರ್ಣರಾಗುವರು. ಎಪ್ರಿಲ್ ೨೬ ರಿಂದ ಜುಲೈ ೧೨ ರ ವರೆಗೆ ಪರೀಕ್ಷೆಯಿದ್ದವರು ಮೇಲಿನ ವರ್ಗದಲ್ಲಿಯೂ ಉತ್ತೀರ್ಣರಾಗ ಬಹುದು.

## ಸಿಂಹ

ಈ ವರ್ಷವು ಈ ರಾಶಿಯವರಿಗೆ ಸಾಕಷ್ಟು ವಿಷಯಗಳಲ್ಲಿ ಸುಖ–ಉತ್ಕರ್ಷಕಾರಕವಾಗಿದೆ. ಆದರೆ ಮಾರ್ಚ್ ೭ರ ವರೆಗಿನ ಕಾಲ ಮೊದಲ ಹಂತ, ನಂತರ ಜುಲೈ ೩೦ ರ ವರೆಗಿನ ಕಾಲ ಎರಡನೆಯ ಹಂತ ಹಾಗೂ ನಂತರದ ಕಾಲವೆಲ್ಲ ಮೂರನೆಯ ಹಂತ ಹೀಗೆ ಅದು ಕ್ರಮ ಕ್ರಮವಾಗಿ ಹೆಚ್ಚುತ ಹೋಗುವದು.

ಈ ರಾಶಿಯವರಿಗೆ ಮಾರ್ಚ್ ೭ ನೇ ತಾರೀಖಿನ ವರೆಗೆ ಮೃತ್ಯುಸೂಚಕ ಎಂಟನೇ ಸ್ಥಾನದಲ್ಲಿ ದುಷ್ಟ ಗ್ರಹಗಳಾದ ಶನಿ, ರಾಹು ಇಬ್ಬರೂ ಇರುವದರಿಂದ ಆ ದಿನದ ವರೆಗೆ ಪ್ರಕೃತಿಗೆ ಒಂದಿಲ್ಲೊಂದು ಕ್ಲೇಶವಾಗುತ್ತಲೇ ಇರುವದು. ವಿಶೇಷತಃ ವಾತವಿಕಾರ, ಹೊಟ್ಟೆ ಶೂಲೆ, ಮೂರ್ಛೆ ವಿಕಾರಗಳಾಗಬಹುದು ಆದರೆ ಈ ಎಂಟನೆ ಸ್ಥಾನದ ಮೇಲೆ ಮಂಗಳ ಗುರು ಇವರ ಶುಭದೃಷ್ಟಿ ಇರುವದರಿಂದ ಬಹಳಷ್ಟು ಜನರಿಗೆ ಗಂಡಾಂತರದ ಭಯ ಇಲ್ಲ. ಕ್ಲೇಶ ಪರಿಹಾರಕ್ಕಾಗಿ ಕರಿಬ್ರಾಹ್ಮಣನಿಗೆ ಅಥವಾ ನಿಮ್ಮ ಪುರೋಹಿತನಿಗೆ ಎಳ್ಳೆಣ್ಣೆ 'ತುಲಾದಾನ' ಮಾಡಬೇಕು ಅಥವಾ ೪೪೦೦೦ ಮಹಾಮೃತ್ಯುಂಜಯ ಜಪವನ್ನು ಮಾಡಬೇಕು. ಅಂದರೆ ಉತ್ತಮ ಆರೋಗ್ಯ, ದೀರ್ಘಾಯುಷ್ಯ ಲಭಿಸುವದು. ಮಾರ್ಚ್ ೭ ರ ನಂತರ ಶನಿ–ರಾಹು ಜೋಡಿ ಒಡೆದು ಒಂಬತ್ತನೇ ಶನಿಯು ಬರುವದರಿಂದ ಆಗ ಯಾವದೇ ರೋಗದ ಭಯವಿಲ್ಲ. ಆದರೆ ಜುಲೈ ೩೦ ರ ವರೆಗೆ ರಾಹುವು ಅಷ್ಟಮದಲ್ಲಿರುವದರಿಂದ ಅಶಕ್ತತೆ ಅನಿಸುವದು. ಆದರೆ ಗುರುವು ಇದೀ ವರ್ಷ ಎರಡನೆಯವನಾಗಿ ಧನಸ್ಥಾನದಲ್ಲಿದ್ದು ವರ್ಷಾರಂಭದಲ್ಲಿ ಲಾಭೇಶ-ಧನೇಶ ಬುಧನೂ ಧನಸ್ಥಾನದಲ್ಲಿರುವದರಿಂದ ಮತ್ತು ಸ್ವೋಚ್ಚನಾಗಿ ಸುಖ ಭಾಗ್ಯಾಧಿಪತಿ ಮಂಗಳನು ದೇಹಸ್ಥಾನದಲ್ಲಿರುವದರಿಂದ ಇತರ ವಿಷಯಗಳ ದೇಹಸುಖ ಬಹಳೇ ಉತ್ತಮವಾಗಿರುವದು.

ಒಂಬತ್ತನೇ ಶನಿಯು ಬಂದ ನಂತರ ಹೆಂಡತಿಯ ಆರೋಗ್ಯವೂ ಚನ್ನಾಗಿ ಉಳಿಯುವದು. ಅಂದಿನಿಂದಲೇ ನಿಮ್ಮಲ್ಲಿ ಮತ್ಸರ ಹೆಚ್ಚುವದು. ನಿಜವಾದರೂ ಜುಲೈ ೩೦ ರ ವರೆಗೆ ತಪ್ಪು ತಿಳುವಳಿಕೆಯಿಂದ ನಿಮ್ಮಲ್ಲಿ ಆಕಸ್ಮಾತ್ ಕಲಹವಾಗಬಹುದು. ಅಂದರೆ ನಿಮ್ಮ ಮೇಲೆ ನಿಮ್ಮ ಹೆಂಡತಿಯ ವರ್ಚಸ್ಸು ಅಧಿಕ ಎಂದು ತಿಳಿಯಬೇಕು.

ವಿವಾಹೇಚ್ಛು ಬ್ರಹ್ಮಚಾರಿಗಳಿಗೆ ಈ ವರ್ಷದಲ್ಲಿ ಬಾಸಿಂಗ ಬಲ ಮಧ್ಯಮವಿರುವದರಿಂದ ಮಹತ್ಪ್ರಯತ್ನದಿಂದ ವಿವಾಹಯೋಗವಿದೆ. ವಧುವಿಗೆ ವರಪಕ್ಷದಿಂದ ಅಥವಾ ವರನಿಗೆ ವಧುಪಕ್ಷದಿಂದ ಸಮ್ಮತಿ ದೊರೆಯುವಲ್ಲಿ ಬಹಳೇ ವಿಲಂಬವಾಗಿ ಮನಸ್ಸಿಗೆ ಬೇಜಾರಾಗುವದು. ಮಾರ್ಚ್ ೭ ರ ಮೊದಲು ಲಗ್ನವಾದಲ್ಲಿ ವಧುವರರು ರೂಪ ಲಕ್ಷಣ ಸ್ವಭಾವಾದಿಗಳಲ್ಲಿ ಹೊಂದಿಕೆ ಇಲ್ಲದವರಾಗಿರುವರು ಮತ್ತು ನಂತರ ವಿವಾಹವಾದರೆ ಅವರಲ್ಲಿ ಸಾದೃಶ್ಯ ಕಂಡು ಬಂದರೂ ಸಿಡುಕಿನವರಾಗಿ ಕಂಡುಬರುವದು.

ನಿಮ್ಮ ಮಕ್ಕಳ ವಿವಾಹವಾಗುವದಿದ್ದಲ್ಲಿ ಬೇಗನೆ ಕೂಡಿ ಬಂದು ನಿರಾಯಾಸವಾಗಿ ಆಗುವ ಯೋಗ ಖಂಡಿತವಾಗಿ ಇದೆ. ಮಕ್ಕಳ ಲಗ್ನವು ಯಾವ ತಿಂಗಳಲ್ಲಿಯೆ ಆದರೂ ಸೊಸೆ ಅಥವಾ ಅಳಿಯ ಮನಸ್ಸಿಗೆ ತಕ್ಕಂತೆ ದೊರೆಯುವರು. ಸೊಸೆಯ ಕಾಲುಗುಣ ಉತ್ತಮವಿದ್ದದ್ದು ಒಂದೆರಡೇ ತಿಂಗಳಲ್ಲಿ ಕಂಡುಬರುವದು. ಸಂತತಿಯ ಉನ್ನತಿಗೆ ಈ ವರ್ಷವು ತುಂಬ ಪ್ರಭಾವಿಯಾಗಿದೆ ಎಂಬ ಮಾತು ನವೆಂಬರ್ ೨೪ ರ ವರೆಗೆ ನಂತರ ಡಿಸೆಂಬರ್ ೧೨ ರಿಂದ ಜನೆವರಿ ೧, ಮಾರ್ಚ್ ೯ ರಿಂದ ೬೭, ಅಗಸ್ಟ ೧೫ ರಿಂದ ಅಕ್ಟೋಬರ್ ೨೯ ಈ ಅವಧಿಗಳಲ್ಲಿ ಒಂದರಲ್ಲಿ ನಿಮಗೆ ಮನವರಿಕೆಯಾಗುವದು. ಸಂತತಿಯಲ್ಲಿ ಅನೇಕರ ಉನ್ನತಿಗೆ ಈ ವರ್ಷವು ಸಾಕಷ್ಟು ಉತ್ತಮವಾಗಿದ್ದು ಒಂಬತ್ತನೆ ಶನಿ ಬಂದಾಗ ಇದು ಸ್ವಲ್ಪ ಅನುಭವಕ್ಕೆ ಬರುತ್ತದೆ. ಮುಂದೆ ೭ನೇ ರಾಹು ಬಂದಾಗ ಸಂಪೂರ್ಣ ಮನವರಿಕೆಯಾಗುವದು ಮಗನಿಗಿಂತ ಮಗಳ ಉನ್ನತಿಗೆ ಹೆಚ್ಚು ಅನುಕೂಲ. ಒಂಬತ್ತನೆ ಶನಿ ಬಂದ ನಂತರ ನಿಮ್ಮೊಡನೆ ಮಕ್ಕಳ ಮತ್ಸರ ವಿಶೇಷವಾಗಿ ಕಂಡುಬರುವದು.

ಉದ್ಯೋಗ ಧಂದೆಗಳಲ್ಲಿಯೂ ಎಂಟನೆ ಶನಿ ಇರುವ ವರೆಗೆ ಬಹಳಷ್ಟು ಅಡೆತಡೆಗಳುಂಟಾಗುವ ಯೋಗವಿದೆಯಾದರೂ ಮಾರ್ಚ್ ೭ಕ್ಕೆ ಬರುವ ಒಂಬತ್ತನೆ ಶನಿಯು ಭಾಗ್ಯದ ಬಾಗಿಲು ತೆರೆಯುತ್ತ ಹೋಗುವನು. ಮುಂದೆ ಜುಲೈ ೩೦ಕ್ಕೆ ರಾಹುವು ಏಳನೆಯವನಾದ ಕೂಡಲೆ ಆಕಸ್ಮಿಕ ಸದವಕಾಶಗಳು ಒದಗಿಬಂದು ತುಂಬ ಹಣ ದೊರೆಯಬಲ್ಲದು. ತಡೆದು ನಿಂತಿದ್ದ ಸರಕಾರಿ ಅಥವಾ ಖಾಸಗಿ ಕೆಲಸಗಳು ನಿರಾಯಾಸದಿಂದ ಕೈಗೂಡಿ ನಿಮ್ಮ ವರ್ಚಸ್ಸು ಹೆಚ್ಚುವದು. ಏಳನೇ ರಾಹು ಬಂದ ನಂತರ ಶ್ರಮಜೀವಿಗಳಿಗಿಂತ ಬುದ್ಧಿಜೀವಿಗಳಿಗೆ, ಉದ್ಯೋಗ ಧಂದೆಯವರಿಗೆ ಉತ್ಕರ್ಷ ಚನ್ನಾಗಿದೆ. ಸರಕಾರಿ ನೌಕರರಿಗೆ ಮೇಲಿನ ಗ್ರೇಡ್ ದೊರೆತು ಅನುಕೂಲ ಸ್ಥಳಕ್ಕೆ ವರ್ಗವಾಗುವದು. ಖಾಸಗಿ ನೌಕರರ ಸಂಬಳವೂ ಅಪೇಕ್ಷೆಯಂತೆ ಹೆಚ್ಚುವದು. ಒಡೆಯರ ಪ್ರೀತಿಯೂ ಹೆಚ್ಚುವದು. ಫೆಬ್ರುವರಿ ೧೫ ರಿಂದ ಎಪ್ರಿಲ್ ೨೬, ಜುಲೈ ೧೦ ರಿಂದ ಅಕ್ಟೋಬರ್ ೩೦ ಈ ಅವಧಿಯಲ್ಲಿ ಹೇರಳ ಲಾಭವಾಗುವದು. ಮಿತ್ರಸುಖ-ಸಹಾಯ ಸಾಕಷ್ಟು ದೊರೆಯುವದು. ನಾನಾ ವಸ್ತುಗಳ ಸಂಗ್ರಹವಾಗುವದು. ಅನಿರೀಕ್ಷಿತವಾಗಿ ಪ್ರಿಯಜನರ ಸಹವಾಸಯೋಗವಿದೆ. ಅಧಿಕ ವೆಚ್ಚದ ಒಂದೆರಡು ಧಾರ್ಮಿಕ ಕಾರ್ಯಗಳೂ ನೆರವೇರುವವು. ಕುಟುಂಬದ ಘನತೆಯನ್ನು ಹೆಚ್ಚಿಸುವ ಚಿಕ್ಕ ದೊಡ್ಡ ಸಂಗತಿಗಳೂ ಸಂಭವಿಸುವವು.

ದಾವೆ-ಫಿರ್ಯಾದಿ, ಸ್ಪರ್ಧೆಗಳಲ್ಲಿ ಮಾರ್ಚ್ ೭ರ ಮೊದಲು ದೊರೆಯುವ ನಿರ್ಣಯಗಳು ಪ್ರತಿಕೂಲವಾಗಬಹುದು. ಅನಂತರದ ತೀರ್ಮಾನಗಳು ಅಪೇಕ್ಷೆಗಿಂತಲೂ ಹೆಚ್ಚು ಯಶಸ್ವಿಯಾಗಬಲ್ಲವು.

ಬಸುರಿಯರ ಹೆರಿಗೆ ಮಾರ್ಚ್ ೭ರ ಮೊದಲು ಆದಲ್ಲಿ ವಿಶೇಷ ತ್ರಾಸವಾಗುವದು. ನಂತರ ಜುಲೈ ೩೦ ರ ವರೆಗೆ ಮಧ್ಯಮ, ಅನಂತರದ ಅವಧಿಯಲ್ಲಿ ಸುಲಭ ಪ್ರಸೂತಿ ಯೋಗವಿದೆ. ಹೆಚ್ಚು ಜನರಿಗೆ ಹೆಣ್ಣು ಮಕ್ಕಳೇ ಹುಟ್ಟುವವು.

ಮಾರ್ಚ್ ೭ರ ನಂತರ ಪರೀಕ್ಷೆ ಇದ್ದವರು ಅನೇಕರು ಪಾಸಾಗುತ್ತಾರೆ. ಸಪ್ಟೆಂಬರ್ ೧ರಿಂದ ಅಕ್ಟೋಬರ್ ೩೦ರ ವರೆಗೆ ಪರೀಕ್ಷೆಗೆ ಕಟ್ಟುವವರು ಪ್ರಾಯಶಃ ಮೊದಲನೇ ವರ್ಗದಲ್ಲಿ ಉತ್ತೀರ್ಣರಾಗುವರು !

## ಕನ್ಯಾ

ಈ ವರ್ಷವು ಕಷ್ಟಸಾಧ್ಯಯೋಗಗಳಿಂದ ಕೂಡಿದೆಂಬ ಅನುಭವ ಈ ರಾಶಿಯವರಿಗೆ ಉಂಟಾಗುವದು.

ಇದೀ ವರ್ಷ ಗುರುವೂ ರಾಶಿಸ್ವಾಮಿಯಾದ ಬುಧನೂ ಈ ರಾಶಿಯಲ್ಲಿರುವದರಿಂದ ಮಾರ್ಚ್ ೭ರ ವರೆಗೆ ಇರುವ ಏಳನೇ ಶನಿ ಮತ್ತು ರಾಹುವು ಮತ್ತು ಅನಂತರ ಎಂಟನೆಯವನಾಗುವ ಶನಿ ಪ್ರಕೃತಿಗೆ ಕಿರಿಕಿರಿ ಉಂಟುಮಾಡಿದರೂ ಹಾಸಿಗೆ ಹಿಡಿಯಬೇಕಾಗುವದಿಲ್ಲ. ಇಷ್ಟೇಕೆ, ಜುಲೈ ೩೦ರ ನಂತರ ರಾಹು ಆರನೆಯವನಾಗುವದರಿಂದ ಪ್ರಕೃತಿಯು ಸಾಕಷ್ಟು ನಿರೋಗಿಯಾಗುವದು. ಸಾಹಸದ ಅಥವಾ ವಿಶೇಷ ಶ್ರಮದ ಕಾರ್ಯಮಾಡಲು ಉತ್ಸಾಹ ಉಂಟಾಗುವದು. ಇತರ ವಿಷಯಗಳಲ್ಲಿ ದೇಹಸುಖ ಅನುಕೂಲ; ಫೆಬ್ರುವರಿ ೧೮

ರಿಂದ ಸಪ್ಟೆಂಬರ್ ೧೮ರ ವರೆಗೆ ವಿಶೇಷ ಅನುಕೂಲ ವಿದ್ದದ್ದು ಕಂಡುಬರುವದು

ಹೆಂಡತಿಯು ಪ್ರಕೃತಿಯೂ ಹೀಗೇ ಉಳಿಯುವದು. ಭಾರ್ಯಾಸ್ಥಾನವಾದ ಸಪ್ತಮಸ್ಥಾನದ ಮೇಲೆ ವರ್ಷಾರಂಭದಲ್ಲಿ ಮಂಗಳನ ದೃಷ್ಟಿ ಇರುವದರಿಂದ ಹೆಂಡತಿಯು ಎಡಗಣ್ಣಿಗೆ ಅಥವಾ ಎಡಗಿವಿಗೆ ಯಾವದೊಂದು ವಸ್ತುವಿನ ಆಘಾತದಿಂದ ಅಪಾಯ ಸಂಭವಿಸಬಹುದಾಗಿದ್ದು ಫೆಬ್ರುವರಿ ೧೮ ರ ವರೆಗೆ ಈ ತ್ರಾಸವಿದೆ. ಸಕಲ ಪ್ರಾಪಂಚಿಕ ವಿಷಯಗಳಲ್ಲಿ ಉಭಯತರಲ್ಲಿ ಗಾಢ ಮೈತ್ರಿಕ್ಯ ಕಂಡುಬರುವದು. ಆದರೆ ಈ ಸ್ಥಾನಕ್ಕೆ ಶನಿಯು ವಕ್ರೀ ಇರುವದರಿಂದ ವರ್ಷಾರಂಭದಿಂದ ಡಿಸೆಂಬರ್ ೩೧ ವರೆಗಿನ ಅವಧಿಯಲ್ಲಿ ನಿಮ್ಮಲ್ಲಿ ಅನೇಕರಿಗೆ ಅಗಲಿಕೆ ಉಂಟಾಗಬಹುದು.

ವಿವಾಹೇಚ್ಛುಗಳಿಗೆ ವಿವಾಹ ನೆರವೇರುವಂತೆ ಈ ವರ್ಷ ಬಾಸಿಂಗ ಬಲ ಇದೆ. ಆದರೂ ಲಗ್ನ ಹೊಂದುವ ಸಮಯದಲ್ಲಿ ಹಿತಶತ್ರುಗಳು ಅನೇಕ ವಿಘ್ನಗಳನ್ನು ಉಂಟುಮಾಡುತ್ತಿರುವದೂ ಕಂಡುಬಂದೀತು. ಆದರೂ ಅವರ ಕುಯುಕ್ತಿಗಳು ಫಲಿಸದೆ ಗೊತ್ತಾದ ವಧು ವರರೊಂದಿಗೆ ಲಗ್ನವಾಗುವದು ನಿಶ್ಚಿತ! ವಧು ವರರೂ ರೂಪ ಲಕ್ಷಣಗಳಲ್ಲಿ ಅನುರೂಪರಾಗಿರುತ್ತಾರೆ

ಸಂತತಿಗೆ ವಿವಾಹವಾಗುವದಿದ್ದಲ್ಲಿ ಮಾರ್ಚ ೬ ವರೆಗೆ ಸಾಧಾರಣ ಮತ್ತು ನಂತರ ಉತ್ತಮ ಬಾಸಿಂಗ ಬಲ ಇದೆ. ಮಾರ್ಚ ೭ರ ನಂತರ ವಿಶೇಷ ಆಯಾಸವಿಲ್ಲದೆ ವಿವಾಹ ಕಾರ್ಯ ಒದಗುವದು. ಸೊಸೆ ಅಥವಾ ಅಳಿಯ ನಿಮ್ಮ ಊರಲ್ಲಿಯೆ ದೊರೆಯಬಹುದು. ನಿಮಗೆ ಒಪ್ಪಿಗೆಯವರೂ ಆಗಬಹುದು. ಮುಂದೆ ತುಸು ವಿರಸ ಉಂಟಾಗಬಹುದು. ಸಂತತಿಯ ಉತ್ಕರ್ಷಕ್ಕೆ ಈ ವರ್ಷದಲ್ಲಿ ಏಳನೇ ಶನಿಗಿಂತ ಅವನು ಎಂಟನೆಯವನಿದ್ದಾಗ ಅಧಿಕ ಉತ್ತಮ. ಆದರೆ ಸಂತತಿಯಿಂದ ದೊರೆಯುವ ಸುಖದ ವಿಚಾರ ಮಾಡಿದರೆ ಎಂಟನೆಯವನಿಗಿಂತ ಏಳನೆ ಶನಿಯೆ ಕೆಟ್ಟಗೆ ಎಂಬ ಅನುಭವ ಉಂಟಾದೀತು. ಮಕ್ಕಳಲ್ಲಿ ಕೆಲವರು ಎಂಟನೆ ಶನಿಯ ಅವಧಿಯಲ್ಲಿ ಶಿಕ್ಷಣ- ವ್ಯವಸಾಯ ನಿಮಿತ್ತ ದೂರದ ಪ್ರಾಂತಕ್ಕೆ ಅಥವಾ ದೇಶಕ್ಕೆ ಹೋಗಬಹುದಾದ ಯೋಗವಿದೆ

ವರ್ಷಾರಂಭದಲ್ಲಿ ಪರಾಕ್ರಮೇಶನಾದ ಮಂಗಳನು ವ್ಯಯಸ್ಥಾನದಲ್ಲಿರುವದರಿಂದ ಧಂದೆ ಬೆಳೆಸುವದಕ್ಕಾಗಿ ಅಥವಾ ನೌಕರಿಯಲ್ಲಿ ಇಷ್ಟಾರ್ಥ ಸಾಧಿಸುವದಕ್ಕಾಗಿ ಮೊದಲು ಬಹಳಷ್ಟು ವೆಚ್ಚ ಮಾಡಬೇಕಾಗಿ ಬಂದರೂ ಭಾಗ್ಯಸ್ಥಾನದ ಮೇಲೆ ವರ್ಷಾರಂಭದಲ್ಲಿ ಬುದ್ಧಿಸ್ವಾಮಿಯಾದ ಶನಿಯು, ಸುಖೇಶನಾದ ಗುರುವಿನ, ಸ್ವಸ್ವಾಮಿ ಶುಕ್ರನ ದೃಷ್ಟಿ ಇರುವದರಿಂದ ಮಾಡಿದ ವೆಚ್ಚ ವ್ಯರ್ಥವಾಗದೆ ಮುಂದೆ ತುಂಬಿ ಬರುವದು. ಮುಂದಿನ ಭಾಗ್ಯ, ವೈಭವ, ಉತ್ಕರ್ಷಗಳಿಗೆ ಉಪಯೋಗಿಯಾದದ್ದು ಕಂಡುಬರುವದು. ಕರ್ಮೇಶನಾದ ಬುಧನು ಇದೇ ರಾಶಿಯಲ್ಲಿರುವದರಿಂದ, ಇವರ ಸ್ವಾಮಿಯೂ ಆಗಿರುವದರಿಂದ, ಇದು ಅವನ ಉಚ್ಚ ರಾಶಿಯೂ ಆಗಿರುವದರಿಂದ ಉದ್ಯೋಗಿಗಳ ಪ್ರತಿಷ್ಠೆ-ಲೌಕಿಕ ಬಹಳಷ್ಟು ಹೆಚ್ಚಿ ದ್ರವ್ಯ ಲಾಭವೂ ಹೇರಳವಾಗಿ ಆಗುವದು. ನೌಕರಿಯಲ್ಲಿದ್ದವರಿಗೆ ಮೇಲಿನ ಗ್ರೇಡು ಸಿಗುವದು. ಸಾಮಾಜಿಕ,ರಾಜಕೀಯ ಪ್ರೇಮ, ಲೌಕಿಕಗಳೂ ಚನ್ನಾಗಿರುವವು. ವರ್ಗವಾದರೂ ಹೊಸ ಸ್ಥಳದಲ್ಲಿ ವಾಸಕ್ಕೆ ತೊಂದರೆ ಆಗಲಾರದು. ಆದರೆ ಲಾಭವು ಮಾತ್ರ ಅಷ್ಟಕ್ಕಷ್ಟೇ. ವಿಶೇಷತಃ ಅಕ್ಟೋಬರ್ ೨೯ರಿಂದ ಡಿಸೆಂಬರ್ ೧೪, ಜನೆವರಿ ೨೬ ರಿಂದ ಮಾರ್ಚ ೪, ಎಪ್ರಿಲ್ ೧ರಿಂದ ಮೇ ೩೧ ಹಾಗೂ ಜೂನ್ ೨೯ ರಿಂದ ಸಪ್ಟೆಂಬರ್ ೧೬ ಈ ಅವಧಿ ಉತ್ತಮ ಲಾಭಕಾರಕವಿದೆ. ಮಿತ್ರಸುಖ ಉತ್ತಮವಾಗಿದ್ದಂತೆಯೆ ಶತ್ರುಬಾಧೆಯೂ ವಿಪರೀತವಾಗುವ ಯೋಗವಿದೆ. ಅಲ್ಪಸ್ವಲ್ಪ ಸ್ಥಾವರ ಜಂಗಮ ಆಸ್ತಿ ಸಂಗ್ರಹವಾಗುವದು ಖಂಡಿತ. ಅದಕ್ಕಾಗಿ ನಿಮ್ಮ ಹಣ ತೀರಿ ಹೋಗಿ ಸ್ವಲ್ಪ ಸಾಲ ಮಾಡಬೇಕಾಗಬಹುದು. ನಿಮ್ಮಿಂದ ದೈವೀ ಉಪಾಸನೆ ಚನ್ನಾಗಿ ಆಗುವದು. ಧರ್ಮಾನುಗುಣವಾಗಿ ಸಾಧಾರಣ ಯಾತ್ರೆಯೂ ಘಟಿಸೀತು. ಆಪ್ತಸುಖ ಹೇಳಿಕೊಳ್ಳುವಂತೆ ಚನ್ನಾಗಿದೆ. ಪೂಜ್ಯ ಜನರ ದರ್ಶನ- ಸಹವಾಸಯೋಗ ಮೇಲಿಂದ ಮೇಲೆ ಉಂಟಾಗುವದು. ಈ ವರ್ಷದ ವೈಶಿಷ್ಟ್ಯ ಇದು.

ದಾವೆ-ಫಿರ್ಯಾದಿ ಸ್ಪರ್ಧಾದಿಗಳಲ್ಲಿ ಪ್ರತಿಸ್ಪರ್ಧಿಗಳಿಗೆ ದೈವಾನುಕೂಲ ಹೆಚ್ಚು. ಸಂಧಾನಕ್ಕಾಗಿ ಪ್ರಯತ್ನಿಸಿದರೆ ಸಾಕಷ್ಟು ಯೋಗ್ಯ ಒಡಂಬಡಿಕೆ ಮಾತ್ರ ಆಗಬಲ್ಲದು. ಸಂಧಾನ ಪ್ರಯತ್ನಗಳಿಗೆ ಆರನೆ ರಾಹು ಬಂದ ನಂತರ ಅಂದರೆ ಜುಲೈ ೩೦ರ ನಂತರದ ಕಾಲವು ಅನುಕೂಲ.

ಗರ್ಭವತಿಯರಿಗೆ ಮಾರ್ಚ ೭ ರ ವರೆಗೆ ಹೆರಿಗೆಯಾದಲ್ಲಿ ತೊಂದರೆ ಮತ್ತು ಹೆಣ್ಣು ಹುಟ್ಟಬಹುದು. ನಂತರದಲ್ಲಿ ಪ್ರಸೂತಿ ಸುಲಭ, ಅನೇಕರಿಗೆ ಪುತ್ರೋತ್ಸವವೂ ಆಗಬಹುದಾಗಿದೆ.

ಮಾರ್ಚ ೭ರ ನಂತರ ಪರೀಕ್ಷೆ ಇದ್ದವರು ಖಂಡಿತ ಉತ್ತೀರ್ಣರಾಗುವರು. ಜುಲೈ ೩೦ರ ನಂತರ ಪರೀಕ್ಷೆ ಇದ್ದವರು ಪ್ರಥಮ ವರ್ಗದ ಅಥವಾ ಕನಿಷ್ಠ ದ್ವಿತೀಯ ವರ್ಗದ ಆಸೆಯಿಟ್ಟುಕೊಂಡರೆ ನಿರಾಸೆಯಾಗಲಿಕ್ಕಿಲ್ಲ.




ಈ ವರ್ಷವು ಈ ರಾಶಿಯವರಿಗೆ ವಿಶೇಷ ಖರ್ಚಿನದೂ ಶಾರೀರಿಕ ಕ್ಲೇಶಕ್ಕಿಂತ ಮನಸ್ಸಿಗೆ ತಾಪದಾಯಕವಾದದ್ದೂ ಆಗಿರುತ್ತದೆ.

ಈ ರಾಶಿಗೆ ಇಡೀ ವರ್ಷ ಗುರುವು ಹನ್ನೆರಡನೆಯವನಾಗಿರುವದರಿಂದ ಶಾರೀರಕ ಕ್ಲೇಶಕ್ಕಿಂತ ಮಾನಸಿಕ ತಾಪವೇ ಹೆಚ್ಚುವದು. ಈ ದ್ವಾದಶ ಸ್ಥಾನವು ವ್ಯಯಸೂಚಕವಿದ್ದು ಅದರ ಸ್ವಾಮಿ ಬುಧನೂ ಇಲ್ಲಿಯೆ ಇರುವದರಿಂದ ಎಣಿಕೆ ಮೀರಿ ವೆಚ್ಚ ಮಾಡಬೇಕಾಗಿ ಬರುವದು. ಆದರೆ ಇವೆರಡೂ ಗ್ರಹಗಳು ಪೂರ್ಣ ಶುಭಕಾರಕವಿರುವದರಿಂದ ಆ ವೆಚ್ಚವು ಅಶುಭ ಅಥವಾ ದುಃಖದ ಕಾರ್ಯಗಳಿಗಾಗಿ ಆಗದೆ ಶುಭ ಮತ್ತು ಯೋಗ್ಯ ಕೆಲಸಗಳಿಗಾಗಿಯು ಆಗುವದು. ರಾಶಿಸ್ವಾಮಿ ಶುಕ್ರನು ಕೂಡ ಅಷ್ಟಮೇಶನಾಗಿ ದ್ವಿತೀಯನಾಗಿರುವದರಿಂದ ಪ್ರಕೃತಿಯು ಚನ್ನಾಗಿ ಉಳಿಯುವದು. ಆದರೆ ಅಕ್ಟೋಬರ್ ೨೯ರಿಂದ ಡಿಸೆಂಬರ್ ೧೪ರ ಅವಧಿಯಲ್ಲಿ ಚಿಕ್ಕ ಅಪಘಾತದಿಂದ ಕೆಲದಿನಗಳ ಮಟ್ಟಿಗೆ ತೊಂದರೆಯಾಗುವ ಯೋಗವಿದೆ. ಇತರ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಸಾಕಷ್ಟು ಉತ್ತಮ. ಆಲೋಚಿಸಿದ ಕೆಲಸಗಳು ಏಳನೇ ಶನಿ ಬಂದ ನಂತರ ಅಂದರೆ ಮಾರ್ಚ ೭ ರ ನಂತರ ಕ್ರಮೇಣ ಕೈಗೂಡುತ್ತ ಹೋಗುವವು. ವ್ಯಯಸ್ಥಾನದಲ್ಲಿ ಬುಧ- ಗುರು ಇರುವದರಿಂದ ಮಹತ್ವದ ಕೆಲಸಗಳಲ್ಲಿ ಇತರರ ಸಲಹೆ ಕೇಳುವದು ಯಶಪ್ರದವಾದೀತೆಂಬುದನ್ನು ಮರೆಯಬಾರದು.

ವರ್ಷಾರಂಭದಲ್ಲಿ ಭಾಗ್ಯೇಶ ಮಂಗಳನು ೧೧ ನೆಯವನಾಗಿ ಲಾಭಸ್ಥಾನದಲ್ಲಿರುವದರಿಂದ, ಆತನ ಪೂರ್ಣದೃಷ್ಟಿಯು ದ್ವಿತೀಯದಲ್ಲಿಯ ಶುಕ್ರನ ಮೇಲೆ ಇರುವದರಿಂದ ಈ ಯೋಗವು ಹೆಂಡತಿಯ ಪ್ರಕೃತಿಗೆ ಮತ್ತು ಸ್ತ್ರೀಸುಖಕ್ಕೆ ಚನ್ನಾಗಿದೆ. ಆದರೆ ನಿಮ್ಮನ್ನು ಕೆಣಕುವಷ್ಟರ ಮಟ್ಟಿಗೆ ಆಕೆಯು ತನ್ನ ವರ್ಚಸ್ಸನ್ನು ನಿಮ್ಮ ಮೇಲೆ ಬೀರುವ ಹವ್ಯಾಸ ತೋರುವಳು. ಏಳನೇ ಶನಿ ಬಂದ ನಂತರವಂತೂ ಇದು ಇನ್ನಷ್ಟು ಹೆಚ್ಚುವದು. ಇದರಿಂದ ನಿಮಗೆ ಬಹಳೇ ಕೆಡುಕೆನಿಸಿ ಆಗಾಗ ಸಂತಪ್ತರಾಗುವಿರಿ. ಹೆಂಡತಿಗೆ ಎಪ್ರಿಲ್ ೨೬ರಿಂದ ಜುಲೈ ೧೨ ರ ನಡುವಿನ ಅವಧಿಯಲ್ಲಿ ಗರ್ಭಪಾತ ಅಥವಾ ಯಕೃತ್ ವಿಕಾರವಾಗುವ ಸಂಭವವಿದೆ.

ಈ ವರ್ಷದಲ್ಲಿ ವಿವಾಹವಾಗಲಿಚ್ಛಿಸುವವರಿಗೆ ಬಾಸಿಂಗಬಲವು ತೀರ ಕಡಿಮೆ ಇರುವದರಿಂದ ಲಗ್ನದ ವಿಚಾರವನ್ನು ಬರುವ ವರ್ಷಕ್ಕೆ ಮುಂದೂಡುವದೇ ವಿಹಿತ! ಆದರೂ ವಿಶೇಷ ಪ್ರಯತ್ನದಿಂದ, ಮನಸ್ಸಿನ ಬಯಕೆಗಳನ್ನು ಹತ್ತಿಕ್ಕಿಕೊಂಡು, ಪ್ರತಿಸ್ಪರ್ಧಿಗಳಿಗೆ ಮಣಿದು ಹೋಗಿ ಹೆಣಗಿದರೆ ಲಗ್ನವಾದರೂ ಆಗಬಹುದು. ಅದೂ ಕೂಡ ಡಿಸೆಂಬರ್ ೧೮ ರಿಂದ ಫೆಬ್ರುವರಿ ೧೪, ಸಪ್ಟೆಂಬರ್ ೧ ರಿಂದ ಅಕ್ಟೋಬರ್ ೨೦ ರ ನಡುವಿನ ಕಾಲದಲ್ಲಿ ಮಾತ್ರ. ವಧುವರರು ಮಾತ್ರ ಅನೇಕ ವಿಷಯಗಳಲ್ಲಿ ಅನುರೂಪರಾಗಿರುವರು.

ಸಂತತಿಯ ವಿವಾಹ ಮಾಡಲಿಚ್ಛಿಸಿದರೂ ಈ ವರ್ಷದಲ್ಲಿ ಆಗುವದು ಕಠಿಣ. ವರ-ಕನ್ಯಾ ಪಾಸು ಮಾಡುವ ಬಗೆಗೆ ಬಹಳ ವಿವಾದ ನಡೆದು ಕೊನೆಗೆ ಕ್ಷುಲ್ಲಕ ಕಾರಣಕ್ಕಾಗಿ ನಕಾರ ಉತ್ತರ ದೊರೆಯುವ ಸಂಭವ ಹೆಚ್ಚು! ಆದರೆ ಪೂರ್ವ ಪುಣ್ಯವಿಶೇಷದಿಂದ ಲಗ್ನವಾದಲ್ಲಿ ಅದು ೭ ನೇ ಶನಿ ಬಂದ ನಂತರ ಹಾಗೂ ಮೇ ೩೧ ರಿಂದ ಆಗಸ್ಟ್ ೨೨ ಅಥವಾ ಸಪ್ಟೆಂಬರ್ ೧೬ ರಿಂದ ಅಕ್ಟೋಬರ್ ೧೧ ಈ ಅವಧಿಯಲ್ಲಿ ಆಗಬಹುದು. ಸೊಸೆ ಅಥವಾ ಅಳಿಯ ಮಾತ್ರ ಸಂಪೂರ್ಣ ನಿಮಗೆ ಮೆಚ್ಚುಗೆಯವರೇ ದೊರೆಯಬಹುದು

ಸಂತತಿಯ ಉತ್ಕರ್ಷಕ್ಕೆ ಈ ವರ್ಷದಲ್ಲಿ ಆರನೇ ಶನಿಗಿಂತ ೬ ನೇ ಶನಿಯ ಕಾಲದಲ್ಲಿ ಉತ್ತಮ ವಿದೆ. ಮಾರ್ಚ್ ೯ ರಿಂದ ೨೫, ಜುಲೈ ೧ ರಿಂದ ೧೯ ಆಗಸ್ಟ್ ೪ ರಿಂದ ೨೨ ಮತ್ತು ಅಕ್ಟೋಬರ್ ೨೯ ರ ನಂತರದ ಕಾಲವು ಉನ್ನತಿಗೆ ಬಹಳಷ್ಟು ಸಹಾಯಕವಾಗುವದು. ಮತ್ತು ಸಂತತಿಯಲ್ಲಿ ಅನೇಕರಿಂದ ೬ ನೇ ಶನಿಯ ಕಾಲದಲ್ಲಿ ನಿಮಗೆ ಸಾಕಷ್ಟು ಸುಖ ದೊರೆಯುವದು. ಆದರೆ ೫ ನೇ ರಾಹು ಇದ್ದಾಗ ಅಂದರೆ ಜುಲೈ ೩೦ ರ ನಂತರ ಮಕ್ಕಳಲ್ಲಿ ಒಬ್ಬಿಬ್ಬರ ಪ್ರಕೃತಿ ಚೆನ್ನಾಗಿರ ಲಾರದು.

ಉದ್ಯೋಗ ಧಂದೆಗಳಿಗೆ ಕೂಡ ಈ ವರ್ಷವು ಪ್ರಯತ್ನ, ಬುದ್ಧಿ, ಬಂಡವಾಳ ಈ ದೃಷ್ಟಿಯಿಂದ ಸಾಕಷ್ಟು ಪ್ರಗತಿಕಾರಕವಿಲ್ಲ. ೬ ನೇ ಶನಿ ಬಂದ ನಂತರ ಪ್ರತ್ಯಕ್ಷ ಲಾಭವಾಗದಿದ್ದರೆ ಮುಂದಿನ ಕಾಲಕ್ಕೆ ಅನುಕೂಲವಾದ ಘಟನೆಗಳು ಸಂಭವಿಸಹತ್ತುವವು. ವೆಚ್ಚ ಹೆಚ್ಚುವದರಿಂದ ಕೆಲವರಿಂದ ಕೈಗಡ ತರಬೇಕಾಗುವದು. ಸಾಲ ಮಾಡಬೇಕಾದ ಪ್ರಸಂಗವೂ ಬರಬಹುದು. ವರ್ಷಾರಂಭದಲ್ಲಿ ಕರ್ಮೇಶ ಚಂದ್ರ ಹಾಗೂ ಲಾಭೇಶ ರವಿಯು ಇದೇ ರಾಶಿಯಲ್ಲಿರುವದರಿಂದ ಪ್ರತಿಷ್ಠೆಗೆ ಎಳ್ಳಷ್ಟೂ ಆತಂಕವಿಲ್ಲ. ನೌಕರರಿಗೆ ಗ್ರೇಡ್ ಸಿಗುವ ಆಸೆಯಿಲ್ಲ. ವರಿಷ್ಠರ ಪ್ರೀತಿ ಸಾಕಷ್ಟು ಉಳಿದು ವರ್ಗವಾದರೆ ಅಪೇಕ್ಷಿಸಿದ ಅನುಕೂಲ ಸ್ಥಳಕ್ಕೆ ಆಗುವದು. ಮಿತ್ರಸುಖ ಉತ್ತಮ. ಆರನೇ ರಾಹು ಮತ್ತು ಶನಿ ಒಟ್ಟಿಗೆ ಇರುವಾಗ ನಿಮ್ಮ ಶತ್ರುಗಳ ಅಥವಾ ವಿರೋಧಿಗಳ ಕೆಲವರ ಉಚ್ಚಾಟನವು ಪರಸ್ಪರವೇ ಆದೀತು. ಸೋದರರೊಡನೆ ಹೊಂದಿಕೆಯಿಲ್ಲ. ಆರನೇ ಶನಿ ಇರುವವರೆಗೆ ಆಪ್ತರಲ್ಲಿ ಕೆಲವರೊಡನೆ ಹೊಂದಿಕೆಯಾಗಲಾರದು. ೬ ನೇ ಶನಿ ಬಂದ ನಂತರ ಹೊಂದಾಣಿಕೆ ಕಂಡುಬರುವದು. ಅನಂತರ ವಾಹನ ಸುಖವೂ ಪದೇ ಪದೇ ದೊರೆಯುತ್ತ ಹೋಗುವದು. ಪಾರಮಾರ್ಥಿಕ ವಿಚಾರಗಳು ಸುಳಿಯುವವು. ಮಹತ್ವದ ಒಂದೆರಡು ಕೆಲಸಗಳು ಜುಲೈ ೧ ರಿಂದ ೧೯ ರ ಅವಧಿಯಲ್ಲಿ ಮನಸ್ಸಿನಂತೆ ಕೈಗೂಡುವವು.

ದಾವೆ-ಫಿರ್ಯಾದಿ ಸ್ಪರ್ಧೆಗಳಲ್ಲಿ ೬ ನೇ ರಾಹು-ಶನಿ ಒಟ್ಟಿಗೆ ಇರುವಾಗ ನಿಮಗೆ ಬಹಳ ಅನುಕೂಲವಾಗಿ ತೀರ್ಮಾನ ದೊರೆಯುವದು. ರಾಹು ಒಬ್ಬನೇ ಇರುವಾಗ ವೆಚ್ಚ ವಿಪರೀತ. ಆ ಪ್ರಮಾಣದಿಂದ ಯಶ ಕಡಿಮೆ. ೫ ನೇ ರಾಹುವಿನ ಕಾಲದಲ್ಲಿ ಅಂದರೆ ಜುಲೈ ೩೦ ರ ನಂತರದ ಅವಧಿಯಲ್ಲಿ ತೀರ್ಮಾನಗಳು ಪ್ರತಿಕೂಲವಾಗಿ ದೊರೆಯುವವು.

ಗರ್ಭವತಿಯರಿಗೆ ಮಾರ್ಚ್ ೭ ರಿಂದ ಜುಲೈ ೩೦ ರ ವರೆಗೆ ಪ್ರಸೂತಿ ಸುಲಭ, ಕನ್ಯಾಪ್ರಾಪ್ತಿ. ಉಳಿದ ದಿನಗಳಲ್ಲಿ ಹೆರಿಗೆ ಸ್ವಲ್ಪ ಕಷ್ಟವಾದರೂ ಬಹುಶಃ ಪುತ್ರ ಪ್ರಾಪ್ತಿ.

ಮಾರ್ಚ್ ೭ ರ ನಂತರ ಪರೀಕ್ಷೆ ಇದ್ದವರು ಪಾಸಾಗಬಹುದಾಗಿದೆ. ಮಾರ್ಚ್ ೯ ರಿಂದ ೨೭,

ಜುಲೈ ೧ ರಿಂದ ೧೯, ಅಗಸ್ಟ ೪ ರಿಂದ ೨೨ ಈ ಅವಧಿಯಲ್ಲಿ ಪರೀಕ್ಷೆ ಇದ್ದವರು ಕನಿಷ್ಠ ದ್ವಿತೀಯ ವರ್ಗವನ್ನಾದರೂ ಪಡೆಯಬಹುದು.

## ♏ ವೃಶ್ಚಿಕ

ಈ ರಾಶಿಯವರಿಗೆ ಈ ವರ್ಷವು ಉತ್ತಮ ವಿದ್ದು ಪ್ರಾಪಂಚಿಕಸುಖಕ್ಕಿಂತ ಔದ್ಯೋಗಿಕ ಆರ್ಥಿಕ ಉತ್ಕರ್ಷಕ್ಕೆ ಅಧಿಕ ಉತ್ತಮವಾಗಿದೆ.

ವರ್ಷಾರಂಭದಲ್ಲಿ ರಾಶಿಸ್ವಾಮಿಯಾದ ಮಂಗಳನು ಬಲಿಷ್ಠವಾದ ದಶಮಸ್ಥಾನದಲ್ಲಿ ಹಾಗೂ ಪ್ರಸಿದ್ಧಿ ಸುಲಭ ಮಿತ್ರಸ್ಥಾನವಾದ ಸಿಂಹದಲ್ಲಿ ರುವದರಿಂದ ಆತನ ಪೂರ್ಣದೃಷ್ಟಿ ಈ ರಾಶಿಯ ಮೇಲಿದೆ. ಇದರಿಂದ ಪ್ರಕೃತಿ ಸಾಕಷ್ಟು ಚನ್ನಾಗಿ ಉಳಿದು ಮಹತ್ವದ ಶ್ರಮಸಾಧ್ಯ ಕೆಲಸಗಳನ್ನು ಮಾಡಲು ಬಹಳಷ್ಟು ಹುರುಪು ಉತ್ಸಾಹ ತೋರಿಬರುವದು. ಬುಧನು ಉಚ್ಚನಾಗಿ, ಕೇತುವು ಸ್ವಲ್ಪ ಕಾಲ ಹಾಗೂ ಗುರು, ಹರ್ಶಲ ನೊಡನೆ ಸರ್ವಕಾಲ ಲಾಭಸ್ಥಾನದಲ್ಲಿರುವದ ರಿಂದ, ಬಹುಶಃ ಎಲ್ಲ ಕೆಲಸಗಳಲ್ಲಿ ಯಶಸ್ಸು ದೊರೆಯುತ್ತ ಹೋಗುವದರಿಂದ ಮನಸ್ಸು ಸಂತುಷ್ಟವಾಗಿರುವದು. ಆದರೆ ವರ್ಷಾರಂಭದಲ್ಲಿ ಆತ್ಮಕಾರಕ ರವಿ, ಮನಕಾರಕ ಚಂದ್ರ ಇವರು ವ್ಯಯಸ್ಥಾನದಲ್ಲಿರುವದರಿಂದ ಹಿಂದೆ ಘಟಿಸಿದ ಆದರೆ ಇಂದು ಅಥವಾ ಮುಂದೆ ಸಂಬಂಧವಿರದ ಕೆಲವು ತಪ್ಪುಗಳ ನೆನಪಾಗಿ ಮನಸ್ಸಿಗೆ ವಿನಾ ಕಾರಣ ಕೆಡುಕೆನಿಸುವದು. ಆರನೇ ಶನಿ ಬಂದ ನಂತರ ಅಂದರೆ ಮಾರ್ಚ ೭ ರಿಂದ ದೇಹಸೌಖ್ಯ ಬಹಳಷ್ಟು ಉತ್ತಮವಾಗಿದೆ.

ಭಾರ್ಯೇಶ ಶುಕ್ರನಿಂದ ಯುಕ್ತನಾದ ಈ ರಾಶಿಯ ಮೇಲೆ ಆತನ ದೃಷ್ಟಿ ಇದ್ದೇ ಇದೆ. ಅಲ್ಲದೆ ಕುಟುಂಬೇಶ ಗುರು, ಸುಖೇಶ ಶನಿ ಇವರ ದೃಷ್ಟಿಯು ಈ ರಾಶಿಯ ಮೇಲಿರುವದರಿಂದ ಸ್ತ್ರೀಸುಖ ಅಪೇಕ್ಷೆಗಿಂತ ಹೆಚ್ಚಿಗೆ ದೊರೆಯುವದು. ಜನರ ದೃಷ್ಟಿ ತಗಲುವಷ್ಟು ನಿಮ್ಮಲ್ಲಿ ಪ್ರೇಮ-ಮತ್ಸರ್ಯ ಕಂಡುಬರುವದು. ಆದರೆ ನಿಮ್ಮ ಹೆಂಡತಿಗೆ ಏಪ್ರಿಲ್ ೨೬ ರಿಂದ ಜುಲೈ ೧೨ ರ ನಡುವೆ ಮೂಲವ್ಯಾಧಿಯಂಥ ಉಷ್ಣವಿಕಾರ ದಿಂದ ಸ್ವಲ್ಪ ಕ್ಲೇಶವಾಗಬಹುದು.

ವಿವಾಹೇಚ್ಛುಗಳಿಗೆ ಈ ವರ್ಷ ಬಾಸಿಂಗ ಬಲವು ಬಹಳ ಉತ್ತಮವಿದೆ. ಅನಾಯಾಸವಾಗಿ, ಮನೆಯಲ್ಲಿ ಕುಳಿತರು ಕೂಡ, ಲಗ್ನ ಹೊಂದಬಹುದು. ವಧು ಅಥವಾ ವರ ಎಣಿಕೆಗಿಂತ ಹೆಚ್ಚು ಚನ್ನಾಗಿರುತ್ತಾರೆ. ಲಗ್ನವು-ಗೊತ್ತಾದ ಮುಹೂರ್ತಕ್ಕೆ ವಿಜೃಂಭಣೆಯಿಂದ ಜರಗುವದು.

ಸಂತತಿಯ ಲಗ್ನ ಮಾಡುವದಿದ್ದಲ್ಲಿ ಅದಕ್ಕೂ ಬಾಸಿಂಗ ಬಲ ಉತ್ತಮವಿದೆ ಆದರೆ ಮಾರ್ಚ ೭ ರ ವರೆಗೆ ರಾಹು-ಶನಿ ಯುತಿ ಇರುವದರಿಂದ ಲಗ್ನಕೂಡಿ ಬರಲಿಕ್ಕಿಲ್ಲ. ಅನಂತರ ಮಾತ್ರ ವಿಶೇಷ ಆಯಾಸವಿಲ್ಲದೆ ಜರಗುವದು. ಆದರೆ ಜುಲೈ ೩೦ ರ ವರೆಗೆ ರಾಹುವು ಐದನೇ ಸ್ಥಾನದಲ್ಲಿ ಉಳಿಯುವದರಿಂದ ಅನಿರೀಕ್ಷಿತ ಕಾರಣಗಳಿಗಾಗಿ ಮುಹೂರ್ತವನ್ನು ಬದಲಿಸಬೇಕಾಗಬಹುದು. ಜುಲೈ ೩೦ ರ ನಂತರ ಗೊತ್ತಾದ ಮುಹೂರ್ತಕ್ಕೆ ನಿರ್ವಿಘ್ನದಿಂದ ಲಗ್ನವಾಗುವದು. ಸೊಸೆ ಅಥವಾ ಅಳಿಯನ ಗುಣ ನಿಮಗೆ ಬಹಳೇ ಮನಸ್ಸಿಗೆ ಬಂದರೂ ರೂಪ ಅಷ್ಟೊಂದು ಹಿಡಿಸಲಿಕ್ಕಿಲ್ಲ.

ಮಾರ್ಚ ೭ ರ ವರೆಗೆ ಸಂತತಿಯಲ್ಲಿ ಒಬ್ಬನಿಗೆ ಅಲ್ಪ ಸ್ವಲ್ಪ ಕ್ಲೇಶಕಾರಕ. ಅಲ್ಲದೆ ಒಬ್ಬನು ನಿಮಗೆ ಅಪ್ರಿಯವಾಗಿ ವರ್ತಿಸಲೂಬಹುದು. ನಿಮಗೆ ಅತ್ಯಂತ ಪ್ರಿಯನಾದವನಿಗೆ ದೂರದ ಸ್ಥಳಕ್ಕೆ ವರ್ಗವಾಗಿ ಮನಸ್ಸಿಗೆ ಕ್ಲೇಶವೆನಿಸಬಹುದು. ಆದರೆ ಜುಲೈ ೩೦ ರ ನಂತರ ಎಲ್ಲ ಮಕ್ಕಳಿಂದಲೂ ಸುಖ ದೊರೆಯುವದು. ಅಂದಿನಿಂದ ಅವರ ಉನ್ನತಿಯೂ ಮನಸ್ಸಿಗೆ ತಕ್ಕಂತೆ ಆಗುವದು.



### ಕಾಮನ ಬಿಲ್ಲು

ನಿನ್ನ ಕಣ್ಣಿನ ಹೊಳಪೇನ
ಮುಂಗಾರಿ ಮಳೆಯ ಕೋಲ್ಮಿಂಚಿನ್ಹಾಂಗ|
ನಿನ್ನ ಹುಬ್ಬಿನ ಸೊಗಸೇನ
ಕಾಮನ ಬಿಲ್ಲು ಬಾಗಿದ್ಹಾಂಗ !

—ಪಂಚಾಕ್ಷರಿ ಹಿರೇಮಠ

ಉದ್ಯೋಗ ಧಂದೆಗಳಲ್ಲಿ ೫ನೇ ಶನಿ ಇರುವ ವರೆಗೆ ಅಂದರೆ ಮಾರ್ಚ ೭ ರ ವರೆಗೆ ವಿಶೇಷ ಪ್ರಗತಿ ಕಂಡುಬರಲಾರದು. ನಂತರ ಬರುವ ಆರನೇ ಶನಿಯ ಕಾಲದಲ್ಲಿ ಪ್ರಗತಿಯು ಭರದಿಂದ ಹಾಗೂ ಎಣಿಕೆ ಮೀರಿ ಆಗುವ ಯೋಗವಿದೆ. ಮೊದಲಿನ ವಿರೋಧಿಗಳೂ ಮಿತ್ರರಾದಾರು. ದ್ರವ್ಯಲಾಭ ವಿಪುಲವಾಗಿ ಪ್ರತಿಯೊಂದು ಕಾರ್ಯದಲ್ಲಿ ನಿಮ್ಮ ಸ್ನೇಹಿತರ ಸಲಹೆ ಸಹಕಾರಗಳು ದೊರೆಯುತ್ತ ಹೋಗುವವು. ಸರಕಾರಿ ನೌಕರರಿಗೆ ಅಧಿಕಾರಿಗಳ ಪರಿಚಯದಿಂದ ಬಯಸಿದ ಯಶಸ್ಸು ದೊರೆಯಲಿದೆ. ಶ್ರಮಜೀವಿ, ಬುದ್ಧಿಜೀವಿಗಳ ಖ್ಯಾತಿ ಉದ್ಯೋಗ ವ್ಯಾಪಾರಗಳಲ್ಲಿ ಪ್ರವೀಣತೆಯಿಂದ ಎಲ್ಲೆಡೆಗೆ ಹಬ್ಬುವದು. ಆಗಾಗ ದೊಡ್ಡವರ ಭೆಟ್ಟಿಯಾಗುತ್ತ ಅವರ ಪ್ರಯೋಜನವೂ ದೊರೆಯುವದು. ನೌಕರದಾರರಿಗೆ ಮೇಲಿನ ಗ್ರೇಡು ಖಚಿತವಾಗಿ ದೊರೆಯುವದು. ವರ್ಗವಾದರೂ ಸುಖಕರ ಸ್ಥಳಕ್ಕೆ ಆಗುವದು. ಆದರೆ ವರ್ಷಾರಂಭದಲ್ಲಿ ಭಾಗ್ಯೇಶ ಚಂದ್ರ, ಕರ್ಮೇಶ ರವಿ ವ್ಯಯಸ್ಥಾನದಲ್ಲಿರುವದರಿಂದ ವಿಶೇಷ ಹೊಣೆಗಾರಿಕೆಯ ಕೆಲಸ ಹೊರಿಸುವದರಿಂದ ಮನಸ್ಸು ಚಿಂತಾಯುಕ್ತವಾಗುವದು. ಆದರೆ ಹತ್ತನೆ ಸ್ಥಾನದಲ್ಲಿರುವ ಮಂಗಳನು ಅನುಕೂಲನಾಗಿರುವದರಿಂದ ಆ ಹೊಣೆಯನ್ನು ನಿರ್ವಹಿಸುವ ಕರ್ತೃತ್ವ ಶಕ್ತಿಯೂ ವಿಪುಲವಾಗುವದು. ಲಾಭಸ್ಥಾನದಲ್ಲಿ ಲಾಭೇಶ ಬುಧನು ಉಚ್ಚನಾಗಿದ್ದು ಬುದ್ಧಿಸ್ವಾಮಿ ಗುರುವಿನೊಂದಿಗೆ ಇರುವದರಿಂದ ದ್ರವ್ಯ ಲಾಭ ಹೇರಳವಾಗಿ ಆಗುವದು. ಅಲ್ಲದೆ ಬುಧನು ಗುಪ್ತ ಅಥವಾ ಆಕಸ್ಮಿಕ ಲಾಭಕಾರಕ ಎಂಟನೇ ಸ್ಥಾನದ ಅಧಿಪತಿಯಾಗಿರುವದರಿಂದ ಅನೇಕರಿಗೆ ಆ ರೀತಿ ವಿಶೇಷ ಲಾಭವಾಗುವದು. ಪೂಜ್ಯರ ಸಹವಾಸಯೋಗವಿದೆ. ಸ್ಥಾವರಕ್ಕಿಂತ ಜಂಗಮ ವಸ್ತುಗಳ ಸಂಗ್ರಹ ಅಧಿಕವಾಗುವದು. ಹಲ ಕೆಲವು ಮಂಗಳ ಕಾರ್ಯಗಳು. ಧಾರ್ಮಿಕ ಕಾರ್ಯಗಳು ನಡೆಯುವವು. ಸ್ವಂತ ವಾಹನಕ್ಕಿಂತ ಬಾಡಿಗೆ ವಾಹನದಿಂದ ಹೆಚ್ಚು ಸುಖ. ಗೃಹಸುಖ ಬಹಳೇ ಉತ್ತಮ. ಆದರೆ ಜುಲೈ ೩೦ ರ ನಂತರ ನಾಲ್ಕನೇ ರಾಹು ಬರುವದರಿಂದ ಆಪ್ತರಲ್ಲಿ ಅನೇಕರೊಂದಿಗೆ ಅಸಂತುಷ್ಟಿ! ನೆರೆ ಹೊರೆಯವರೊಂದಿಗೆ ಮನಸ್ತಾಪ. ನಿಸರ್ಗ-ಕೋಪದಿಂದ ಸ್ಥಾವರದಲ್ಲಿ ಸ್ವಲ್ಪ ಹಾನಿ. ಕೈಕೆಳಗಿನ ನೌಕರರು ಪೀಡಿಸುವರು. ಅನೇಕ ಸಲ ವಿಚಿತ್ರ ಸ್ವಪ್ನಗಳೂ ಬೀಳಬಹುದು.

ದಾವೆ-ಫಿರ್ಯಾದಿ ಸ್ಪರ್ಧೆಗಳಲ್ಲಿ ಮಾರ್ಚ ೭ ರಿಂದ ಜುಲೈ ೩೦ ರ ವರೆಗೆ ತೀರ್ಾನ ದೂರತಲ್ಲಿ ಸ್ಮರಣೀಯ ಯಶಸ್ಸು ಲಭಿಸುವದು.

ಬಸುರಿಯರಿಗೆ ಮಾರ್ಚ ೭ ರ ವರೆಗೆ ಹೆರಿಗೆ ಬಲು ಕಠಿಣ. ನಂತರ ಜುಲೈ ೩೦ ರ ವರೆಗೆ ಪ್ರಸೂತಿಯಾದಲ್ಲಿ ಅಲ್ಪಾಯಾಸ. ನಂತರ ಯಾವ ತೊಂದರೆಯಿಲ್ಲದೆ ಹೆರಿಗೆ ಆಗುವದು. ಬಹಳಷ್ಟು ಸ್ತ್ರೀಯರಿಗೆ ಕನ್ಯಾಪ್ರಾಪ್ತಿ.

ಮಾರ್ಚ ೭ ರ ನಂತರ ಪರೀಕ್ಷೆ ಇದ್ದವರು ಉತ್ತೀರ್ಣರಾಗುತ್ತಾರೆ. ಜುಲೈ ೩೦ ರ ನಂತರ ಪರೀಕ್ಷೆ ಇದ್ದರೆ ಪ್ರಥಮ ವರ್ಗ ಇಲ್ಲವೆ ಕನಿಷ್ಠ ದ್ವಿತೀಯ ವರ್ಗದಲ್ಲಾದರೂ ಉತ್ತೀರ್ಣರಾಗುತ್ತಾರೆ.

# ಧನು

ಈ ವರ್ಷವು ಈ ರಾಶಿಯವರಿಗೆ ಮಾರ್ಚ್ ೭ರ ವರೆಗೆ ಸಾಮಾನ್ಯ. ನಂತರ ಜುಲೈ ೩೦ರ ವರೆಗೆ ಪ್ರಗತಿಪರ ಹಾಗೂ ತದನಂತರದ ಕಾಲ ಅತ್ಯಂತ ಭಾಗ್ಯಕಾರಕವಾಗಿದೆ.

ರಾಶಿಸ್ವಾಮಿ ಗುರು ಇಡೀ ವರ್ಷ ಬಲಿಷ್ಠವಾದ ದಶಮಸ್ಥಾನದಲ್ಲಿದ್ದು, ವರ್ಷಾರಂಭದಲ್ಲಿ ಮೃತ್ಯುಸ್ವಾಮಿ ಚಂದ್ರನು ಶುಭಸ್ಥಾನದಲ್ಲಿ ಅಂದರೆ ೧೧ನೇ ಸ್ಥಾನದಲ್ಲಿರುವದರಿಂದ, ಭಾಗ್ಯೇಶನಾದ ರವಿಯೂ ಅಲ್ಲಿರುವದರಿಂದ ಪ್ರಕೃತಿ ಚನ್ನಾಗಿ ಉಳಿಯುವದು. ಮನಸ್ಸು ಸದಾ ಉತ್ಸಾಹದಲ್ಲಿದ್ದು ಇತರರಿಗೂ ಪ್ರೋತ್ಸಾಹ ನೀಡುವದು. ಆದರೆ ನಾಲ್ಕನೆಯವರಾದ ಶನಿ, ರಾಹು ಒಟ್ಟಿಗೆ ಇರುವ ವರೆಗೆ ಅಂದರೆ ಮಾರ್ಚ್ ೭ರ ವರೆಗೆ ಪ್ರಕೃತಿಗೆ ಸ್ವಲ್ಪ ಕಿರಿಕಿರಿ. ವಾತವಿಕಾರದಿಂದ ಎದೆ ಬೆನ್ನುಗಳಲ್ಲಿ ನೋವು ಕಾಣಿಸಿಕೊಂಡೀತು. ಇತರ ವಿಷಯಗಳಲ್ಲಿ ಪ್ರಾಪಂಚಿಕ ಸುಖವು ಮಾರ್ಚ್ ೭ರ ವರೆಗೆ ಕೊಂದರೆಯುದೇ, ಎರಡನೆಯವರ ಮಾತಿನಂತೆ ನಡೆಯಬೇಕಾದ ಪ್ರಸಂಗವೂ ಇದೆ. ಮಾರ್ಚ್ ೭ಕ್ಕೆ ೫ನೇ ಶನಿ ಬಂದರೂ ಜುಲೈ ೩೦ರ ವರೆಗೆ ೪ನೇ ರಾಹುವೇ ಉಳಿಯುವದರಿಂದ ಆಪ್ತರೊಡನೆ, ನೆರೆಹೊರೆಯವರೊಂದಿಗೆ ಮೇಲಿಂದ ಮೇಲೆ ಜಗಳ, ವಾಗ್ವಾದಗಳಿಂದ ಮನಸ್ತಾಪ. ಆದರೆ ಜುಲೈ ೩೦ರ ನಂತರ ೩ನೇ ರಾಹು ಬರುವದರಿಂದ ಎಲ್ಲ ರೀತಿಯಿಂದ ಉತ್ತಮ ಫಲ.

ಭಾರ್ಯೇಶನಾದ ಬುಧನು ದಶಮದಲ್ಲಿ ತನ್ನ ಉಚ್ಚ ರಾಶಿಯಾದ ಕನ್ಯಾದಲ್ಲಿ ಇದ್ದು ದೇಹೇಶನಾದ ಗುರುವಿನಿಂದ ಕೂಡಿರುವದರಿಂದ ಎಲ್ಲ ವಿಷಯಗಳಲ್ಲಿ ಹೆಂಡತಿಯೊಡನೆ ಒಮ್ಮತ. ಆದರೆ ಸ್ತ್ರೀಸುಖದರ್ಶಕ ಶುಕ್ರನು ವರ್ಷಾರಂಭದಲ್ಲಿ ೧೨ನೆಯವನಾಗಿ ವ್ಯಯಸ್ಥಾನದಲ್ಲಿರುವದರಿಂದ ಮೇಲಿಂದ ಮೇಲೆ ಅವಳ ಸಹವಾಸಸುಖ ತಪ್ಪುವದು. ಬಯಸಿದ ಶುಭ ಕಾರ್ಯಕ್ಕಾಗಿಯೆ ಹೆಂಡತಿಯು, ತಿಂಗಳು-ಎರಡು ತಿಂಗಳಿನಂತೆ ಎರಡು ಮೂರು ಸಲ ಪರವೂರಿಗೆ ಹೋಗಬೇಕಾಗುವದು.

ಈ ರಾಶಿಯ ವಿವಾಹೇಚ್ಛುಗಳಿಗೆ ಈ ವರ್ಷ ಬಾಸಿಂಗಬಲ ಮಧ್ಯಮವಿರುವದರಿಂದ ಲಗ್ನ ಕೂಡಿಬರಲು ವಿಲಂಬವಾಗುವದು. ವರ-ಕನ್ಯಾಪರೀಕ್ಷೆಯಲ್ಲಿಯೆ ಕಾಲಹರಣವಾಗಿ ಒಂದು ವೇಳೆ ಕೂಡಿಬಂದರೂ ವಧು ಅಥವಾ ವರ ಮನಸ್ಸಿಗೆ ತಕ್ಕಂತೆ ಇರಲಿಕ್ಕಿಲ್ಲ. ಆದರೆ ಲಗ್ನದ ನಂತರ ಉಭಯತರ ಸ್ವಭಾವಸಾಮ್ಯದಿಂದಾಗಿ ಮೊದಲಿನ ಅಸಮಾಧಾನವು ಶಾಶ್ವತವಾಗಿ ಅಳಿದುಹೋಗುವದು.

ಸಂತತಿಯ ವಿವಾಹವಾಗುವದಿದ್ದಲ್ಲಿ ಅದಕ್ಕೂ ಬಾಸಿಂಗಬಲ ಕಡಿಮೆ ಇರುವದರಿಂದ ಕೂಡಿಬರುವದು ಕಠಿಣ. ಒಂದು ವೇಳೆ ಕೂಡಿಬಂದರೂ ಪ್ರತಿಪಕ್ಷಿಗಳು ಲಗ್ನ ಮುರಿದುಕೊಳ್ಳುವ ಹೆದರಿಕೆ ಇದೆ. ಆದರಲ್ಲಿಯೂ ಅಕ್ಟೋಬರ್ ೨೯ ರಿಂದ ಫೆಬ್ರುವರಿ ೧೪, ನಂತರ ಸಪ್ಟೆಂಬರ್ ೧ರ ನಂತರದ ಅವಧಿ ಅನುಕೂಲವಿದೆ. ಸೊಸೆ ಅಥವಾ ಅಳಿಯ ಮನಸ್ಸಿಗೊಪ್ಪುವವರೇ ದೊರೆತು ಅವರು ಸುಂದರರೂ, ಜಾಣರೂ, ಸುದ್ಯೆವಿಗಳೂ ಆಗಿರುತ್ತಾರೆ. ಸಂತತಿಯ ಉತ್ಕರ್ಷಕ್ಕೆ ಈ ವರ್ಷ ಬಹಳೇ ಚನ್ನಾಗಿದೆ. ಜುಲೈ ೩೦ರ ನಂತರ ಇದು ಅನುಭವಕ್ಕೆ ಬಂದೀತು. ಆದರೆ ಮಾರ್ಚ್ ೭ರಿಂದ ಬರುವ ಶನಿಯಿಂದಾಗಿ ಇವರ ಪ್ರಕೃತಿಯಲ್ಲಿ ಕಿರಿಕಿರಿ ಕಂಡುಬಂದೀತು. ಮಗಳಿಗಿಂತ ಮಗನಿಂದಲೇ ಹೆಚ್ಚು ಸುಖ ದೊರೆಯುವದು. ಪುತ್ರರಲ್ಲಿ ಒಬ್ಬನು ವಿಶೇಷ ಖ್ಯಾತಿ ಪಡೆಯುವನು.

ಉದ್ಯೋಗ ಧಂಧೆಗಳಲ್ಲಿ ನಾಲ್ಕನೆ ಶನಿ-ರಾಹು ಒಟ್ಟಿಗೆ ಇರುವವರೆಗೆ ಅಷ್ಟೊಂದು ಪ್ರಗತಿ ಕಂಡುಬರಲಾರದು. ಐದನೆ ಶನಿ ಬಂದ ಕೂಡಲೆ ಪ್ರಗತಿ ಪ್ರಾರಂಭವಾಗುವದು. ರಾಹು ೩ನೆಯವನಾದ ನಂತರವಂತೂ ಕಲ್ಪನಾತೀತ ಪ್ರಗತಿಯಾಗುವದು. ಆಗ ನಿಮಗೆ ಮಾತಾಡಲಿಕ್ಕೂ ವಿರಾಮ ದೊರೆಯಲಿಕ್ಕಿಲ್ಲ. ಧಂಧೆಯಲ್ಲಿರುವವರ ಪತ್ತು-ಪ್ರತಿಷ್ಠೆ ವಿಶೇಷ ಹೆಚ್ಚಿ ಹೇರಳ ದ್ರವ್ಯಲಾಭವಾಗುವದು. ನೌಕರಿಯಲ್ಲಿದ್ದವರಿಗೆ ೪ನೇ ಶನಿ,ರಾಹು ಇರುವ ವರೆಗೆ ವಿಶೇಷ ತ್ರಾಸ. ೩ನೇ ರಾಹು ಬಂದಾಗ ಅದು ಕಡಿಮೆಯಾಗುವದು. ವರಿಷ್ಠರ ಅನುಗ್ರಹ ಅಖಂಡವಾಗಿದ್ದು ವರ್ಗವಾದರೂ ಹೆಚ್ಚಿನ ಮೆಚ್ಚುದ ಸ್ಥಳಕ್ಕೆ, ಆದರೆ ಇತರ ಸುಖಸೌಕರ್ಯಗಳಿರುವಲ್ಲಿಗೆ ಆಗುವದು. ಡಿಸೆಂಬರ್ ೧೪ರಿಂದ ಫೆಬ್ರುವರಿ ೧೪ ಅಥವಾ ಅಕ್ಟೋಬರ್ ೨೦ರ ನಂತರ ಕೆಲವರಿಗೆ ಗ್ರೇಡು ಸಿಗುವ ಯೋಗವಿದೆ. ಮಾರ್ಚ್ ೪ ರಿಂದ ಜೂನ್ ೨೯, ಜುಲೈ ೨೭ರಿಂದ ಆಗಸ್ಟ್ ೨೨, ಸಪ್ಟೆಂಬರ್ ೧೭ರಿಂದ ಅಕ್ಟೋಬರ್ ೧೧ ಈ ಅವಧಿಯು ಅಧಿಕ ಉತ್ಕರ್ಷಕಾರಕ. ವರ್ಷಾರಂಭದಲ್ಲಿ ಲಾಭೇಶ ಶುಕ್ರನು ವ್ಯಯಸ್ಥಾನದಲ್ಲಿರುವದರಿಂದ ಖರ್ಚು ವಿಶೇಷ ಹೆಚ್ಚುವದು. ಆದರೂ ವ್ಯಯೇಶನಾದ ಮಂಗಳನು ಭಾಗ್ಯಸ್ಥಾನದಲ್ಲಿರುವದರಿಂದ ಯೋಗ್ಯ ಅಪೇಕ್ಷಿತ ಕಾರ್ಯಗಳಿಗಾಗಿಯೆ ಹಣ ವೆಚ್ಚವಾಗುವದು. ಐದನೆ ಶನಿ ಇದ್ದಾಗ ಸ್ಥಾವರ ಜಂಗಮ ಆಸ್ತಿ ಅಲ್ಪಸ್ವಲ್ಪ ಸಂಗ್ರಹವಾದೀತು. ಯಾತ್ರೆಯ ಯೋಗ ಕಡಿಮೆ. ಆದರೆ ಎರಡು ಮೂರು ದೊಡ್ಡ ಧಾರ್ಮಿಕ ಕೃತ್ಯಗಳು ನಡೆಯುವವು. ಮಿತ್ರರು ಸ್ವಲ್ಪ ಸಿಡುಕಿನಿಂದ ವರ್ತಿಸುವರು. ಪೂಜ್ಯ ವ್ಯಕ್ತಿಗಳ ಸಹವಾಸಲಾಭವಿದೆ. ದೊಡ್ಡವರ ಭೆಟ್ಟಿಯಾಗಿ ಮುಂದೆ ಅವರ ಪ್ರಯೋಜನ ಪಡೆಯುವಂಥ ಯೋಗ ಅನೇಕಾವರ್ತಿ ಕಂಡುಬರುವದು. ವಾಹನಸುಖ ಸಾಧಾರಣ.

ದಾವೆ-ಫಿರ್ಯಾದಿ ಸ್ಪರ್ಧೆಗಳಲ್ಲಿ ನಾಲ್ಕನೆ ಶನಿ ಇರುವ ವರೆಗೆ ಸಾಮಾನ್ಯ ಯಶಸ್ಸು. ನಂತರ ನಾಲ್ಕನೇ ರಾಹು ಉಳಿದಿರುವ ವರೆಗೆ ನಿಮಗೆ ವಿರುದ್ಧ ತೀರ್ಮಾನ. ರಾಹು ೩ನೇಯವನಾದ ನಂತರ ಅಂದರೆ ಜುಲೈ ೩೦ರ ನಂತರ ಹೇಳಿಕೊಳ್ಳುವಂಥ ಯಶಪ್ರಾಪ್ತಿ. ಶತ್ರುಗಳಿಗೆ ನಿಮ್ಮ ಮಿತ್ರರಲ್ಲಿಯೆ ಕೆಲವರ ಸಹಾಯವಿದೆ; ಕೆಲ ಮಿತ್ರರ ಹಂಡಂದಿರು ನಿಮ್ಮನ್ನು ಕೀಳಾಗಿ ಕಾಣುವರು.

ಗರ್ಭವತಿಯರಿಗೆ ೪ನೇ ಶನಿ, ರಾಹು ಇರುವ ವರೆಗೆ ಪ್ರಸೂತಿ ಬಹಳ ಕಷ್ಟಕರ. ೫ನೇ ಶನಿ ಬಂದನಂತರ ಅಲ್ಪಾಯಾಸದಿಂದ ಹೆರಿಗೆ. ೩ನೇ ರಾಹು ಇದ್ದಾಗ ಸುಲಭ ಪ್ರಸೂತಿ. ಜುಲೈ ೩೦ರ ನಂತರ ಅನೇಕರಿಗೆ ಪುತ್ರಪ್ರಾಪ್ತಿ.

ಮಾರ್ಚ್ ೭ಕ್ಕಿಂತ ಮುಂಚೆ ಅಥವಾ ಜುಲೈ ೩೦ರ ನಂತರ ಪರೀಕ್ಷೆ ಇದ್ದವರು ಖಂಡಿತ ಪಾಸಾಗುತ್ತಾರೆ. ಆದರೆ ಮಾರ್ಚ್ ೬ ರಿಂದ ಜುಲೈ ೩೦ ರ ನಡುವಿನ ಅವಧಿಯಲ್ಲಿ ಪರೀಕ್ಷೆ ಇದ್ದವರು ಉತ್ತೀರ್ಣರಾಗುವದು ಕಠಿಣ.

# ಮಕರ

ಈ ವರ್ಷವು ಈ ರಾಶಿಯವರಿಗೆ ಜುಲೈ ೩೦ ರ ನಂತರ ಅಂತಃಕಲಹಗಳಿಂದ ಪ್ರಾಪಂಚಿಕಸುಖದಲ್ಲಿ ವ್ಯತ್ಯಯ ತರುವಂಥದಾಗಿದ್ದರೂ ಆರ್ಥಿಕ ಲಾಭ, ಔದ್ಯೋಗಿಕ ವಿಕಾಸಗಳಿಗೆ ಖಂಡಿತವಾಗಿ ಉತ್ತಮವಿದೆ.

ವರ್ಷಾರಂಭದಲ್ಲಿ ಮೃತ್ಯುಸ್ಥಾನದಲ್ಲಿರುವ ಅಷ್ಟಮ ಮಂಗಳನಿಂದಾಗಿ ಉಷ್ಣವಿಕಾರದಿಂದ ಪ್ರಕೃತಿ ಮೇಲಿಂದ ಮೇಲೆ ಕೆಟ್ಟರೂ ರಾಶಿಸ್ವಾಮಿಯಾದ ಶನಿಯು ಮಾರ್ಚ್ ೭ ರ ವರೆಗೆ ರಾಹುವಿನೊಂದಿಗೆ ಮೂರನೆಯವನಾಗಿರುವದರಿಂದ ಮತ್ತು ನಂತರ ನಾಲ್ಕನೆಯವನಾಗುವದರಿಂದ ಮತ್ತು ಆತನ ದೃಷ್ಟಿಯು ಸಂಪೂರ್ಣವಾಗಿ ಈ ರಾಶಿಯ ಮೇಲಿರುವದರಿಂದ ಹಾಸಿಗೆ ಹಿಡಿಯುವ ಹೆದರಿಕೆ ಇಲ್ಲ. ಆದರೂ ಕ್ಲೇಶ ಪರಿಹಾರಕ್ಕಾಗಿ ೧೦೦೦೦ ಮಂಗಳ ಜಪ ಮಾಡಬೇಕು. ಕನಿಷ್ಠ ಹತ್ತು ಕಿಲೊ ಬೆಲ್ಲ ತರುಣ ಬ್ರಾಹ್ಮಣನಿಗೆ ದಾನ ಮಾಡಬೇಕು. ಇತರ ವಿಷಯಗಳಲ್ಲಿ ದೇಹಸುಖವು ಎರಡನೇ ರಾಹು ಬರುವ ವರೆಗೆ ಅಂದರೆ ಜುಲೈ ೩೦ ರ ವರೆಗೆ ಚನ್ನಾಗಿ ಉಳಿಯುವದು. ನಂತರ ಮಾತ್ರ ಗೃಹಕಲಹ ಒಮ್ಮೆಲೆ ಪ್ರಾರಂಭವಾಗಿ ಮನಶ್ಯಾಂತಿ ಕದಡುವದು.

ವರ್ಷಾರಂಭದಲ್ಲಿ ಭಾರ್ಯೇಶ ಚಂದ್ರನು ಶುಭಸ್ಥಾನದಲ್ಲಿ, ಸ್ತ್ರೀಸುಖಕಾರಕ ದಶಮೇಶ ಶುಕ್ರನು ಲಾಭಸ್ಥಾನದಲ್ಲಿ ಇರುವದರಿಂದ ಸ್ತ್ರೀಸುಖ ಅತ್ಯುತ್ತಮ ಹಾಗೂ ಅಖಂಡವಾಗಿದೆ. ಆದರೆ ಅಷ್ಟಮ ಮಂಗಳನಿಂದಾಗಿ ಆಕೆಯ ತವರುಮನೆಯವರೊಡನೆ ವಿರಸ ಉಂಟಾಗಿ ಹೆಂಡತಿಯು ಅಸಂತುಷ್ಟಳಾಗುವಳು. ಫೆಬ್ರುವರಿ ೧೪ ರಿಂದ ಸಪ್ಟೆಂಬರ್ ೧ ರ ವರೆಗೆ ಆಕೆಯ ಪ್ರಕೃತಿ ಕಫ ವಿಕಾರದಿಂದ ಮೆತ್ತಗೆ ಉಳಿಯುವದು.

ವಿವಾಹವಾಗತಕ್ಕವರಿಗೆ ಈ ವರ್ಷ ಬಾಹಿಂಗೆ ಬಲವು ಬಹಳ ಅನುಕೂಲವಿರುವದರಿಂದ ಲಗ್ನ ಸಹಜವಾಗಿ ಕೂಡಿಬರುವದು. ಜುಲೈ ೩೦ ರೊಳಗಾಗಿ ಯಾವಾಗಲೂ ನಿರಾತಂಕವಾಗಿ ಆಗುವದು. ವಧುವರರು ರೂಪ ಲಕ್ಷಣಗಳಲ್ಲಿ ಪೂರ್ಣ ಅನುರೂಪರಾಗಿರುವರು.

ಸಂತತಿಯು ವಿವಾಹವಾಗುವದಿದ್ದಲ್ಲಿ ಅದಕ್ಕೂ ಗುರುಬಲ ಚನ್ನಾಗಿದೆ. ವಿವಾಹವು ಅಲ್ಪಾಯಾಸದಿಂದ ಅಪೇಕ್ಷಿಸಿದ್ದಕ್ಕಿಂತ ಉತ್ತಮ ಸ್ಥಳದಲ್ಲಿ ಹೊಂದುವದು. ಮತ್ತು ಗೋತ್ರಾದ ಮುಹೂರ್ತಕ್ಕೆ ಸಾಂಗವಾಗುವದು. ಸೊಸೆ ಅಥವಾ ಅಳಿಯ ಸುಂದರ, ಜಾಣ, ಸುಧಾರಣಾವಾದಿ ಮತ್ತು ಯಾವುದೊಂದು ಕಲೆಯಲ್ಲಿ ಪ್ರವೀಣರಾಗಿರುತ್ತಾರೆ. ಸಂತತಿಯು ಉತ್ಕರ್ಷವೂ ದೊಡ್ಡ ಪ್ರಮಾಣದಿಂದ ಆಗಲಿದೆ. ವರ್ಷಾರಂಭದಿಂದ ನವೆಂಬರ್ ೯, ಡಿಸೆಂಬರ್ ೪ ರಿಂದ ೨೯ ಜನೆವರಿ ೨೬ ರಿಂದ ಮಾರ್ಚ್ ೪, ಎಪ್ರಿಲ್ ೧ ರಿಂದ ೩೧ ಮೇ, ಜೂನ್ ೨೯ ರಿಂದ ಜುಲೈ ೨೭, ಅಗಸ್ಟ ೨೨ ರಿಂದ ಸಪ್ಟೆಂಬರ್ ೧೬ ಈ ಅವಧಿಯಲ್ಲಿ ಉನ್ನತಿ ಖಂಡಿತವಾಗಿ ಆಗುವದು. ಮಾರ್ಚ್ ೭ ರ ವರೆಗೆ ಸಂತತಿಯೊಡನೆ ಒಮ್ಮತವಿದ್ದಂತೆ ಮುಂದಿನ ಅವಧಿಯಲ್ಲಿ ಉಳಿಯಲಾರದು.

ಉದ್ಯೋಗ ಧಂದೆಗಳಿಗೆ ಒಂಬತ್ತನೇ ಗುರುವಿನಿಂದಾಗಿ ಈ ವರ್ಷ ಚನ್ನಾಗಿದೆ. ಮತ್ತು ಮೂರನೆ ಶನಿ—ರಾಹು ಒಟ್ಟಿಗೆ ಇರುವ ವರೆಗೆ ಅಂದರೆ ಮಾರ್ಚ್ ೭ ರ ವರೆಗೆ ಉತ್ಕರ್ಷವು ವಿಶೇಷವಾಗುವದು. ಫೆಬ್ರುವರಿ ೧೮ ರಿಂದ ಅಗಸ್ಟ ೩೧ರ ಅವಧಿಯಲ್ಲಿ ಮಂಗಳನು ಲಾಭದ ಸ್ಥಾನದಲ್ಲಿರುವದರಿಂದ, ವೃಶ್ಚಿಕ ರಾಶಿಯಲ್ಲಿರುವದರಿಂದ ವಿಶೇಷ ಉತ್ಕರ್ಷ, ವಿಪುಲ ದ್ರವ್ಯ ಲಾಭವಾಗುವದು. ಧಂದೆಗಳಲ್ಲಿದ್ದವರು ಏರುತ್ತ ಹೋಗುವರು. ಗೌರವ ಪ್ರತಿಷ್ಠೆಗಳು ಬೆಳೆಯುವವು. ಹಾಗೆಯೇ ವರ್ಷಾರಂಭದಲ್ಲಿ ೯ ನೇ ಶನಿಯು ಭಾಗ್ಯಸ್ಥಾನದಲ್ಲಿದ್ದು, ಸ್ವೋಚ್ಚ ಕನ್ಯಾ ರಾಶಿಯಲ್ಲಿ ಬುಧನು ಗುರು, ಕೇತು, ಹರ್ಶಲ್‌ರೊಂದಿಗೆ ಯುಕ್ತನಾಗಿದ್ದು ಪರಾಕ್ರಮ ಅಥವಾ ತೃತೀಯ ಸ್ಥಾನದಲ್ಲಿರುವ ಶನಿಯ ದೃಷ್ಟಿ ಇರುವದರಿಂದ ಪರಪ್ರಾಂತ ಅಥವಾ ಪರದೇಶಗಳಲ್ಲಿರುವ ಜನರೊಂದಿಗೆ ಉದ್ದಿಮೆಯಲ್ಲಿ ನೇರ ಸಂಬಂಧ ಬಂದು ಎಲ್ಲ ಕಡೆಗೆ ನಿಮ್ಮ ಖ್ಯಾತಿ ಹೆಚ್ಚುವದು. ಒಂದೆರಡು ಸಲ ಅತಿ ದೂರದ ಪ್ರವಾಸ ಕೈಕೊಳ್ಳುವಿರಿ. ಆ ಪ್ರಯಾಣಗಳ ಉದ್ದೇಶವೂ ಸಫಲವಾಗುವದು. ಎಂಟನೆ ಮಂಗಳನು ಸಟ್ಟಾ ಲಾಟರಿ, ರೇಸ್‌ಗಳಿಗೆ ಅನುಕೂಲನಿರುವದರಿಂದ ಇಡೀ ವರ್ಷ ಪ್ರಯತ್ನಿಸಿದಲ್ಲಿ ಗುಪ್ತ ಅಥವಾ ಅನಿರೀಕ್ಷಿತ ಧನಲಾಭವಾಗುವದು. ಈ ಯೋಗದಲ್ಲಿ ಮಂಗಳನ ಪೂರ್ಣದೃಷ್ಟಿ ಲಾಭಸ್ಥಾನದ ಮೇಲಿರುವದರಿಂದ ಜನ್ಮಕಾಲದ ಗ್ರಹಬಲಕ್ಕನುಸರಿಸಿ ಅನೇಕರಿಗೆ ಹೇರಳ ಧನಲಾಭವಾಗುವಂತಾಗಿದೆ. ನೌಕರದಾರರರಿಗೂ ಬಡತಿ ದೊರೆತು ಲಾಭ ಗೌರವಗಳು ಹೆಚ್ಚುವವು. ಕೃಪಾನುಗ್ರಹದಿಂದ, ಕೊಡುಗೆ ರೂಪದಿಂದ ಇದು ಇನ್ನೂ ಹೆಚ್ಚುವದು. ವರ್ಗವು ಕೂಡ ಸಕಲ ಸುಖ ಸೌಕರ್ಯಗಳಿಂದ ಕೂಡಿದ ಸ್ಥಳಕ್ಕೆ ಆಗುವದು; ಅಲ್ಲಿ ಸರಿಹೊರೆಯುವರಿಂದ ಸ್ವಲ್ಪ ತೊಂದರೆ ಆಗಬಹುದು. ಜುಲೈ ೩೦ ರ ನಂತರ ವೆಚ್ಚದ ಪ್ರಮಾಣವು ಮನಸ್ಸಿಲ್ಲದಿದ್ದರೂ ಹೆಚ್ಚುವದು. ಕ್ಷುಲ್ಲಕ ಕಾರಣಗಳಿಂದಾಗಿ ಕಲಹ ನಡೆಯುವದು. ಆದರೆ ಧರ್ಮಸ್ಥಾನದಲ್ಲಿರುವ ಗುರು, ಬುಧರಿಂದಾಗಿ ಕನಿಷ್ಠ ಎರಡು ಯಾತ್ರೆಗಳಾದರೂ ಘಟಿಸುವವು. ಉಪಾಸನಾಸ್ಥಾನದ ಮೇಲೆ ಗುರು ಹಾಗೂ ಸ್ವಸ್ವಾಮಿ ಶುಕ್ರನ ದೃಷ್ಟಿ ಇರುವದರಿಂದ ದೈವಿಕ ದೃಷ್ಟಾಂತವೂ ಆಗಬಹುದು. ಮಿತ್ರಸುಖ ಉತ್ತಮವಾಗಿದೆ. ಮೂರನೆ ಶನಿ ಇರುವ ವರೆಗೆ ವಾಹನಸುಖ ಚನ್ನಾಗಿದೆ. ಸ್ಥಾವರ ಆಸ್ತಿಗಿಂತ ಉತ್ತಮ ವಸ್ತುಗಳ ಸಂಗ್ರಹ ಸಾಕಷ್ಟಾಗುವದು.

ನೀನು



ಸಂಪಿಗೆ, ಗುಲಾಬಿ ಮುಡಿದ
ಮಂಡಿ, ಮಾಡಿಯಾಲರ ಸೂಸಿ
ಎನ್ನ ಮನದ ತುಂಬ
ತುಂಬಿ ಸುಳಿವ ಜಾಣೆ–ನೀನು !
–ಪಂಚಾಕ್ಷರಿ ಹಿರೇಮಠ

ದಾವೆ-ಫಿರ್ಯಾದಿ ಸ್ಪರ್ಧೆಗಳಲ್ಲಿ ಹೆಚ್ಚಾಗಿ ಯಶಪ್ರಾಪ್ತಿ. ಅದರಲ್ಲಿಯೂ ಮಾರ್ಚ್೩೦ರಿಂದ ಜುಲೈ ೩೦ ರ ವರೆಗೆ ದೊರೆವ ತೀರ್ಮಾನಗಳು ತುಂಬ ಯಶಸ್ಸನ್ನು ತರುವವು. ರಿಪುಸ್ವಾಮಿ ಬುಧನು ಭಾಗ್ಯಸ್ಥಾನದಲ್ಲಿ ಸ್ವೋಚ್ಚನಾಗಿರುವದರಿಂದ ಕೆಲವೊಂದು ಕಾರ್ಯಗಳಲ್ಲಿ, ನಿಮ್ಮ ಭಾವಿ ಯಶಸ್ಸಿಗೆ ನಿಮ್ಮ ಶತ್ರುಗಳೇ ಕಾರಣೀಭೂತರಾಗುವರು, ಅಲ್ಲದೆ ಬುಧನು ಗುರುವಿನಿಂದ ಕೂಡಿರುವದರಿಂದ ಪ್ರಬಲ ಶತ್ರುಗಳಲ್ಲಿ ಇಬ್ಬರು ಮೂವರು ಕ್ರಮೇಣ ನಿಮ್ಮ ಮಿತ್ರರಾಗುವರು.

ಗರ್ಭವತಿಯರಲ್ಲಿ ಅನೇಕರಿಗೆ ಅತಿ ಸುಲಭ ಪ್ರಸೂತಿಯೋಗವಿದೆ. ಜುಲೈ ೩೦ ರ ನಂತರ ಹೆರಿಗೆ ಆದಲ್ಲಿ ಶಿಶುವು ಅಶಕ್ತವಿರಬಹುದು. ಡಿಸೆಂಬರ್ ೨೯ ರಿಂದ ಜನೆವರಿ೨೬, ಸಪ್ಟೆಂಬರ್ ೧೬ ರಿಂದ ಅಕ್ಟೋಬರ್ ೧೧ ರ ಅವಧಿಯ
ಪುತ್ರೋತ್ಸವವಾಗುವ ಸಂಭವ. ಉಳಿದ ಅವ
ಯಲ್ಲಿ ಹೆಚ್ಚಾಗಿ ಕನ್ಯಾಪ್ರಾಪ್ತಿ.

ಮಾರ್ಚ್ ೭ ರ ಮೊದಲು ಪರೀಕ್ಷೆಯಿದ್ದ
ರಲ್ಲಿ ಅನೇಕರು ಪಾಸಾಗುತ್ತಾರೆಂದೇ ಹೇ
ಬೇಕು. ಜುಲೈ ೩೦ ರ ವರೆಗೆ ಪರೀಕ್ಷೆ ಇದ್ದ
ರಲ್ಲಿ ನೂರಕ್ಕೆ ೬೦ರಷ್ಟು ಉತ್ತೀರ್ಣರಾಗುವರು
ಅನಂತರ ಪರೀಕ್ಷೆ ಇದ್ದವರಲ್ಲಿ ಹತ್ತಕ್ಕೊಬ್
ನಂತಾದರೂ ಪಾಸಾಗುವದೂ ಸಂಶಯವೇ
ವರ್ಷಾರಂಭದಿಂದ ನವೆಂಬರ್ ೩ರ ವರೆಗೆ, ಜ
ವರಿ ೧ ರಿಂದ ಮಾರ್ಚ್ ೯ ರ ವರೆಗೆ, ಜುಲ
೧ ರಿಂದ ೧೯ ರ ವರೆಗೆ ಪರೀಕ್ಷೆಯಿದ್ದವರ
ಬಹುಶಃ ಮೇಲಿನ ವರ್ಷದಲ್ಲಿ ಉತ್ತೀರ್ಣರಾಗ
ವರು.

## ಕುಂಭ

ಈ ವರ್ಷವು ಈ ರಾಶಿಯವರಿಗೆ ಪ್ರಾಪ
ಚಿಕ, ಶಾರೀರಿಕ, ಮಾನಸಿಕಸುಖಕ್ಕೆ ಅಷ್ಟೊ
ದು ಚೆನ್ನಾಗಿಲ್ಲವಾದರೂ, ಆರ್ಥಿಕ ಔದ್ಯೋ
ಗಿಕ ವಿಷಯಗಳಲ್ಲಿ ಖಂಡಿತವಾಗಿ ಸಂಪೂ
ರ್ಣ ಸಮಾಧಾನಕಾರಕವಿದೆ.

ಸುಮಾರು ಕಳೆದ ಏಳು ವರ್ಷಗಳಿಂ
ನಿಮ್ಮನ್ನು ಕಾಡುತ್ತಿದ್ದ ಶನಿ ಕಾಟವು ಇನ
ಸ್ವಲ್ಪೇ ದಿನಗಳಲ್ಲಿ ಅಂದರೆ ಮಾರ್ಚ್ ೬
ಮುಗಿಯಲಿದ್ದು ನಂತರ ಬರುವ ೩ನೇ ಶನಿಯ
ಬಲಿಷ್ಠ ಹಾಗೂ ಶುಭದಾಯಕ ಫಲ ನೀಡ
ವನು. ಆದರೆ ಆತನು ಹೋಗುತ್ತಿರುವ ಮೇ
ರಾಶಿಯು ನೀಚರಾಶಿಯಿರುವದರಿಂದ ಆತನ
ನೀಡುವ ಶುಭಫಲಗಳಿಗಾಗಿ ನೀವು ಪ್ರಯತ
ಪಡಬೇಕಾಗುವದು; ಸುಲಭದಲ್ಲಿ ಅಲ್ಪಾಯಾ
ದಿಂದ ಅವು ದೊರೆಯಲಾರವು. ಶುಭಫ
ದೊರೆಯುವಲ್ಲಿ ವಿಲಂಬವೂ ಆಗಬಹುದ
ಹಾಗೇ ಇಡೀ ವರ್ಷ ೮ನೇ ಗುರು ಮತ್ತು ಜುಲ
೩೦ ರ ವರೆಗೆ ೨ನೇ ಮತ್ತು ನಂತರ ಮೊದಲ
ಯುವನಾಗುವ ರಾಹುವಿನಿಂದಾಗಿ ಪ್ರಕೃತಿಗೆ
ಕಿರಿ, ಗೃಹಕಲಹ, ವಿನಾಕಾರಣ ವೆಚ್ಚ ಇ
ಗಳಿಂದಾಗಿ ಮನಸ್ಸಿಗೆ ಬಹಳಷ್ಟು ಅಸಮಾಧಾ
ಅಕ್ಟೋಬರ್ ೨೯ ರಿಂದ ಡಿಸೆಂಬರ್ ೧೮, ಮ
ಅಕ್ಟೋಬರ್ ೨೦ರ ನಂತರದ ಕಾಲವು ಮಾನ
ಕ್ಷೋಭೆಗೆ ಕಾರಣವಾಗುವಂತಿದೆ. ಜುಲೈ ೩
ವರೆಗೆ ಗುರುವಿನಂತೆ ಕೇತುವೂ ಎಂಟನೆಯ
ನಾಗಿರುವದರಿಂದ ಪಿಶಾಚಪೀಡೆ ಮಾ
ಮಾಟದ ಅಪಪ್ರಯೋಗದಿಂದ ತೊಂದರೆಯಾ
ವ ಸಂಭವವಿದೆ. ಆದ್ದರಿಂದ ಪೀಡಾಪರಿಹಾರಾ
೧೯೦೦೦ ಗುರು ಜಪ, ೧೭೦೦೦ ಕೇತು ಜ
ಮಾಡಬೇಕು. ಮಾರುತಿ ಸ್ತೋತ್ರ, ರಾಮರ
ನಿತ್ಯ ಪಠಣ ಮಾಡಬೇಕು. ಇತರ ಆವ
ವಿಷಯಗಳಲ್ಲಿ ದೇಹಸುಖ ದಶಮ ಶುಕ್ರನಿ
ದರಿಂದ ಸಾಕಷ್ಟು ಚನ್ನಾಗಿದೆ.

ಏಳನೆ ಮಂಗಳನು ಭಾರ್ಯಾಸ್ಥಾನದಲ್ಲಿ ಬಲಿಷ್ಠನಾದ ಸಿಂಹ ರಾಶಿಯಲ್ಲಿರುವದರಿಂದ ಪ್ರತಿಯೊಂದು ವಿಷಯದಲ್ಲಿಯೂ ಹೆಂಡತಿಯ ವರ್ಚಸ್ಸು ವಿಶೇಷವಾಗಿರುವದು. ಅಲ್ಲದೆ ಭಾರ್ಯೇಶ ರವಿಯು ಒಂಬತ್ತನೆಯವನಾಗಿರುವದರಿಂದ ಆಕೆಯ ಸಲಹೆ, ಆಲೋಚನೆಗಳು ನಿಮ್ಮಕ್ಕಿಂತ ಹೆಚ್ಚು ಯಶಸ್ವಿಯಾಗಬಲ್ಲವು. ಆಗೀಗ ಹೊಟ್ಟೆ ನೋವು, ಬೆನ್ನು ನೋವಿನಿಂದ ತೊಂದರೆ ಅನಿಸಿದರೂ ಒಟ್ಟಿಗೆ ಪ್ರಕೃತಿ ನಿರೋಗಿಯಾಗಿರುವದು.

ವಿವಾಹೇಚ್ಛುಗಳಿಗೆ ಈ ಸಲ ಚಾಸಿಂಗ ಬಲವಿಲ್ಲದಿರುವದರಿಂದ ಭಗೀರಥಪ್ರಯತ್ನ ಮಾಡಿದರೂ ವಿವಾಹ ಕೂಡಿಬರುವದಿಲ್ಲ. ಆದರಲ್ಲಿಯೂ ಜನೇವರಿ ೨೬ ರಿಂದ ಮಾರ್ಚ್ ೪, ಎಪ್ರಿಲ್ ೧ ರಿಂದ ಮೇ ೩೧, ಈ ಅವಧಿಯಲ್ಲಿ ಕದಾಚಿತ್ ಕೂಡಿಬರಬಹುದು. ಆದರೂ ವಧುವರರ ಸ್ವಭಾವದಲ್ಲಿ ಭಿನ್ನತೆ ಕಂಡುಬಂದು ಒಂಬತ್ತನೆ ಗುರು ಬರುವ ವರೆಗೆ ಅವರು ಒಬ್ಬರನ್ನೊಬ್ಬರು ಸೇರಲಿಕ್ಕಿಲ್ಲ.

ಸಂತತಿಯ ವಿವಾಹವಾಗುವದಿದ್ದಲ್ಲಿ ಅವರಿಗೂ ಚಾಸಿಂಗ ಬಲ ಈ ವರ್ಷ ಇಲ್ಲ. ಆದರೂ ನಿಮಗಿಂತ ಅವರಿಗೆ ತುಸು ಅನುಕೂಲವಿರುವದರಿಂದ ಸಾಕಷ್ಟು ಪ್ರಯತ್ನಿಸಿದರೆ ಲಗ್ನ ಕೂಡಿಬರಬಹುದು. ನಂತರ ಕೂಡಲೆ ಲಗ್ನ ಮಾಡಿ ಮುಗಿಸಬೇಕು. ಇಲ್ಲದಿದ್ದರೆ ವಿಘ್ನಸಂತೋಷಿಗಳಿಂದ ಪ್ರತಿಪಕ್ಷಿಗಳ ಮನಸ್ಸು ಕಲುಷಿತವಾಗಿ ಲಗ್ನವಾಗುವದೇ ಕಠಿಣವಾಗುವದು. ಆದರೆ ಸೊಸೆ ಅಥವಾ ಅಳಿಯ ಸುಂದರ,ಜಾಣ, ಸುದೈವಿಯಾಗಿ ನಿಮಗೆ ಮೆಚ್ಚಿಗೆಯವರಾಗಿರುವರು.

ಬುಧನು ತನ್ನ ಉಚ್ಚ ರಾಶಿ ಕನ್ಯಾ ರಾಶಿಯಲ್ಲಿ ಗುರುವಿನಿಂದ ಕೂಡಿರುವುದರಿಂದ ಸಂತತಿಯ ಉನ್ನತಿಗೆ ವರ್ಷಾರಂಭದಿಂದಲೇ ಚನ್ನಾಗಿದೆ. ೩ನೇ ಶನಿ ಬಂದನಂತರ ಅಂದರೆ ಮಾರ್ಚ್ ೭ ರ ನಂತರ ಸಂತತಿಯ ಉತ್ಕರ್ಷವು ಪ್ರಶಂಸನೀಯವಾದೀತು.

ಉದ್ಯೋಗ ಧಂದೆಗಳಿಗೆ ಭಾಗ್ಯೇಶನಾದ ಶುಕ್ರನು ಹತ್ತನೆಯವನಾಗಿ ವ್ಯಾಪಾರಸ್ಥಾನದಲ್ಲಿರುವ ಸ್ವಸ್ವಾಮಿ ಮಂಗಳನಿಂದ ನೋಡಲ್ಪಡುತ್ತಿರುವದರಿಂದ ಮತ್ತು ಲಾಭೇಶ ಹಾಗೂ ಧನೇಶ ಗುರುವು ಅಕಸ್ಮಾತ್ ಧನಲಾಭ ನೀಡುವ ಎಂಟನೇ ಉಚ್ಚ ಬುಧನಿಂದ ಕೂಡಿರುವದರಿಂದ ಈ ಯೋಗವು ಉದ್ಯೋಗ ನೌಕರಿಗಳಲ್ಲಿ ದೊರೆಯುವ ಲಾಭವಲ್ಲದೆ, ರೇಸ್, ಲಾಟರಿ, ಸಟ್ಟಾ, ಅನಪೇಕ್ಷಿತ ವ್ಯಕ್ತಿಯ ವಾರಸದಾರಿ, ಭೂಮಿಗತ ದ್ರವ್ಯ ದೊರೆಯುವದು, ದತ್ತಕ ಇವುಗಳಲ್ಲಿ ಯಾವದೊಂದು ರೀತಿಯಿಂದ ಅಕಲ್ಪಿತ ಲಾಭವಾಗಿ ಪರಿಸ್ಥಿತಿಯಲ್ಲಿ ಬದಲಾವಣೆ ಕಂಡುಬರುವದು. ಧಂದೆಯಲ್ಲಿ ಪ್ರತಿಷ್ಠೆ ಗೌರವಗಳು ಇಮ್ಮಡಿಯಾಗುವವು. ದೊಡ್ಡವರ ಬೆಂಬಲ, ಆಶ್ರಯ ದೊರೆಯುವದು ನೌಕರಿಯಲ್ಲಿರುವವರಿಗೆ ಸ್ವಲ್ಪ ತಡವಾಗಿಯಾದರೂ ಮೇಲಿನ ಗ್ರೇಡ್ ಸಿಗುವದು ಖಚಿತ. ವರ್ಗವಾದರೂ ಪ್ರಪಂಚಕ್ಕೆ ಸ್ವಲ್ಪ ಅನಾನುಕೂಲ. ಆದರೆ ಕೆಲಸ ಹಾಗೂ ಮಾನ ಸನ್ಮಾನಗಳಿಗೆ ಅನುಕೂಲವಾದ ಸ್ಥಳಕ್ಕೆ ಆಗುವದು. ಮೂರನೇ ಶನಿ ಬಂದ ನಂತರ ಪ್ರಗತಿಪರ ಘಟನೆಗಳು ಸಂಭವಿಸುತ್ತ ಹೋಗುವವು ಶ್ರಮ ಮೂಲಕ ದೊರೆಯುವ ಲಾಭಕ್ಕೆ ಫೆಬ್ರುವರಿ ೧೮ ರಿಂದ ಅಕ್ಟೋಬರ್ ೨೦ ರ ವರೆಗಿನ ಕಾಲ ಅನುಕೂಲವಾಗಿದೆ. ಸ್ಥಾವರ ಆಸ್ತಿ ಹೆಚ್ಚದೆ ಹೋದರೂ ಗೃಹವೈಭವವನ್ನು ಎತ್ತಿ ತೋರಿಸುವ ಉತ್ತಮ ವಸ್ತುಗಳ ಸಂಗ್ರಹವಾಗಿ ನಗದು ಹಣವೂ ಸ್ವಲ್ಪ ಉಳಿಯುವದು. ಆದರೆ ಜುಲೈ ೩೦ ರ ನಂತರ ಈ ಯೋಗವಿದೆ. ವಾಹನ ಸುಖ ಚನ್ನಾಗಿದ್ದು ಮೇಲಿಂದ ಮೇಲೆ ದೊರೆಯುವದು. ಮಹಿಳೆಯರಲ್ಲಿ ಹೆಚ್ಚು ಆದರ. ಪ್ರೇಕ್ಷಣೀಯ ಸ್ಥಳಗಳ ಭೆಟ್ಟಿಯ ಯೋಗವಿದೆ. ೩ನೇ ಶನಿ ಬಂದ ನಂತರ ಮಿತ್ರಸುಖ ಉತ್ತಮವಿದೆ. ಜುಲೈ ೩೦ ರ ನಂತರ ಭಾವೀಸೂಚಕ ಶುಭ ಸ್ವಪ್ನಗಳು ಮೇಲಿಂದ ಮೇಲೆ ಬೀಳುವವು

ದಾವೆ ಫಿರ್ಯಾದಿ ಸ್ಪರ್ಧೆಗಳಲ್ಲಿ ಶನಿಕಾಟ ಇರುವ ವರೆಗೆ ದೊರೆವ ತೀರ್ಮಾನಗಳು ಪ್ರತಿಕೂಲ; ಎರಡನೇ ರಾಹು ಇರುವ ವರೆಗಿನ ತೀರ್ಮಾನಗಳು ವೆಚ್ಚದ ದೃಷ್ಟಿಯಿಂದ ಅತ್ಯಲ್ಪ; ಜುಲೈ ೩೦ ರ ನಂತರದ ತೀರ್ಮಾನಗಳು ತುಂಬ ಯಶಸ್ವಿಯಾಗಿರುತ್ತವೆ!

ಬಸುರಿಯರಿಗೆ ಮಾರ್ಚ್೭ರ ವರೆಗೆ ಪ್ರಸೂತಿ ಸ್ವಲ್ಪ ಕಷ್ಟದ್ದು. ಜುಲೈ ೩೦ ರ ವರೆಗೆ ಪ್ರಸೂತಿ ಸುಲಭವಾದರೂ ಶಿಶುವಿಗೆ ಕೆಲ ದಿನಗಳ ವರೆಗೆ ತೊಂದರೆ ಆಗಬಹುದು ಅನಂತರ ಆಗುವ ಹೆರಿಗೆ ಸುಲಭ ಮತ್ತು ತಾಯಿ ಮಕ್ಕಳಿಬ್ಬರಿಗೂ ಆರೋಗ್ಯದಾಯಕ. ನವೆಂಬರ್ ೩ ರಿಂದ ೨೪, ಡಿಸೆಂಬರ್ ೧೨ ರಿಂದ ಜನೇವರಿ ೧, ಮಾರ್ಚ್ ೯ ರಿಂದ ೨೭, ಎಪ್ರೀಲ್ ೯ ರಿಂದ ೨೭, ಜುಲೈ ೧ ರಿಂದ ೧೯. ಆಗಸ್ಟ್ ೪ರಿಂದ ೨೨ ಈ ಅವಧಿಯಲ್ಲಿ ಹೆರಿಗೆಯಾದಲ್ಲಿ ಪುತ್ರಲಾಭದ ಯೋಗವಿದೆ.

ಮಾರ್ಚ್ ೭ ರ ನಂತರ ಪರೀಕ್ಷೆ ಇದ್ದಲ್ಲಿ ಪಾಸಾಗುವ ಯೋಗ ಸಾಕಷ್ಟಿದೆ. ಜುಲೈ ೩೦ ರ ನಂತರ ಪರೀಕ್ಷೆ ಇದ್ದವರು ಮೇಲಿನ ವರ್ಗದಲ್ಲಿ ಉತ್ತೀರ್ಣರಾಗುವ ಭರವಸೆಯಿದೆ.




ಈ ರಾಶಿಯವರಿಗೆ ಈ ವರ್ಷ ಪ್ರಾಪಂಚಿಕಸುಖದ ದೃಷ್ಟಿಯಿಂದ ಕಿರಿಕಿರಿಯದಾಗಿದ್ದರೂ, ಶನಿಕಾಟ ಇದ್ದರೂ ಔದ್ಯೋಗಿಕ ವಿಕಾಸಕ್ಕೆ ಆರ್ಥಿಕ ಲಾಭಕ್ಕೆ ಅತ್ಯುತ್ತಮವಾಗಿರುತ್ತದೆ.

ರಾಶಿಸ್ವಾಮಿಯಾದ ಗುರುವು ತನ್ನ ರಾಶಿಯನ್ನೇ ಇಡೀ ವರ್ಷ ನೋಡುತ್ತಿರುವದರಿಂದ ಮತ್ತು ರಿಪುಸ್ಥಾನದಲ್ಲಿರುವ ಮಂಗಳನು ರೋಗ—ರಿಪು—ಸಂಕಟನಾಶಕಾರಿಯಾಗಿರುವದರಿಂದ ಆತನ ಹಾಗೂ ಸುಖೇಶ ಬುಧನ ಪೂರ್ಣ ದೃಷ್ಟಿ ಈ ರಾಶಿಯ ಮೇಲೆ ಪೂರ್ಣವಾಗಿರುವದರಿಂದ ಶನಿಕಾಟ ಸುರುವಾಗಿದ್ದರೂ ನಿಮ್ಮ ಪ್ರಕೃತಿ ಹೋದ ವರ್ಷಕ್ಕಿಂತ ಚನ್ನಾಗಿ ಉಳಿಯುವದು.

ಆದರೆ ಈ ರಾಶಿಯಲ್ಲಿ ಶನಿ ಮತ್ತು ರಾಹು ಒಟ್ಟಿಗೆ ಇರುವ ವರೆಗೆ ಅಂದರೆ ಮಾರ್ಚ್ ೭ರ ವರೆಗೆ ಆಗಾಗ ವಿನಾಕಾರಣ ಮನಸ್ತಾಪ ಮಾಡಿ ಕೊಳ್ಳುವ ಚಟ ಉಳಿದೀತು. ಇತರ ಅವಶ್ಯಕ ವಿಷಯಗಳಲ್ಲಿ ಫೆಬ್ರುವರಿ ೧೮ ರ ನಂತರ ಹೆಚ್ಚು ಅನುಕೂಲ. ಜುಲೈ ೩೦ ಕ್ಕೆ ೧೨ ನೇ ರಾಹು ಬಂದ ನಂತರ ಎಣಿಸಿದ ಅನೇಕ ಕೆಲಸಗಳಲ್ಲಿ ಯಶದೊರೆಯಲಿದೆ.

ಭಾರ್ಯಾಸ್ಥಾನದಲ್ಲಿ ಸ್ವೋಚ್ಚ ಬುಧನು ರಾಶಿಸ್ವಾಮಿಯಾದ ಗುರುವಿನೊಂದಿಗಿರುವನು. ಮತ್ತು ಸ್ತ್ರೀಸುಖದರ್ಶಕ ಶುಕ್ರನು ಭಾಗ್ಯ ಸ್ಥಾನದಲ್ಲಿರುವನು. ಆದ್ದರಿಂದ ಸ್ತ್ರೀಸುಖ ಅಖಂಡವಾಗಿ ದೊರೆಯಬಲ್ಲದು. ಜುಲೈ ೩೦ ರ ವರೆಗೆ ಭಾರ್‍ಯಾಸ್ಥಾನದಲ್ಲಿ ಕೇತು ಇರುವದರಿಂದ ಆಕೆಯ ಪ್ರಕೃತಿಯು ಶೀತ-ಪಿತ್ತವಿಕಾರಗಳಿಂದ ಆಗಾಗ ಕೆಡುವದು ಆದರೆ ಅನಂತರ ಚನ್ನಾಗಿ ಉಳಿಯುವದು. ೭ ನೇ ಕೇತು ಇರುವ ವರೆಗೆ ನಿಮ್ಮಲ್ಲಿ ಕ್ಷೇಮ-ಮತ್ಯೈಕ್ಯ ಅಷ್ಟಕ್ಕಷ್ಟೇ ಜುಲೈ ೩೦ ರ ನಂತರ ನಿಮ್ಮಲ್ಲಿ ಸಾಮರಸ್ಯ ಉಂಟಾದೀತು.

ವಿವಾಹೇಚ್ಛುಗಳಿಗೆ ಈ ವರ್ಷ ಬಾಸಿಂಗಬಲ ಉತ್ತಮವಾಗಿದೆ ವಿಶೇಷ ಶ್ರಮವಿಲ್ಲದೆ ಲಗ್ನ ಕೂಡಿಬಂದು, ಗೊತ್ತಾದ ಮುಹೂರ್ತಕ್ಕೆ ವಿಜೃಂಭಣೆಯಿಂದ ಜರಗುವದು ವಧೂವರರು ಅನುರೂಪರಾಗಿದ್ದು ವಿವಾಹಾನಂತರದಲ್ಲಿ ಭಾವಿ ಭಾಗ್ಯವರ್ಧಕ ಘಟನೆಗಳು ತಿಂಗಳು ತಿಂಗಳಿಗೆ ಘಟಿಸುತ್ತ ಹೋಗುವವು. ೭ನೇ ಕೇತು ಇರುವ ವರೆಗೆ ಅಂದರೆ ಜುಲೈ ೩೦ರ ವರೆಗೆ ಆಗೀಗ ವಾಗ್ವಾದ ನಡೆದರೂ ಪರಸ್ಪರ ಆದರ-ಪ್ರೇಮ-ನಿಷ್ಠೆಗಳು ಅಖಂಡವಾಗಿರುತ್ತವೆ.

ಸಂತತಿಯ ವಿವಾಹಕ್ಕೂ ಬಾಸಿಂಗಬಲ ಚನ್ನಾಗಿರುವದರಿಂದ ಅಲ್ಪಾವಧಿಯಲ್ಲಿ ಅಪೇಕ್ಷೆಗಿಂತಲೂ ಸಾಕಷ್ಟು ಉತ್ತಮ ಮನೆತನದೊಂದಿಗೆ ಲಗ್ನ ಕೂಡಿಬರುವದು. ಮಾರ್ಚ್ ೭ರ ನಂತರ ಲಗ್ನವಾದಲ್ಲಿ ವೈಭವದಿಂದ ಜರಗುವದು. ಸೊಸೆ ಅಥವಾ ಅಳಿಯನ ಮನೆತನ ಇತಿಹಾಸಪ್ರಸಿದ್ಧ ಅಥವಾ ವಾಙ್ಮಯಪ್ರಸಿದ್ಧವಾಗಿರುವದು. ಸೊಸೆ-ಅಳಿಯ ಮೆಚ್ಚುಗೆಯವರಾಗಿರುವರು-ಅವರು ರೂಪದಿಂದ ಸಾಧಾರಣ ಇದ್ದರೂ ಗುಣ ಸ್ವಭಾವ-ಬುದ್ಧಿಗಳಲ್ಲಿ ಅಸಾಮಾನ್ಯರಾಗಿರುತ್ತಾರೆ.

ಸಂತತಿಯ ಉನ್ನತಿಗೆ ಈ ವರ್ಷವು ೨ನೇ ಶನಿ ಬಂದ ನಂತರ ವಿಶೇಷ ಉತ್ಕರ್ಷದ್ದಾಗಿದೆ ಅವರಲ್ಲಿ ಒಬ್ಬನು ಮಹತ್ವದ ಕೆಲಸಕ್ಕಾಗಿ ನೇಮಕಗೊಂಡು ಮೂರು-ನಾಲ್ಕು ತಿಂಗಳ ಕಾಲ ವಿದೇಶಕ್ಕೂ ಹೋಗಬಹುದಾಗಿದೆ ಹನ್ನೆರಡನೆ ರಾಹು ಇದ್ದಾಗ ಸರತಿಯಲ್ಲಿ ಒಬ್ಬರಿಗೆ ಅಪಘಾತದಿಂದ ಅಲ್ಪಕ್ಲೇಶ ಸಂಭವಿಸಬಹುದು. ಸಂತತಿಯಲ್ಲಿ ಅನೇಕರಿಂದ ಉತ್ತಮ ಸುಖ ದೊರೆಯುವದು. ಆದರೆ ಜುಲೈ ೩೦ರ ನಂತರ ಒಬ್ಬನೊಡನೆ ಸೇರಿಕೆಯಾಗಲಿಕ್ಕಿಲ್ಲ

ಶನಿಕಾಟವಿದ್ದರೂ ಧಂದೆ-ನೌಕರಿಗಳಿಗೆ ಈ ವರ್ಷ ಹಾನಿಕರವಿಲ್ಲ, ಅಷ್ಟೇಕೆ, ಶನಿಕಾಟದ ಕೊನೆಯ ಘಟ್ಟ ಪ್ರಾರಂಭವಾಗುವ ದಿನದಿಂದ ಅಂದರೆ ಮಾರ್ಚ್ ೭ ನೇ ತಾರೀಖಿನಿಂದ ದಿನ ದಿನಕ್ಕೆ ಲಾಭವಾಗುತ್ತ ಹೋಗುತ್ತದೆ. ಧನ ಸ್ಥಾನದಲ್ಲಿ ಬರುವ ೨ ನೇ ಶನಿಯು ಈ ರಾಶಿಗೆ ಲಾಭೇಶ ವ್ಯಯೇಶನಾಗಿ ಧನಸ್ಥಾನಕ್ಕೆ ಬಂದ ನಂತರ ಆತನ ಸಂಪೂರ್ಣ ದೃಷ್ಟಿ ಲಾಭಸ್ಥಾನದ ಮೇಲೆ ಬೀಳುವದರಿಂದ ಅದು ಲಾಭದಾಯಕವೇ ಆಗುವದೆಂಬ ನಿಯಮವಿದೆ. ನಿಮಗೂ ಇದು



ಆ ಥರಾ ಒಂದು ಪೋಸ್ಟರ್ ಕೊಡ್ರಿ ಪುಸ್ತಕಕ್ಕೆ ಹಾಕ್ಕೋಬೇಕು

ಅನುಭವಕ್ಕೆ ಬಂದೀತು. ರಾಶಿಸ್ವಾಮಿಯೂ ಕರ್ಮೇಶನೂ ಆಗಿರುವ ಗುರು ಏಳನೆಯವನಾಗಿದ್ದು ಆತನ ದೃಷ್ಟಿ ಪೂರ್ಣವಾಗಿ ದೇಹ-ಪರಾಕ್ರಮ-ಲಾಭಸ್ಥಾನದ ಮೇಲೆ ಇರುವದರಿಂದ ಕೀರ್ತಿ, ಅಧಿಕಾರ, ಪ್ರಭುತ್ವ, ಲಾಭ ಇವುಗಳಿಗೆ ಪೋಷಕವಾಗಿದೆ. ಎರಡನೇ ಶನಿ ಬಂದ ನಂತರ ಮೇಷ ಆತನ ನೀಚರಾಶಿಯಾಗಿರುವದರಿಂದ ಕುತರ್ಕ, ದುರ್ವಿಚಾರ, ಪರದ್ವೇಷ, ಪರನಿಂದೆ, ಅಪಥ್ಯಭಕ್ಷಣ ಮಾಡುವ ಇಚ್ಛೆ ಉಂಟಾಗುವದು. ನೌಕರಿಯಲ್ಲಿದ್ದವರಿಗೆ ಮೇಲಿನ ಗ್ರೇಡ್ ಒಂಬತ್ತನೇ ಮಂಗಳ ಇದ್ದಾಗ ಅಂದರೆ ಫೆಬ್ರುವರಿ ೧೮ ರಿಂದ ಅಗಸ್ಟ ೩೧ ರೊಳಗಾಗಿ ಖಂಡಿತ ದೊರೆಯುವದು. ಎಪ್ರಿಲ್ ೨೬ ರಿಂದ ಜುಲೈ ೧೨ ರ ನಡುವಿನ ಅವಧಿಯಲ್ಲಿ ನೌಕರಿ ಅಥವಾ ಧಂದೆಯಲ್ಲಿ ಸತ್ವಪರೀಕ್ಷೆಯ ಪ್ರಸಂಗಗಳು ಉದ್ಭವಿಸವವು. ಆದರೆ ಆಗ ಇರುವ ಒಂಬತ್ತನೆ ಮಂಗಳನ ಪ್ರಭಾವದಿಂದ ಬುದ್ಧಿ. ಕರ್ತೃತ್ವಶಕ್ತಿಗಳಿಂದ ನೀವು ಆ ಪ್ರಸಂಗಗಳಲ್ಲಿ ಉತ್ತೀರ್ಣರಾಗಿ ನಿಮ್ಮ ಕೀರ್ತಿ ಹೆಚ್ಚುವದು. ಮಾರ್ಚ್ ೭ ರ ನಂತರ ಪ್ರತ್ಯಕ್ಷ ಲಾಭಕ್ಕೆ ಅನುಕೂಲ ಇದ್ದು ಅಗಸ್ಟ ೩೧ ರ ನಂತರ ಎಣಿಕೆಗಿಂತ ಹೆಚ್ಚು ಲಾಭ. ಡಿಸೆಂಬರ್ ೧೮ ರಿಂದ ಫೆಬ್ರುವರಿ ೧೮ ರ ವರೆಗೆ ನಿಮ್ಮ ಗೌರವ-ಪ್ರತಿಷ್ಠೆಗಳು ಅಳಿದುಹೋಗುವವೋ ಎಂಬ ಪರಿಸ್ಥಿತಿ ಉಂಟಾಗಿ, ಕರ್ಮೇಶನಾದ ಗುರುವು ಪ್ರಬಲನಾಗಿರುವದರಿಂದ ಮಾನವೀ ಸಹಾಯಕ್ಕಿಂತ ದೈವೀಚಮತ್ಕಾರದಿಂದಲೇ ಸಂಕಟ ನಿವಾರಣೆ ಆದ ಅನುಭವ ಬರುವದು ಈ ವರ್ಷದಲ್ಲಿ ಕರ್ಮೇಶ ಗುರು ಹಾಗೂ ಭಾಗ್ಯೇಶ ಮಂಗಳ ತಮ್ಮ ಸ್ಥಾನದಿಂದ ಹತ್ತನೆಯವರಾಗಿರುವದರಿಂದ ದೈವೀಸಹಾಯದ ಯೋಗ ಇದಾಗಿದೆ. ನೌಕರರಿಗೆ ವರ್ಗವಾದಲ್ಲಿ ಅತಿ ದೂರದ ಆದರೆ ಸುಖ ಸೌಕರ್ಯಗಳಿರುವ ಸ್ಥಳಕ್ಕೆ ವರ್ಗವಾಗುವದು. ಆದಾಯ ಪ್ರಮಾಣದಿಂದ ವೆಚ್ಚವೂ ಹೆಚ್ಚಾಗುವದು. ಆಗ ಬೇಕಾದಷ್ಟು ಸಂಗ್ರಹವಾಗಲಾರದು ಮಿತ್ರ ಸುಖ ಉತ್ತಮ. ವಾಹನಸುಖವೂ ಮೇಲಿಂದ ಮೇಲೆ ಲಭಿಸುವದು. ಸಮೀಪದ ಆಪ್ತರಿಂದ ಉತ್ತಮಸುಖ. ಅವರಲ್ಲಿ ಕೆಲವರಿಂದ ಅಪೇಕ್ಷಿತ ಕಾರ್ಯದಲ್ಲಿ ವಿಶೇಷ ಸಹಾಯ ದೊರೆಯುವದು. ಆದರೆ ಎರಡನೆ ಶನಿ ಬಂದ ನಂತರ ಗೃಹಕಲಹ ಪ್ರಾರಂಭವಾಗಿ ಕುಟುಂಬದ ಜನರಿಂದ ಅಷ್ಟೊಂದು ಸಹಾಯ ದೊರೆಯಲಾರದು. ರಮ್ಯ ಸ್ಥಳಗಳ ಸಂದರ್ಶನ ಯೋಗವೂ ಇದೆ. ಸೋದರರಿಗೆ ಉತ್ಕರ್ಷ; ಅವರೊಂದಿಗೆ ಕೂಡಿ ನಡೆಯುವದು.

ದಾವೆ--ಫಿರ್ಯಾದಿ--ಸ್ಪರ್ಧೆಗಳಲ್ಲಿ ಆರನೇ ಮಂಗಳ ಹಾಗೂಏಳನೇ ಸ್ವೋಚ್ಚಬುಧನಿಂದಾಗಿ ಅನೇಕ ಪ್ರಕರಣಗಳಲ್ಲಿ ಪ್ರಚಂಡ ಯಶಸ್ಸು. ಆದರೆ ಡಿಸೆಂಬರ್ ೧೮ ರಿಂದ ಫೆಬ್ರುವರಿ ೧೮ ರ ನಡುವೆ ದೊರೆವ ತೀರ್ಮಾನಗಳು ಕದಾಚಿತ್ ನಿಮಗೆ ವಿರುದ್ಧವಾಗಬಹುದು.

ಗರ್ಭವತಿಯರಿಗೆ ಮಾರ್ಚ್ ೭ ರ ಮೊದಲು ಏನೂ ತೊಂದರೆ ಇಲ್ಲದೆ ಹೆರಿಗೆ; ಆದರೆ ಹೆಣ್ಣು ಮಕ್ಕಳೇ ಹೆಚ್ಚಾಗಿ ಹುಟ್ಟಬಹುದು. ಜುಲೈ ೩೦ ರ ವರೆಗೆ ಅಲ್ಪಾಯಾಸದಿಂದ ಪ್ರಸೂತಿಯಾದರೂ ಅನೇಕರಿಗೆ ಪುತ್ರೋತ್ಸವ ಜುಲೈ ೩೦ ರ ನಂತರ ಹೆರಿಗೆ ಕಷ್ಟದಾಯಕ; ಮಕ್ಕಳೂ ಅಶಕ್ತರಿರಬಹುದು.

ಮಾರ್ಚ್ ೭ ರಿಂದ ಜುಲೈ ೩೦ ರ ವರೆಗೆ ಪರೀಕ್ಷೆ ಇದ್ದವರು ಬಹುಶಃ ಪಾಸಾಗುತ್ತಾರೆ. ಅದರಲ್ಲಿ ಮಾರ್ಚ ೨೭ ರಿಂದ ಎಪ್ರಿಲ್ ೯, ಮುಂದೆ ಎಪ್ರಿಲ್ ೨೭ ರಿಂದ ಜುಲೈ ೧ ರ ನಡುವೆ ಪರೀಕ್ಷೆ ಇದ್ದವರು ಪ್ರಥಮ ಇಲ್ಲವೆ ಕನಿಷ್ಠ ದ್ವಿತೀಯ ವರ್ಗದಲ್ಲಿ ಉತ್ತೀರ್ಣರಾಗುವರು

ಶುಭಂ ಭವತು.








ಜಿ.ಬಿ. ನಾಡಕರ್ಣಿ

"ಒಂದು ಸ್ವಲ್ಪ ಬಾ ಇಲ್ಲೆ"- ನಾನು ಅಸಹನೆಯಿಂದ ಮೂರನೆಯ ಸಲ ಅವಳನ್ನು ಕೂಗಿದೆ.

"ಏನದು ? ಒಳಗೆ ನನಗೆ ಕೆಲಸ ತುಂಬ್ಯಾವ" ಎಂದು ಸಿಡಿಮಿಡಿಗೊಳ್ಳುತ್ತ ಅವಳು ಒಳಗಿನಿಂದ ಬಂದಳು.

"ನಿನ್ನೆ ನಾ ಕವಿತೆ ಬರೆದು ಇಟ್ಟಿದ್ದೆನಲ್ಲ? ಎಲ್ಲಿದೆ ಅದು ? ಎಷ್ಟು ಹುಡಿಕಿದರೂ ಸಿಗವಲ್ಲದು."

"ನನಗರ ಏನು ಗೊತ್ತು?... ಹಾಂ! ಅಂದ್ಹಾಂಗ ನಿನ್ನೆ ನೀವಿಲ್ಲದಾಗ ಮನೆ ಸ್ವಚ್ಛ ಮಾಡಿದೆ. ಅದರಾಗ ನೀವು ಕವಿತಾ ಬರೆದ ಹಾಳೀನೂ ಹೋಯ್ತು ಅಂತ ಕಾಣಿಸ್ತದ."

"ಎಷ್ಟು ಸಹಜವಾಗಿ ಹೇಳ್ತೀಯಲ್ಲ? ಜನರ ಮನಸ್ಸನ್ನೇ ಸ್ವಚ್ಛ ಮಾಡುವಂಥಾ ಕವಿತಾ ಅದು! ಮನೆ ಸ್ವಚ್ಛ ಮಾಡುವಾಗ ಅದನ್ನೂ ಹರಿದು ಹಾಕಿದೆಯಾ?"

"ಅದಕ್ಕೇನು? ಇನ್ನೊಮ್ಮೆ ಬರೀರಿ- ಹಾಳೆಗೇನೂ ಕಡಿಮೆಯಿಲ್ಲ. ಮೇಲಾಗಿ ಇವತ್ತು ರವಿವಾರ ಅದ- ನಿಮಗೇನು ಇವತ್ತು ಕೆಲಸ ಇಲ್ಲ ಬೊಗಸೆ ಇಲ್ಲಾ..."

"ಏನs? ಕವನ ಅಂದರ ಏನಂತ ತಿಳಿದೀದಿ? ಅದೇನು ಬೇಕಾದಾಗ ಬರೀಲಿಕ್ಕೆ ಬರ್ತದ ಅಂತ ಮಾಡಿಯೇನು? ಎಂಥಾ ಸ್ಫೂರ್ತಿಯೊಳಗ ಬರೆದಿದ್ದೆ ಆ ಕವನ..."

"ನಾನಾದ್ರೂ ಏನು ಮಾಡಲಿ? ನಾ ನಿಮಗೆ ಎಷ್ಟೋ ಸಾರೆ ಹೇಳೇನಿ. ಒಂದು ಕಬ್ಬಿಣದ ಕಪಾಟು ತೊಗೊಂಡು ಬರ್ರಿ; ಅಂದರ ನೀವು ಬರೆದ ಕವಿತಾ ಪ್ರಿಂಟು ಮಾಡಿಸಿದ ಪುಸ್ತಕ ಎಲ್ಲಾ ಇಡಲಿಕ್ಕೆ ಬರ್ತದ..."

"ಅಲ್ಲದ ನಿನ್ನ ಹೊಸ ಸೀರೆ, ಮಂಗಳ ಕಸೂತಿ ಕೆಲಸ ಎಲ್ಲಾ ಇಡಲಿಕ್ಕೆ ಆಗ್ತದ ಅಂತೀ ಹೌದಲ್ಲೋ? ಆ ಕಪಾಟನೊಳಗೂ ಇವನ್ನೇ ತುಂಬಿ ನಾ ಬರೆದ ಸಾಹಿತ್ಯವೆಲ್ಲಾ ಇಡಲಿಕ್ಕೆ ಜಾಗಾ ಇಲ್ಲದ್ಹಂಗ ಮಾಡಬೇಕು ಅಂತೀ ಹೌದಲ್ಲೋ?"

"ನಾ ಹಾಂಗ ಯಾಕ ಮಾಡಲಿ? ನಿಮ್ಮ ಸಲುವಾಗೀನೇ ಒಂದು ಕಾಜಿನ ಕಪಾಟು ತೊಗೊಂಡು ಬರ್ರಿ; ಅಂದರ ಬಂದವರಿಗೆಲ್ಲಾ ಕಾಣೋ ಹಾಂಗ ನಿಮ್ಮ ಕವಿತೆ, ಕಥೆ ಪ್ರದರ್ಶನ ಮಾಡಲಿಕ್ಕೆ ನಿಮಗೇ ಅನುಕೂಲವಾಗುತ್ತದೆ." ಎಂದು ಸಿಟ್ಟಿನಿಂದಲೆ ಒಳಗೆ ಹೋಗಿಯೇ ಬಿಟ್ಟಳು.

ರವಿವಾರವಿದ್ದರೂ ಇಂದು ಆರಾಮವಿಲ್ಲ ಎಂದು ನಾನೆಂದುಕೊಂಡೆ. ಇಂದಿನ ಗ್ರಹಗತಿಯೇ ಸರಿಯಾಗಿಲ್ಲ ಎನಿಸಿತು. ಮತ್ತೆ, ಕಳೆದು ಹೋದ ಕವನದ ನೆನಪಾಯಿತು. ಕಳೆದುಹೋದ ವಸ್ತುಗಳು ಯಾವಾಗಲೂ ಎಷ್ಟು ಪ್ರಿಯ! ಇದ್ದಾಗ ಅವುಗಳ ಮಹತ್ವ ಎನಿಸುವುದಿಲ್ಲ. ಆ ರಾಮಚಂದ್ರ ಸೀತೆಯನ್ನು ಕಳೆದುಕೊಂಡು ವಿರಹದುಃಖ ಅನುಭವಿಸಿದ ಮಹಾಪ್ರಸಂಗದಿಂದ ಹಿಡಿದು ಇಂದಿನ ನನ್ನ ಕವಿತಾಪಹರಣದ ವರೆಗೂ ಕಳೆದುಕೊಂಡುದರ ನೋವು ಎಲ್ಲಾ ಒಂದೇ ಜಾತಿ ಎನಿಸಿತು ನನಗೆ. ಇನ್ನು ಕಳೆದು ಹೋಗಬಾರದು ಎಂದಿದ್ದರೆ ಕಪಾಟು- ಅದರಲ್ಲಿಯೂ ಕಾಜಿನ ಕಪಾಟು- ತರಲು ಇದೀಗ ಹೇಳಿದಳಲ್ಲವೆ ಅವಳು? ನನ್ನ ಬರವಣಿಗೆಯ ಪ್ರದರ್ಶನ ಮಾಡಲಿಕ್ಕೆ ಅನುಕೂಲ ಎಂದಳಲ್ಲವೆ? ಅವಳು ಹಾಗೆ ನುಡಿದಾಗ ನನಗೆ ಸ್ವಲ್ಪ ಕೋಪ

ಬಂದದ್ದು ನಿಜ; ಆದರೆ ಅವಳ ಮಾತಿನಲ್ಲಿ ಹುರುಳಿಲ್ಲವೆ ?

ಮೊನ್ನೆಯೆ ನನ್ನ ಕವಿಮಿತ್ರರು ಭಾರೀ ಚಹಾ ಪಾರ್ಟಿಗೆಂದು ಕರೆದು ನಮ್ಮೆಲ್ಲರೆದುರು ತಮ್ಮ ಆಧುನಿಕ ಅತಿ ನವ್ಯ ಕವಿತೆಗಳನ್ನು ಓದಿತೋರಿಸಲಿಲ್ಲವೆ ? ನಾಲಿಗೆಯ ಆಕರ್ಷಣೆ ಇಲ್ಲದಿದ್ದರೆ ಅವರ ಆ ದಿವ್ಯ ಕವಿತೆಗಳಿಗೆ ಕಿವಿಗೊಡುವವರು ಯಾರು ? ಅವರು ಕೊಟ್ಟ ಚಹದ ಬಿಸಿ ನಾಲಿಗೆಯಿಂದ ಆರುವಷ್ಟು ಹೊತ್ತಾದರೂ ದಾಕ್ಷಿಣ್ಯಕ್ಕೆ ಬಿದ್ದು ನಾವೆಲ್ಲ ಅವರ ಕವಿತೆ ಕೇಳುವ ನಾಟಕ ಮಾಡಲಿಲ್ಲವೆ ? ಇದೂ ಒಂದು ಪ್ರದರ್ಶನವಲ್ಲದೆ ಮತ್ತೇನು ?

ಸಾಹಿತ್ಯದ ರಾಜ್ಯದಲ್ಲಿಯೇ ಈ ಹಂಬಲವಿರುವಾಗ ವ್ಯಾಪಾರಿಗಳು ಇದನ್ನು ಅನುಸರಿಸಿದರೇನು ತಪ್ಪು ? ತಮ್ಮ ಅಂಗಡಿಯ ಸರಕುಗಳನ್ನೆಲ್ಲ ಹೇಗೆ ಆಕರ್ಷಕವಾಗಿ ಕಾಜಿನ ಕಪಾಟನಲ್ಲಿ ಇಟ್ಟಿರುತ್ತಾರೆ! ಅದರಲ್ಲಿಯೂ ಆಧುನಿಕ ಫ್ಯಾಶನ್ನಿನ "ಬ್ರಾಸಿಯರ್ಸ್" ಪ್ರದರ್ಶನ ಮಾಡಿರುವುದರ ರೀತಿಯನ್ನು ನೋಡಿದಾಗ ನನಗೆ ಮುಖ ಕೆಳಗೆ ಹಾಕುವಂತಾಯಿತು. ಆದರೆ ಅದೇ ಚಿಗುರುತ್ತಿರುವ ತಾರುಣ್ಯದ ಗಂಡು ಕಣ್ಣು ಅದನ್ನೇ ಕದ್ದು ಕದ್ದು ನೋಡುತ್ತಿರುವದಿಲ್ಲವೇ ?

ಮೊನ್ನೆ ಒಬ್ಬ ವಕೀಲರ ಮನೆಗೆ ಹೋಗಿದ್ದೆ. ಹಾಲಿನಲ್ಲಿ ಒಂದು ಕಾಜಿನ ಕಪಾಟು, ಎರಡು ಕಬ್ಬಿಣದ ಕಪಾಟು ಇದ್ದುವು. ಕಾಜಿನ ಕಪಾಟಿನ ತುಂಬೆಲ್ಲ ಕುರುಡನಿಗೂ ಕಾಣುವಂತೆ ಸಾಲು ಸಾಲಾಗಿ ಇಟ್ಟ ಪಕ್ಷಕಾರರ ಕೇಸ್ ಪೇಪರ್ಸ್! ಮುಚ್ಚಿ ಬೀಗ ಹಾಕಿದ ಕಬ್ಬಿಣದ ಕಪಾಟನಲ್ಲಿ ದಪ್ಪನ್ನ ಕಾಯ್ದೆ ಪುಸ್ತಕಗಳನ್ನಿಟ್ಟಿದ್ದಾರೆ ಎಂದು ಅವರ ಕಾರಕೂನ ನನಗೆ ತಿಳಿಸಿದ. ಇಷ್ಟು ಸುಪ್ರಸಿದ್ಧ ವಕೀಲರೂ ಈ ಕಾಜಿನ ಕಪಾಟಿನ ವ್ಯಾಮೋಹಕ್ಕೆ ಬಿದ್ದರಲ್ಲ! ಅವರ ಕಾಯದೆ ಜ್ಞಾನ, ವ್ಯವಹಾರ ಕುಶಲತೆ, ವಾದ ಚಾತುರ್ಯಗಳೆಲ್ಲ ಅವರಿಗೆ ಸಾಕಷ್ಟು ಪ್ರಸಿದ್ಧಿ ತಂದುಕೊಟ್ಟಿದ್ದರೂ ಮನೆಯಲ್ಲಿ ಎಲ್ಲಾ ಕೇಸ್ ಪೇಪರ್ಸ್ ಕಬ್ಬಿಣದ ಭದ್ರ ಕಪಾಟನಲ್ಲಿ ಮುಚ್ಚಿಡುವ ವೈರಾಗ್ಯ ವಕೀಲರಲ್ಲಿ ಕಾಣದೆ ಹೋದದ್ದು ಆಶ್ಚರ್ಯವೇನಲ್ಲ. "ಅವರೇನು ಸಂನ್ಯಾಸಿಗಳಲ್ಲವಲ್ಲ!" ಎಂಬ ನನ್ನ ಮಡದಿಯ ಭಾಷ್ಯಕ್ಕೆ ನಾನು ಹಿಂದೆ ತಲೆದೂಗಿದ್ದೆ.

ಕೆಲವು ದಿನಗಳ ಹಿಂದೆ ನಮ್ಮ ಒಬ್ಬ ತರುಣ ಮಿತ್ರರ ಸಲುವಾಗಿ ಕನ್ಯೆಯನ್ನು ನೋಡಲು ಹೋಗಿದ್ದೆವು. ಕಪಿ [ಎಂದರೆ ಕನ್ಯಾಪಿತೃ] ನಮ್ಮನ್ನು ತಮ್ಮ ಮೂವತ್ತೆರಡೂ ಹಲ್ಲು ಕಾಣುವಂತಹ ನಗೆಯ ಸೋಗಿನಲ್ಲಿ ನಮಗೆ ಸ್ವಾಗತ ನೀಡಿದರು. ಸರಿ; ಮೊದಲು ಲೋಕಾಭಿರಾಮವಾಗಿ ಮಾತುಕತೆಯಾಯಿತು. ಇಂದಿನ ರಾಜಕೀಯದಿಂದ ಹಿಡಿದು UNOದ ಧೋರಣೆಯವರೆಗೂ ಮಾತಿನ ವ್ಯಾಪ್ತಿ ಬೆಳೆಯಿತು. ಇಂಥ ಪ್ರಸಂಗದಲ್ಲಿ ಇಷ್ಟೆಲ್ಲ ಮಾತಾಡುತ್ತಿದ್ದರೂ ಯಾರಿಗೂ ಸಂಭಾಷಣೆಯಲ್ಲಿ ಆಸ್ಥೆಯಿರುವುದಿಲ್ಲವೆಂಬುದು ನಿಮಗೂ ಗೊತ್ತಿದೆಯಲ್ಲವೆ? ಚಹಾದ ಕಪ್ಪುಬಸಿಯ ಕಲಕಲರವವು ನಮ್ಮ ಸಂಭಾಷಣೆಗೆ ಕಡಿವಾಣ ಹಾಕಿತು. ಸರಿ; ಬೇಸನ್ ಉಂಡಿ, ಬಿಸಿ, ಉಪ್ಪಿಟ್ಟು, ಬಾಳೆ ಹಣ್ಣು, ಚಹಾ ಬಂದುವು. "ಮಿಷ್ಟಾನ್ನಂ ಇತರೇ ಜನಾಃ" ಎಂಬ ವರ್ಗದ ನಾವೆಲ್ಲ ಪ್ಲೇಟುಗಳನ್ನು ಖಾಲೀ ಮಾಡಿದೆವು. ತಾಂಬೂಲ ಸೇವನೆ ಮಾಡುತ್ತಿರುವಾಗಲೇ ಹಿರಿಯರೊಬ್ಬರು–"ಇನ್ನು ಕನ್ಯಾ ಕರೆದುಕೊಂಡು ಬರ್ರಿ" ಎಂದರು. ಹಿಂದಿನ ಕಾಲದ ಸ್ವಯಂವರದ ಕನ್ಯೆ ಹೇಗೆ ಸ್ವಯಂವರ ಮಂಟಪವನ್ನು ಪ್ರವೇಶಿಸುತ್ತಿದ್ದಳೋ ಏನೋ! ಆದರೆ ಈ ಸುಶಿಕ್ಷಿತ ಕನ್ಯೆ ಧೈರ್ಯದಿಂದಲೇ ಒಳಗೆ ಬಂದಳು; ಹಿರಿಯರಿಗೆ ನಮಸ್ಕರಿಸಿದಳು. "ತಂಗೀ, ಹಾಡಲಿಕ್ಕೇನಾದರೂ ಬರ್ತದೇನು?" ಎಂದು ಹಿರಿಯರೊಬ್ಬರು ಪ್ರಶ್ನಿಸಿದರು. ಅವಳ ಬದಲು ಕನ್ಯಾಪಿತೃ ಉತ್ತರವಿತ್ತರು– "ಸಂಗೀತಕ್ಕಿಂತ ಅವಳ ಕಸೂತಿ ಕೆಲಸ, ಗೊಂಬೆಯ ತಯಾರಿಕೆ ನೋಡುವಂಥವಿವೆ" ಎಂದು ಹೇಳಿ ಕನ್ಯೆ ಮತ್ತೊಮ್ಮೆ ನಮಸ್ಕರಿಸಿ ಒಳಗೆ ಹೋದ ಮೇಲೆ ನಮ್ಮನ್ನು ಪಕ್ಕದ ಕೋಣೆಗೆ ಕರೆದೊಯ್ದರು ಅಲ್ಲಿ ಎರಡು ದೊಡ್ಡ ಕಾಜಿನ ಕಪಾಟುಗಳಲ್ಲಿ ಆಕರ್ಷಕವಾದ ಕಸೂತಿ ಕೆಲಸಗಳೂ, ಬಟ್ಟೆಯ ಬೊಂಬೆಗಳೂ ಇದ್ದುವು. "ನೋಡ್ರಿ, ಇವೆಲ್ಲಾ ನಮ್ಮ ಸುಶೀಲಾ ತಯಾರಿಸಿದ ಕಲಾಕೃತಿ" ಎಂದು ಅಭಿಮಾನದಿಂದ ತೋರಿಸಿದರು ಅಷ್ಟರಲ್ಲಿಯೇ ಅವರ ಕಿರಿಯ ಮಗ ಅಶೋಕ ನಡುವೆಯೇ ಬಾಯಿ ಹಾಕಿ– "ಎಲ್ಲಾ ಅಲ್ಲವಪ್ಪ, ಈ ಕಪಾಟನೊಳಗಿನವು ಸುಶೀಲಕ್ಕನ ಗೆಳತಿ ತಯಾರಿಸಿದ್ದುವು ಅಲ್ಲವೇನಪ್ಪ?" ಎಂದು ನುಡಿದ "ಛೇ! ಸಣ್ಣ ಹುಡುಗ –ನಿನಗೇನು ತಿಳೀತದೋ! ದೊಡ್ಡವರು ಇದ್ದಾಗ ಸಣ್ಣ ಹುಡುಗರು ಮಾತಾಡ





ನನ್ನ ಡ್ಯೂಟಿ ರಾತ್ರಿ ೧೦-೩೦ ರಿಂದ ಬೆಳಿಗ್ಗೆ ೬-೩೦ರ ವರೆಗೆ

ಬಾರದು" ಎಂದು ಅವನನ್ನು ಜಬರಿಸಿದರು. ಅಂತೂ ಕನ್ಯೆಯು ತಯಾರಿಸಿದ ಕಲಾಕೃತಿಗಳೋ, ಅವಳ ಗೆಳತಿಯುವೋ, ಅಥವಾ ಗ್ರಾಮೋದ್ಯೋಗದಿಂದ ಕೊಂಡುತಂದವುಗಳೋ ಅಂತೂ ಆಕರ್ಷಕ ವಸ್ತುಗಳಿಂದ ತುಂಬಿದ ಆ ಕಾಜಿನ ಕಪಾಟುಗಳು ರಸಿಕ ವರನ ಕಣ್ಣನ್ನೂ ಮನವನ್ನೂ ತುಂಬಿದುವು. ಅಂದಿನದು ಕನ್ಯಾ ಪ್ರದರ್ಶನವೋ ಅಥವಾ ಕಾಜಿನ ಕಪಾಟನ ಪ್ರದರ್ಶನವೋ ಎಂಬುದು ಸಂದಿಗ್ಧವಾದರೂ ಅದರಿಂದಲೇ ಕನ್ಯಾ ಪಾಸಾಗಿ "ಶುಭಸ್ಯಶೀಘ್ರಂ" ಎಂಬಂತೆ ಮದುವೆಗೆ ಮಾರ್ಗವು ಸುಗಮವಾಯಿತು.

ಸಿದ್ಧಿಯ ಯುಗ ಹಿಂದಾಗಿ ಈಗ ಬಂದಿರುವುದು ಪ್ರಸಿದ್ಧಿಯ ಯುಗ. ಯೋಗ್ಯತೆ ಇದ್ದರೂ ಅದು ಜನರಿಗೆ ಗೊತ್ತಾಗಬೇಕು; ಮೇಲಾಗಿ ಇದು "ಕಾಂಪಿಟಿಶನ್" ಯುಗ ಸ್ವಾಮಿ. ದಂತಮಂಜನದಿಂದ ಪ್ರಾರಂಭಿಸಿ ಕವಿತೆಯ ಸಂಗ್ರಹದ ವರೆಗೂ "ನಮ್ಮದೇ ಶ್ರೇಷ್ಠ" ಎಂಬ ಸೊಲ್ಲು ನಿತ್ಯದ ವರ್ತಮಾನಪತ್ರಿಕೆಯಿಂದ ಹಿಡಿದು, ಕಣ್ಣು ತುಂಬಿಸುವ ವ್ಯಾಪಾರಿಯ ಕಾಜಿನ ಕಪಾಟನ ವರೆಗೂ ಇದ್ದೇ ಇದೆ

ಹಾಗೆಯೇ ಸಾಹಿತಿ ಎಂದುಕೊಂಡ ನಾನು ನನ್ನ ಮುದ್ರಿತ ಕವಿತಾಸಂಗ್ರಹ, ಕಥೆ, ಕಾದಂಬರಿ ಇತ್ಯಾದಿ ಕಾಜಿನ ಕಪಾಟನಲ್ಲಿ ಅಂದವಾಗಿ ಸಾಲಾಗಿ ಇರಿಸಿದರೆ ಸಹೃದಯರಾದ ನೀವು ಸಹಾನುಭೂತಿಯಿಂದ ಅದನ್ನು ಕಾಣುತ್ತೀರೆಂದು ನನ್ನ ಭಾವನೆ. ನೀವು ನಮ್ಮ ಮನೆಗೆ ಬಂದು ಅದನ್ನು ಮೆಚ್ಚಿಗೆಯಿಂದ ನೋಡುತ್ತಿರುವಾಗ, ನನ್ನ ಬಡ ಹೃದಯಕ್ಕೆ ಉಂಟಾಗುವ ತಂಪು ಅಷ್ಟಿಷ್ಟಲ್ಲ.

ಒಂದು ಸಂಜೆ ಹೊರಗೆ ತುಂಬಾ ಚಳಿಯಿತ್ತು ನಾನು ಉಣ್ಣೆಯ ಕೋಟು. ಉಲನ್ ಸ್ವೆಟರ್ ಧರಿಸಿ ಹೊರಬಿದ್ದೆ. ದಾರಿಯಲ್ಲಿ ಓರ್ವ ಯುವತಿ ಒಳ್ಳೇ ವೈಯಾರದಿಂದ ಹೊರಟಿದ್ದಳು. ಬೇಡವೆಂದರೂ ನನ್ನ ಕಣ್ಣುಗಳು ಆ ಕಡೆಗೇ ತಿರುಗಿದವು. ಅವಳು ಉಟ್ಟದ್ದು ನೈಲಾನ್ ಸೀರೆ, ತೊಟ್ಟದ್ದು ಅದಕ್ಕೂ ಪಾರದರ್ಶಕ ಬಟ್ಟೆಯ ಬ್ಲೌಜು! ಬೆನ್ನ ಮೇಲಿನ ಎಷ್ಟೋ ಭಾಗ ಬರಿದಾಗಿ ಅನಾಚ್ಛಾದಿತವಾಗಿಯೇ ಇತ್ತು ಅದೆಲ್ಲ "ಲೇಟೆಸ್ಟ್ ಫ್ಯಾಶನ್"! ಕೊರೆಯುವ ಚಳಿಯನ್ನೂ ಆಕೆ ಸಹಿಸಬಲ್ಲಳು; ಆದರೆ ಈ ಫ್ಯಾಶನ್ ಬಿಡಲಾರಳು. ನಾನು ಇನ್ನೂ ಮುಂದೆ ನಡೆದಾಗ ಇಬ್ಬರು ಯುವಕರು– ಕಾಲೇಜ್ ವಿದ್ಯಾರ್ಥಿ ಎಂದು ಕಾಣುತ್ತದೆ— ಚಳಿಯನ್ನು ಬೈಯುತ್ತ ಹೊಟೆಲೊಂದನ್ನು ಪ್ರವೇಶಿಸಿದರು. ಹೊರಗೆ ಚಳಿ ಸಾಕಷ್ಟಿದ್ದರೂ ಅವರಿಗೆ ಮೈ ಮೇಲೆ ಕೋಟು ಇಲ್ಲ; ಟೆರಿಲೀನ್ ಬುಶ್ ಕೋಟು ಧರಿಸಿದ್ದರು. ಎದೆ ಕೈಗಳಿಗೆ ಚಳಿ ಹತ್ತುತ್ತಿದ್ದರೂ ಫ್ಯಾಶನ್ ಬಿಡುವುದೆಂತು? "ಬಟ್ಟೆ ಇರುವುದು ನಮ್ಮ ಶರೀರ ರಕ್ಷಣೆಗೆ ಮೈಮುಚ್ಚುವುದಕ್ಕೆ" ಎಂದು ಇಂದು ಯಾರಾದರೂ ಅಂದರೆ ಅವರನ್ನು "ಮೆಂಟಲ್ ಹಾಸ್ಪಿಟಲ್"ಗೆ ಕಳಿಸದಿದ್ದರೆ ಅವರ ಪುಣ್ಯ. ಏಕೆಂದರೆ ಬಟ್ಟೆ ಇಂದು ಮೈ ಮುಚ್ಚುವುದಕ್ಕೆ, ರಕ್ಷಣೆಗಾಗಿ ಅಲ್ಲ; ಅಂಗಾಂಗಗಳ ಸೌಷ್ಠವವನ್ನು ಮತ್ತಿಷ್ಟು ಯಶಸ್ವಿಯಾಗಿ ಪ್ರದರ್ಶಿಸುವುದಕ್ಕೆ. ನಾಗರಿಕತೆ– ಸಭ್ಯತೆಗಳನ್ನು ನಾವು ಇಂದು ಬಿಟ್ಟು ಬಿಡಲು ಸಿದ್ಧರಿಲ್ಲ; ಅದರ ಜೊತೆಗೆ ನಮ್ಮ "ಆದಿಮಾನವ" ಪ್ರವೃತ್ತಿಗಳನ್ನು ತೊರೆಯಲೂ

ಹೆಸರು ಕೇಳಿ....



ಬೀತು ನನ್ನಯ ಹೆಸರು
ನಿನ್ನ ನಾಲಗೆಯ ಮೇಲೆ
ಹೂವಾಗಿ ಅರಳಿತು ಲಜ್ಜೆ
ಮೈ-ಮನ ತುಂಬಿ !

—ಪಂಚಾಕ್ಷರಿ ಹಿರೇಮಠ

ಯೋಗ್ಯತೆ ಹೊಂದಿಲ್ಲ. ಇವೆರಡೂ ತೃಪ್ತಿ ಹೊಂದಬೇಕಾದರೆ — ತೆಳ್ಳಗಿನ ಪಾರದರ್ಶಕ ಬಟ್ಟೆ, ಮೈಮಾಟಕ್ಕೆ ಹೊಂದಿಕೊಂಡು ಉಡುವ ರೀತಿ ಇವು ಅನಿವಾರ್ಯವಲ್ಲವೆ? ಈ ಬಗೆಯ ವೇಷ-ಭೂಷಣವೂ ಒಂದು ಬಗೆಯ ಕಾಜಿನ ಕಪಾಟು ಅಲ್ಲವೆ? ಏಕೆಂದರೆ, ರಕ್ಷಣೆಯ ಸೋಗು; ಪ್ರದರ್ಶನದ ಹಂಬಲ-ಇವೆರಡೂ ತತ್ತ್ವಗಳ ಮೇಳವೇ ಅಲ್ಲವೆ ಕಾಜಿನ ಕಪಾಟು!

ಇಷ್ಟೆಲ್ಲ ಅನುಭವ ಪಡೆದ ಮೇಲೆ ನಾನು ಕಾಜಿನ ಕಪಾಟು ಕೊಂಡುತಂದೆ ಎಂದು ಬೇರೆ ಹೇಳಬೇಕೆ? ನೀವು ನಮ್ಮ ಮನೆಗೆ ಬಂದಾಗ ಹಾಲಿನಲ್ಲಿ ಮೊದಲು ಕಾಣುವುದು ಕಾಜಿನ ಕಪಾಟು. ಅದರ ಮೊದಲನೆಯ ಖಾನೆಯಲ್ಲಿ ಪ್ರಾಪ್ತ ವಯಸ್ಕಳಾದ ನಮ್ಮ ಚಿ|| ಕು|| ಸೌ|| ಕಾ|| ಸುಪುತ್ರಿಯ ಕಸೂತಿ ಕಲಾಕೃತಿಗಳು! (ಅವು ಖುದ್ದಾಗಿ ಅವಳೇ ಹಾಕಿದ್ದು ಮತ್ತೆ!) ಎರಡನೆಯ ಭಾಗದಲ್ಲಿ ನಮ್ಮ ಮನೆಯವರು ನನಗಾಗಿ ಎಂದು ಹಾಕಿದ ಉಲನ್ ಸ್ವೆಟರ್, ಚಿರಂಜೀವನ ಉಲನ್ ಟೊಪ್ಪಿಗೆ, ಕಾಲುಚೀಲ ಇತ್ಯಾದಿ; ಮೂರನೆಯ ಖಾನೆಯಲ್ಲಿ ತೀರ ಇತ್ತೀಚಿಗೆ ಪ್ರಕಟವಾದ ನನ್ನ ಕವಿತಾಸಂಗ್ರಹ, ಹರಟೆ ಸಂಗ್ರಹ ಇತ್ಯಾದಿ!





# ಬಾಳಬೆಳಕು ನಂದಲಿಲ್ಲ





ಅವಳು ವಿಧವೆ.

ಮುತ್ತೈದೆ ಸೌಭಾಗ್ಯದ ಗುರುತಾದ ಕುಂಕುಮವಿಲ್ಲದ ಬೋಳು ಹಣೆ, ಬಣ್ಣ ಬಣ್ಣದ ಗಾಜಿನ ಬಳೆಗಳಿಲ್ಲದ ಕೈ, ಹೂವಿಲ್ಲದ ಕೂದಲು ಗಂಟು, ರಕ್ತದ ಉಂಡೆಗಳಂತಿದ್ದ ಕಣ್ಣುಗಳು... ತೋಟದಲ್ಲಿ ಒಂಟಿಯಾಗಿ ಕುಳಿತ ಅವಳಿಗೆ ಪ್ರಪಂಚವೇ ಶೂನ್ಯವಾಗಿತ್ತು.

ಬೆಳಕು ಚೆನ್ನಾಗಿ ಹರಿದಿದ್ದರೂ ಆಗಸದ ತುಂಬ ಕಪ್ಪು ಮೋಡ. ಹಿಂದಿನ ದಿನ ಧಾರಾಕಾರವಾಗಿ ಸುರಿದ ಮಳೆಯ ಪರಿಣಾಮವಾಗಿ ಗಿಡಮರಗಳ ಎಲೆಗಳಿಂದ, ನೀರು ಇನ್ನೂ ತೊಟ್ಟಿಕ್ಕುತ್ತಿತ್ತು ಗಿಡಮರದ ಬುಡಗಳ ಸುತ್ತಲೂ ವರ್ತುಲಾಕಾರದಲ್ಲಿ ಬಳಸಿ ನಿಂತ ಕೊಚ್ಚೆ ನೀರು. ಮರದ ಕೆಳಗೆ ಬಿದ್ದಿದ್ದ ಎಲೆಗಳೂ ಸಹ ಸಂಭ್ರಮದಿಂದ ಶಬ್ದ ಮಾಡುವ ಶಕ್ತಿಯಿಲ್ಲದೆ ಕೆಸರಿನಲ್ಲಿ ಸಿಕ್ಕಿಕೊಂಡು ತಮ್ಮ ಸತ್ತ್ವವನ್ನು ಕಳೆದುಕೊಂಡಿದ್ದವು.

ನಿರ್ಜೀವ ಮೂರ್ತಿಯಂತೆ ಕುಳಿತಿದ್ದ ಜಯ ಆ ಜಡ ದೃಶ್ಯದತ್ತ ದೃಷ್ಟಿ ಹರಿಸಿದಳು ಕೆಸರು ಭೂಮಿಯಲ್ಲಿ ಯಾವುದೋ ಚೇತನ ಐಕ್ಯವಾಗಿರುವಂತೆ ಅವಳಿಗೆ ತೋರಿತು. ಜಡತ್ವ, ಬೀಸುವ ಗಾಳಿಯಲ್ಲೂ ಬಿಂಬಿಸಿತ್ತು. ಎಲ್ಲೆಲ್ಲಿ ನೋಡಿದರೂ ಪರಾಭವತೆ ಅವಳ ಕಡೆ ಹಲ್ಲು ಕಿರಿದು ನಕ್ಕಂತಾಗುತ್ತಿತ್ತು

'ನೀನು ಸೋತವಳು. ಶಕ್ತಿಗುಂದಿದವಳು, ಒಬ್ಬಂಟಿಗಳು, ನಿಸ್ಸಹಾಯಕಳು' ಎಂದು ಯಾರೋ ನಕ್ಕಂತಾಯಿತು ಅವಳ ಮನ ನಡುಗಿತು... ಮದುವೆಯಾಗಿ ಎರಡು ವರುಷವಾದರೂ ಜಯ ಗಂಡನೊಡನೆ ಸಂಸಾರ ಹೂಡಿರಲಿಲ್ಲ. ಕಾರಣ ರಾಜೀವನಿನ್ನೂ ಮದ್ರಾಸಿನಲ್ಲಿ ಓದುತ್ತಿದ್ದ. ಕಾರಿನ ಅಪಘಾತದಲ್ಲಿ ಪೆಟ್ಟು ತಿಂದು ಆಸ್ಪತ್ರೆ ಸೇರಿದ ಸುದ್ದಿ ತಿಳಿದ ಜಯ ತಂದೆಯೊಡನೆ ರೈಲು ಹತ್ತಿದಳು. ರೈಲಿನಲ್ಲಿ ಪ್ರಯಾಣ ಮಾಡುವಾಗಲೆಲ್ಲಾ ಅವಳಿಗೆ ಆತನದೇ ಧ್ಯಾನ. ಅವಳ ಭಾಗಕ್ಕೆ ಅವನೇ ಸರ್ವಸ್ವ.

'ಮೃತ್ಯುವಿನೊಡನೆ ಹೋರಾಡುವ ಗಂಡ ಸೋಲಬಾರದು. ಹೇಗಾದರೂ ಮಾಡಿ ಸಾವಿನ ದವಡೆಯಿಂದ ಗಂಡನನ್ನು ಉಳಿಸಿಕೊಳ್ಳಬೇಕು' ಎಂದು ಜಯ ಧಾವಿಸಿದಳು ಮದ್ರಾಸಿಗೆ ಅವನಿಗಾಗಿ ತನ್ನ ಪ್ರಾಣ ಕೊಡಲೂ ಸಿದ್ಧಳಾಗಿದ್ದಳು. ಆದರೆ ಯಮನಿಗೆ ರಾಜೀವನ ಪ್ರಾಣವೇ ಬೇಕಿದ್ದಲ್ಲಿ? 'ಅಯ್ಯೋ ದೇವರೆ! ಇವರನ್ನು ಬದುಕಿಸು, ನನಗಾಗಿ ಉಳಿಸಿಕೊಂಡು' ಸಾವಿನ ದವಡೆಯಲ್ಲಿದ್ದ ಗಂಡನನ್ನು ನೋಡಿ ಜಯ ಅಧೀರಳಾಗಿ ದೇವರಲ್ಲಿ ಮೊರೆಯಿಟ್ಟಳು.

"ಜಯಾ...ಜಯಾ...ಜಯಾ..." ಪ್ರಜ್ಞೆ ತಪ್ಪುವ ವರೆಗೂ ರಾಜೀವ ಕೂಗಿಕೊಳ್ಳುತ್ತಲೇ ಇದ್ದ.

ಜಯ ತಲೆ ಎತ್ತಿ ನೋಡಿದಳು ಅವನ ಮುಖ! ಅಬ್ಬಾ, ಎಷ್ಟು ಭಯಂಕರ!

ಸುಂದರ ಮುಖ, ನಗು ಮುಖ. ಸೌಮ್ಯ ಮುಖ ಎಂದೆಲ್ಲಾ ಆ ಮುಖವನ್ನು ಕಂಡ ಮೊದಲನೆಯ ದಿನವೇ ಅವಳು ಮನಸಾರೆ ಮೆಚ್ಚಿಕೊಂಡಿದ್ದ ಆ ಮುಖ ಈಗ ನೋಡುವುದಕ್ಕೇ ಭಯಂಕರ! ನೋವಿನ ಅನುಭವವನ್ನುಂಡು ವಿಕಾರ! ರಾಜೀವನ ವಿಕಾರ ಮುಖ ನೋಡಿ ಹೆದರಿಕೆಯಿಂದ ನಡುಗಿದಳು. ಜಯಾ. ರಾಜೀವ ಅನುಭವಿಸುತ್ತಿದ್ದ ನೋವು, ಹಿಂಸೆಯೆಲ್ಲ ಅವನ ಮುಖದಲ್ಲಿ ಪ್ರತಿಬಿಂಬಿತವಾಗಿದ್ದವು.

ಬತ್ತಿದ ಕೆನ್ನೆ, ಹುಬ್ಬು ಒಡೆದು ರಕ್ತ ಸುರಿಯುತ್ತಿತ್ತು. ಗಾಜಿನ ಚೂರು ತಲೆ ತುಂಬ ನೆಟ್ಟುಕೊಂಡಿದ್ದವು ನಾಲಿಗೆ ಬಾಯಾರಿಕೆಯಿಂದ ಆಚೆಗೆ ನೀಡಿಕೊಂಡಿತ್ತು ಸಾವಿನ ನೋವು, ಯಾತನೆ ಅಲ್ಲಿತ್ತು. ಅವನ ನೋವನ್ನು ಅವಳು ಅರ್ಥಮಾಡಿಕೊಂಡರೂ ಅದನ್ನು ಹೋಗಲಾಡಿಸುವ ಅಥವಾ ತಾನು ತೆಗೆದುಕೊಳ್ಳುವ ಶಕ್ತಿ ತನಗಿಲ್ಲ. ಗಂಡನ ಯಾತನೆ ಕಂಡು ಜಯಳ ಹೃದಯ ಹಲುಬಿತು.

ತಂದೆ ಮಗಳು ಸಮೀಪದಲ್ಲೇ ನಿಂತು ರಾಜೀವನ ಅಂತ್ಯವನ್ನೇ ನೋಡುತ್ತಿದ್ದರು. ಆಗ ಬೆಳಕು ಹರಿದರೂ ರಾತ್ರಿ ಪ್ರಾರಂಭವಾದ ಮಳೆ ಇನ್ನೂ ನಿಂತಿರಲಿಲ್ಲ. ಆಸ್ಪತ್ರೆಯ ಹೊರಗಿದ್ದ ದೊಡ್ಡ ಮರದ ಮೇಲಿದ್ದ ಪಕ್ಷಿಗಳು ಕೂಗಿಕೊಳ್ಳುತ್ತಾ ಸಂಭ್ರಮದಿಂದ ಗೂಡು ಬಿಟ್ಟು ಹಾರಿದ ಶಬ್ದ ಆಸ್ಪತ್ರೆಯ ವಾತಾವರಣವನ್ನು ಭೇದಿಸಿತು.

ರಾಜೀವ ನಿಧಾನವಾಗಿ ಕಣ್ಣುಗಳನ್ನು ತೆರೆದ. ಸಾಯುವುದರಲ್ಲಿದ್ದ ಆತನ ಕಣ್ಣಿನ ಬಣ್ಣ ಇಂತಹುದೇ ಎಂದು ನಿರ್ದಿಷ್ಟವಾಗಿ ಹೇಳುವುದೇ ಅಸಾಧ್ಯವಾಗಿತ್ತು. ಅಸ್ಥಿಪಂಜರದಷ್ಟೇ ಕ್ಷೀಣವಾಗಿತ್ತು ಅವನ ದೇಹ. ಒಂದು ವಾರದ ವರೆಗೂ ರಾಜೀವ ಸಾವಿನೊಡನೆ ಹೋರಾಟ ನಡೆಸಿದ. ಕೊನೆಗೆ ಸಾವು ಗೆದ್ದಿತು.

ಜಯಾಳ ಮೊರೆ ಭಗವಂತನ ಕಿವಿ ಮುಟ್ಟಲಿಲ್ಲ. ರಾಜೀವ ಇನ್ನಿಲ್ಲ,ಎಲ್ಲವೂ ಶೂನ್ಯ ಶೂನ್ಯ. ಮತ್ತೆ ಗಿಡಮರಗಳು ಅಣಕಿಸಿದಂತಾಯಿತು.

ಗಂಡನನ್ನು ಮಣ್ಣು ಮಾಡಿ ಊರಿಗೆ ತಂದೆಯೊಡನೆ ಹಿಂತಿರುಗಿದಾಗ, ಜಯ ವಿಧವೆ.

ರೇಲ್ವೆ ನಿಲ್ದಾಣದಲ್ಲಿ ಹೆಂಗಸರು, ಮಕ್ಕಳು ಸಾಮಾನುಗಳನ್ನು ಹೊತ್ತುಕೊಂಡು ಅತ್ತಿಂದಿತ್ತ ಓಡಾಡುತ್ತಿದ್ದರು ಗಂಡನ ಮನೆಗೆ ಮೊದಲನೆಯ ಸಲ ಹೊರಟ ನವವಧು ಒಬ್ಬಳು ತಾಯಿಯ ತೊಡೆಯ ಮೇಲೆ ತಲೆಯಿಟ್ಟು ಬಿಕ್ಕಿ ಬಿಕ್ಕಿ ಅಳುತ್ತಿದ್ದಳು.

'ಗಂಡನನ್ನು ಕೂಡಿಕೊಳ್ಳುವುದಕ್ಕೂ ಅಳು... ಕಳೆದುಕೊಂಡಾಗಲೂ ಅಳು...'

ಜಯಳ ನೊಂದ ಮನಸ್ಸು ವ್ಯಂಗ್ಯವಾಗಿ ನುಡಿಯಿತು

ಕೆಲವರು ನಗುತ್ತಿದ್ದರು, ಹಲವರು ಹರಟುತ್ತಿದ್ದರು.

ಅವರೆಲ್ಲ ಎಷ್ಟು ಸಂತೋಷದಿಂದ, ಎಷ್ಟು ನಿರ್ಲಕ್ಷ್ಯಭಾವದಿಂದಿದ್ದಾರೆ!

ಅವಳೂ ಅದೇ ರೀತಿ, ಅದೇ ಉತ್ಸಾಹ, ಶಕ್ತಿ, ಅದೇ ಗುರಿಯಿಂದ ಬದುಕಿನಲ್ಲಿ ಭರವಸೆಯಿಟ್ಟು ಜೀವನದಲ್ಲಿ ಹೆಜ್ಜೆ ಹಾಕಲು ಹಿಂದೊಮ್ಮೆ ಹೊರಟಿದ್ದಳು. ಆಗಲೂ ಅತ್ತಿದ್ದಳು, ಈಗಲೂ ಅಳುತ್ತಿದ್ದಾಳೆ

"ನಿನ್ನ ಅಳಲು ನಾನು ಅರ್ಥ ಮಾಡಿಕೊಳ್ಳಬಲ್ಲೆ ಜಯ. ತಾಯಿಯಿಲ್ಲದ ಮಗುವೆಂದು ಅಕ್ಕರೆಯಿಂದ ಸಾಕಿದೆ ವಿದ್ಯಾವಂತ,

ಸುಸಂಸ್ಕೃತ ಯುವಕನಿಗೆ ಧಾರೆಯೆರೆದೆ. ಆದರೆ ಈ ರೀತಿಯಾಗುವುದೆಂದು ಯಾರು ತಿಳಿದಿದ್ದರು?...” ತಂದೆ ಕಣ್ಣೀರು ಸುರಿಸಿದರು.

ಅವಳು ಹುಚ್ಚಿಯಂತೆ ಓಡಾಡಿದಳು. ಎಲ್ಲಿ ಹೋದರೂ ಶಾಂತಿಯ ನೆಲೆ ಸಿಕ್ಕಲಿಲ್ಲ.

ಈ ಕತ್ತಲಿನ ಪ್ರಪಂಚದಿಂದ ತನಗೆ ಬಿಡುಗಡೆಯಿಲ್ಲವೇ? ಎಲ್ಲಿಗಾದರೂ ಓಡಿಹೋಗಬೇಕು. ಎಲ್ಲಿಗೆ? ಆಕಾಶದಲ್ಲಿ ಹೊಳೆಯುವ ನಕ್ಷತ್ರ ಭೂಮಿಗೆ ಬಿದ್ದಂತೆ ಅವಳು ಭೂಮಿಯ ಹೃದಯದಲ್ಲಿ ಅಪರಿಚಿತಳಾಗಿ ಒಬ್ಬಂಟಿಗಳಾಗಿ ನರಳುತ್ತಿದ್ದಳು. ಎದೆ ಅದುಮಿ ಹಿಡಿದು ತಲೆ ಎತ್ತಿ ನೋಡಿದಳು. ಚಂದ್ರ ಕ್ಷೀಣವಾದ ಬೆಳಕನ್ನು ಜಗತ್ತಿಗೆ ನೀಡಲು ಪ್ರಯತ್ನಿಸುತ್ತಿದ್ದ. ಚಂದ್ರನೂ ಅವಳ ನೊಂದ ಮನಸ್ಸಿಗೆ ಹಿತ ಕೊಡಲಿಲ್ಲ. ದೇಹದಲ್ಲಿ ಶಕ್ತಿಯಿದ್ದರೂ ಆತ್ಮ

# ಆರ್ಯಾಂಬ ಪಟ್ಟಾಭಿ

ನಿರ್ಜೀವವಾಗಿತ್ತು. ಬಲಹೀನವಾಗಿತ್ತು, ಗೆದ್ದಲು ಹಿಡಿದ ಮರದಂತೆ ಪೊಳ್ಳಾಗಿತ್ತು. ನಿಶ್ಶಬ್ದವಾಗಿ ಅವಳ ಅಂತರಂಗ ಕುದಿಯಿತು. ಈ ನೀರಸ ದುಃಖಮಯ ಜಗತ್ತಿನಿಂದ ಪಾರಾಗಲು ದಾರಿಯೆ ಇಲ್ಲವೆ? ಅವಳ ಮನ ದಾರಿಗಾಣದೆ ವಿಚಾರಿಸಿತು. ನದಿಯಲ್ಲಿ ಹಾರಿಕೊಂಡು ಈ ಪ್ರಾಣ ನೀಗಿಬಿಡಲೆ ಅನಿಸಿತು.

ಮರುಕ್ಷಣವೆ, ಭಗವಂತ ದಯಪಾಲಿಸಿದ ಈ ಜೀವವನ್ನು ತೊರೆಯುವುದು ಅಷ್ಟು ಸುಲಭವಲ್ಲವೆಂದು ಮರುಗಿತು...

ಜಯ ಅತ್ತಳು. ಅಳುವುದರಿಂದ ಅವಳಿಗೆ ಎಳ್ಳಷ್ಟೂ ಸಮಾಧಾನ ಸಿಕ್ಕಲಿಲ್ಲ.

ಆಕಾಶವು ಮೋಡಗಳಿಂದ ಭಾರವಾದಂತೆ ಜಯಳ ಮನಸ್ಸು ಚಿಂತೆ, ದುಃಖಗಳಿಂದ ಭಾರವಾಗಿತ್ತು. ಸಂಜೆ ಕಳೆಯುತ್ತ ಬಂದಿದ್ದರೂ ಆಕೆಗೆ ಅದರ ಪರಿವೆಯಿರಲಿಲ್ಲ. ವಿಹಾರಕ್ಕೆ ಬಂದ ಜನ ಒಬ್ಬೊಬ್ಬರಾಗಿ ತೆರಳಿ ಹೋಗುತ್ತಿದ್ದರು. ಜಯ ಮಾತ್ರ ಅನ್ಯಮನಸ್ಕಳಾಗಿ ಕಲ್ಲು ಬಂಡೆಯೊಂದರ ಮೇಲೆ ಕಟೆದ ಮೂರ್ತಿಯಂತೆ ಅಚಲಳಾಗಿ ಕುಳಿತಿದ್ದಳು.

ಗಂಡನೊಡನೆ ಸಂಸಾರ ಹೂಡಿ, ಅಪ್ಸರೆಯರೂ ಅಸೂಯೆಗೊಳ್ಳುವಂತೆ ಬಾಳಬೇಕೆಂದುಕೊಂಡಿದ್ದಳು ತಾನು. ಬಾನಿನ ಹಕ್ಕಿಯಂತೆ ಹಾರಾಡಬೇಕೆಂದುಕೊಂಡಿದ್ದಳು. ಸುಂದರ ಸರಸ್ಸಿನಲ್ಲಿ ಮೀನಿನಂತೆ ಈಜಬೇಕೆಂದುಕೊಂಡಿದ್ದಳು. ಆದರೆ ತನ್ನ ಪಾಲಿನ ಸುಂದರ ಕನಸು ಕನ್ನಡಿಯ ಗಂಟಾಯಿತು ಕನಸಿನ ಕನ್ನಡಿ ಒಡೆದು ಹೋಯಿತು.

‘ಜಯಾ...ಜಯಾ...’

ಯಾರೋ ಕರೆದರು. ಹೌದು, ಪರಿಚಿತ ದನಿಯೆ ಅದು. ಅನ್ಯಮನಸ್ಕಳಾದ ಜಯಾ ಎಚ್ಚೆತ್ತು ವಾಸ್ತವ ಪ್ರಪಂಚಕ್ಕಿಳಿದಳು. ತಲೆಯೆತ್ತಿ ನೋಡಿದಳು.

ಸುಬ್ಬು ನಿಂತಿದ್ದ

ಸುಬ್ಬುವನ್ನು ನೋಡುತ್ತಲೇ ಜಯಾಳ ಅಂತರಾಳದ ದುಃಖ ಪ್ರವಾಹದಂತೆ ನುಗ್ಗಿತು...

‘ಅಯ್ಯೋ ಸುಬ್ಬೂ, ನನ್ನ ಬಾಳದೀಪಿಗೆ ನಂದಿ ಹೋಯಿತು....’ ಎಂದು ಹಣೆ ಜಜ್ಜಿಕೊಂಡು ಅತ್ತಳು ಜಯಾ.

ತನ್ನ ಬಾಳು ಬೆಳಕು ನಂದಲು ಸುಬ್ಬುವೇ ಕಾರಣನೆಂಬ ಆಡಾವುದೋ ಅಂತರ್ಯದ ಮೂದಲಿಕೆ ಆ ದನಿಯಲ್ಲಿತ್ತು. ಸುಬ್ಬು ಜಯಳ ಹಸಿರು ಹಣೆ ನೋಡಿದ. ಅವನ ಮನಸ್ಸು ಮರುಗಿತು...ಜಯಳ ಗಂಡನ ಮರಣದ ವಾರ್ತೆಯನ್ನು ಅವನು ಕೇಳಿಯೆ ಅವಳನ್ನು ಕಾಣಲೆಂದು ಬಂದಿದ್ದ. ರಾಜೀವ ಸತ್ತನೆಂಬುದು ತಿಳಿದ ಕ್ಷಣದಿಂದಲೆ ಅವನ ಹೃದಯದಲ್ಲಿ ತುಮುಲವೆದ್ದಿತ್ತು.

‘ಜಯಾ ಆದದ್ದಾಯಿತು. ದುಃಖಿಸಿದರೇನು...’

ಸುಬ್ಬು ಮಾತು ಮುಗಿಸುವ ಮೊದಲೇ ಜಯಾ ದುಃಖಾವೇಗದಿಂದ ಅರಚಿದಳು,

‘ಸುಬ್ಬೂ, ನನಗಿನ್ನಾರು ಗತಿ??’

ಹೌದು. ಜಯೆಳಿಗಿನ್ನಾರು ಗತಿ? ಅವಳಿನ್ನು ವಿಧವೆ. ನಾವಿಕನಿಲ್ಲದ ನೌಕೆಯಂತೆ ನಿರ್ಗತಿಕಳು.

ಜಯಳ ಪ್ರಶ್ನೆಗೆ ಉತ್ತರಿಸುವ ಶಕ್ತಿ ಸುಬ್ಬುವಿನಲ್ಲಿರಲಿಲ್ಲ. ಅಪರಾಧಿಯಂತೆ ಅವನು ಅಂಗೈ ಹೊಸೆಯುತ್ತ ನಿಂತಿದ್ದ.

ಆದಿನವೂ ಹಾಗೆಯೇ...ಅಂದು ಜಯಾಳ ತಂದೆ ವಧುವಿನ ತಂದೆಯಾಗಿ ತನ್ನ ಮನೆಗೆ



ಬಂದಾಗ ತಂದೆ, ಈ ಸೋದರಿ ಸಂಬಂಧ ಬೇಡ ವೆಂದಿದ್ದರು. ಸೋದರಿಯು ಮಗಳನ್ನು ಮಗನಿಗೆ ತಂದುಕೊಳ್ಳುವುದು ಅವರಿಗೆ ಬೇಡವಾಗಿತ್ತು. ಮೇಲಾಗಿ ಸುಬ್ಬು ಚಿಕ್ಕಂದಿನಿಂದಲೂ ಸೋದರತ್ತೆಯ ಮನೆಯಲ್ಲೇ ಇದ್ದು ಜಯಾಳೊಂದಿಗೆ ಕೂಡಿ ಆಡಿ ಬೆಳೆದವ; ಅಣ್ಣ ತಂಗಿಯರಂತೆ ಇದ್ದವರು ಸತಿಪತಿಗಳಾಗುವುದೆ? ಬೇಡ ಎಂದೆಲ್ಲ ಹೇಳಿದ್ದರು ತಂದೆ. ಜಯಾಳ ತಂದೆ ಮುಖ ಚಿಕ್ಕದು ಮಾಡಿಕೊಂಡು ಬಂದ ದಾರಿ ಹಿಡಿದು ಮರಳಿದ್ದರು. ಆಗ ಸುಬ್ಬು ಮೂಕನಂತೆ ಮೌನ ವಹಿಸಿದ್ದ ತಂದೆಯ ಮಾತಿಗೆ ಪ್ರತಿಯಾಡುವುದು ಅವನಿಗೆ ಸಾಧ್ಯವಾಗಿರಲಿಲ್ಲ.

ಜಯಾ, ಸುಬ್ಬು ಚಿಕ್ಕವರಿದ್ದಾಗಿನಿಂದಲೂ ಕೂಡಿ ಆಡಿದರು. ಕೂಡಿ ಬೆಳೆದರು ನಿಜ. ಆದರೆ ಜಯಾ ಮೊದಲಿನಿಂದಲೂ ಸುಬ್ಬುವನ್ನು ಪ್ರೀತಿಸಿದಳು, ಸೋದರಿಯಾಗಿ ಅಲ್ಲ ಒಡನಾಡಿಯೆಂದು. ಎಷ್ಟೋ ಸಲ ಗಂಡ ಹೆಂಡಿರಾಗಿ ಆಡಿದುದೂ ಉಂಟು. ಅವಳಲ್ಲಿ ಅದೇ ಭಾವನೆ ಉಳಿದು ಬೆಳೆದು ಬಂದಿತು...

ಅದು ಸುಬ್ಬುವಿಗೂ ಗೊತ್ತು. ಆದರೆ ಅವನಲ್ಲಿ ಆ ಭಾವನೆ ಉಳಿಯಲಿಲ್ಲ. ಯಾವುದೋ ನಿಷ್ಕಳಂಕ ಪ್ರೀತಿ, ಪ್ರೇಮ ಜಯಾಳ ಮೇಲೆ. ಏಕೆ ಹೇಗೆ ಎಂಬುದು ಅವನಿಗೆ ತಿಳಿದಿರಲಿಲ್ಲ ತಿಳಿಯುವ ಗೋಜಿಗೂ ಅವನು ಹೋಗಿರಲಿಲ್ಲ. ಜಯಾ ತನ್ನನ್ನು ಪ್ರೀತಿಸುತ್ತಿರುವಳೆಂಬುದೂ ಅವನಿಗೆ ತಿಳಿಯದಿರಲಿಲ್ಲ. ಅಂದು ಜಯಾಳ ತಂದೆ ತನ್ನನ್ನು ಅಳಿಯನನ್ನಾಗಿ ಸ್ವೀಕರಿಸುವ ಉದ್ದೇಶದಿಂದ ಬಂದಾಗ ಅದಾವುದೋ ಪ್ರೀತಿ, ಉನ್ಮಾದ ಅವನ ಹೃದಯದಲ್ಲಿ ಪುಟದಿತ್ತು.

ಮರುಕ್ಷಣವೇ ಅದು ಬತ್ತಿ ಹೋಗಿತ್ತು. ಆ ಪ್ರೀತಿಗೆ ತಂದೆ ಬೇರೆ ಹೆಸರಿಟ್ಟಿದ್ದರು. ಸೋದರಿಕೆಯ ಮುಸುಕೆಳೆದಿದ್ದರು.

ಜಯಾಳಿಗೆ ಬೇರೆ ಕಡೆ ಮದುವೆ ನಿಶ್ಚಯವಾಯಿತು ಶ್ರೀಮಂತ ವರ್ತಕರ ಒಬ್ಬನೇ ಒಬ್ಬ ಮಗ ರಾಜೀವ ಅವಳ ಗಂಡನಾದ ಮದುವೆ ವಿಜೃಂಭಣೆಯಿಂದ ನಡೆಯಿತು. ಜಯಾಳಿಗೆ ಬಯಸಿದ್ದೆಲ್ಲ ಬಂತು. ವಸ್ತ್ರ ಒಡವೆ, ಹಣ... ರಾಜೀವನಿನ್ನೂ ಆಗ ವಿದ್ಯಾರ್ಥಿ. ಮದ್ರಾಸಿನಲ್ಲಿ ಪ್ರಥಮ ಬಿ. ಎ. ಓದುತ್ತಿದ್ದ. ನಂತರ ಜಯಾ ರಾಜೀವರ ಸಂಸಾರ ಆರಂಭವಾಗಬೇಕಿತ್ತು. ಅಷ್ಟರಲ್ಲಿ ವಿಧಿ ಅಣಕವಾಡಿತ್ತು. ಕುಮುದ ಅರಳುವ ಮೊದಲೇ ರವಿ ಅಸ್ತಂಗತನಾಗಿದ್ದ... ಜಯಾ ವಿಧವೆಯಾಗಿದ್ದಳು

ಜಯಾ ಈಗ ವಿಧವೆಯೆಂಬುದು ಸುಬ್ಬುವಿನಲ್ಲಿ ಹೊಸ ಅರಿವು ಮೂಡಿಸಿತು.

ತಂದೆ ಹೇಳುವಂತೆ ತಾನು, ಜಯಾ ಚಿಕ್ಕಂದಿನಿಂದ ಅಣ್ಣ ತಂಗಿಯರಂತೆ ಬೆಳೆದಿದ್ದರೂ. ಜಯಾ ತನ್ನ ಸೋದರತ್ತೆಯ ಮಗಳೆಂಬುದು ಸುಳ್ಳೆ? ಜಯಾ ತನ್ನನ್ನು ಭಾವೀ ಪತಿಯೆಂದು ಭಾವಿಸಿ ಪ್ರೀತಿಸಿದುದು ಸುಳ್ಳೆ?

ಸೋದರಿಕೆಯ ಸಂಬಂಧದಲ್ಲಿ ಹಿಂದೆಂದೂ ದಾಂಪತ್ಯ ಕೂಡಿಯೇ ಇಲ್ಲವೆ? ಹಾಗೆ ನೋಡಿದರೆ ಹುಟ್ಟಿದ ಮನೆಗೇ ಹೆಣ್ಣು ಕೊಡುವುದರಲ್ಲಿ ಹೆಚ್ಚು ಔಚಿತ್ಯವಿದೆ. ತವರು ಮನೆಯ ವಂಶದ ಕುಡಿ ಚಿಗುರಲೆಂದಲ್ಲವೆ ಈ ಸೋದರಿಕೆಯ ಸಂಬಂಧ?

ತನ್ನ ತಂದೆಗೆ ಬೇರೆ ಏನೋ ಉದ್ದೇಶವಿರಬೇಕು. ಬಹುಶಃ ಪದವೀಧರ ಮಗನಿಗೆ ಹೆಚ್ಚು ವರದಕ್ಷಿಣೆ ಪಡೆಯುವ ಅಪೇಕ್ಷೆಯಿದ್ದರೂ ಇದ್ದೀತು. ಅಂದ ಹಾಗೇ ಬಹು ಸಂಬಂಧಗಳಿಗೆಲ್ಲ ಏನೋ ಒಂದು ತಕರಾರು.

ಸುಬ್ಬುವಿಗೆ ವಿಚಾರ ಸ್ಪಷ್ಟವಾಯಿತು ಆದರೆ ಸಮಸ್ಯೆ ಬಗೆಹರಿಯಲಿಲ್ಲ.

ಸುಬ್ಬುವಿನ ಹೃದಯದಲ್ಲಿ ಅಸ್ಪಷ್ಟವಾಗಿದ್ದ ಜಯಾಳ ಮೂರ್ತಿ ಈಗ ಸನಿಸನಿಹಕ್ಕೆ ಬಂದಂತಾಯಿತು. ಅವಳು ತೋರುತ್ತಿದ್ದ ಪ್ರೇಮ ಈಗ ಅವನ ಹೃದಯವನ್ನು ಆವರಿಸಿತು... ಬಳ್ಳಿಯಂತೆ ಹೆಣೆದುಕೊಂಡಿತು.

ಅಂದೇ ಈ ಪ್ರೇಮಸ್ಪರ್ಶ ತನ್ನ ಹೃದಯವನ್ನು ಮುತ್ತಲವಕಾಶವಿತ್ತಿದ್ದರೆ ಜಯಾ ಬೇರೆ ಯುವನ ಪತ್ನಿಯಾಗುತ್ತಿರಲಿಲ್ಲ... ವಿಧವೆಯಾಗುತ್ತಿರಲಿಲ್ಲ.

ಸುಬ್ಬು ತನ್ನ ಅಪರಾಧ ಅರಿತಿದ್ದ. ಅಪರಾಧಕ್ಕೆ ಪ್ರಾಯಶ್ಚಿತ್ತ ಪಡೆಯಲು ತೀರ್ಮಾನಿಸಿದ್ದ. ಅದಕ್ಕೆಂದೇ ಜಯಾಳನ್ನರಸಿಕೊಂಡು ಓಡಿ ಬಂದಿದ್ದ

'ಅಳಬೇಡ ಜಯಾ... ನೀನು ನಿಷ್ಕಳಂಕಳಲ್ಲ...' ಸುಬ್ಬು ಮುಂದುವರಿದು ಮುಖಮುಚ್ಚಿಕೊಂಡು ದುಃಖಿಸುತ್ತಿದ್ದ ಜಯಾಳ ಕೈಗಳನ್ನು ತನ್ನ ಕೈಯಲ್ಲಿ ಹಿಡಿದು ಹೇಳಿದ ಸುಬ್ಬು.

'ನಾನು ವಿಧವೆ ಸುಬ್ಬು

'ಆ ಮಾತು ಇನ್ನು ಆಡಬೇಡ ಜಯಾ'

ಪ್ರೀತಿಯ ಆಸರೆಯಿಂದ ಜೀವ ಅರಳಿತು. ಅಂತರಾಳದಲ್ಲಿ ಹುದುಗಿ ಹೋದ ಬಯಕೆ ಮತ್ತೆ ಚಿಗುರಿತು.

'ಅಂದರೆ?'

'ನಾನು ನಿನ್ನನ್ನು ಮದುವೆಯಾಗುತ್ತೇನೆ' ಜಯಾಳ ಕೈಯನ್ನು ನ್ಯಾಹುವಾಗಿ ನೇವರಿಸುತ್ತ ಹೇಳಿದ ಸುಬ್ಬು ದೃಢಸ್ವರದಲ್ಲಿ.

'ಆಂ! ಈ ಮದುವೆ ಸಾಧ್ಯವೆ ಸುಬ್ಬು?' ಜಯಾ ಆಶ್ಚರ್ಯದಿಂದ ಉದ್ಗರಿಸಿದಳು, ಉಗುಳು ನುಂಗುತ್ತ. ಏನೋ ಶಂಕೆಯಾವರಿಸಿತ್ತು. ಆದರೆ ಮರುಕ್ಷಣದಲ್ಲಿಯೇ ಅಸಹಾಯಳಾಗಿ ಸುಬ್ಬುವಿನ ಭುಜದ ಮೇಲೆ ತಲೆಯಿಟ್ಟು ಬಿಕ್ಕಳಿಸಿದಳು.

'ಏಕೆ ಸಾಧ್ಯವಿಲ್ಲ. ನೀನು ನನ್ನನ್ನು ಪ್ರೀತಿಸುವಂತೆ ನಾನೀಗ ನಿನ್ನನ್ನು ಪ್ರೀತಿಸುತ್ತಿದ್ದೇನೆ. ನನ್ನ ವಸ್ತುವನ್ನು ನಾನು ಪಡೆಯುತ್ತಿದ್ದೇನೆ'

'ಮಾವ ಒಪ್ಪುತ್ತಾರೆಯೆ ಈ ಮದುವೆಗೆ- ಅದೂ ವಿಧವೆಯಾದವಳೊಂದಿಗೆ ?'

'ನನ್ನ ತಂದೆ ಈ ಮದುವೆಗೆ ಒಪ್ಪಬೇಕಾಗಿದ್ದಾಗ ಒಪ್ಪಲಿಲ್ಲ ಈಗ ಆತನ ಒಪ್ಪಿಗೆಯ ಅಗತ್ಯವಿಲ್ಲ ಜಯಾ' ಸುಬ್ಬು ಈ ವಿಷಯವನ್ನು ಮೊದಲೇ ನಿರ್ಧರಿಸಿದವನಂತೆ ಹೇಳಿದ.

'ನೋಡು ಸುಬ್ಬು ವಿಚಾರ ಮಾಡು. ವಿಧವೆಯನ್ನು ಮದುವೆಯಾದರೆ ಸಮಾಜವೇನೆಂದೀತು ?'

'ಸಮಾಜ ನಿನ್ನ ಸುಖ ದುಃಖ ವಿಚಾರಿಸುವುದೆ ಜಯಾ? ಈ ಜಗತ್ತಿನಲ್ಲಿ ಒಂಟಿಯಾಗಿ ಬಾಳುವ ನಿನಗೆ ಸಮಾಜವು ಎಂತಹ ಸಹಕಾರ ನೀಡಬಲ್ಲದು ಜಯಾ ಸಮಾಜದ ಮಾತು ಈಗ ಬೇಡ. ಇದು ನನ್ನ ನಿನ್ನ ಪ್ರಶ್ನೆ. ನಾನು ನಿನ್ನನ್ನು ಕೈ ಹಿಡಿಯುವುದು ದಿಟ. ನನಗೆ ಬೇಕಾಗಿರುವುದು ನಿನ್ನ ಒಪ್ಪಿಗೆ, ಅಷ್ಟೆ !

ಜಯಾ ಕೃತಜ್ಞತೆಯಿಂದ ತಲೆ ತಗ್ಗಿಸಿದಳು ಸಮಾಜದ ಒಂದು ಹಳೆಯ ಸಂಪ್ರದಾಯವನ್ನು ಮೀರಿ ಮುಂದಡಿಯಿಡುವ ಆದರ್ಶಕ್ಕೆ ತಾನು ಸಿದ್ಧ. ಬಯಸಿದ ಪ್ರೇಮಿ ತನ್ನ ಬಾಳಸಂಗಾತಿಯಾಗಲಿರುವಾಗ ಯಾರಿಗೇಕೆ ಅಂಜಬೇಕು, ಆತಂಕ ಪಡಬೇಕು? ಯಾವುದೋ ಅವ್ಯಕ್ತ ಸಂತಸದಲ್ಲಿ ಅವಳ ಹೃದಯ ಓಲಾಡಿತು.

ಬರಿದಾಗಿದ್ದ ಹೃದಯದಲ್ಲಿ ಮತ್ತೆ ಬಾಳಿನ ದೀವಿಗೆ ಹೊತ್ತಿಸಿ ಸುಬ್ಬು ಹೊರಟು ಹೋದ. ಮತ್ತೆ ಬರುವುದು ಮದುಮಗನಾಗಿಯೆ, ತನ್ನನ್ನು ಜೊತೆಗೆ ಕರೆದೊಯ್ಯಲು !

ಮೋಡ ಚದುರಿ ಆಕಾಶ ತಿಳಿಯಾಗಿತ್ತು. ತಾರೆಗಳು ಮಿನುಗುತ್ತಿದ್ದವು. ಚಂದ್ರ ಮಂದಹಾಸ ಬೀರುತ್ತ ಬೆಳಕು ಚೆಲ್ಲುತ್ತಿದ್ದ ಜಡಿಮಳೆಯ ನಂತರದ ಪ್ರಕೃತಿಯಂತೆ ಜಯಾಳ ಮನಸ್ಸು ಈಗ ಹಗುರಾಗಿತ್ತು ದುಃಖ, ಚಿಂತೆ ಕೊಚ್ಚಿ ಹೋಗಿ ಜಡತೆ ಮಾಯವಾಗಿತ್ತು. ಸೋತ ಮುಖದಲ್ಲಿ ಸಂತಸದ ಗೆರೆ ಮೂಡಿತ್ತು. ಕಳೆದು ಹೋದ ವಸ್ತು ಮತ್ತೆ ಸಿಕ್ಕಷ್ಟು ಸಂತಸ ಉಕ್ಕಿ ಹರಿದಿತ್ತು



ಶ್ರೀನಿವಾಸರಾವ್ ಕೊರಟಿ





ಹಂಡೆ ಅನಂತಪುರದ ಪ್ರಸನ್ನನಾಯಕನು ತನ್ನ ನಾಲ್ಕು ವರ್ಷದ ಮಗ ರಾಮನಾಯಕನ ಜತೆಯಲ್ಲಿ ಅರಮನೆಯ ಚಂದ್ರಶಾಲೆಯಲ್ಲಿ ವಿನೋದವಾಗಿ ಹೊತ್ತು ಕಳೆಯುತ್ತಿದ್ದನು.

ಸಿದ್ಧಮ್ಮನನ್ನು ಮದುವೆಯಾಗಿ ನಾಲ್ಕು ವರ್ಷಗಳಾದ ಮೇಲೆ ಹುಟ್ಟಿದ ರಾಮಪ್ಪ ನಾಯಕನನ್ನು ಕ್ಷಣಕಾಲ ಅಗಲಿರದೆ ಪ್ರಸನ್ನ ನಾಯಕ ಸದಾ ಅವನ]: ಸಂಗಡವೇ ಇರುತ್ತಿದ್ದ.

ಕುಮಾರನು ಏಕೋ ತುಂಬಾ ಹಟಮಾಡಿ ಅಳುತ್ತಿದ್ದುದರಿಂದ ಅವನನ್ನು ರಮಿಸಲು ನಾಯಕನು ಒಂದು ಚೆಂಡು ಕೊಟ್ಟು, ಆಡಲು ಬಿಟ್ಟನು. ಆಡುತ್ತ ಆಡುತ್ತ ಅವನು ಎಸೆದ ಚೆಂಡು ಅರಮನೆಯ ತೊಟ್ಟಿಯನ್ನು ಹಾದು, ಬೀದಿಗೆ ನೆಗೆಯಿತು. ಅದರ ಹಿಂದೆಯೇ ಬೀದಿಗೆ ಓಡಿದ ರಾಮಪ್ಪ. ಚೆಂಡಿನೊಂದಿಗೆ ಮಗನನ್ನು ನಿರೀಕ್ಷಿಸುತ್ತಿದ್ದ ಪ್ರಸನ್ನನಾಯಕ, ತೊಟ್ಟಿಯನ್ನು ಹಾದು ಯಾರೋ ಬಂದಂತಾಗಿ ತಲೆಯೆತ್ತಿ ನೋಡಿದ. ಎದುರಿಗೆ ಸುಮಾರು ಇಪ್ಪತ್ತು ವಸಂತಗಳನ್ನು ಕಂಡಿದ್ದ, ಸುಭಗ ಸೌಂದರ್ಯದ ಪುತ್ಥಳಿಯೇ ಮೈವೆತ್ತಂತಿದ್ದ ಒಬ್ಬ ಅಪೂರ್ವ ಸುಂದರಿ ನಿಂತಿದ್ದಳು ನಾಯಕನಿಗೆ ಅಚ್ಚರಿಯಾಯಿತು 'ಎಲಾ! ಇವಳು ಯಾರು?' ಎಂದುಕೊಂಡು ಅವಳನ್ನೇ ಆಸೆ ತುಂಬಿದ ಕಂಗಳಿಂದ ಎವೆಯಿಕ್ಕದೆ ನೋಡಿದ.

ಚೆಂಡು ತರಲು ಹೊರಗೆಹೋಗಿದ್ದ ರಾಮಪ್ಪನನ್ನು ಅವಳು ಕಂಕುಳಲ್ಲಿ ಎತ್ತಿಕೊಂಡು ಬಂದಿದ್ದಳು ಮಗುವಿನ ಕೈಲಿದ್ದ ಚೆಂಡಿನೊಂದಿಗೆ ಸ್ಪರ್ಧೆಗೆ ನಿಂತಂತಿತ್ತು ಅವಳ ತುಂಬಿದ ವಕ್ಷಸ್ಥಳ. ಅವಳನ್ನೇ ನೋಡುತ್ತಾ ಮೈಮರೆತ ಪ್ರಸನ್ನ ನಾಯಕನ ಮನಸ್ಸಿನಲ್ಲಿ ಏಳುತ್ತಿದ್ದ ಭಾವನೆಯ ಅಲೆಗಳನ್ನು ಗುರುತಿಸಿದಳೆಂಬಂತೆ ಆ ಲಲನಾಮಣಿ, ಮುಗುಳ್ನಕ್ಕು ಮಂದಹಾಸ ಬೀರಿದಳು ಅವಳ ಮಂದಹಾಸ ನಾಯಕನ ಹೃದಯದಲ್ಲಿ ಅವ್ಯಕ್ತ ಆನಂದದ ಅಲೆಗಳನ್ನೆಬ್ಬಿಸಿತು.

"ನೀನು......?"

ಸಂತಸ ಬೆರೆತ ವಿಸ್ಮಿತ ದನಿಯಲ್ಲಿ ಕೇಳಿದ ನಾಯಕ. ಅವನ ನೋಟ ಮಾತ್ರ ಅವಳನ್ನಾಗಲೇ ಅರಿತುಬಿಟ್ಟಿರುವಂತಿತ್ತು. "ನಾನು ವಸಂತ...ಮಗು ಆಡುತ್ತಾ ಬೀದಿಗೆ ಬಂದಿತ್ತು ಒಳಗೆ ಎತ್ತಿಕೊಂಡುಬಂದೆ-" ನಸುನಾಚಿ ನುಡಿದಳು ಆ ಯೌವನೆ.

"ಯಾರ ಮಗಳು ನೀನು ?" ಅವಳ ಪರಿಚಯ ಬಯಸಿ ಕೇಳಿದ ನಾಯಕ.

"ಶರಣಪ್ಪನ ಮಗಳು, ಲಚ್ಚವ್ವನ ಸೋದರಿ"

"ಏನು ! ನಮ್ಮ ಗುರಿಕಾರ ಶರಣಪ್ಪನ ಮಗಳೇ...!"

"ಹೂಂ ನಾವು ಆತನ ಸಾಕುಮಕ್ಕಳು. ತಾಡಿಮರಿಯಲ್ಲಿದ್ದೆವು ಇಷ್ಟು ದಿನ. ಅಲ್ಲಿ ಜೀವನಕ್ಕೆ ಕಷ್ಟವಾಯಿತು ಅಪ್ಪಾಜಿಯು ಒಂಟಿಯಾಗಿದ್ದರು. ಇಲ್ಲಿಗೆ ಬಂದುಬಿಡು ಅಂತ ಹೇಳುತ್ತಿದ್ದರು. ಬರೋಕೆ ಸಾಧ್ಯವಾಗಿರಲಿಲ್ಲ. ಈ ಬರಗಾಲದಲ್ಲಿ ಜೀವನ ಮಾಡೋಕೆ ಗಾಸಿಯಾಗಿ ಇಲ್ಲಿಗೆ ಬಂದಿದ್ದೇವೆ."

"ತುಂಬಾ ಸಂತೋಷ. ನಿಮಗೆ ಇಲ್ಲಿ ಯಾವುದಕ್ಕೂ ಕೊರತೆಯಾಗದಂತೆ ನಾವು ನೋಡಿಕೊಳ್ಳುತ್ತೇವೆ. ಶರಣಪ್ಪನ ಸಾಕುಮಕ್ಕಳೆಂದ ಮೇಲೆ ನಮಗೂ ಹತ್ತಿರದವರೇ ಆದಿರಿ..."

ನಾಯಕನ ಮಾತು ಕೇಳಿ ವಸಂತಳಿಗೆ ನಾಚಿಕೆಯಾದಂತಾಯಿತು. ಹೃದಯ ತುಂಬಿ ಬಂದ ಸಂತಸ ಮುಗುಳ್ನಗೆಯ ರೂಪದಲ್ಲಿ ಹೊರಚಲ್ಲಿತು. ತಲೆಬಾಗಿ ಆಕೆ ಇನ್ನೂ ನಿಂತೇ ಇದ್ದಳು. ಅವಳ ಕಂಕುಳಿಂದ ಮಗು ಅದಾವಾಗಲೋ ಜಾರಿ ಹೋಗಿತ್ತು

ಪ್ರಸನ್ನನಾಯಕ ವಸಂತಳ ಬೆಡಗಿಗೆ ಮಾರುಹೋಗಿದ್ದ, ಮೊದಲ ನೋಟದಲ್ಲೆ. ಅವಳ ಪ್ರೇಮಕ್ಕೆ ಹಾತೊರೆಯುತ್ತಿದ್ದ ಅವನಿಗೆ ಅವಳಿನ್ನೂ ನಿಂತೇಯಿದ್ದುದು ಅಪ್ಯಾಯಮಾನವೆನಿಸಿತ್ತು.

"ಏನಾದರೂ ಬೇಕಾಗಿತ್ತೇ, ವಸಂತಾ ?" ಪ್ರೇಮಭರಿತ ಇಳುದನಿಯಲ್ಲಿ ವಿಚಾರಿಸಿದ ಪ್ರಸನ್ನನಾಯಕ.

"ಏನೂ ಇಲ್ಲ ಹುಂ..ಮಜ್ಜಿಗೆ ಬೇಕಾಗಿತ್ತು" ತಲೆಯೆತ್ತಿ ಓರೆನೋಟ ಬೀರಿದಳು ವಸಂತ.

"ಮಜ್ಜಿಗೆಯೋ ಅಮೃತವೊ ?"

"ನಾಯಕರ ಬಳಿಗೆ ಬಂದಾಗ ಮಜ್ಜಿಗೆ ಬೇಕಾಗಿದ್ದರೂ ಅಮೃತವನ್ನೇ ಕೇಳಬೇಕಲ್ಲವೆ?" ಎಂದು ನಾಯಕನ ಹೃದಯವನ್ನು ಕಲಕುವಂತೆ ಭಾವಗರ್ಭಿತವಾಗಿ ನಕ್ಕಳು. ವಸಂತಳ

# ಸೇಡಿನ ಕಿಚ್ಚು

ಮಾತಿನ ಚಾತುರ್ಯವನ್ನು ಮೆಚ್ಚಿದ ನಾಯಕ.

"ನೀನು ಚಲುವೆ ಇರುವಂತೆಯೆ ಮಾತಿನಲ್ಲೂ ಚದುರೆ ಇದ್ದೀಯೆ ?"

"ಪ್ರಭುಗಳ ಮುಂದೆ ನಿಂತು ಬಿನ್ನಾಣವೇ ? ನಾನೊಂದು ಗಿಳಿ; ಕಲಿತ ಮಾತು ಒಪ್ಪಿಸುತ್ತಿದ್ದೇನೆ. ಅಪರಾಧವಾಗಿದ್ದರೆ ಕ್ಷಮಿಸಬೇಕು-" ವಸಂತಳ ಚತುರ ನುಡಿ ನಾಯಕನನ್ನು ಆಹ್ವಾನಿಸುವಂತಿತ್ತು.

"ನೀನು ಅಂಥಿಂಥ ಗಿಳಿಯಲ್ಲ...ಬಂಗಾರದ ಗಿಳಿ; ಅರಮನೆಯಲ್ಲಿರಬೇಕಾದ ಗಿಳಿ ನೀನು..."

ಅವನ ಮಾತಿನ ಇಂಗಿತವನ್ನರಿತು ತುಸು ತಡವರಿಸಿ ವಸಂತಳೆಂದಳು "ನಾನಷ್ಟು ಭಾಗ್ಯಶಾಲಿಯೆ?"

"ನೀನು ಯಾರೇ ಆಗಿರು ವಾಸಂತಿಕಾ.... ನಿನ್ನನ್ನು ನೋಡಿದ ಕೂಡಲೇ ನನ್ನ ಹೃನ್ಮನಗಳು ಮಾರುಹೋಗಿವೆ...ಬಾ ದೇವಿ ನನ್ನ ಮುದ್ದಿನ ಅರಗಿಳಿ ನೀನಾಗು"ಪ್ರಸನ್ನ ನಾಯಕ ಮೈಮರೆತು ಪ್ರಣಯ ಭಿಕ್ಷೆ ಬೇಡಿದ. ಮಾತಿನ ಸರಸ ನಡೆದಂತೆಯೆ ಅದಾವಾಗಲೋ ನಾಯಕ ವಸಂತಳ ಬಳಿ ಸಾರಿದ.

ವಸಂತ ಮುಗುಳು ನಗೆ ಬೀರಿ, ನಾಯಕನ ಮುಂದೆ ಕೈಚಾಚಬೇಕೆಂದಿರುವಾಗಲೇ ನಾಯಕನ ಪತ್ನಿ ಸಿದ್ದಮ್ಮ ಮಗನೊಂದಿಗೆ ಅಲ್ಲಿಗೆ ಬಂದಳು. ಕೂಡಲೇ ಎಚ್ಚತ್ತ ವಸಂತ ತನ್ನ ಹಾವಭಾವಗಳನ್ನು ತಿದ್ದಿಕೊಂಡು, ಗರತಿಯಂತೆ ಲಜ್ಜಿತಳಾಗಿ ದೂರ ಸರಿದು ನಿಂತಳು.

"ಪ್ರಭುಗಳು ನಾಟಕಾಭಿನಯದಲ್ಲಿ ತೊಡಗಿರುವಂತಿದೆ" ಎಂದು ಅರ್ಥಗರ್ಭಿತವಾಗಿ ನಕ್ಕಳು ಸಿದ್ದವ್ವ.

"ಇಲ್ಲ ಸಿದ್ದಾ. ಇವಳು..."

"ನಾನು ವಸಂತ" ವಸಂತಳು ನಡುವೆಯೆ ದನಿಗೂಡಿಸಿದಳು.

"ಇವಳು ಮಜ್ಜಿಗೆಗೆ ಬಂದಿದ್ದಾಳೆ... ಒಂದಿಷ್ಟು ಮೊಸರು ಕೊಟ್ಟು ಕಳುಹಿಸು..." ನಾಯಕ ಮಾತು ಮುಗಿಸಿದ.

ಇವರ ಪ್ರಣಯಚೇಷ್ಟೆಯನ್ನು ಅರಿತೂ ಅರಿಯದವಳಂತೆ ಸಿದ್ದಮ್ಮ ಮೂಕ ನೋಟ ಬೀರಿ ವಸಂತಳನ್ನು ಪಾಕಶಾಲೆಗೆ ಕರೆದೊಯ್ದಳು. ಅಲ್ಲಿಂದ ತೆರಳುವ ಮುನ್ನ ವಸಂತ ನಾಯಕನೆಡೆ ಕೊನೆಗಣ್ಣಿನ ನೋಟವೆಸೆಯಲು ಮರೆಯಲಿಲ್ಲ.

ಅವಳ ಆ ಕೊನೆ ನೋಟ ಪ್ರೇಮದ ಕೂರಸಿಯಂತೆ ನಾಯಕನ ಹೃದಯದಲ್ಲಿ ಸಲ್ಲದ ಆಶೋತ್ತರಗಳನ್ನು ತುಂಬಿ ಘಾತಿಸುತ್ತಿತ್ತು.

-೨-

ಪ್ರಸನ್ನನಾಯಕ ಸುಪ್ರಸಿದ್ಧ ಹಂಡೆ ಹನುಮಪ್ಪ ನಾಯಕನ ವಂಶದವ. ವಿಜಯನಗರದ ದೊರೆಗಳಾದ ಅರವೀಡು ವಂಶದ ರಾಮರಾಯ ತಿರುಮಲರಾಯರು ಬಹಮನಿ ಸುಲ್ತಾನರ ವಿರುದ್ಧ ನಡೆದ ಯುದ್ಧದಲ್ಲಿ ಅಪ್ರತಿಮ ಶೌರ್ಯವನ್ನು ತೋರಿದ ಹಂಡೇಬಾಲದ ಹನುಮಪ್ಪ ನಾಯಕನಲ್ಲಿ ಸುಪ್ರೀತರಾಗಿ ನಂದೇಲ, ಬುಕ್ಕರಾಯಸಮುದ್ರ, ಧರ್ಮಾವರ, ಕಣಕಲ್ಲು, ಬಳ್ಳಾರಿ, ಕುರುಗೋಡು ಗ್ರಾಮಗಳನ್ನು ಜಹಗೀರಾಗಿ ಕೊಟ್ಟು ಗೌರವಿಸಿದ್ದರು.

ಹನುಮಪ್ಪನಾಯಕ ಬುಕ್ಕರಾಯಸಮುದ್ರದಲ್ಲಿದ್ದ ಪ್ರಾಚೀನ ತಟಾಕ ನೋಡಿ, ರಾಜಧಾನಿಗೆ ಅದೇ ಯೋಗ್ಯ ಸ್ಥಳವೆಂದು ಅಲ್ಲಿ ಕೋಟೆ ಕೊತ್ತಳ ಹಾಗು ರಾಜಗೃಹ ನಿರ್ಮಿಸಿ ಅಲ್ಲಿಂದಲೇ ತನ್ನ ಪಾಳಿಯಪಟ್ಟಿನ ಜಹಗೀರುಗಳನ್ನು ಆಳುತ್ತಾ ಬಂದನು. ಇವನ ಮಗ ಮಲಿಕಪ್ಪನಾಯಕನೂ ತಂದೆಯಂತೆ ಅಪ್ರತಿಮ ವೀರನಾಗಿ ದೊರೆ ಶ್ರೀರಂಗರಾಯರಿಗೆ ಯುದ್ಧದಲ್ಲಿ ನೆರವಾಗಿ ಅವರ ಅಭಿಮಾನಕ್ಕೆ ಪಾತ್ರನಾದ. ಆದರೆ ವಿಜಯನಗರವು ಅವನತಿ ಹೊಂದಿದ ಮೇಲೆ ಪೆನುಗೊಂಡೆಯಲ್ಲಿ ಆಳುತ್ತಿದ್ದ ಶ್ರೀರಂಗರಾಯನ ಮೇಲೆ ಮೇಲಿಂದ ಮೇಲೆ ದಂಡೆತ್ತಿ ಬರುತ್ತಿದ್ದ ಯವನರ ದಾಳಿಯನ್ನು ಇದಿರಿಸಲಾರದೆ ಅವರ ಕಿರುಕುಳದಿಂದ ಪಾರಾಗಲು ಮಲಿಕಪ್ಪನಾಯಕನು ತನ್ನ ರಾಜಧಾನಿಯನ್ನು ಬೇರೆಡೆಗೆ ಬದಲಿಸಬೇಕಾಯಿತು. ರಾಜಧಾನಿಯನ್ನು ಸ್ಥಳಾಂತರಿಸಲು ಯೋಗ್ಯ ನಿವೇಶನಕ್ಕಾಗಿ ಶೋಧಿಸುತ್ತ ಒಂದು ದಿನ ಅನಂತಪುರಕ್ಕೆ ಬಂದನು.

ಅನಂತಪುರದಲ್ಲಿ ಹಂಡೆ ಹನುಮಪ್ಪನು ಅನಂತಸಾನಿ ಎಂಬ ಬಂಗಾರದವಳ ಹೆಸರಿನಲ್ಲಿ ಕೆರೆಯೊಂದನ್ನು ಕಟ್ಟಿಸಿ ಆಕೆಯ ಹೆಸರಿನಲ್ಲಿ ಅನಂತಸಾಗರವೆಂಬ ಸಣ್ಣ ಊರನ್ನೂ ನಿರ್ಮಿಸಿದ್ದನು. ರಾಜಧಾನಿ ಕಟ್ಟಲು ಇದೇ ಪ್ರಶಸ್ತ ಸ್ಥಳವೆಂದು ನಿರ್ಧರಿಸಿ ಆಯಕಟ್ಟಾದ ಪ್ರದೇಶಗಳನ್ನು ಪರೀಕ್ಷಿಸಿದ ಮಲಿಕಪ್ಪನಾಯಕ.

ಈ ಊರಿನಲ್ಲಿ ಅತ್ಯಂತ ಗೌರವಾನ್ವಿತ ವ್ಯಕ್ತಿಯೆನಿಸಿದ್ದ ಚಿನ್ನಪ್ಪ ರೆಡ್ಡಿ ವಂಶದ ಎಲ್ಲಾರೆಡ್ಡಿಯನ್ನು ಅಂತರಂಗದಲ್ಲಿ ಕರೆಯಿಸಿಕೊಂಡು ತನ್ನ ವಿಚಾರವನ್ನು ಆತನ ಮುಂದಿಟ್ಟ.

"ಎಲ್ಲಾರೆಡ್ಡಿಗಳೇ ನಿಮ್ಮ ಹಿರಿಯರಾದ ಚಿನ್ನಪ್ಪ ರೆಡ್ಡಿಗಳು ನಮಗೆ ಬೇಕಾಗಿದ್ದ ಮಿತ್ರರಾಗಿದ್ದರು. ನಾವು ನಿಮ್ಮಲ್ಲಿಗೆ ಬಂದು ನೆಲೆಸಬೇಕೆಂದಿದ್ದೇವೆ ತುಂಬಿದ ಮನೆಯವರಾದ ನೀವು ಸಂತೋಷದಿಂದ ಸಹಾಯ ಮಾಡಬೇಕು" ಎಂದು ಪ್ರಾರ್ಥಿಸಿದ

ಎಲ್ಲಾರೆಡ್ಡಿ ವಿಶಾಲ ಹೃದಯದ ಮನುಷ್ಯ. ಆತನದು ನೂರು ಜನರು ಇದ್ದ ದೊಡ್ಡ ಕುಟುಂಬ.

"ನಾಯಕರೇ, ನಾವು ತಿನ್ನುತ್ತಿರುವುದು ಹಂಡೇಕುಲದ ಅನ್ನವನ್ನೇ. ನಿಮಗೆ ನಿಮ್ಮ ಅನ್ನವಿಲ್ಲವೇ? ನೀವು ಬೇಡಿಕೊಳ್ಳುವ ಅಗತ್ಯವಿಲ್ಲ. ಈ ಅನಂತಪುರ ನಿಮ್ಮ ಹಿರಿಯರು ಕಟ್ಟಿಸಿದ ಊರು. ಅದು ನಿಮ್ಮದೇ ಇದೆ. ನಾವು ನಿಮ್ಮ ಆಶ್ರಿತರು. ನಮಗೆ ಏನಾಗಬೇಕೆಂದು ಆಜ್ಞೆ ಮಾಡಿ. ಶಿರಸಾ ಹೊತ್ತು ನಡೆಸಿಕೊಡುತ್ತೇವೆ-" ಎಂದ ಎಲ್ಲಾರೆಡ್ಡಿ.

ಮಲಿಕಪ್ಪನಾಯಕನು ಅವನ ಮಾತನ್ನು ಕೇಳಿ ಸಂತೋಷಪಟ್ಟು ಅವನಿಗೆ ವಸ್ತ್ರ, ತಾಂಬೂಲ, ಧನಕನಕಗಳನ್ನಿತ್ತು ಗೌರವಿಸಿ, ಅನಂತಸಾಗರಕ್ಕೆ ಹಂಡೆಅನಂತಪುರವೆಂದು ಹೆಸರಿಟ್ಟು ಅಲ್ಲೇ ನಿಂತನು. ಕಾಲಾಂತರದಲ್ಲಿ ಅವನಿಗೆ ಸಿದ್ದಮ್ಮನಲ್ಲಿ ದೇವಪ್ಪ, ಚಿಕ್ಕರಾಮಪ್ಪ, ಲಿಂಗಪ್ಪ, ಹಂಪರೆಂಬ ನಾಲ್ವರು ಗಂಡುಮಕ್ಕಳಾದರು. ಇವರಲ್ಲಿ ಕೊನೆಯವನಾದ ಹಂಪನಾಯಕನು ಅನಂತಪುರದಲ್ಲಿ ರಾಜ್ಯಭಾರ ಮಾಡುತ್ತಿದ್ದನು.

ಈ ಹಂಪನಾಯಕನ ಮೊಮ್ಮಕ್ಕಳೇ ಪ್ರಸನ್ನಪ್ಪ, ಪವಾಡಪ್ಪ ನಾಯಕರು. ಇವರಲ್ಲಿ ಪ್ರಸನ್ನ ನಾಯಕನು ಹಿರಿಯ ಮಗನಾಗಿದ್ದುದರಿಂದ ತಂದೆಯ ನಂತರ ಶಾಲೀವಾಹನ ಶಕ ವರ್ಷ ೧೬೨೦ನೇ ಈಶ್ವರನಾಮ ಸಂವತ್ಸರದಲ್ಲಿ ಪಟ್ಟಾಭಿಷಿಕ್ತನಾಗಿ ರಾಜ್ಯಸೂತ್ರಗಳನ್ನು ಕೈಗೆ ತೆಗೆದುಕೊಂಡನು.

ಯುವಕ ಪ್ರಸನ್ನನಾಯಕ ಒಳ್ಳೆ ರಸಿಕ. ಧರ್ಮಪತ್ನಿ ಸಿದ್ದಮ್ಮನ ಪ್ರೇಮದಾಂಪತ್ಯ ಸುಖ ಸವಿದೂ ವಸಂತಳ ರೂಪಕ್ಕೆ ಮರುಳಾದ. ಅವಳ ಪ್ರಣಯಾಮೃತವನ್ನು ಯಾಚಿಸಿದ. ಮಜ್ಜಿಗೆ ಬಯಸಿ ಬಂದವಳಿಗಾಗಿ ತನ್ನ ಹೃದಯ ಭಾಂಡಾರವನ್ನೇ ತೆರೆದಿರಿಸಿದ.

-೩-

ವಸಂತ ಮನೆಗೆ ಬಂದವಳೇ ಅಕ್ಕ ಲಚ್ಚವ್ವನಿಗೆ ಅರಮನೆಯಲ್ಲಿ ನಡೆದ ಸಂಗತಿಯನ್ನು ತಿಳಿಸಿದಳು.

"ಹಾಗಾದರೆ ಮೀನು ಗಾಳಕ್ಕೆ ಬಿತ್ತು!" ಎಂದು ಲಚ್ಚವ್ವ ಮುಗುಳ್ನಕ್ಕಳು.

"ಈಗೇನು ಮಾಡೋದು ಅಕ್ಕಾ...ನಾಯಕನು ಅರಮನೆಗೆ ಇಂದೇ ಬಾ ಎಂದು ಆಹ್ವಾನಿಸಿ




ದರೆ ಏನು ಗತಿ?" ಲಜ್ಜೆ ಸಂಕೋಚಗಳಲ್ಲಿ ಕೇಳಿದಳು ವಸಂತ.

ತಾಡಿಮರಿಯಲ್ಲಿ ಗಂಡನೊಂದಿಗೆ ಜಗಳವಾಡಿ ಬಂದ ಕುಲಟೆಯಾಗಿದ್ದರೂ, ಕುಟಿಲ ವ್ಯವಹಾರದಲ್ಲಿ ಮುಗ್ಧ ಬಾಲೆಯೇ ಆಗಿದ್ದಳು. ವಸಂತ.

"ಅದಕ್ಕೆ, ಯಾಕ ಹೆದರಬೇಕು...ನಾಯಕಪ್ಪ ಹೇಳಿ ಕಳುಹಿಸಿದರೆ ಹೋಗೋಣೇಳು...."

"ನಂಗೆ ಯಾಕೋ ಹೆದರಿಕೆ ಆಗ್ತದೆ ಅಕ್ಕಾ...''

"ಯಾಕೆ?"

"ನಾನು ಗಂಡನನ್ನು ಬಿಟ್ಟುಬಂದವಳು ಅಂತ ಅವರಿಗೇನಾದ್ರು ತಿಳಿದ್ರೆ ಗತಿ ಏನು?"

"ತಿಳೀಲಿ ಬಿಡು. ನಿನ್ನೇನು ಅವರು ಅಗ್ನಿಸಾಕ್ಷಿಯಾಗಿ ಕೈ ಹಿಡೀತಿಲ್ಲ. ಬಂಗಾರದವಳಾಗಿ ಮಡಿಗಿಕೊಳ್ಳುವರು..."

"ಈ ವಿಷಯ ತಿಳಿದು ಗಂಡ ಬಂದು ಗಲಾಟೆ ಮಾಡಿದರೆ ಏನು ಮಾಡೋದು...?"ಅಧೀರಳಾಗಿ ಕೇಳಿದಳು ವಸಂತ.

"ಅವನಿಗೆ ಅಷ್ಟು ಧೈರ್ಯವಿದ್ದರೆ, ಬರಲಿ ಬಿಡು. ನಿನ್ನನ್ನು ಇಲ್ಲಿಗೆ ಬಂದು ಕೆಣಕಲಿ ಕೈಕಾಲು ಮುರಿದು ಅನಂತಸಾಗರಕ್ಕೆ ಹಾಕಿಸ್ತೀನಿ. ನೀನು ಏನೂ ಯೋಚನೆ ಮಾಡದೆ, ನಾಯಕರ ಮಾತಿಗೆ ಅಸ್ತು ಅನ್ನು..."

"ನಂಗೆ ಯಾಕೋ ನಿನ್ನಷ್ಟು ಧೈರ್ಯ ಇಲ್ಲ ಅಕ್ಕ. ನೆನೆಸಿಕೊಂಡರೆ ಹೆದರಿಕೆಯಾಗುತ್ತೆ..."

"ಮೊದ ಮೊದಲು ಹಂಗೇನೇ...ನೀರಿಗೆ ಬೀಳೋಗಂಟ ಚಳಿ ಗಾಳಿ ಹೆದ್ರಿಕೆ...ಆಮೇಲೆಲ್ಲಾ ತಾನಾಗಿ ಸರಿಯಾಗ್ತದೆ..." ಎಂದು ಹೇಳಿ ಸೋದರಿಯ ಕೆನ್ನೆಗಳನ್ನು ಹಿಂಡಿ ನಗಾಡಿದಳು.

ಅವಳ ನಿರೀಕ್ಷೆ ವ್ಯರ್ಥವಾಗಲಿಲ್ಲ. ಆ ದಿನ ಸಂಜೆಯೇ ಗುರಿಕಾರ ಶೀನಪ್ಪ ಬಂದು, ದೊರೆಗಳು ಕಳುಹಿಸಿದ ಬೆಲೆ ಬಾಳುವ ಬಹುಮಾನಗಳನ್ನು ಕಾಣಿಕೆಯಾಗಿ ಕೊಟ್ಟನು.

"ವಸಂತವ್ವ... ನಿನ್ನ ಭಾಗ್ಯದ ಬಾಗಿಲು ತೆರೆಯಿತು ಕಾಣವ್ವ. ಇನ್ನು ನೀವು ಮೈ ಕಷ್ಟ ಮಾಡಿಕೊಂಡು ದುಡಿಯೋದು ತಪ್ಪಿತು. ದೊರೆಗಳು ನಿನ್ನ ಮೇಲೆ ಅನುಗ್ರಹಿಸಿದ್ದಾರವ್ವ. ಇಂದೇ ಅವರ ಮನೆಗೆ ನೀನು ಹೋಗಬೇಕಂತೆ. ಈ ಒಡವೆ ವಸ್ತ್ರ ಉಟ್ಟುಕೊಂಡು ಸಿದ್ಧಳಾಗಿದ್ದರೆ, ಅವರು ರಾತ್ರಿಗೆ ಮೇಣೆ ಕಳಿಸ್ತಾರಂತೆ..." ಎಂದು ಶೀನಪ್ಪ ನಿರ್ಧಾರದ ಧ್ವನಿಯಲ್ಲಿ ಹೇಳಿದನು. ಈ ಮಾತಿಗೆ ವಸಂತ ಏನೂ ಹೇಳದೆ ಮೌನವಾಗಿ ಕುಳಿತಳು.

"ಯಾಕೆ ಮಗು? ಹಿಂಗೆ ಕುಂತೆ, ದೊರೆಗಳ ಸನ್ನಿಧಿಗೆ ಹೋಗಾಕೆ ಇಷ್ಟವಿಲ್ಲವಾ?" ತಂದೆ ಶರಣಪ್ಪ ಮಗಳ ಮೌನ ಕಂಡು ಕೇಳಿದ.

"ಅಪ್ಪಾಜಿ, ನಮ್ಮ ವಸಂತಿಗೆ ಆ ತಾಡಿಮರಿ ಗಂಡನ್ನ ಬಿಟ್ಟು ದೊರೆಗಳ ಕೂಡ ನ್ಯಾಸ್ತಾ ಮಾಡಾಕೆ ಮನಸಿಲ್ಲಾ ಅಂತ ಕಾಣಿಸ್ತದೆ..." ಎಂದು ನಕ್ಕಳು, ಲಚ್ಚವ್ವ ನಡುವೆಯೆ ಬಾಯಿ ಹಾಕಿ.

"ಹೌದೇನವ್ವಾ?"

"ಹಂಗಲ್ಲ... ಅಪ್ಪಾಜಿ... ಗಂಡನ ಸಮಾಚಾರ ದೊರೆಗಳಿಗೆ ತಿಳಿದರೆ...? ಯಾಕೋ ಹೆದರಿಕೆಯಾಗ್ತದೆ..."

"ತಿಳೀಲಿ ಬಿಡು ಆ ಮಗನಿಗೆ ಇಲ್ಲಿಗೆ ಬರೋ ಅಷ್ಟು ಧೈರ್ಯವಿದೇಂತ ತಿಳಿದಿದ್ದೀಯಾ? ನಾನು ಇಂದೇ ಅವನಿಗೆ ಸೋಡ ಚೀಟಿ ಕಳುಹಿಸಿಬಿಡ್ತೀನಿ. ನೀನು ನಿಶ್ಚಿಂತೆಯಿಂದ ದೊರೆಗಳ ಅಂತಃಪುರಕ್ಕೆ ಹೋಗು ಮಗು..." ಎಂದು ಧೈರ್ಯ ಹೇಳಿ, ಮಗಳನ್ನು ಒಪ್ಪಿಸಿದನು. ಆ ದಿನ ಲಚ್ಚವ್ವನೇ ನಿಂತು ತಂಗಿಯನ್ನು ಸಿಂಗಾರ ಮಾಡಿ ಜೊತೆಯಲ್ಲಿ ಕರೆದುಕೊಂಡು ಹೋಗಿ ನಾಯಕನಿಗೆ ಒಪ್ಪಿಸಿಬಂದಳು.

೪

ಲಚ್ಚವ್ವ ಯಾವ ಯುಕ್ತಿಯಿಂದ ತಂಗಿಯನ್ನು ನಾಯಕರಲ್ಲಿಗೆ ಕಳುಹಿಸಿ ಪ್ರೇಮಜಾಲ ಬೀಸಿದ್ದಳೋ ಅದು ಸಫಲವಾಗುವ ಲಕ್ಷಣ ತೋರಲಿಲ್ಲ. ಅವಳು ನಿರೀಕ್ಷಿಸಿದಂತೆ ರೊಟ್ಟಿ ಜಾರಿ ತುಪ್ಪದಲ್ಲಿ ಬೀಳುವ ಬದಲು ಕೈಯಿಂದಲೇ ಜಾರಿ ಹೋಗಿತ್ತು. ವಸಂತಳ ಪ್ರೇಮನಿಷ್ಠೆಯೆ ಲಚ್ಚವ್ವಳ ಆಶೆ ಫಲಿಸದಿರಲು ಕಾರಣವಾಯಿತು.

ವಸಂತ ಎಷ್ಟು ಮುಗ್ಧೆಯೋ, ಲಚ್ಚವ್ವ ಅಷ್ಟು ಧೂರ್ತೆ. ತಂಗಿ ಮೃದುಹೃದಯಿಯಾದರೆ ಅಕ್ಕ ಕಠಿಣ ಮನಸ್ಕಳು. ತಂಗಿ ಭಾವುಕ ಜೀವಿ. ಅಕ್ಕ ನಿಷ್ಠುರ ವ್ಯವಹಾರಿ. ಅಕ್ಕತಂಗಿಯರಿಬ್ಬರೂ ಕೂಡಿ ಇದ್ದಾಗ ಇವರ ವಿಭಿನ್ನ ಸ್ವಭಾವಗಳು ಬೆಳಕಿಗೆ ಬರದಾಗಿದ್ದವು. ವಸಂತ ನಾಯಕನ ಅಂತಃಪುರ ಸೇರುತ್ತಲೇ ಆಕೆಯ ಸ್ವಭಾವಸಂಪನ್ನತೆ ತಾನಾಗಿಯೆ ವ್ಯಕ್ತವಾಗಿ ಲಚ್ಚವ್ವನ ಆಶೆಗೆ ನೀರೆರೆಚಿದಂತಾಯಿತು.

ಹೇಗಾದರೂ ಮಾಡಿ ದೊರೆ ಪ್ರಸನ್ನಪ್ಪ ನಾಯಕನನ್ನು ಮೆಚ್ಚಿಸಿ ಅವನಿಂದ ಸಾಧ್ಯವಾದಷ್ಟು ಸಂಪತ್ತನ್ನು ಸಂಗ್ರಹಿಸಿಕೊಂಡು, ಸಿಪ್ಪೆಯಂತೆ ಅವನನ್ನು ತಿರಸ್ಕರಿಸಬೇಕೆಂದು ಲಚ್ಚವ್ವನ ವಾದ ಆದರೆ ವಸಂತಳಿಗೆ ತನ್ನನ್ನು ನಿಜವಾಗಿಯೂ ಹೃದಯ ತುಂಬಿ ಪ್ರೀತಿಸುವ ದೊರೆಗೆ ದ್ರೋಹ ಬಗೆಯುವದು ಸಾಧ್ಯವಾಗದ ಮಾತು. ಲಚ್ಚವ್ವ ವಸಂತರಲ್ಲಿ ಇದರಿಂದಾಗಿಯೆ ವೈಮನಸ್ಸು ತಲೆದೋರಿತು.

"ನೀನು ದೊರೆಯನ್ನು ಕೈಗೊಂಬೆಯಾಗಿ ಮಾಡಿಕೊಂಡು ಅವನ ಸಂಪತ್ತನ್ನು ಸೂರೆ ಮಾಡಬೇಕು" ಎಂದು ಲಚ್ಚವ್ವ ಒಮ್ಮೆ ಅಂದಾಗ ಅಷ್ಟೇ ಸ್ಪಷ್ಟವಾದ ದಿಟ್ಟತನದ ಉತ್ತರ ಕೊಟ್ಟಿದ್ದಳು ವಸಂತ.

"ಅಕ್ಕಾ, ನನಗೆ ಅವರು ಏನು ಕಡಿಮೆ ಮಾಡಿದ್ದಾರೆಂದು ಒಡವೆಗಳಿಗಾಗಿ ಪೀಡಿಸಲಿ, ಅವರು ನನಗೆ ಕೊಟ್ಟಿರುವ ಪ್ರೀತಿ ವಿಶ್ವಾಸಗಳಿಗಿಂತಲೂ, ಅವರ ಭಾಂಡಾರದ ಸಂಪತ್ತು ಬೆಲೆಯುಳ್ಳದ್ದೇ? ಅವರ ಪ್ರೀತಿಯೊಂದು ಶಾಶ್ವತ ಸಂಪತ್ತಾಗಿ ಉಳಿದರೆ ಉಳಿದ ನಶ್ವರ ಸಂಪತ್ತೆಲ್ಲಾ ತಾನಾಗಿ ಬಂದು ಕಾಲ್ಗೊಡಕಾಗುವುದು. ದೇವತಾಪುರುಷರಾದ ಅವರಿಗೆ ನಾನು ದ್ರೋಹ ಎಸಗಲಾರೆ. ಇಲ್ಲ ಅಕ್ಕ. ನೀನು ಏನೇ ಹೇಳು... ಇದೊಂದು ವಿಷಯದಲ್ಲಿ ನಾನು ನಿನ್ನ ಮಾತನ್ನು ನಡೆಸಲಾರೆ..."

"ಹಾಗಿದ್ದರೆ ನಾನು ತಾಡಿಮರಿಗೆ ಹೊರಟು ಹೋಗುತ್ತೇನೆ."

"ನೀನು ಹಾಗೆ ನಿರ್ಧರಿಸಿದ್ದರೆ ನಾನೇನೂ ಮಾಡಲಾರೆ..." ಲಚ್ಚವ್ವನ ಮಾತಿಗೆ ವಸಂತಳ ಅಂತಿಮ ಉತ್ತರವಿದಾಗಿತ್ತು.

ಈ ಮಾತು ಅಲ್ಲಿಗೇ ಮುಗಿಯಿತು. ತಾನೆಂದಂತೆ ಲಚ್ಚವ್ವ ತಾಡಿಮರಿಗೆ ಹಿಂದಿರುಗಿ

ಅಲ್ಲಿ ಅವಳ ಗಂಡನನ್ನು ಎತ್ತಿಕಟ್ಟಿದಳು. ಅವನನ್ನು ಹಿಂದಿಟ್ಟುಕೊಂಡು ಅಲ್ಲಿನ ದೊರೆಯಾದ ದೊಡ್ಡ ತಿರುಮಲನಾಯಕನಲ್ಲಿ ದೂರಿಕೊಂಡಳು.

"ಪ್ರಭೂ, ನಮ್ಮ ಭಾವನಿಗೆ ಅಂನತಪುರದ ನಾಯಕನಿಂದ ಆಗಿರುವ ಅನ್ಯಾಯಕ್ಕೆ ಪರಿಹಾರ ಕಲ್ಪಿಸಿಕೊಡಬೇಕು. ನನ್ನ ತಂಗಿಯ ಬಾಳನ್ನು ಕಿತ್ತು ಅವಳನ್ನುಬಲಾತ್ಕಾರದಿಂದ ಅಂತಃಪುರಕ್ಕೆ ಸೇರಿಸಿಕೊಂಡಿರುವ ಆ ದ್ರೋಹಿಯನ್ನು ಶಿಕ್ಷಿಸಬೇಕು" ಎಂದು ದೈನ್ಯದಿಂದ ಪ್ರಾರ್ಥಿಸಿದಳು.

ಲಚ್ಚವ್ವ ತಂಗಿಯ ಮೇಲೆ ಸೇಡು ತೀರಿಸಿಕೊಳ್ಳಲು ಪಣತೊಟ್ಟು ತಿರುಮಲರಾಯನ ಕಿವಿಗೆ ಏನೇನೋ ತುಂಬಿ ದೊರೆಯ ಮನಸ್ಸಿನಲ್ಲಿ ಪ್ರಸನ್ನನಾಯಕನ ಬಗೆಗೆ ಶಂಕೆಯ ಬೀಜ ಬಿತ್ತಿದಳು. ದೊರೆ ದೊಡ್ಡ ತಿರುಮಲನಾಯಕನು ನಿಜವಾಗಿಯೂ ವಸಂತಳಿಗೆ ಪ್ರಸನ್ನನಾಯಕನಿಂದ ಅನ್ಯಾಯ ನಡೆದಿದೆ ಎಂದು ಭಾವಿಸಿ ಅವಳಿಗೆ ನೆರವಾಗುವುದಾಗಿ ಆಶ್ವಾಸನವಿತ್ತನು.

ಮೊದಲು ಪ್ರಸನ್ನನಾಯಕನಿಗೆ ಅನುನಯದಲ್ಲಿ ಹೇಳಿ ನೋಡಬೇಕೆಂದೂ, ವಸಂತಳನ್ನು ತಂದು ಒಪ್ಪಿಸದಿದ್ದರೆ, ದಂಡನೀತಿಯನ್ನನುಸರಿಸಿ ಬುದ್ಧಿ ಕಲಿಸಬೇಕೆಂದೂ ನಿರ್ಧರಿಸಿ ತಿರುಮಲರಾಯ ಅದರಂತೆ ಲಚ್ಚವ್ವನಿಂದ ವಸಂತಳಿಗೆ ಒಂದು ಪತ್ರ ಬರೆಸಿದನು.

ಪರಾಧೀನವಾಗಿರುವುದಕ್ಕಿಂತ ಸ್ವತಂತ್ರವಾಗಿರುವುದೊಳ್ಳೆಯದು. ಆದ್ದರಿಂದ ಸಾಕಷ್ಟು ದ್ರವ್ಯವನ್ನು ಸಂಗ್ರಹಿಸಿಕೊಂಡು ಸೆರೆತಪ್ಪಿಸಿಕೊಂಡು ಹೊರಟುಬರಬೇಕೆಂದು ಅಕ್ಕನಿಂದ ತಂಗಿಗೆ ಗುಪ್ತ ಪತ್ರ ಹೋಯಿತು. ವಸಂತಳಿಗೆ ಈ ಪತ್ರ ಕೈಸೇರಿತಾದರೂ ಆಕೆ ಯಾವ ಉತ್ತರವನ್ನೂ ಕೊಡುವ ಪ್ರಯತ್ನ ಮಾಡಲಿಲ್ಲ. ಇದರಿಂದ ಲಚ್ಚವ್ವನಿಗೆ ತಾಳ್ಮೆ ತಪ್ಪಿತು. ಕೋಪವೂ ಹೆಚ್ಚಿತು.

ಕೊನೆಗೆ ಅವಳು ಒಂದು ಉಪಾಯ ಮಾಡಿದಳು. ಅನಂತಪುರದ ದೇವರಗುಡ್ಡ ವೆಂಕಟೇಶ್ವರನ ದರ್ಶನದ ನೆಪದಿಂದ ತಂಗಿಯನ್ನು ಬರಮಾಡಿಕೊಂಡು, ಅವಳನ್ನು ಅಪಹರಿಸಬೇಕೆಂದು ಯೋಚಿಸಿದಳು. ಲಚ್ಚವ್ವನ ಯೋಚನೆಯಂತೆ ಸಿದ್ಧತೆ ನಡೆಯಿತು. ತಿರುಮಲನಾಯಕ ಲಚ್ಚವ್ವನಿಗೆ ಸೈನಿಕ ನೆರವು ನೀಡಲೂ ಒಪ್ಪಿದ. ವೆಂಕಟೇಶ್ವರನ ದರ್ಶನಕ್ಕೆ ಬರಬೇಕೆಂದು ತಂಗಿಗೆ ಅಕ್ಕನ ಪ್ರೀತಿಯ ಪತ್ರ ಹೋಯಿತು.

ಇದಾವ ಕುತಂತ್ರವನ್ನೂ ಅರಿಯದ ವಸಂತಳು ದೇವರ ದರ್ಶನಕ್ಕೆ ಬರಲಿದ್ದ ತನ್ನ ಅಕ್ಕನನ್ನು ದೇವರಗುಡ್ಡದಲ್ಲಿ ಸಂಧಿಸಲು ಉತ್ಸುಕಳಾಗಿ ತನ್ನ ನಲ್ಲನ ಜತೆಯಲ್ಲಿ ಈ ಬಗ್ಗೆ ಪ್ರಸ್ತಾಪಿಸಿದಳು.

"ಒಳ್ಳೆಯದು, ಹೋಗಿ ಬಾ. ಆದರೆ ಅಲ್ಲಿ ಹೆಚ್ಚು ಕಾಲ ಉಳಿಯಬೇಡ. ಸಂಜೆಗೇ ಹಿಂದಿರುಗಿ ಬಂದುಬಿಡು. ನಿನ್ನ ಅಕ್ಕನಿಗೆ ಕೊಡಲು ನಾಲ್ಕಾರು ಆಭರಣಗಳನ್ನು ತೆಗೆದುಕೊಂಡು ಹೋಗು. ಸಾಧ್ಯವಾದರೆ ಅವಳನ್ನು ಒಲಿಸಿಕೊಂಡು ಹಿಂದಕ್ಕೆ ಕರೆದುಕೊಂಡು ಬಾ..." ಎಂದು ಸಮ್ಮತಿಸಿದನು, ಪ್ರಸನ್ನ ನಾಯಕ.

ಅದರಂತೆ ಮಿತಪರಿವಾರದೊಂದಿಗೆ ವಸಂತಳು ದೇವರಗುಡ್ಡಕ್ಕೆ ಹೊರಟಳು.

ಅಷ್ಟರಲ್ಲಿ ಗೂಢಚಾರರಿಂದ ದೇವರಗುಡ್ಡದ ಬಳಿ ತಿರುಮಲನಾಯಕನ ಸೈನ್ಯ ಬಂದು ಬೀಡು ಬಿಟ್ಟಿರುವ ಸಂಗತಿ ತಿಳಿಯಿತು.

ಸಂಶಯಗ್ರಸ್ತನಾದ ನಾಯಕನು ಅಕ್ಕ ತಂಗಿಯರಿಬ್ಬರೂ ತನ್ನ ವಿರುದ್ಧ ಯಾವುದೋ ರಹಸ್ಯ ಕಾರ್ಯಾಚರಣೆಗಾಗಿ ದೇವರಗುಡ್ಡಕ್ಕೆ ಹೊರಟಿದ್ದಾರೆ ಎಂದು ಊಹಿಸಿದನು. ಕೂಡಲೇ ವಸಂತಳನ್ನು ಹಿಂದಕ್ಕೆ ಕರೆತರಲು ಆಜ್ಞೆ ಮಾಡಿದನು.

ವಸಂತ ದೇವರಗುಡ್ಡ ತಲುಪುವ ಮೊದಲೇ ನಾಯಕನಾಜ್ಞೆಯಂತೆ ಹಿಂತಿರುಗಬೇಕಾಯಿತು. ಅಂಜುತ್ತಲೇ ಆಕೆ ನಾಯಕನೆದುರಿಗೆ ಬಂದು ನಿಂತಳು. ಒಮ್ಮಿಂದೊಮ್ಮೆಗೇ ನಾಯಕನು ಹೀಗೇಕೆ ಮಾಡಿದನೆಂದು ಆಕೆಗೆ ತಿಳಿಯಲಿಲ್ಲ. ಎದುರುನಿಂತ ಆಕೆಯನ್ನು ನಾಯಕ ತಿರಸ್ಕಾರದಿಂದ ನೋಡಿದ.

"ಸ್ವಾಮಿ, ನನ್ನನ್ನೇಕೆ ಹಿಂದಕ್ಕೆ ಬರಮಾಡಿಕೊಂಡಿರಿ ನಾನು ಮಾಡಿದ ಅಪರಾಧವಾದರೂ ಏನು?" ವಸಂತ ಕೇಳಿದಳು.

"ಈಗ ಬೇಡ ಆ ಮಾತು...ನೀನು ಮುಂದೆ ಎಂದಾದರೂ ನಿನ್ನ ಸಹೋದರಿಯನ್ನು ನೋಡಲು ಹೋಗು ಬೇಕಿದ್ದರೆ ಅವಳ ಜತೆಯಲ್ಲಿ ಮುಂದೆ ಎಂಟು ದಿನವಿದ್ದು ಬಾ...... ಆದರೆ ಈಗ ಬೇಡ." ಬೇಸರದಿಂದ ನುಡಿದ ನಾಯಕ.

"ಸ್ವಾಮೀ, ನನಗಾಗಿ ಅಕ್ಕ ಕಾದಿದ್ದಾಳೆ. ಈಗ ಹೋಗದಿದ್ದಲ್ಲಿ ಅವಳು ಮತ್ತೆ ನನ್ನ ಮೇಲೆ ಕೆಂಡ ಕಾರುತ್ತಾಳೆ ಇಲ್ಲದ..."

"ಛೀ ಮಾತನಾಡಬೇಡ ಎಲ್ಲಾ ಠಕ್ಕು ನಿನ್ನದು ನೀವಿಬ್ಬರೂ ಅಕ್ಕ-ತಂಗಿಯರು ಕೂಡಿ ಏನೋ ಕುತಂತ್ರ ನಡೆಸಲು ಹೊರಟಿರುವಿರಿ"

"ಪ್ರಭೂ, ಅನ್ಯಥಾ ನನ್ನನ್ನು ದೂಷಿಸಬೇಡಿ. ನಾನು ನಿಮಗಾವ ದ್ರೋಹವನ್ನೂ ಬಗೆಯಲಾರೆ. ಕನಸಿನಲ್ಲಿ ಕೂಡ..."

"ಓಹೋ! ಏನೂ ಅರಿಯದವಳಂತೆ ಮಾತನಾಡುತ್ತಿರುವೆಯಲ್ಲ?...ಈ ಪತ್ರ ಯಾರದು? ಯಾರನ್ನು ವಂಚಿಸಲೆಂದು ಈ ಪತ್ರ ನಿನಗೆ ಬಂತು......" ನಾಯಕ ಕೆಂಡಗಣ್ಣಿನಿಂದ ನೋಡುತ್ತ ಗರ್ಜಿಸಿದ.

ಲಚ್ಚವ್ವ ತನಗೆ ಬರೆದಿದ್ದ ಪತ್ರ ಅದು ಹೇಗೊ ನಾಯಕನ ಕೈಸೇರಿತ್ತು. ತಾನಾಗಲೇ ಅದನ್ನು ಹರಿದು ಬಿಸಾಡಬೇಕಿತ್ತು. ತನ್ನ ಉದಾಸೀನದಿಂದಾಗಿ ಹೀಗಾಗುವುದೆಂದು ಯಾರಿಗೆ ತಾನೇ ಗೊತ್ತು? ವಸಂತ, ನಾಯಕನ ಗರ್ಜನೆ ನುಡಿಗೆ ಥಂಥರನೆ ನಡುಗಿ ಹೋದಳು. ಅವಳ ಬಾಯಿಂದ ಮಾತು ಹೊರಡದಾಯಿತು

ಅವಳ ಮೌನ ಕಂಡು ನಾಯಕ ಮತ್ತೆ ಗರ್ಜಿಸಿದ,

"ಬೊಗಳು. ಯಾರ ವಿರುದ್ಧ ಈ ನಿನ್ನ ಪಿತೂರಿ?"

"ಸ್ವಾಮೀ, ನನಗಾವುದೂ ತಿಳಿಯದು. ಅಕ್ಕ ನನಗೀ ಪತ್ರ ಬರೆದುದೇನೋ ನಿಜ. ಆದರೆ ನಾನು ಅವಳ ದ್ರೋಹದ ಬಲೆಗೆ ಬೀಳಲಾಗದೆಂದು ನಿರ್ಧರಿಸಿ ಅವಳ ಪತ್ರಿಕ್ಕೆ ಮಾರುತ್ತರ ಕೂಡ ಬರೆಯಲಿಲ್ಲ......"

"...ನನಗೇಕೆ ಮೊದಲೇ ಈ ವಿಷಯ ತಿಳಿಸಲಿಲ್ಲ?"

"ಸಂದರ್ಭ ಬಂದಾಗ ತಿಳಿಸೋಣವೆಂದು ಸುಮ್ಮನಿದ್ದೆ ಪ್ರಭೂ"

"ಶುದ್ಧ ಸುಳ್ಳು, ಮೋಸ. ಅಕ್ಕನ ದ್ರೋಹಕ್ಕೆ ಮನಗೊಡದಾಕೆ ಈಗೇಕೆ ಅವಳನ್ನು ಕಾಣಲು ಹೊರಟಿದ್ದೆ?"

"ಅವಳಿಗೆ ಕೊನೆಯ ಬಾರಿಗೆ ನನ್ನ ನಿರ್ಧಾರ ತಿಳಿಸಲೆಂದು..."

"ವಂಚಕಿ...ನೀನು ಗಂಡ ಬಿಟ್ಟವಳೆಂದು ನನಗೆ ಹೇಳಲಿಲ್ಲವಲ್ಲ......ಕಾರಣ ಕೇಳಬಹುದೆ...?"

ನಾಯಕನ ಈ ಪ್ರಶ್ನೆಗೆ ವಸಂತಳ ಬಾಯಿ ಕಟ್ಟಿ ಹೋಯಿತು. ತನ್ನ ಗಂಡನ ವಿಷಯ ಎಂದಿದ್ದರೂ ನಾಯಕನಿಗೆ ತಿಳಿದೇ ತೀರಯುವದೆಂದು ವಸಂತಳಿಗೆ ಗೊತ್ತಿತ್ತು. ಪ್ರಸಂಗ ಬಂದಾಗ ತಾನೇ ಎಲ್ಲ ವಿಷಯವನ್ನು ನಾಯಕರಿಗೆ ಹೇಳಿ ಬಿಡಬೇಕೆಂದುಕೊಂಡಿದ್ದಳು. ಆದರೆ ಈಗ ಪ್ರಸಂಗ ಮೀರಿಹೋಗಿತ್ತು.

"...ಹೋಗಲಿ ವಸಂತ ಈಗ ನಿನ್ನನ್ನು ಸ್ವಾಗತಿಸಲು ದೇವರಗುಡ್ಡದಲ್ಲಿ ತಿರುಮಲರಾಯನ ಸೈನ್ಯದೊಂದಿಗೆ ಕಾದಿರುವ ನಿನ್ನ ಅಕ್ಕನೊಂದಿಗೆ ಯಾವ ಪಿತೂರಿ ನಡೆಸಲಿದ್ದೆ, ಹೇಳುವೆಯಾ?" ನಾಯಕ ಕ್ರೋಧದಿಂದ ಕೇಳಿದ. ವಸಂತಳನ್ನು ಅಪಹರಿಸುವ ನಾಟಕ ಹೂಡಿ ತನ್ನನ್ನು ಕೆಣಕುವ ದುರುದ್ದೇಶವಿತ್ತೆಂಬುದು ಪ್ರಸನ್ನನಾಯಕನಿಗೆ ತಿಳಿದು ಹೋಗಿತ್ತು. ನಿರಪರಾಧಿ ವಸಂತಳೂ ಇದರಲ್ಲಿ ಪೂರ್ಣಭಾಗಿಯೆಂದು ಅವನು ತಪ್ಪು ಭಾವಿಸಲು ವಸಂತಳ ನಿರ್ವಂಚನೆಯ ವರ್ತನೆಯೇ ಕಾರಣವಾಯಿತು.

"ಇದೊಂದೂ ನನಗೆ ತಿಳಿಯದು ಸ್ವಾಮಿ. ನಾನು ನಿರಪರಾಧಿ" ವಸಂತ ಕಣ್ತುಂಬ ನೀರು ತಂದುಕೊಂಡು ನುಡಿದಳು. ನಾಯಕನನ್ನು ದೈನ್ಯದಿಂದ ನೋಡಿ ತನ್ನ ನಿರಪರಾಧಿತ್ವ ಬಿಂಬಿಸಲೆತ್ನಿಸಿದಳು. ಆದರೆ ನಾಯಕ ಕೋಪ, ತಿರಸ್ಕಾರದ ಭರದಲ್ಲಿ ವಸಂತಳ ನಿರ್ದೋಷಿತನವನ್ನು ಅರಿಯಲೆತ್ನಿಸದಾದ

"ಅನ್ನವಿಟ್ಟು ಸಲಹಿದವರಿಗೇ ದ್ರೋಹ...... ಛೀ ನಾಯೀ ತೊಲಗಿಲ್ಲಿಂದ......" ಎಂದು ಕಟು ಮಾತುಗಳಾಡಿ ತಾನೇ ಎದ್ದು ಹೋಗಲನುವಾದ. ಆಗ ವಸಂತ ಓಡಿ ಬಂದು ನಾಯಕನ ಕಾಲು ಹಿಡಿದು ಬೇಡಿದಳು,

"ಸ್ವಾಮೀ, ನನ್ನ ಮಾತು ನಂಬಿರಿ. ನನಗೆ ಈ ದ್ರೋಹದ ಸಂಗತಿಯೊಂದೂ ತಿಳಿಯದು"

"ಸಾಕು ನಿನ್ನ ನಾಟಕ, ಕೆಟ್ಟ ಹೆಣ್ಣೇ! ನಿನ್ನನ್ನು ಸುಮ್ಮನೆ ಬಿಡುವೆನೆಂದಿರುವೆಯಾ? ನಿನ್ನಂಥವಳಿಗೆ ತಕ್ಕ ಬುದ್ಧಿಯನ್ನು ಕಲಿಸಲೇಬೇಕು." ಎಂದು ಹೇಳಿ ಕಾಲಿಗೆ ಬಿದ್ದ ಅವಳನ್ನು ಒದ್ದು ದೂರ ನೂಕಿದನು ನಾಯಕ.

ಅವಳು ದುಃಖದಿಂದ ಅಯ್ಯೋ ಎಂದು ಚೀರಿದಳು.

ಹಾಗೆ ಹೋದ ನಾಯಕನು ಮೂರು ದಿನಗಳಾದರೂ ವಸಂತಳ ಬಳಿಗೆ ಬರಲಿಲ್ಲ. ಅವಳನ್ನು ಏನೆಂದು ವಿಚಾರಿಸಿಕೊಳ್ಳಲಿಲ್ಲ. ಇದರಿಂದ ಅವಳಿಗೆ ತುಂಬಾ ದುಃಖವಾಯಿತು. ಅದು ಅಸಮಾಧಾನಕ್ಕೂ ಎಡೆಕೊಟ್ಟಿತು. ತನ್ನದಾವ ತಪ್ಪಿಲ್ಲದಿದ್ದರೂ ತನ್ನನ್ನು ಪಶುವಿನಂತೆ ನಡೆಸಿಕೊಂಡನಲ್ಲ ಎಂದು ಅವಳ ಅಪಮಾನಿತ ಹೆಣ್ಣು ಹೃದಯ ಹಂಬಲಿಸಿತು.

ನಾಯಕನು ಬಂದು ಅವಳನ್ನು ಒಮ್ಮೆಯಾದರೂ ಮಾತನಾಡಿಸಿದ್ದರೆ ವಿಶ್ವಾಸದಿಂದ ನಡೆಸಿಕೊಂಡಿದ್ದರೆ ಅವಳ ಅಸಮಾಧಾನ, ಅಪಮಾನ ಮಂಜಿನಂತೆ ಕರಗಿ ಹೋಗುತ್ತಿತ್ತು. ಆದರೆ ಅವನು ತನ್ನ ಅನಾದರ, ನಿರ್ಲಕ್ಷ್ಯಗಳಿಂದಲೂ, ನಿಷ್ಠುರ ನಡವಳಿಕೆಯಿಂದಲೂ ಅವಳ ಮನಸ್ಸು ಕಲ್ಲಾಗುವಂತೆ ಮಾಡಿದ. ಪ್ರತೀಕಾರ ಭಾವನೆಯುದಿಸಲು ಎಡೆಯಿತ್ತ.

ಹೀಗಿರುವಲ್ಲಿ ಒಂದು ದಿನ ನಾಯಕನು ತುಂಬಾ ಬೇಸರಗೊಂಡು ಅವಳ ಬಳಿಗೆ ಬಂದನು. ಆದರೆ ವಸಂತಳನ್ನು ಮಾತನಾಡಿಸದೆ, ತನ್ನ ಮನಸ್ಸಿಗಾದ ನೈರಾಶ್ಯವನ್ನೂ, ದುಃಖವನ್ನೂ ಮರೆಯಲು ಅಲ್ಲಿದ್ದ ಮದ್ಯವನ್ನು ಮೇಲಿಂದ ಮೇಲೆ ಸೇವಿಸಿ, ತನ್ನೊಂದಿಗೆ ಮಾತನಾಡಲೆತ್ನಿಸಿದ ವಸಂತಳನ್ನು ಅಮಲಿನ ಭರದಲ್ಲಿ ಬಾಯಿಗೆ ಬಂದಂತೆ ಜರಿದ. "ಸ್ವಾಮಿ ನನ್ನ ಮಾತನ್ನು ನಂಬಿರಿ. ನನ್ನದು ತಪ್ಪಿದ್ದರೆ ನೀವು ವಿಧಿಸಿದ ಶಿಕ್ಷೆಯನ್ನು ಅನುಭವಿಸುತ್ತೇನೆ. ವೃಥಾರೋಪ ಹೊರಿಸಿ ನನ್ನನ್ನು ಹಿಂಸಿಸಬೇಡಿ" ಎಂದು ಕಾಲಿಗೆ ಬೀಳಲು ಬಂದ ಅವಳನ್ನು ಅವನು ಜಾಡಿಸಿ ಒದ್ದನು.

"ಅಯ್ಯೋ ಸತ್ತೆ!" ಎಂದು ಚೀರಿ ವಸಂತ ನೆಲಕ್ಕೆ ಬಿದ್ದಳು.

"ಸೂಳೆ ಸಾಯಿ! ನೀನು ಬದುಕಿಲ್ಲವೆಂದು ಯಾರು ಅಳುತ್ತಾರೆ...ಸತ್ತರೆ ನಾನು ನಿಶ್ಚಿಂತೆಯಿಂದಿರುತ್ತೇನೆ. ಈಗಲೇ ಸಾಯಿ!" ಎಂದು ಮದ್ಯದ ಅಮಲಿನಲ್ಲಿ ಒರಲಿದ ನಾಯಕ.

ನಾಯಕನ ಮಾತು ವಸಂತಳ ಹೃದಯವನ್ನು ಘಾತಿಸಿತು. ನೊಂದ ಹೃದಯಕ್ಕೆ ಬೆಂಕಿಯಿಕ್ಕಿದಂತಾಯಿತು. ವಸಂತ ಕೆಣಕಿದ ಸರ್ಪಿಣಿಯಾದಳು. ಕೋಪದ ಭರದಲ್ಲಿ ಸೇಡಿನ ಕೈಗೆ ಬುದ್ಧಿ ಇತ್ತಳು. ಒಲಿದನಾರಿ; ಮುನಿದ ಮಾರಿಯಾದಳು.

- ೫ -

ಆ ದಿನ ರಾತ್ರಿ ಮದ್ಯದ ಅಮಲಿನಿಂದ ಪ್ರಸನ್ನನಾಯಕ ಗಾಢ ನಿದ್ರೆಯಲ್ಲಿದ್ದ. ಮಧ್ಯರಾತ್ರಿಯ ಕಾರಿರುಳು ಅನಂತಪುರವನ್ನು ಆಲಂಗಿಸಿ, ಮೈಮರೆಸಿತ್ತು. ವಸಂತಳ ಕೋಣೆಯಲ್ಲಿ ಮಾತ್ರ ದೀಪವಿನ್ನೂ ಬೆಳಗುತ್ತಿತ್ತು.



ರಾತ್ರಿಯ ಕಾಳ್ಗತ್ತಲೆಯಲ್ಲಿ ಮುಸುಕು ಹಾಕಿದ ಒಂದು ವ್ಯಕ್ತಿ ಹೊರಗೆ ಬಂದು ಎಲ್ಲೆಡೆಗೂ ಸೂಕ್ಷ್ಮವಾಗಿ ನೋಡಿತು. ಪಹರೆಯ ಸೈನಿಕರ ಮುಖಂಡ ದಳವಾಯಿ ಹಾವಿನಾಯಕನು ಮೈಮೇಲೆ ಎಚ್ಚರಿಕೆಯಿಲ್ಲದೆ ಮಲಗಿದ್ದ. ದೂರದಲ್ಲಿ ಮಾತ್ರ ಇಬ್ಬರು ಸೈನಿಕರು ತೂಕಡಿಸುತ್ತಾ ಕಾವಲು ಕಾಯುತ್ತಿದ್ದರು.

ಆ ವ್ಯಕ್ತಿ ಧೈರ್ಯವಾಗಿ ಒಳಗೆ ಬಂದಿತು. ಅಲ್ಲಿದ್ದ ಪೆಟ್ಟಿಗೆಯನ್ನೆಲ್ಲಾ ತೆಗೆದು ಬೆಲೆಬಾಳುವ ವಸ್ತ್ರ ಒಡವೆಗಳನ್ನು ಗಂಟು ಕಟ್ಟಿತು ಅದನ್ನು ತನ್ನ ಸೊಂಟಕ್ಕೆ ಬಿಗಿಯಿತು. ಅನಂತರ ಮೆಲ್ಲನೆ ಕಳ್ಳಹೆಜ್ಜೆ ಇಟ್ಟು ನಾಯಕನು ಮಲಗಿದ್ದ ಮಂಚದ ಬಳಿಗೆ ಬಂದಿತು. ನಾಯಕ ಇಹಲೋಕದ ಎಚ್ಚರವಿಲ್ಲದೆ ಮಲಗಿದ್ದ. ಅವನ ಗೊರಕೆ ವಿಚಿತ್ರವಾಗಿ ಕೇಳಿಸುತ್ತಿತ್ತು ಆ ವ್ಯಕ್ತಿ ನಾಯಕನ ಮಂಚದ ಬಳಿಸಾರಿ, ಮತ್ತೊಮ್ಮೆ ಸುತ್ತು ನೋಡಿ ತನ್ನ ಸೊಂಟದಲ್ಲಿದ್ದ ಕಠಾರಿಯನ್ನು ಮೆಲ್ಲನೆ ತೆಗೆದುಕೊಂಡು ಕನಸು ಕಾಣುತ್ತ ಮಲಗಿದ್ದ ನಾಯಕನನ್ನು ದುರದುರನೆ ನೋಡಿ, ಕಠಾರಿ ಎತ್ತಿ ಬಲವಾಗಿ ಅವನ ಎದೆಯಲ್ಲಿ ತಿವಿಯಿತು. "ಅಯ್ಯೋ ಸತ್ತೇ!" ಎಂದು ನಾಯಕ ಚೀರಿ ಮಂಚದಿಂದ ನೆಲಕ್ಕೆ ಉರುಳಿದ. ನಾಯಕನ ಕೈ ತಾಕಿ ಪಕ್ಕದಲ್ಲಿ ಮಂದಪ್ರಕಾಶವಾಗಿ ಉರಿಯುತ್ತಿದ್ದ ದೀಪದಕಂಬ ನೆಲಕ್ಕೆ ಬಿದ್ದು ದೀಪ ಆರಿಹೋಯಿತು. ಕೋಣೆಯಲ್ಲಿ ಕತ್ತಲೆ ತುಂಬಿತು. ನಾಯಕನು ನೋವಿನಿಂದ ಚೀರುತ್ತಿದ್ದ. ಆ

ವ್ಯಕ್ತಿ ಕೊಟ್ಟಿದ್ದ ಪೆಟ್ಟು ಹೃದಯವನ್ನು ಘಾತಿಸಿದ್ದರೂ, ಪ್ರಾಣ ಹೋಗಿರಲಿಲ್ಲ. ಗಾಸಿಗೊಂಡ ಹಿಂಸ್ರ ಜಂತುವಿನಂತೆ ವಿಕಟವಾಗಿ ಚೀರುತ್ತಿದ್ದ ನಾಯಕ.

ಈ ಸ್ಥಿತಿಯಲ್ಲಿ ಅಲ್ಲಿ ಉಳಿಯುವುದು ಅಪಾಯವೆಂದರಿತು ಆ ವ್ಯಕ್ತಿ ಮೆಲ್ಲನೆ ಅಲ್ಲಿಂದ ಪಾರಾಗಲು ನೋಡಿತು. ಕತ್ತಲು ತುಂಬಿದ ಕೋಣೆಯಲ್ಲಿ ಬಾಗಿಲು ಕಾಣದೆ ಮೆಲ್ಲನೆ ಗೋಡೆಯನ್ನು ತಡಕಿಕೊಂಡು ಹೊರಟಿತು. ಅಷ್ಟರಲ್ಲಿ ಗೋಡೆಗೆ ಹಾಕಿದ್ದ ಗುರಾಣಿ ಬಡಿದು, ನೆಲಕ್ಕೆ ಬಿದ್ದು ಠಣ್ ಎಂದು ಶಬ್ದ ಮಾಡಿತು. ನೀರವವಾದ ಆ ರಾತ್ರಿಯಲ್ಲಿ ಅದು ಅಪಾಯಸೂಚಕ ಗಂಟೆ ಹೊಡೆದಂತೆ ಕೇಳಿಸಿತು. ಗುರಾಣಿಯ ಶಬ್ದ ಕೇಳಿ ನಿದ್ರೆಯಲ್ಲಿದ್ದ ಹಾವಿನಾಯಕನು ಎಚ್ಚರಗೊಂಡನು.

ಅವನು ಮೆಲ್ಲನೆ ಆಲಿಸಿದ. ನಾಯಕನ ಚೀರುವಿಕೆ ಕೇಳಿಸಿತು. ಅವನಿಗೆ ನೆತ್ತರು ಹೆಪ್ಪುಗಟ್ಟಿತು. ಗಾಬರಿಯಾಗಿ ಮತ್ತೆ ಆಲಿಸಿದ. ಯಾರೋ ತನ್ನ ಕಡೆಗೆ ನಡೆದುಬರುವಂತೆ ಹೆಜ್ಜೆಯ ಸಪ್ಪಳ ಕೇಳಿಸಿತು. ಅವನು ಕೂಡಲೇ ಕತ್ತಿ ಹಿರಿದು ಅಲ್ಲಿದ್ದ ಸೊಡಿಯನ್ನು ತೆಗೆದುಕೊಂಡು ನಾಯಕನ ಶಯನಗೃಹದ ಕಡೆಗೆ ಹೆಜ್ಜೆ ಹಾಕಿದನು.

ಅವನು ನಾಯಕನ ಶಯ್ಯಾಗೃಹದ ಬಾಗಿಲಿಗೆ ಬರುವುದಕ್ಕೂ ಮೈಯೆಲ್ಲಾ ರಕ್ತದಲ್ಲಿ ತೊಯ್ದುಕೊಂಡು ಒಂದು ವ್ಯಕ್ತಿ ಎದುರಿಗೆ ಬರುವುದಕ್ಕೂ ಸರಿಹೋಯಿತು. ಅವನು ಸೊಡಿಯ ಬೆಳಕನ್ನು ಆ ಕಡೆಗೆ ಹಾಯಿಸಿ ನೋಡುತ್ತಾನೆ- ಅದು ಬೇರಾರೂ ಅಲ್ಲಲ್ಲಿ ವಸಂತ! ಅವಳ ಕಳವಳಪೂರ್ಣ ನೋಟ. ಹೆದರಿಕೆ ತುಂಬಿದ ಮುಖ, ಕಳ್ಳ ಹೆಜ್ಜೆ, ರಕ್ತರಂಜಿತ ವಸ್ತ್ರಗಳನ್ನು ನೋಡುತ್ತಲೇ ಅವಳು ನಾಯಕನನ್ನು ಕೊಲೆ ಮಾಡಿರಬೇಕೆಂದು ಹಾವಿನಾಯಕನಿಗೆ ಅನುಮಾನವಾಯಿತು. ಕೂಡಲೆ ಅವನ ಮುಖ ಗಂಟಿಕ್ಕಿತು. ಅವನ ಉಗ್ರತೆ, ಕೈಯಲ್ಲಿದ್ದ ಖಡ್ಗ ನೋಡಿಯೇ ವಸಂತ ಹೆದರಿ, ಅಲ್ಲಿಂದ ಓಡಿದಳು. ಆದರೆ ಪಹರೆಯವರು ಅವಳನ್ನು ತಡೆದು ಬೆನ್ನಟ್ಟಿಬಂದ ಹಾವಿನಾಯಕನಿಗೆ ಒಪ್ಪಿಸಿದರು.

ಹಾವಿನಾಯಕನು ಅವಳನ್ನು ಸೈನಿಕರಿಗೆ ಒಪ್ಪಿಸಿ, ನಾಯಕನ ರಕ್ಷಣೆಗೆ ಧಾವಿಸಿದ. ಆದರೆ ಅಷ್ಟರಲ್ಲಿ ಆಗಬಾರದುದು ಆಗಿ ಹೋಗಿತ್ತು. ನಾಯಕನು ವಸಂತಳ ವಿದ್ರೋಹಕ್ಕೆ ಬಲಿಯಾಗಿದ್ದನು. ಅವನ ದೇಹ ರಕ್ತದ ಮಡುವಿನಲ್ಲಿ ಚಲ್ಲಿತ್ತು.

ಬೆಳಗಾದ ಕೂಡಲೇ ಹಾವಿನಾಯಕನು ಈ ಸುದ್ದಿಯನ್ನು ರಹಸ್ಯವಾಗಿರಿಸಿ ಪ್ರಸನ್ನನಾಯಕನ ಸೋದರ ಪವಾಡನಾಯಕರನ್ನು ಕರೆತರಲು ಬುಕ್ಕಪಟ್ಟಣಕ್ಕೆ ದೂತರನ್ನು ಕಳುಹಿಸಿಕೊಟ್ಟ. ಅಲ್ಲಿಯವರೆಗೆ ವಸಂತಳನ್ನು. ಅವಳ ಬಳಿಯಿದ್ದ ಒಡವೆ ವಸ್ತ್ರಗಳನ್ನು ವಶಪಡಿಸಿಕೊಂಡು. ಸೆರೆಮನೆಯಲ್ಲಿ ದೂಡಿದನು.

ಪವಾಡನಾಯಕನು ಬಂದ ಕೂಡಲೇ ಅವನಿಗೆ ಹಾವಿನಾಯಕನು ನಡೆದಿದ್ದ ವೃತ್ತಾಂತ ತಿಳಿಸಿದನು.

ತನ್ನ ಅಣ್ಣನನ್ನು ಮೋಸದಿಂದ ಕೊಂದ ವಸಂತಳಿಗೆ ಪವಾಡನಾಯಕ ಉಗ್ರ ಮರಣ ದಂಡನೆ ಶಿಕ್ಷೆ ವಿಧಿಸಿದನು.

ನಾಯಕನ ಆಜ್ಞೆಯಂತೆ ರಾಜದೂತರು ವಸಂತಳನ್ನು ಗೋಡೆಯಲ್ಲಿ ಹುಗಿದು ಜೀವಂತ ಸಮಾಧಿ ಮಾಡಿದರು.

ಪ್ರಸನ್ನನಾಯಕನಿಗೆ ರಾಜೋಚಿತವಾದ ಅಂತ್ಯಕ್ರಿಯೆ ನಡೆಯಿತು. ಅನಂತರ ಪವಾಡನಾಯಕನು ಶಾರ್ವರಿ ಸಂವತ್ಸರದಲ್ಲಿ ಸಿಂಹಾಸನವನ್ನೇರಿದ.

ವಿಕಾರಿನಾಮ ಸಂವತ್ಸರವು ಪ್ರಸನ್ನನಾಯಕನ ಜೀವನದಲ್ಲಿ ಅತ್ಯಂತ ವಿಕಾರವಾದ ಸಾವನ್ನೇ ತಂದಿತ್ತು. ಈ ಘಟನೆ ಅನಂತಪುರದ ಇತಿಹಾಸದಲ್ಲಿ ರಕ್ತರಂಜಿತ ಅಧ್ಯಾಯವಾಗಿ ಉಳಿಯಿತು.



## ಗುರು, ವೈದ್ಯ ಗುರು



ಮಾಸ್ತರರೆ ನಮ್ಮ ಊರಲ್ಲಿ ಡಾಕ್ಟರರು ।
ಎಲ್ಲ ಕಾಹಿಲೆಗೂ ಮದ್ದು ಕೊಡುತಿಹರು ।
ಔಷಧಿಯ ಸೇವಿಸಿ ಉಳಿದವನೆ ಬಂಟ ।
ಚುಚ್ಚಿಸಿಕೊಂಡರೆ ಬಾಯುವದು ಸೊಂಟ ।

—ಎಂ. ಗೋವಿಂದ

ಗೊರೂರ ರಾಮಸ್ವಾಮಿ
ಅಯ್ಯಂಗಾರ

# ಜಾನಪದ ಜೀವನಕ್ಕೆ ದೀಪಾವಳಿಯ ಸ್ಫೂರ್ತಿ



ದೀಪಾವಳಿ, ನಮ್ಮ ನಾಡಿನ ಪ್ರಾಚೀನ ಹಬ್ಬ ನಮ್ಮ ಮನೆಗಳಲ್ಲಿ ಆನಂದದ ಸೊಡರನ್ನು ಹತ್ತಿಸುವ ಹಬ್ಬ ಇದು. ಯುವಕ ಯುವತಿಯರ ದುಮ್ಮಾನಗಳನ್ನು ಬಿರುಗಾಳಿಗೆ ತೂರಿ ಸುಮ್ಮಾನಗಳ ಮಿಂಚಿನ ಕುಡಿಯನ್ನು ಹೊಳಿಸಿ, ಬೀಗ ಬೀಗಿತ್ತಿಯರ ಆಕ್ರೋಶಗಳನ್ನು ಶಾಂತಿ ಮಾಡಿ ಆನಂದದ ಬೆಳಕನ್ನು ಅವರಲ್ಲಿ ಮಿಂಚಿಸುವ ದೀಪಗಳ ಸಾಲು, ಈ ಹಬ್ಬ ಇಂದು ಅಳಿಯ ದೇವರು, ಪ್ರಿಯೆಯರ ಮನೆಗೆ ಧಾವಿಸುತ್ತಾರೆ ಎಲ್ಲಿಯೋ ನೂರಾರು ಸಾವಿರಾರು ಮೈಲಿಗಳ ಆಚೆ ಇರುವ ತಮ್ಮ ವಧುವನ್ನು ನೆನೆಯುತ್ತಾ ವಾಯುವೇಗ ಮನೋವೇಗದಿಂದ ಹಾರುತ್ತಾರೆ. ಇದು ವಿವಾಹಕ್ಕಿಂತ ಹೆಚ್ಚು ಸಂಭ್ರಮ. ವಿವಾಹದಲ್ಲಿ ವಧು-ವರರು ಬೀಗರು ಇವರ ಉಪಚಾರಕ್ಕಿಂತ ಉಳಿದ ಇಷ್ಟಮಿತ್ರರು ಆಹ್ವಾನಿತರು, ಇವರ ಸಂಭ್ರಮವೇ ಹೆಚ್ಚಾಗಿತ್ತು. ಈಗ ಹೆಣ್ಣಿನ ಮನೆಯವರೂ ಗಂಡಿನ ಮನೆಯವರೂ ಒಟ್ಟಿಗೆ ಸೇರಿ ಶಾಂತರಾಗಿ ನೆಮ್ಮದಿಯಿಂದ ಪರಸ್ಪರ ಯೋಗಕ್ಷೇಮ ಸುಖ ಶಾಂತಿಗಳನ್ನು ವಿಚಾರಿಸಬಹುದು. ವಿವಾಹದ ಹೊಸ ಪರಿಚಯದ ಸಂಕೋಚದಲ್ಲಿ, ಹೊಸ ಹೆಂಡತಿಯನ್ನು ಕದ್ದು ನೋಡುತ್ತಿದ್ದ ಗಂಡ, ಇಂದು ಅವಳೊಡನೆ ಸ್ವಲ್ಪ ಸಲುಗೆಯಿಂದ, ಪ್ರೇಮದ ಪ್ರಥಮ ಸಂಭಾಷಣೆಯನ್ನು ಮಾಡಬಹುದು. ಬರದಿರುವ ಅಳಿಯಂದಿರು ಬರಲು ಇನ್ನೂ ಹೊತ್ತು ಇದೆ ಎಲ್ಲರೂ ಆ ವೇಳೆಗೆ ಸೇರುತ್ತಾರೆ. ಎಲ್ಲೆಲ್ಲಿಯೂ ಪಟಾಕಿಗಳ ಸಂಭ್ರಮವೋ ಸಂಭ್ರಮ.

ಭಾರತೀಯರು, ಇರುವ ಕಡೆಗಳಲ್ಲೆಲ್ಲ ದೀಪಾವಳಿಯನ್ನು ಆಚರಿಸುತ್ತಾರೆ. ಇದರ ಕೊಂಡಾಟ ಭಾರತೀಯರು ಇರುವ ಸಿಲೋನ್ ಸಿಂಗಪೂರ್, ಬಾಲಿ, ಜಾವಾ, ಬರ್ಮಾ ಮುಂತಾದ ಎಲ್ಲ ಕಡೆಗಳಲ್ಲಿಯೂ ನಡೆಯುತ್ತದೆ. ಇದು ಪ್ರಕೃತಿ ಪ್ರಸನ್ನವಾಗಿರುವ ಕಾಲ ಉತ್ತರೆ, ಹಸ್ತ 'ಚಿತ್ತೆ' ಸ್ವಾತಿ ಮಳೆಗಳು ದೀಪಾವಳಿಗೆ ಮೊದಲೂ ಅನಂತರವೂ ಬರುತ್ತವೆ ಭೂದೇವಿ ಹಸಿರುಡೆಯುಟ್ಟು ಹೊಸ ಉತ್ಸಾಹದ ಮೆರುಗಿನಲ್ಲಿ ಜಗತ್ತಿಗೆ ಆನಂದವನ್ನು ಬೀರುತ್ತಿರುತ್ತಾಳೆ. ದೀಪಾವಳಿಯ ಅಕ್ಕಪಕ್ಕದಲ್ಲಿ ಹುಟ್ಟುವ ಸ್ವಾತಿ ಮಳೆ; ಇದಕ್ಕೆ ಮುತ್ತಿನ ಮಳೆಯೆಂದೇ ಹೆಸರು. ಈಗ ಗೋವುಗಳು ಮೇವು ಮೇದು ಉಂಗುರ ಮೈಮೇಲೆ ಇಟ್ಟರೆ ಜಾರುವಷ್ಟು ಪುಷ್ಟವಾಗಿರುತ್ತವೆ. ಪ್ರಕೃತಿ, ಎರಡು ಕೈಗಳಿಂದಲೂ, ಕೇಸ ಮಾಡುವವರಿಗೆ ಹಾಲು, ಹಣ್ಣು ಜೇನುಗಳನ್ನು ಸೂರೆಗೊಡುತ್ತದೆ.

ನಮ್ಮ ಧರ್ಮಗಳ ಮುಖ್ಯಗುರಿ ಧರ್ಮಕ್ಕೆ ವಿರುದ್ಧವಲ್ಲದ ಲೌಕಿಕ ಆನಂದ ಮತ್ತು ಆಧ್ಯಾತ್ಮಿಕ ಆನಂದ. ಸಂತೋಷ ಆನಂದಗಳನ್ನು ಕೊಡದುದು ಹಬ್ಬವೇ ಅಲ್ಲ. ಈ ಆನಂದ ಬರಿಯ ಮನುಷ್ಯನಿಗೆ ಮಾತ್ರವೇ ಅಲ್ಲ, ಪಶುಪಕ್ಷಿ, ಮೃಗಸಂಕುಲ ಕ್ರಿಮಿಕೀಟ ಅಖಿಲ ಜಗತ್ತಿಗೇ ಉಂಟಾಗುತ್ತದೆ. ಈ ಆನಂದ, ಅಲೌಕಿಕ, ಆಧ್ಯಾತ್ಮಿಕವೂ ಹೌದು. ಆದುದರಿಂದ ನಮ್ಮ ಧರ್ಮಗಳಲ್ಲಿ ಹಬ್ಬಗಳಿಗೆ ಅತ್ಯಂತ ಮುಖ್ಯವಾದ ಸ್ಥಾನವನ್ನು ಕೊಟ್ಟಿದ್ದಾರೆ ದೀಪಾವಳಿ! ಹೆಸರೇ ಸೂಚಿಸುವಂತೆ ಇದು ದೀಪಗಳ ಸಾಲು. ಉತ್ತರ ಭಾರತದಲ್ಲಿ ದೀಪಾವಳಿಯಲ್ಲಿ ಪ್ರತಿ ದೇವಸ್ಥಾನದಲ್ಲಿಯೂ, ಪ್ರತಿ ಮನೆಯಲ್ಲಿಯೂ ಸೊಡರುಗಳ ಸಾಲನ್ನು ಬೆಳಗಿಸುತ್ತಾರೆ; ನಮ್ಮಲ್ಲಿ ಕಾರ್ತಿಕ ದೀಪವನ್ನು ಹಚ್ಚುವಂತೆ ಈಚೆಗೆ ನಮ್ಮಲ್ಲಿಯೂ ದೀಪಗಳನ್ನು ದೀಪಾವಳಿಯಲ್ಲಿ ಹಚ್ಚುತ್ತಾರೆ ನಮ್ಮ ಬಾಳ ಪಥಕ್ಕೆ ಬೆಳಕು ಕಾಣಲಿ ಎಂಬುದು ಇದರ ಉದ್ದೇಶ ಆದರೆ ಬಾಳು, ಬರಿಯ ಕಣ್ಣಿಗೆ ಕಾಣುವ ಬಾಳು ಮಾತ್ರವೇ ಅಲ್ಲ. ನಮ್ಮ ಕಣ್ಣಿಗೆ ಕಾಣುವ ಬಾಳು ಮೂರನೆ ಒಂದು. ಆದರೆ ಕಾಣದ ಆಧ್ಯಾತ್ಮ ಬಾಳು ಮೂರನೆ ಎರಡು. ಈ ಮಾತನ್ನೇ ವೇದಗಳೂ ಹೇಳುತ್ತಿವೆ. ದೀಪಾವಳಿಯಂದು ನಾವು ನಮ್ಮ ಆತ್ಮದ ಜ್ಯೋತಿಯನ್ನು ಬೆಳಗಿಸಿಕೊಳ್ಳಬೇಕು. ಆತ್ಮಕ್ಕೆ ಹತ್ತಿದ ಮಾಲಿನ್ಯವನ್ನು ಅಂದು ತೊಡೆದು ಹಾಕಿ, ಅಲ್ಲಿ ಪರಮಾತ್ಮನಿಗಾಗಿಯೂ ಹಣತೆಯನ್ನು ಹಚ್ಚಬೇಕು. ಕಾಮ, ಕ್ರೋಧ, ಕಂಬನಿ, ಭಯಗಳ ತೈಲದಿಂದ ಅದನ್ನು ತುಂಬಬೇಕು. ಪ್ರಾಪಂಚಿಕ ಆಸೆಗಳಿಂದ ಹೃದಯ ಗೃಹದಲ್ಲಿ ತುಂಬಿದ ಅಂಧಕಾರದಲ್ಲಿ ಆ ದೀಪವೇ ನಮಗೆ ಪರಮಾತ್ಮನನ್ನು ಹುಡುಕಿಕೊಡುವುದು.

ಬಲಿಚಕ್ರವರ್ತಿಯ ಕಥೆ, ಕಷ್ಟಪಟ್ಟು ಪ್ರಾಮಾಣಿಕನಾಗಿ ದುಡಿದವನ ಕಥೆ. ಅದು ಎಲ್ಲ ದೃಷ್ಟಿಯಿಂದಲೂ ವಿಶಿಷ್ಟ ದೃಷ್ಟಿಯಿಂದಲೂ ಆಧ್ಯಾತ್ಮಿಕ ಕಥೆ. ಪರಮಾತ್ಮನ ಉಳಿದ ಅವತಾರಗಳಲ್ಲಿ, ಪರಮಾತ್ಮನು ದುಷ್ಟರನ್ನು ಸಂಹಾರ ಮಾಡಿದುದರಿಂದ ಅವನನ್ನು ಕೊಂಡಾಡುತ್ತೇವೆ. ಆದರೆ ವಾಮನಾವತಾರದಲ್ಲಿ ಪರಮಾತ್ಮನಿಂದ ನಾಶಹೊಂದಿದ ಬಲಿಯನ್ನೇ ಕೊಂಡಾಡುತ್ತವೆ. ಈ ಪಾಡ್ಯಕ್ಕೆ ಬಲಿಪಾಡ್ಯಮಿ ಎಂದೇ ಹೆಸರು. ಅದರ ಹಿಂದಲ ಚತುರ್ದಶಿಗೆ ನರಕ ಚತುರ್ದಶಿ ಎಂದೇ ಹೆಸರು. ನಾವು ರಾಮನವಮಿಗೆ ರಾವಣನವಮಿ ಕುಂಭಕರ್ಣನವಮಿ ಎನ್ನುವುದಿಲ್ಲ. ಶ್ರೀ ಕೃಷ್ಣಾಷ್ಟಮಿಗೆ ಕಂಸಾಷ್ಟಮಿ ಎಂದಾಗಲೀ ಶಿಶುಪಾಲದಂತವಕ್ರ ಅಷ್ಟಮಿ ಎಂದಾಗಲೀ ಹೇಳುವುದಿಲ್ಲ! ಆ ದಿನಗಳಲ್ಲಿ ಪರಮಾತ್ಮ, ತನ್ನ ಹೆಸರಿಗೆ ಪೂಜೆಯನ್ನು ಹೊಂದುತ್ತಾನೆ. ಆದರೆ ದೀಪಾವಳಿಯಲ್ಲಿ ಮಾತ್ರ ಪರಮಾತ್ಮ ತಾನು ನಾಶ ಮಾಡಿದ




ನರಕಾಸುರ ಮತ್ತು ಬಲಿಗಳಿಗೆ ಪೂಜೆ ಕೊಡುತ್ತಾನೆ. ಹಾಗಾದರೆ ಪರಮಾತ್ಮ ನರಕಾಸುರನನ್ನು ಕೊಲ್ಲಲು, ಬಲಿಯನ್ನು ತುಳಿದು ಪಾತಾಳಕ್ಕೆ ತಳ್ಳಲು ಕಾರಣವಿತ್ತೆ? ನರಕಾಸುರ ಮತ್ತು ಬಲಿಯ ಚರಿತ್ರೆಯನ್ನು ಓದಿದರೆ ಪರಮಾತ್ಮನು ಮಾಡಿದುದು ನ್ಯಾಯ ಎಂಬುದು ಗೊತ್ತಾಗುತ್ತದೆ

ಬಲಿ, ದುಡಿತದಿಂದಲೇ ಪ್ರಾಪಂಚಿಕ ವೈಭವದ ಶಿಖರವನ್ನೇರಿದನು. ಆಗ, ವಿಷ್ಣು ವಾಮನನಾಗಿ ಬರಬೇಕಾಯಿತು. ಯಾಚಿಸುವವನು ಯಾವಾಗಲೂ ತನ್ನ ಸ್ವರೂಪವನ್ನು ಕಳೆದುಕೊಳ್ಳುತ್ತಾನೆ. ಕೊಡುವವನ ಕೈ ಮೇಲೆ; ತೆಗೆದುಕೊಳ್ಳುವವನ ಕೈ ಕೆಳಗೆ. ನಮ್ಮ ಕನ್ನಡನಾಡಿನಲ್ಲಿ ಹಿಂದೆ ದೀಪಾವಳಿ ರಾತ್ರಿಗೆ ಯಕ್ಷರಾತ್ರಿ ಎಂದು ಹೆಸರಿದ್ದಂತೆ ತೋರುತ್ತದೆ. ಕುಬೇರನೇ ಯಕ್ಷೇಶ್ವರನು. ಬಲಿಯು ಪ್ರಬಲಿಸುವುದಕ್ಕೆ ಮುಂಚಿತವಾಗಿ ಜಗತ್ತಿನ ಐಶ್ವರ್ಯ-ಭಂಡಾರವೆಲ್ಲ ದೇವತೆಗಳದೂ ಸೇರಿ-ಕುಬೇರನಿಗೇ ಬರುತ್ತಿತ್ತು. ವಿಷ್ಣು ವಾಮನಾವತಾರದಿಂದ ಬಲಿಯ ಐಶ್ವರ್ಯವನ್ನೆಲ್ಲ ಸೆಳೆದು ಅವನನ್ನು ಪಾತಾಳಕ್ಕೆ ಕಳುಹಿಸುವಾಗ, ಮತ್ತೆ ಆ ಐಶ್ವರ್ಯವೆಲ್ಲ ಕುಬೇರನಿಗೇ ಬಂದಿತು. ಬಲಿಯು ದರಿದ್ರನಾದರೂ ಸತ್ವಹೀನನಾಗಲಿಲ್ಲ. ಪರಮಾತ್ಮನಿಗೆ ಕೊಟ್ಟ ವಾಗ್ದಾನವನ್ನು ಪೂರೈಸಿದನು. ಆದುದರಿಂದ ಕುಬೇರನು ಅವನಿಗೆ ಸಂಭ್ರಮದ ಬೀಳ್ಕೊಡುಗೆ ದೀಪಾವಳಿ ಸಾಲು ಉತ್ಸವ ಏರ್ಪಡಿಸಿದನು. ಅದು ದಿವಾಳಿ ಎಂದು ಈಚೆಗೆ ಆಗಿರಬಹುದು. ಈಗಿನ ಅರ್ಥದಲ್ಲಿ "ದಿವಾಳಿಯಾದ ದಿವಾಳಿತೆಗೆದ" ಎಂದು ಹೇಳುವುದಕ್ಕೂ, ಬಲಿ ದಿವಾಳಿಯಾದುದಕ್ಕೂ ಸಂಬಂಧವಿಲ್ಲ. ಬಲಿ, ದಿವಾಳಿಗೊಂಡುದು ತನ್ನ ಕರ್ತವ್ಯವನ್ನು ಪಾಲಿಸಿ ಸತ್ಯಸಂಧನಾಗುವುದಕ್ಕಾಗಿ; ಈಗ ದಿವಾಳಿಯಾಗುತ್ತಿರುವುದು ತಮ್ಮ ವಾಗ್ದಾನಗಳನ್ನು ಮುರಿದು ಇತರರ ಹಣವನ್ನು ದಕ್ಕಿಸಿ ಹಾಕಿಕೊಳ್ಳುತ್ತಿರುವುದಕ್ಕಾಗಿ

ಮೊದಲು ನರಕಾಸುರನ ವಿಷಯವನ್ನೇ ತೆಗೆದುಕೊಳ್ಳೋಣ. ನರಕ ಚತುರ್ದಶಿಯ ಆಚರಣೆ ಒಂದು ಪೌರಾಣಿಕ ಕಥೆಯಿಂದ ಹುಟ್ಟಿದೆ. ನಮ್ಮ ದೇಶದ ಈಗಿನ ಅಸ್ಸಾಂಭಾಗದಲ್ಲಿ ಪ್ರಾಗ್ಜ್ಯೋತಿಷವೆಂಬ ಒಂದು ನಗರವಿತ್ತು. ಅಲ್ಲಿ ಭೌಮ ಎಂಬ ಕೊಬ್ಬಿದ ರಾಜನಿದ್ದನು. ಕೊನೆಗೆ ಅವನ ಅಹಂಕಾರ ಉದ್ಧಟತನದಿಂದ ಅವನಿಗೆ ನರಕಾಸುರನೆಂಬ ಬಿರುದು ಬಂದಿತು. ಸಾಧುಗಳನ್ನೂ ಸತ್ಪುರುಷರನ್ನೂ ಸತ್ಕಾರ್ಯಗಳನ್ನೂ ದ್ವೇಷಿಸುವುದೇ ಅವನ ಸ್ವಭಾವವಾಗಿತ್ತು. ತನ್ನ ಶಕ್ತಿ ಪರಾಕ್ರಮ ಮಹಿಮೆಗಳನ್ನು ಹೆಚ್ಚಿಸಿಕೊಳ್ಳುವುದಕ್ಕಾಗಿಯೇ ಅವನು ಉಗ್ರ ತಪಸ್ಸನ್ನು ಮಾಡಿ ದೇವರಿಂದ ವರಗಳನ್ನು ಪಡೆದುಕೊಂಡನು. ಅಗ್ನಿಕೋಟೆ, ವಾಯುಕೋಟೆ ಮುಂತಾದ ಅಭೇದ್ಯ ನಗರಗಳನ್ನು ಕಟ್ಟಿಕೊಂಡು ಅಜೇಯನಾಗಿದ್ದನು. ಅಖಿಲ ಜಗತ್ತೂ ಅವನನ್ನು ಕಂಡು ನಡುಗುತ್ತಿತ್ತು. ಯಾರಿಗೂ ಹೆದರದ ದುರಹಂಕಾರಿಗಳನ್ನು ಅಡಗಿಸಲು ಭಗವಂತನೇ ಆಯುಧವಾಗುತ್ತಾನೆ. ಪರಮಾತ್ಮನೇ ಅವತಾರ ಮಾಡಿ ನರಕಾಸುರನ ತಂತ್ರಗಳನ್ನೆಲ್ಲ ಧ್ವಂಸಮಾಡಿ ಅವನನ್ನು ಕೊಲ್ಲಬೇಕಾಯಿತು. ಇದರಿಂದ ಅವನ ತಾಯಿಗೆ ತುಂಬ ದುಃಖವುಂಟಾಯಿತು. ಅವಳು ಪರಮಾತ್ಮನಲ್ಲಿ ಹೀಗೆ ಕೇಳಿಕೊಂಡಳಂತೆ. "ಪುತ್ರಶೋಕ, ನನಗೆ ಉಂಟಾಯಿತು. ಅವರವರ ಕಾರ್ಯಫಲಗಳನ್ನು ಅವರವರು ಅನುಸರಿಸಬೇಕು. ನರಕಾಸುರನ ಅಹಂಕಾರದಿಂದ ಅವನಿಗೆ ಮರಣ ಬಂದಿದೆ. ಪರಮಾತ್ಮನ ಕೈಯಲ್ಲಿ ಸಾಯುವುದೂ ಮೋಕ್ಷವೆ. ಎಲೈ ಪ್ರಭುವೇ ನನ್ನ ಮಗ ನರಕಾಸುರನು ಬದುಕಿರುವಾಗ ಅಕಾರ್ಯಗಳನ್ನೇ ಮಾಡಿ ಜನಕಂಟಕನಾದರೂ ಅವನ ಮರಣದಲ್ಲಿಯಾದರೂ ಲೋಕದ ಜನ ಅವನನ್ನು ಕುರಿತು ಸದ್ಭಾವನೆಯನ್ನು ಹೊಂದಲಿ. ತಾಯಿಯಾದ ನಾನು ಮಗನ ಮರಣದಿಂದ ಇಂದು ದುಃಖಿತಳಾಗಿದ್ದರೂ. ಜಗತ್ತೆಲ್ಲ ಈ ದಿನವನ್ನು, ದೀಪಮಾಲಿಕೆ, ನೂತನ ವಸ್ತ್ರಧಾರಣೆ, ಸುಖ ಸಂಭ್ರಮಗಳಿಂದ ಕಳೆಯಲಿ. ಈ ಕಾರಣದಿಂದ ಮರಣದಲ್ಲಿಯಾದರೂ ನರಕಾಸುರನ ಹೆಸರು ಜನಪ್ರಿಯವಾಗಲಿ" ಎಂದು. ತನಗೆ ಮಗನ ಮರಣದಿಂದ ದುಃಖವುಂಟಾದರೂ ಆ ದಿನ ಜಗತ್ತೆಲ್ಲ ಸುಖವಾಗಿರಲಿ ಜಗತ್ತಿನ ಇತರ ತಾಯಂದಿರೆಲ್ಲ ಸುಖವಾಗಿರಲಿ ಎಂದು ಒಬ್ಬ ತಾಯಿ ಮಾತ್ರ ಹೇಳಬಲ್ಲಳು.

ಇನ್ನು ಬಲಿಚಕ್ರವರ್ತಿಗೆ ಯಾಕೆ ಹಾಗಾಯಿತು ಎಂಬುದನ್ನು ಯೋಚಿಸೋಣ. ಬಲಿ, ಪರಮವಿಷ್ಣು ಭಕ್ತನಾದ ಪ್ರಹ್ಲಾದನ ಮೊಮ್ಮಗ. ಅವನ ಛತ್ರಾಧಿಪತ್ಯ, ವಿಶಾಲವಾಗಿತ್ತು. ಅದನ್ನು ಆಳಿಕೊಂಡು ಅವನು ಸುಖವಾಗಿರಬಹುದಾಗಿತ್ತು. ಆದರೆ ಆಸೆ ಎಂಬುದು ಮಹಾ ಹಸಿವಿನ ರಾಕ್ಷಸ. ಬಲಿಗೆ, ಸಮಸ್ತ ಜಗತ್ತನ್ನೂ

ಜಯಿಸಬೇಕೆಂಬ ಆಸೆಯುಂಟಾಯಿತು. ಅವನು ಶುಕ್ರಾಚಾರ್ಯರ ಸಹಾಯದಿಂದ ವಿಶ್ವಜಿತ್ ಎಂಬ ಯಾಗವನ್ನು ಮಾಡಿ ಆ ಶಕ್ತಿಯನ್ನು ಸಂಪಾದಿಸಿಕೊಂಡನು. ಯಜ್ಞಕುಂಡದಿಂದ ಒಂದು ದಿವ್ಯವಾದ ಧನುಸ್ಸೂ ಕವಚವೂ ಹೊರ ಬಂದವು. ಆ ದಿವ್ಯಾಯುಧಗಳ ಸಹಾಯದಿಂದ ಬಲಿ ಅಳತೆಗೆಟ್ಟ ಉದ್ಧಟನೂ ಅವಿನೀತನೂ ಆದನು. ಸೈನ್ಯಸಮೇತನಾಗಿ ಹೋಗಿ ಖಳರೂ, ಶಠರೂ, ಲುಬ್ಧರೂ, ಅಹಂಕಾರಿಗಳೂ ಹೋಗ ಕೂಡದಾದ ಇಂದ್ರನ ಅಮರಾವತಿಗೆ ಮುತ್ತಿಗೆ ಹಾಕಿದನು. ರಾಕ್ಷಸರ ಆ ಅಸಂಖ್ಯ ಬಲವುಳ್ಳ ಸೈನ್ಯ, ಕಾಳಮೇಘದಂತೆ ನುಗ್ಗುತ್ತಿದ್ದುದನ್ನು ನೋಡಿ, ಇಂದ್ರನು ಹೆದರಿ ತನ್ನ ಗುರುವಾದ ಬೃಹಸ್ಪತ್ಯಾಚಾರ್ಯರಲ್ಲಿ ಹೋಗಿ ಹೀಗೆ ಹೇಳಿದನು. "ನಮ್ಮ ಈ ಹಳೆಯ ಶತ್ರುವು ಇಂದು ಬಹು ಬಲಿಷ್ಠನಾಗಿದ್ದಾನೆ. ಇವನಿಗೆ ಇಷ್ಟು ಬಲ ಪರಾಕ್ರಮ ಹೇಗೆ ಉಂಟಾಯಿತು ?"

ಬೃಹಸ್ಪತ್ಯಾಚಾರ್ಯರು ಯೋಚನೆ ಮಾಡಿ "ಇಂದ್ರನೇ, ಬಲಿಯ ಉದ್ಧಟತನದ ಪರಾಕ್ರಮದ ಕಾರಣ ನನಗೆ ಗೊತ್ತು. ಅವನ ಗುರುವಾದ ಶುಕ್ರರು, ಶಿಷ್ಯನಿಗೆ ತೇಜಸ್ಸನ್ನು ತುಂಬಿದ್ದಾನೆ. ಅವನಿಗೆ ದೈವೀ ಶಕ್ತಿಯುಂಟಾಗಿದೆ ಅವನನ್ನು ಜಯಿಸಲು ನಿನ್ನಿಂದಲೂ ಸಾಧ್ಯವಿಲ್ಲ; ನಿನ್ನಂಥವರಿಂದಲೂ ಸಾಧ್ಯವಿಲ್ಲ. ಹೇಗೆ ಜನರು ಕೃತಾಂತನನ್ನು ಎದುರಿಸಿ ನಿಲ್ಲಲಾರರೋ, ಹಾಗೆ ಹರಿಯು ಹೊರತು ಮತ್ತಾರೂ ಇವನ ಪರಾಕ್ರಮವನ್ನು ಗೆಲ್ಲಲಾರರು. ಈಗ ನಿಮಗೆ ಮನೆ ಬಿಟ್ಟು ಓಡುವುದೊಂದೇ ದಾರಿ. ಎಲ್ಲಿಯಾದರೂ ತಲೆ ಮರೆಸಿಕೊಂಡಿರಿ. ಬಲಿಯು ಅವನತಿ ಪ್ರಾರಂಭವಾದಾಗ ನಿಮ್ಮ ಮನೆಗಳಿಗೆ ನೀವು ಹಿಂದಿರುಗುವಿರಂತೆ" ಎಂದು ಹೇಳಿದರು. ಇಂದ್ರಾದಿಗಳು ತಮ್ಮ ಪಿತ್ರಾರ್ಜಿತವಾದ ಆಸ್ತಿಯನ್ನು ಈ ಲೂಟಿಗಾರನ ಕೈಗೆ ಒಪ್ಪಿಸಿ ದಿಕ್ಕೆಟ್ಟು ಎಲ್ಲಿಯೋ ಹೋಗಿ ಅಡಗಿಕೊಂಡರು ಹೀಗೆ ಇಂದ್ರಾದಿಗಳು ದೇಶಭ್ರಷ್ಟರಾಗಿ ಹೋಗಲು, ಬಲಿಯು ಅವರ ರಾಜ್ಯವನ್ನು ಆಕ್ರಮಿಸಿಕೊಂಡು ಮೂರು ಲೋಕಗಳಲ್ಲಿಯೂ ತನ್ನ ಪ್ರಭುತ್ವವನ್ನು ಸ್ಥಾಪಿಸಿದನು. ದೇವ ದಾನವ ಮಾನವರಲ್ಲಿ ಯಾರೂ ಅವನನ್ನು ಎದುರಿಸಲು ಶಕ್ತರಾಗಿರಲಿಲ್ಲ.

ಬಲಿಯು ಮಾಡಿದುದು ದೊಡ್ಡ ಅನ್ಯಾಯ. ತನಗೆ ವಿಶಾಲವಾದ ರಾಜ್ಯವಿರುವಾಗ ದಿಗ್ವಿಜಯಕ್ಕಾಗಿಯೇ ಒಂದು ಯಜ್ಞವನ್ನು ಮಾಡಿ ದೇವತೆಗಳ ಪಿತ್ರಾರ್ಜಿತ ಆಸ್ತಿಯನ್ನು ದಕ್ಕು ಹಾಕಿಕೊಂಡುದರಿಂದ. ಅವನ ಧರ್ಮಸತ್ವ ನಾಶವಾಯಿತು. ದುಷ್ಟನಾದ ಬಲಿಷ್ಠನನ್ನು ನಾಶ ಮಾಡಲು ಪರಮಾತ್ಮನೇ ದುರ್ಬಲರ ಪಕ್ಷವನ್ನು ವಹಿಸಬೇಕಾಯಿತು ಕಣ್ಮರೆಯಾಗಿ ರಾಜ್ಯವನ್ನು ಕಳೆದುಕೊಂಡು ಎಲ್ಲಿಯೋ ಅಜ್ಞಾತವಾಸವನ್ನು ನಡೆಸುತ್ತಿದ್ದ ಮಕ್ಕಳನ್ನು ಜ್ಞಾಪಿಸಿಕೊಂಡು ದೇವತೆಗಳ ತಾಯಿಯಾದ ಅದಿತಿ, ಬಹು ದೀನಳಾದಳು. ಆಗ ಆಕೆಯು ಪತಿಯಾದ ಕಶ್ಯಪರು ಅವಳಿಗೆ ಹೀಗೆ ಹೇಳಿದರು.

ಉಪತಿಷ್ಠಸ್ವ ಪುರುಷಂ ಭಗವಂತಂ
ಜನಾರ್ದನಂ
ಸ ವಿಧಾಸ್ಯತಿ ತೇ ಕಾಮಾನ್ ಹರಿಃ
ದೀನಾನುಕಂಪನಃ॥
(ಭಾಗವತ)

[ಭಗವಂತನಾದ ಜನಾರ್ದನನನ್ನು ಪೂಜಿಸು. ದೀನರಲ್ಲಿ ಅನುಕಂಪವುಳ್ಳ ಸ್ವಾಮಿಯು ನಿನ್ನ ಇಚ್ಛೆಯನ್ನು ಪೂರೈಸುತ್ತಾನೆ]

ಅದಿತಿಯು ಹನ್ನೆರಡು ದಿನಗಳ ಕಾಲ, ಪಯೋವ್ರತವನ್ನು ಆಚರಿಸಿ ಪರಮಾತ್ಮನನ್ನು ಪೂಜಿಸಿದಳು. ಆಗ ಹರಿಯು ಅವಳಿಗೆ ಪ್ರತ್ಯಕ್ಷನಾದನು ಆದರೆ ಜಗತ್ತನ್ನೇ ನಡುಗಿಸಿದ್ದ ಬಲಿಯ ಆಸುರೀ ಶಕ್ತಿಯನ್ನು ಎದುರಿಸಲು ದೇವರಿಗೆ ಸಹ, ತನ್ನ ಸ್ವಾಭಾವಿಕ ಶಕ್ತಿ ಸಾಕಾಗಲಿಲ್ಲ. ಆಗ ಹರಿಯು ಹೀಗೆ ಹೇಳಿದನು. "ಹೇ ದೇವಮಾತೆ, ನಿನ್ನ ಮಕ್ಕಳ ರಾಜ್ಯವನ್ನು ದೈತ್ಯನು ಕಿತ್ತುಕೊಂಡಿರುವುದನ್ನು ನಾನು ಬಲ್ಲೆ. ಅವನು ಶುಕ್ರಾಚಾರ್ಯರ ಕೃಪೆಯಿಂದ ದಿವ್ಯ ಶಕ್ತಿಯನ್ನು ಸಂಪಾದಿಸಿದ್ದಾನೆ. ಈಗ ಅವನನ್ನು ಜಯಿಸುವುದು ಅಸಾಧ್ಯವೇ ಸರಿ. ಇದಕ್ಕಾಗಿಯೇ ನಾನು ನಿನ್ನ ಮಗನಾಗಿ ಅವತರಿಸಿ, ಕಶ್ಯಪನ ತಪಃಶಕ್ತಿಯಿಂದ ದೇವತೆಗಳನ್ನು ರಕ್ಷಿಸಬೇಕಾಗಿದೆ" ಹೀಗೆ ಹೇಳಿ ನಳಿನಾಯ

ತೀಕ್ಷ್ಣನೂ ಪಿಶಂಗವಾಸನೂ ಆದ ಪರಮಾತ್ಮನು, ಆಭರಣ ಆಯುಧಗಳ ಸಮೇತನಾಗಿ ವಾಮನ ಭಟ್ಟನಾಗಿ ಆ ಕ್ಷಣದಲ್ಲಿಯೇ ಅಲ್ಲಿಯೇ ಆವಿರ್ಭವಿಸಿದನು. ಈ ಅವತಾರವನ್ನು ಕಂಡು ಋಷಿಗಳೆಲ್ಲ ಬ್ರಹ್ಮನನ್ನು ಮುಂದಿಟ್ಟುಕೊಂಡು ಆ ಬ್ರಹ್ಮಚಾರಿಯನ್ನು ಪೂಜಿಸಿದರು. ಬಲಿಯು ಅಶ್ವಮೇಧಯಾಗವನ್ನು ಮಾಡುತ್ತಿರುವುದನ್ನು ಕೇಳಿ, ಆ ಬ್ರಹ್ಮತೇಜಸ್ವೀ ವಾಮನ ವಟುವು, ದಂಡ ಕಮಂಡಲ ಛತ್ರಿ ಇವುಗಳನ್ನು ಧರಿಸಿ ಬಲಿಯ ಯಜ್ಞಶಾಲೆಗೆ ಬಂದನು. ಆ ಮಾಯಾ ಬ್ರಹ್ಮಚಾರಿಯನ್ನು ನೋಡಿ ಬಲಿಯು ಆದರಿಸಿ ಆಹ್ವಾನಿಸಿ ಮುಕ್ತರ ಮನೋರಥವಾದ ಅವನನ್ನು ಪೂಜಿಸಿದನು.

ಅನಂತರ ಬಲಿಯು "ಹೇ ಬ್ರಹ್ಮನ್, ನಿನಗೆ ಸ್ವಾಗತ. ನಾವು ನಿನಗಾಗಿ ಏನನ್ನು ಮಾಡೋಣ?" ಎಂದು ಕೇಳಿದನು. ಮತ್ತೂ "ಎಲೈ ವಟುವೇ ನಿನಗೆ ಬೇಕಾದುದನ್ನು ನನ್ನಿಂದ ತೆಗೆದುಕೊ ಭೂಮಿ, ಕಾಂಚನ ಸೊಗಸಾದ ವಾಸದ ಮನೆ, ಅನ್ನ, ಪಾನೀಯ, ಕನ್ಯೆ ಯಾವುದು ನಿನಗೆ ಇಷ್ಟವೋ ತೆಗೆದುಕೋ" ಎಂದು ಹೇಳಿದನು ಪರಮಾತ್ಮನು ಆತ. ಬಲಿಗೆ ಹೀಗೆ ಹೇಳಿದನು "ನಿಮ್ಮ ಕುಲದಲ್ಲಿ ಅನೃತವನ್ನು ಹೇಳುವವರೂ ನಿಸ್ಸತ್ವರೂ ಕೃಪಣರೂ ಯಾವಾಗಲೂ ಇಲ್ಲ. ಹೇಳಿದ ಮಾತನ್ನು ನಡೆಯಿಸದವರೂ ಇಲ್ಲ. ದಿಗ್ವಿಜರಿಗೆ ಅವರು ಕೇಳಿದುದನ್ನು ಕೊಡದವರೂ ಇಲ್ಲ ನನಗೆ ಬೇಕಾಗಿರುವುದು ನನ್ನ ಕಾಲಿನ ಅಳತೆಯಲ್ಲಿ ಮೂರು ಹೆಜ್ಜೆ ನೆಲಮಾತ್ರ. ತನಗೆ ಎಷ್ಟು ಬೇಕೋ ಅಷ್ಟನ್ನು ಮಾತ್ರ ತೆಗೆದುಕೊಳ್ಳುವವನಿಗೆ ಯಾವ ಪಾಪವೂ ತಟ್ಟುವದಿಲ್ಲ"

ಬ್ರಹ್ಮಚಾರಿಯ ಮಾತನ್ನು ಕೇಳಿ ಬಲಿಗೆ ಆಶ್ಚರ್ಯವಾಯಿತು ಅವನು "ಎಲೈ ಬ್ರಾಹ್ಮಣನೆ. ನಿನಗೆ ಹಿರಿಯರು ಯಾರೂ ಸರಿಯಾಗಿ ಯಾಚಿಸಲು ಹೇಳಿ ಕೊಟ್ಟಿಲ್ಲವೆ? ಇಲ್ಲಿ ನಾನು ಒಂದು ದ್ವೀಪ (ಖಂಡ)ವನ್ನೇ ಕೊಡಲು ಸಿದ್ಧನಾಗಿರುವಾಗ ನೀನು ಬರೀ ಮೂರು ಹೆಜ್ಜೆ ನೆಲವನ್ನು ಯಾಕೆ ಬೇಡುತ್ತಿ? ನನ್ನ ಬಳಿ ಬಂದು ಒಂದು ಸಲ ಯಾಚಿಸಿದ ಮೇಲೆ ಯಾವ ಮನುಷ್ಯನೂ ಎರಡನೆಯ ಸಲ ಯಾಚಿಸುವಂತಿರಬಾರದು. ಆದುದರಿಂದ ನಿನಗೆ ಎಷ್ಟು ಬೇಕೋ ಅಷ್ಟು ಭೂಮಿಯನ್ನು ನನ್ನಿಂದ ತೆಗೆದುಕೊ" ಎಂದನು ಆಗ ಹರಿಯು ಅವನಿಗೆ ಹೀಗೆ ಹೇಳುತ್ತಾನೆ.

ವಿಷಯಾಃ ಪ್ರೇಷ್ಠಾ ಸ್ತ್ರೀಲೋಕ್ಯಾ
ಮಜಿತೇಂದ್ರಿಯಃ।
ನ ಶಕ್ನುವಂತಿ ತೇ ಸರ್ವೇ ಪ್ರತಿ
ಪೂರಯಿತುಂ ನೃಪ॥

(ಮೂರು ಲೋಕಗಳಲ್ಲಿರುವ ಪ್ರಿಯವಾದ ಸಮಸ್ತ ವಸ್ತುಗಳಿಂದಲೂ ಅಜಿತೇಂದ್ರಿಯರನ್ನು ಪೂರ್ಣನಾಗಿ ತೃಪ್ತಿಪಡಿಸಲು ಸಾಧ್ಯವಿಲ್ಲ. ಮೂರು ಹೆಜ್ಜೆಗಳಿಂದ ಸಂತುಷ್ಟನಾಗದವನು ಒಂದು ದ್ವೀಪದಿಂದಲೂ ಸಂತುಷ್ಟನಾಗುವುದಿಲ್ಲ. ವೈನ್ಯ ಗಯ ಮುಂತಾದ ರಾಜರು ಸಪ್ತಲೋಕಗಳಿಗೂ ಅಧಿಪತಿಗಳಾದರೂ ಅವರ ಆಸೆಗೆ ಕೊನೆಯೇ ಇರಲಿಲ್ಲವೆಂದು ಕೇಳಿಲ್ಲವೆ?)

ಪುಂಸೋಯಂ ಸಂಸೃತೇರ್ಹೇತು
ರ ಸಂತೋಷೋಽರ್ಥಕಾಮಯೋಃ।
ಯ ದೃ ಚ್ಛಯೋ ಪಪನ್ನೇನ
ಸಂತೋಷೋ ಮುಕ್ತಯೇ। ಸ್ಮೃತಃ॥

(ಅರ್ಥ ಕಾಮಗಳಲ್ಲಿ ಅತೃಪ್ತಿಯೇ, ಮನುಷ್ಯನ ಜನನ ಮರಣಗಳೆಂಬ ಸಂಕೋಲೆಗೆ ಮುಖ್ಯ ಕಾರಣ. ದೊರೆತುದರಲ್ಲಿ ಸಂತೋಷಪಡುವವನು ಮುಕ್ತನಾಗುತ್ತಾನೆ.)

ಯದೃಚ್ಛಾ ಲಾಭ ತುಷ್ಟಸ್ಯ
ತೇಜೋ ವಿಪ್ರಸ್ಯ ವರ್ಧತೆ
ತತ್ ಪ್ರಶಾಮ್ಯಸ್ಯ ಸಂತೋಷಾತ್
ಅಂಭಸೇ ವಾಶು ಶುಕ್ಷಿಣೇ

(ಬಂದುದರಲ್ಲಿಯೇ ತೃಪ್ತನಾಗುವ ವಿಪ್ರನ ತೇಜಸ್ಸು ವೃದ್ಧಿಯಾಗುತ್ತದೆ ಅವನು ಅಸಂತುಷ್ಟನಾದರೆ ಅವನ ತೇಜಸ್ಸು ನೀರಿನಿಂದ ಬೆಂಕಿ ಆರುವಂತೆ ಆರಿ ಹೋಗುತ್ತದೆ.) ಆದುದರಿಂದ ನೀನು ದಾನಿಗಳಲ್ಲಿ ಅತ್ಯಂತ ಶ್ರೇಷ್ಠನಾದರೂ ನಾನು ನಿನ್ನನ್ನು ಮೂರು ಹೆಜ್ಜೆ ಭೂಮಿಯನ್ನು ಮಾತ್ರ ಕೇಳುತ್ತೇನೆ. ಎಷ್ಟು ಅವಶ್ಯಕವೋ ಅದಷ್ಟೇ ಐಶ್ವರ್ಯ."

ಬಲಿಯು ಹಸನ್ಮುಖಿಯಾಗಿ "ನಿನ್ನ ಇಷ್ಟದಂತೆ ಆಗಲಿ" ಎಂದು ಹೇಳಿ ಭೂಮಿಯನ್ನು ಧಾರೆಯೆರೆಯಲು ನೀರಿನ ಗಿಂಡಿಯನ್ನು ತೆಗೆದುಕೊಂಡನು ವಿಷ್ಣುವಿನ ಉದ್ದೇಶವನ್ನರಿತ ಅತಿಪ್ರಾಜ್ಞನಾದ ಶುಕ್ರಾಚಾರ್ಯರು ಆಗ, ಬಲಿಗೆ ಹೀಗೆ ಹೇಳಿದರು. "ಹೇ ರಾಜನ್, ಇಲ್ಲಿ ಬಂದಿರುವವನು ವಿಷ್ಣು. ಈತನು ದೇವಕಾರ್ಯಕ್ಕಾಗಿ ಬಂದಿದ್ದಾನೆ ನೀನು ವಾಗ್ದಾನ ಮಾಡಿರುವ ದಾನ ನನಗೆ ಸಮ್ಮತವಿಲ್ಲ ಈ ಬ್ರಹ್ಮಚಾರಿಯು ನಿನ್ನ ಸರ್ವಸ್ವವನ್ನೂ ನಾಶ ಮಾಡಲು ಬಂದಿದ್ದಾನೆ! ನಿನ್ನಿಂದ ಐಶ್ವರ್ಯ, ಶ್ರೇಯಸ್ಸು ಯಶಸ್ಸು ಎಲ್ಲವನ್ನೂ ಕಿತ್ತುಕೊಂಡು ಇಂದ್ರನಿಗೆ ಕೊಡಲು ಬಂದಿದ್ದಾನೆ."

ಆಗ ಬಲಿಯು ಶುಕ್ರಾಚಾರ್ಯರಿಗೆ ಹೀಗೆ ಪ್ರತ್ಯುತ್ತರವಿತ್ತನು

"ಪ್ರಹ್ಲಾದನ ವಂಶದಲ್ಲಿ ಜನಿಸಿದ ನಾನು, ಒಬ್ಬ ಸಾಮಾನ್ಯ ಮೋಸಗಾರನಂತೆ ಧನದ ಆಸೆಯಿಂದ, ಬ್ರಾಹ್ಮಣನಿಗೆ ಮಾಡಿದ ವಾಗ್ದಾನದಿಂದ ಹೇಗೆ ಚ್ಯುತನಾಗಲಿ? ನಾನು ಏನನ್ನು ಬೇಕಾದರೂ ಸಹಿಸುತ್ತೇನೆ. ಆದರೆ ಸುಳ್ಳುಗಾರರನ್ನು ಸಹಿಸಲಾರೆ ನಾನು ನರಕಕ್ಕಾದರೂ ಹೋದೇನೇ ಹೊರತು ಬ್ರಾಹ್ಮಣನಿಗೆ ಮೋಸ ಮಾಡಲಾರೆ." ಹೀಗೆ ಹೇಳಿ ಸತ್ಯಮಾರ್ಗವನ್ನು ಬಿಡದ ಬಲಿಯು ವಾಮನನಿಗೆ ತನ್ನ ವಾಗ್ದಾನದಂತೆ ಭೂಮಿಯನ್ನು ದಾನ ಮಾಡಿಯೇ ಮಾಡಿದನು.

ಆ ವಾಮನರೂಪ ಅದ್ಭುತವಾಗಿ ಬೆಳೆಯಿತು. ಅದರಲ್ಲಿ ಬಲಿಯು ಸಮಸ್ತ ವಿಶ್ವವನ್ನೂ ನೋಡಿದನು; ಜೀವಿಗಳ ಅರ್ಥ, ಆಶಯ ಮನಸ್ಸು ಇಂದ್ರಿಯಗಳನ್ನೆಲ್ಲ ನೋಡಿದನು.



ಬಗೆ ಇದ್ದ ನಾದ ಹೆಜ್ಜೆಯಲ್ಲಿ ಹರಿ ಪ್ರಕಾಶಿಸಿದನು.

ಕ್ಷಿತಿಂ ಪದ್ಯಕೇನ ಬಲೇರ್ವಿಚಕ್ರಮೇ
ನಭಃ ಶರೀರೇಣ ದಿಶಶ್ಚ ಬಾಹುಭಿಃ।
ಪದಂ ದ್ವಿತೀಯಂ ಕ್ರಮತ ಸ್ತ್ರಿವಿಷ್ಟಪಂ
ನ ವೈ ತ್ರಿತೀಯಾಯ ತದೀಯಮಣ್ವಪಿ॥

ಬಲಿಯ ಭೂಮಿಯನ್ನೆಲ್ಲ ಹರಿಯು ಒಂದು ಹೆಜ್ಜೆಯಿಂದ ಆಕ್ರಮಿಸಿದನು ಅಂತರಿಕ್ಷವನ್ನು ದೇಹದಿಂದ ಆವರಿಸಿದನು; ದಿಕ್ಕುಗಳನ್ನು ಬಾಹುಗಳಿಂದ ತುಂಬಿದನು. ಎರಡನೆಯ ಹೆಜ್ಜೆಯಿಂದ ಸ್ವರ್ಗವನ್ನು ಆಕ್ರಮಿಸಿದನು. ಹೀಗೆ ಭೂಮ್ಯಾಕಾಶ ಪೂರ್ಣವಾಗಿ ಹೋಯಿತು. ಮೂರನೆಯ ಹೆಜ್ಜೆಯನ್ನಿಡಲು ಬಲಿಯ ಅಣುವಿನಷ್ಟೂ ಸ್ಥಳ ಉಳಿಯಲಿಲ್ಲ.

ಆಗ ಹರಿಯು ಬಲಿಗೆ ಹೀಗೆ ಹೇಳಿದನು. "ಹೇ ಅಸುರ, ನೀನು ನನಗೆ ಮೂರು ಹೆಜ್ಜೆ ಭೂಮಿಯನ್ನು ದಾನವಾಗಿ ಕೊಟ್ಟೆ. ನಾನು ಎರಡು ಹೆಜ್ಜೆಯಿಂದ ಸರ್ವ ಜಗತ್ತನ್ನೂ ಆವರಿಸಿದೆ ನೀನೇ ಅತ್ಯಧಿಕ ಧನಿಕನೆಂದು ಭಾವಿಸಿ ನನ್ನನ್ನು ಮೋಸಗೊಳಿಸಿದೆ ಈ ಮೋಸಕ್ಕಾಗಿ ನೀನು ಕೆಲವು ಕಾಲ ನರಕವನ್ನನುಭವಿಸುವೆ" ಅದಕ್ಕೆ ಉತ್ತರವಾಗಿ ಬಲಿಯು "ಹೇ ಭಗವನ್, ನನ್ನ ಮಾತು ಮೋಸವೆಂದು ನೀನು ಭಾವಿಸುವುದಾದರೆ, ಅದನ್ನು ನಿಜ ಮಾಡುತ್ತೇನೆ. ನನ್ನಲ್ಲಿ ಮೋಸವಿಲ್ಲ. ನಿನ್ನ ಮೂರನೆಯ ಹೆಜ್ಜೆಯನ್ನು ನನ್ನ ತಲೆಯ ಮೇಲೆ ಇಡು. ನನಗೆ ಸುಳ್ಳಿನ ಭಯವಿರುವಷ್ಟು, ಅನವರತ ನರಕದ ಭಯವೂ ಇಲ್ಲ. ಯೋಗ್ಯರ ಕೈಯಿಂದ ದಂಡಿತನಾಗುವುದು ಜೀವಿಗೆ ಶ್ಲಾಘ್ಯವೇ ಸರಿ. ಯೋಗಿಗಳು ಯಾರನು, ಭಕ್ತಿಯಿಂದ ಮಾತ್ರ ಹೊಂದುವರೋ ನಿರಂತರ ವೈರದಿಂದ ಯಾರನ್ನು ರಾಕ್ಷಸರು ಹೊಂದಿದರೋ, ಅಂತಹ



ಹರಿಯಿಂದ ಪರಾಜಿತನಾಗುವುದರಿಂದ ನನಗೆ ವ್ಯಥೆಯೂ ಇಲ್ಲ ಅವಮಾನವೂ ಇಲ್ಲ"

ಬಲಿ ಹೀಗೆ ಹೇಳುತ್ತಿರುವಾಗಲೇ ಅಲ್ಲಿಗೆ ಬಲಿಯ ಅಜ್ಜ ಪ್ರಹ್ಲಾದನು ಬಂದನು. ವಿಷ್ಣುವಿಗೆ ನಮಿಸಿ "ಹೆ ಭಗವನ್ ಹೀಗಾದುದು ಒಳ್ಳೆಯದಾಯಿತು. ಇದರಿಂದ ಬಲಿಯ ಆತ್ಮ ಮೋಹ ನಷ್ಟವಾಯಿತು" ಎಂದು ಹೇಳಿದನು. ಹರಿಯು ಪ್ರಹ್ಲಾದನಿಗೆ ಹೀಗೆ ಹೇಳಿದನು "ಯಾರನ್ನು ಅನುಗ್ರಹಿಸಲು ನಾನು ನಿಶ್ಚಯಿಸಿರುತ್ತೇನೆಯೋ ಅಂತಹವರ ಪ್ರಾಪಂಚಿಕ ಐಶ್ವರ್ಯ ಆಸ್ತಿಗಳನ್ನು ನಾನು ಮೊದಲು ನಾಶ ಮಾಡುತ್ತೇನೆ. ಇಲ್ಲದಿದ್ದರೆ ಅವರು ಉದ್ಧಟರಾಗಿ ಪ್ರಪಂಚವನ್ನು ತಿರಸ್ಕರಿಸುತ್ತಾರೆ ಈ ದಾನವ ದೈತ್ಯರಲ್ಲಿ ಅಗ್ರಗಣ್ಯನಾದ ಬಲಿಯು ಮಾಯೆಯನ್ನು ಜಯಿಸಿದ್ದಾನೆ. ಸತ್ಯವನ್ನು ಬಿಡದ ಅವನ ವ್ರತವೇ ಶ್ರೇಷ್ಠವಾದುದು. ನಾನು ಅವನನ್ನು ದೇವತೆಗಳಿಗೆ ಸಹ ಪ್ರವೇಶಾಸಾಧ್ಯವಾದ ಸ್ಥಳಕ್ಕೆ ಕಳುಹಿಸುತ್ತೇನೆ ಎಲೈ ಬಲಿಯೆ ನಿನಗೆ ಮಂಗಳವಾಗಲಿ ನೀನು ಬಂಧು ಮಿತ್ರರೊಡಗೂಡಿ ಸುತಲ ಎಂಬಲ್ಲಿಗೆ ಹೋಗು ಆ ಸ್ಥಳಕ್ಕೆ ಹೋಗಲು ದೇವತೆಗಳು ಸಹ ಕೇಳಿಕೊಳ್ಳುತ್ತಿದ್ದಾರೆ ನಾನು ಅಲ್ಲಿ ನಿನ್ನನ್ನು ಸರ್ವವಿಧದಲ್ಲಿಯೂ ರಕ್ಷಿಸುತ್ತೇನೆ ನೀನು ನನ್ನನ್ನು ಅಲ್ಲಿ ಯಾವಾಗಲೂ ನೋಡುವೆ. ಪ್ರಹ್ಲಾದನೇ ನೀನೂ ಆ ಸುತಲಕ್ಕೆ ಹೋಗು. ನಾನು ಗದಾಪಾಣಿಯಾಗಿ ಯಾವಾಗಲೂ ಅಲ್ಲಿ ನಿನಗೆ ದರ್ಶನ ಕೊಡುತ್ತಿರುತ್ತೇನೆ."

ಬಲಿಯು ಪುಣ್ಯವಂತವನಲ್ಲವೆಂದು ಯಾರು ತಾನೇ ಹೇಳಬಹುದು? ಶ್ರುತಿ ಸ್ಮೃತಿಗಳೆಲ್ಲ ಎಷ್ಟು ಹೊಗಳಿದರೂ, ಸನಕ ಸನಂದನ ನಾರದಾದಿ ಮುನಿಗಳಿಗೆ ಸಹ ಯಾರ ದರ್ಶನ ಸುಲಭವಲ್ಲವೋ ಅಂತಹ ಪರಮಾತ್ಮ ಬಲಿಯ ಅರಮನೆಯ ಮುಂದೆ ಗದಾಪಾಣಿಯಾಗಿ ನಿಂತಿದ್ದಾನೆ ಪರಮಾತ್ಮ ಇರುವ ಕಡೆಯೇ ವೈಕುಂಠ ಕೈಲಾಸ ದೇವತೆಗಳೂ ಮುನಿಗಳೂ ಭಕ್ತರೂ ಪರಮಾತ್ಮನನ್ನು ನೋಡಲು ಬಲಿಯ ಅರಮನೆಗೇ ಧಾವಿಸುತ್ತಾರೆ ಇನ್ನು ಪರಮಾತ್ಮನೇ ಇರುವಲ್ಲಿ, ದೇಶ ಸುಭಿಕ್ಷವಾಗಿರುವುದು ಆಶ್ಚರ್ಯವೇನು? ಬಲಿಯು ಸುತಲದಲ್ಲಿ ಹೋಗಿ ನೆಲೆಸಿದರೂ ಅವನ ಮಹಿಮೆಯಿಂದ ಆ ದೇಶದಲ್ಲಿಯೂ ಐಶ್ವರ್ಯ ಸುಖ ಶಾಂತಿ ತಾಂಡವವಾಡುತ್ತಿತ್ತು. ಅದು ಅವನ ಸತ್ಯದ ಮಹಿಮೆ. ಒಂದು ಸಲ ತನ್ನ ದಾಸ್ಯತ್ವದ ವಿಷಯದಲ್ಲಿ ಧರ್ಮರಾಜನಿಗೆ ಹೆಮ್ಮೆ ಬಂದಿತಂತೆ ಆಗ ಕೃಷ್ಣನು

ಧರ್ಮರಾಜನನ್ನು ಬಲಿಯು ಪಾತಾಳದ ರಾಜಧಾನಿಗೆ ಕರೆದುಕೊಂಡು ಹೋದನು. ಬಲಿಯು ರಾಜದ್ವಾರದಲ್ಲಿ ಮಹಾವಿಷ್ಣು, ಬಲಿಗೆ ಕೊಟ್ಟ ವಾಗ್ದಾನದಂತೆ ಗದಾಧಾರಿಯಾಗಿ ಬಾಗಿಲು ಕಾಯುತ್ತಾ "ಗೊರಕೆ ಹೊಡೆಯುತ್ತಿದ್ದನು" ಧರ್ಮರಾಜನೂ ಕೃಷ್ಣನೂ ಮಹಾವಿಷ್ಣುವನ್ನು ಎಬ್ಬಿಸಿದರು. ಮಹಾವಿಷ್ಣುವು ತೂಕಡಿಕೆಯಲ್ಲಿಯೇ "ನೀವು ಯಾರಪ್ಪಾ, ಕೊನೆಗೆ ಇಷ್ಟು ಯುಗಕ್ಕೆ ಇಬ್ಬರಾದರೂ ಭಿಕ್ಷಾರ್ಥಿಗಳಾಗಿ ಬಂದಿರಲ್ಲ!" ಎಂದನು. ಧರ್ಮರಾಜನಿಗೆ ಕೋಪ ಬಂತು ಕೃಷ್ಣನು "ಅಪ್ಪ ನಾವು ಭಿಕ್ಷಕ್ಕೆ ಬರುವವರೆ? ಇವನು ಧರ್ಮರಾಜ. ಇವನು ನಿತ್ಯವೂ ನೂರು ಸಹಸ್ರ, ಸಾವಿರ ಸಹಸ್ರ ಮಂದಿಗೆ ಭೋಜನ ಮಾಡಿಸಿ ಅವರು ಕೇಳಿದಷ್ಟು ದಕ್ಷಿಣೆ ಕೊಟ್ಟು ಕಳುಹಿಸುತ್ತಿದ್ದಾನೆ ಇವನು ಇವನ ಕೀರ್ತಿ ಜಗತ್ತಿಗೇ ಹರಡಿದೆ" ಎಂದನು ವಿಷ್ಣುವು "ಅದ್ಯಾರೋಪ್ಪ, ಅವನ ಹೆಸರನ್ನೇ ನಾವು ಕೇಳಿಲ್ಲ ಅದಿರಲಿ ಎಂತಹ ರಾಜನಯ್ಯ ಅವನು? ಪ್ರಜೆಗಳನ್ನು ಅಷ್ಟು ದೈನ್ಯಾವಸ್ಥೆಯಲ್ಲಿಟ್ಟಿರಬೇಕಾದರೆ? ಆ ಪ್ರಜೆಗಳಿಗೆ ನಾಚಿಕೆ ಇಲ್ಲವೇನಯ್ಯ ನಿತ್ಯ ದಾನದ ಕೂಳು ತಿನ್ನಲು? ಇಲ್ಲಿ ಭಿಕ್ಷುಕರನ್ನು ಒಳಕ್ಕೆ ಬಿಡಲು ನಾನು ಅನೇಕ ಯುಗಗಳಿಂದ ಕಾಯುತ್ತಿದ್ದರೂ, ಒಬ್ಬರಾದರೂ ಭಿಕ್ಷುಕ ಬರಲಿಲ್ಲ ಪ್ರತಿಯೊಬ್ಬನೂ ತನ್ನ ಕೆಲಸ ತಾನು ಮಾಡಿಕೊಂಡು ಸುಖವಾಗಿದ್ದಾನೆ" ಎಂದನು. ಧರ್ಮರಾಜನು ನಾಚಿಕೆಯಿಂದ ತಲೆತಗ್ಗಿಸಿದನು

ಹೀಗೆ ಬಲಿಯು, ಕೊಟ್ಟಮಾತಿನಂತೆ ನಡೆದು ಸದ್ಗತಿ ಹೊಂದಿದನೇ ಹೊರತು ನಾಶ ಹೊಂದಲಿಲ್ಲ. ವಾಮನನೂ ಅವನಿಗೆ ಮೋಸಮಾಡಲಿಲ್ಲ ವಾಮನನು ತನಗೆ ಮೋಸಮಾಡಿದನೆಂದು ಬಲಿ ಭಾವಿಸಲೇ ಇಲ್ಲ. ಅವನು ಅಸುರನಾದರೂ ಪ್ರಹ್ಲಾದನ ವಂಶದವನಾದುದರಿಂದ ಕೊಟ್ಟ ಮಾತಿಗೆ ತಪ್ಪದೆ ತನ್ನ ತಲೆಯನ್ನೇ ಭಗವಂತನ ಪಾದಕ್ಕೆ ಅರ್ಪಿಸಿದನು. ಇಂದ್ರನ ನಗರವನ್ನು ಹಿಡಿದುದು ಬಲಿಯು ಒಂದು ಅನೈತಿಕ ದುರಾಕ್ರಮಣವಾಗಿ ಅದೇ ಅವನಿಗೆ ದೌರ್ಬಲ್ಯವಾಯಿತು. ಪ್ರಹ್ಲಾದನ ಮೊಮ್ಮಗನಾದ ಅವನು ಹೀಗೆ ಲೋಭದಿಂದ ಇತರರ ಆಸ್ತಿಗೆ ಆಶೆಪಟ್ಟುದು ಅವನ ಆತ್ಮೋನ್ನತಿಗೆ ಅಡ್ಡಿಯಾಯಿತು. ಇದನ್ನು ಕಂಡು ಪರಮಾತ್ಮ ಅವನನ್ನು ದಾರಿಗೆ ತಂದನು. ಪರಮಾತ್ಮ ಅವನಿಗೆ ದೊಡ್ಡ ಉಪಕಾರವನ್ನೇ ಮಾಡಿದನು; ಅವನ ಮೋಹವನ್ನು ನಾಶಮಾಡಿ ಅವನ ಕಣ್ಣು ತೆರೆದನು ಪರಮಾತ್ಮನೇ ಅವನ ಬಾಗಿಲಿನ ಕಾವಲುಗಾರನಾದನು ಈ ಅದೃಷ್ಟ ಯಾವ ದೇವಾಧಿದೇವನಿಗೂ ಇಲ್ಲ. ನಾವು ಪರಮಾತ್ಮನಿಗೆ ನಮ್ಮ ಹೃದಯದಲ್ಲಿ ಸ್ವಲ್ಪ ಸ್ಥಳವನ್ನು ಕೊಟ್ಟರೂ ಸಾಕು ಅನಂತರ ಅವನೇ ನಮ್ಮ ಹೃದಯದ ಅಂಧಕಾರವನ್ನು ಪೂರ್ಣವಾಗಿ ನಾಶಗೊಳಿಸಿ ಭಗವದ್ ಭಕ್ತಿಯ ಜ್ಯೋತಿಯನ್ನು ಹತ್ತಿಸುತ್ತಾನೆ. ನಮ್ಮ ಹೃದಯವನ್ನು ನಾವು ಪರಮಾತ್ಮನಿಗೆ ತೆರೆಯೋಣ.

ಮೊದಮೊದಲು ಬರುವಂದು
ಮೆದುಗಮನದಲಿ ಬಂದು
ಎದುರಿನಲಿ ನಿಂದಿರುವೆ
ಇನಿದನಿಯ ನಗೆಯಿಂದೆ
ಮೊದಲು ಸ್ವಲ್ಪವನು ಕೇಳು;
ಮೊದಲು ಸ್ವಲ್ಪವ ಕೊಡಲು
ಮನವು ತಾನೊಪ್ಪುವುದು
ಅದನು ಸ್ವೀಕರಿಸಿ ಹಿಂದಾಗು
ಹೃದಯದಾಗಸವನೆಲ್ಲವ ನೀನೆ ತುಂಬು
ಇದಕೆ ಮನ ಒಪ್ಪಬಹುದು
ಒಮ್ಮೆಯೇ ಹಿರಿದಾಗಿ ಬಂದು
ಎಲ್ಲವನೆನಗೆ ಸುಮ್ಮನೆಯೆ ಕೊಡು ಎನಲು
ಹೆದರಿ ಮನ ಚೆದರುವುದು
'ತಮ್ಮ ನೀನಾರು ಇರು ತುಸು'
ಎಂದು ತಡೆವುದು
ನೆಮ್ಮಲಾರದು ನಿನ್ನ ಹರಿಯೇ ಶ್ರೀನಿವಾಸ

ಬಲಿಗೆ ಸದ್ಗತಿಯನ್ನು ಕೊಡುವುದಕ್ಕಾಗಿಯೇ ಪರಮಾತ್ಮ ಅವನ ಹೃದಯದ ಆಶೆ-ಅಸತ್ಯಗಳ ಅಂಧಕಾರವನ್ನು ತೊಲಗಿಸಿ ಜ್ಯೋತಿಯನ್ನು ಬೆಳಗಿದನು ಮಹಾತ್ಮರ ವಿಜಯಗಳೆಲ್ಲ ಆತ್ಮಕ್ಕೆ ಸಂಬಂಧಿಸಿದುವು. ಅವರ ಅಪಜಯಗಳು ಹೊರಕ್ಕೆ ಕಂಡರೂ ಅದು ಅಪಜಯವಲ್ಲ ಸತ್ಯವನ್ನು ಅನುಸರಿಸುವವರಿಗೆ ಎಂದಿಗೂ ಅಪಜಯವಿಲ್ಲ. ಗಾಂಧೀಜಿ, ಬಲಿಯ ಮಾರ್ಗವನ್ನೇ ಅನುಸರಿಸಿ ಈ ದೇಶದ ಜನತೆಯನ್ನು ಉಜ್ಜೀವನಗೊಳಿಸಿದರು ಅವರ ಮಾರ್ಗವನ್ನು ಅನುಸರಿಸಿದರೆ ಭಾರತ, ಎಂದಿಗೂ ಅಜೇಯವಾಗಿ ಬಾಳುವುದು.



# ಕನ್ನಡ ಕುವರಿ ಕಾವೇರಿ

ಲೇಖ: ಶಂ. ಮು. ಜೋಶಿ
ಫೋಟೊ: ಬಿ. ಕೇಸರಸಿಂಗ

ಸಿಂಧು, ಯಮುನೆಯರ ಸಾಲಿನಲ್ಲಿಯೇ ಕಾವೇರಿಗೂ ಒಂದು ಸ್ಥಾನವಿದೆ. ಗಂಗೆ ಸ್ವರ್ಗದಿಂದ ಇಳಿದು ಬಂದವಳಾದರೆ, ಕಾವೇರಿಯಲ್ಲಿ ಸ್ವರ್ಗದ ವ್ರಜ ಹೊಳೆಯ ನೀರು ಹರಿದು ಬಂದಿದೆ. ಕಾವೇರಿ ದಕ್ಷಿಣ ಭಾರತದಲ್ಲಿಯ ಒಂದು ದೊಡ್ಡ ಹೊಳೆ. ಅವಳ ಮಹಾತ್ಮೆ, ಕೃತಿ ಎಲ್ಲವೂ ಅನುಪಮ. ಅಂತಲೇ ಕಾವೇರಿಯನ್ನು ದಕ್ಷಿಣದ ಗಂಗೆ ಎಂದು ಕರೆದರು ಹಿಂದಿನವರು. ಕಾವೇರಿ ತನ್ನದೇ ಆದ ಹಲವು ವೈಶಿಷ್ಟ್ಯಗಳನ್ನು ಪಡೆದಿದ್ದಾಳೆ. ಕಾವೇರಿ ಉಗಮ ಸ್ಥಳದಿಂದ ಮುಖದ ವರೆಗೆ ತನ್ನ ದಂಡೆಯ ಮೇಲೆ ಹಲವು ತೀರ್ಥ ಕ್ಷೇತ್ರಗಳನ್ನು ಪಡೆದಿದ್ದಾಳೆ ಹದಿನೈದಕ್ಕೂ ಮೇಲ್ಪಟ್ಟು ಅಣೆಕಟ್ಟಿನ ಆಭರಣಗಳನ್ನು ಧರಿಸಿದ್ದಾಳೆ. ಮೂರು ಕಡೆ ಮೂರು ದ್ವೀಪಗಳನ್ನು ನಿರ್ಮಿಸಿ ಅವುಗಳಿಗೆ ಪವಿತ್ರ ಕ್ಷೇತ್ರದ ಆವರಣ ತೊಡಿಸಿದ್ದಾಳೆ. ಅವಳ ನೀರಿನಲ್ಲಿ, ರೂಪಾಯಿಗೆ ಕೇವಲ ೪೦ ಪೈಸೆ ಭಾಗ ಮಾತ್ರ ಸಾಗರ ರಾಜನಿಗೆ ಅರ್ಪಿಸುತ್ತಾಳೆ. ಇನ್ನುಳಿದ ೬೦ಭಾಗ ನೀರನ್ನು ರೈತರ ಹೊಲಗಳಿಗೆ ಉಣಿಸುತ್ತಾಳೆ

ಇಂತಹ ಕಾವೇರಿ, ಕನ್ನಡದ ಹೆಮ್ಮೆಯ ಮಗಳು. ಕನ್ನಡದ 'ಗಂಡುಕುಲ'ದ ನಾಡಾದ ಕೊಡಗು ಜಿಲ್ಲೆಯ ಪಶ್ಚಿಮ ಘಟ್ಟಗಳ ಸಾಲಿನಲ್ಲಿದ್ದ ಬ್ರಹ್ಮಗಿರಿ ಪರ್ವತದ ತಲಕಾವೇರಿಯಲ್ಲಿ ಒಂದು ಸಣ್ಣ ಹೊಂಡ. ಇದೇ ಹೊಂಡದಲ್ಲಿ ಕಾವೇರಿ ಉದ್ಭೂತಳಾಗಿದ್ದಾಳೆ. ಪ್ರತಿವರುಷ ತುಲಾ ಸಂಕ್ರಮಣ ಕಾಲದಲ್ಲಿ ರಾತ್ರಿ ಒಂದು ಗಂಟೆಗೋ-ಎರಡು ಗಂಟೆಗೋ ಸರಿಯಾದ ಮುಹೂರ್ತಕ್ಕೆ ಈ ಹೊಂಡದಲ್ಲಿ ನೀರು ಚಿಮ್ಮಿ, ಪುಟಿದು ಹೊರಬರುತ್ತದೆ ದಂಡೆಯ ಸುತ್ತ ಆಗ ಕಾಯುತ್ತ ಕುಳಿತ ಯಾತ್ರಿಕರು ಸ್ನಾನ ಮಾಡುತ್ತಾರೆ. ಕೊಡವರಿಗೆ ಅಂದು ದೊಡ್ಡ ಉತ್ಸವದ ದಿನ. ಅಲ್ಲಿಂದ ಹೊರಬಂದ ಕಾವೇರಿ ಕೆಲ ಅಂತರದಲ್ಲಿ ಗುಪ್ತಗಾಮಿನಿಯಾಗಿಬಿಡುತ್ತಾಳೆ. ಮುಂದೆ ೫-೬ ಮೈಲು ಅಂತರದಲ್ಲಿ ಭಾಗಮಂಡಲದಲ್ಲಿ ಅವಳು ಕಾಣಿಸಿಕೊಳ್ಳುತ್ತಾಳೆ. ಅಲ್ಲಿಯೇ ಕನಕಾವತಿ ಎಂಬ ಹೊಳೆಯೂ ಅವಳನ್ನು ಕೂಡಿಕೊಳ್ಳುತ್ತಾಳೆ. ಕೊಡವ ಯಾತ್ರಿಕರು ತಮ್ಮ ಎರಡನೇ ಸ್ನಾನವನ್ನು ಇಲ್ಲಿ ಮಾಡಬೇಕು ಅಂದರೆ ತುಲಾ ಸಂಕ್ರಮಣದ ಪುಣ್ಯ ಲಭ್ಯವಾಗುತ್ತದೆ.

ಆಗ್ನೇಯ ಮತ್ತು ಸ್ಕಂದ ಪುರಾಣಗಳಲ್ಲಿ ಕಾವೇರಿಯ ಜನ್ಮದ ಬಗೆಗೆ ಹಲವು ದಂತಕತೆಗಳು ಬರುತ್ತವೆ ಆಗ್ನೇಯ ಪುರಾಣದಂತೆ, ಕಾವೇರಾ ಎಂಬ ಅರಸು ಘೋರ ತಪಸ್ಸು ಮಾಡಿ ಬ್ರಹ್ಮನನ್ನು ಒಲಿಸಿಕೊಳ್ಳುತ್ತಾನೆ. ಬ್ರಹ್ಮ ಆತನಿಗೆ ಪ್ರತ್ಯಕ್ಷನಾಗಿ ಮೋಕ್ಷ ಹೊಂದಲು ಕೆಲಕಾಲ ಬೇಕೆಂತಲೂ, ಅಲ್ಲಿಯವರೆಗೆ ತನ್ನ ಮಗಳಾದ 'ವಿಷ್ಣುಮಾಯೆ'ಯನ್ನು ಆತನು ಸಂರಕ್ಷಿಸಬೇಕೆಂತಲೂ ಕೇಳಿಕೊಳ್ಳುತ್ತಾನೆ. ಬ್ರಹ್ಮನ ಆಜ್ಞೆಯಂತೆ ಕಾವೇರಾ ವಿಷ್ಣುಮಾಯೆಯನ್ನು ತನ್ನ ಮಗಳಂತೆ ಸಾಕುತ್ತಾನೆ. ಅಂತಲೇಅವಳ ಹೆಸರು 'ಕಾವೇರಿ'ಎಂದಾಗುತ್ತದೆ. ಮುಂದೆ ಕಾವೇರಾ ಮೋಕ್ಷವನ್ನು ಪಡೆದ ನಂತರ ಕಾವೇರಿಯೂ ತಪಸ್ಸಿಗೆ ಕೂಡುತ್ತಾಳೆ ಅವಳಿಗೆ ವಿಷ್ಣು ಪ್ರತ್ಯಕ್ಷನಾಗಿ "ನೀನು ಎರಡು ರೂಪಗಳನ್ನು ಪಡೆ ಒಂದು ರೂಪದಲ್ಲಿ ಲೋಪಾಮುದ್ರೆಯಾಗಿ ಅಗಸ್ತ್ಯ ಋಷಿಗಳನ್ನು ಮದುವೆಯಾಗು ಇನ್ನೊಂದು ರೂಪದಲ್ಲಿ ಹೊಳೆಯಾಗಿ ಹರಿ" ಎಂದು ತಿಳಿಸುತ್ತಾನೆ. ಲೋಪಾಮುದ್ರೆ 'ಅಗಸ್ತ್ಯ'ರ ಹೆಂಡತಿಯಾಗುತ್ತಾಳೆ. ದಕ್ಷಿಣದಲ್ಲಿ ಕ್ಷಾಮ ಪರಿಸ್ಥಿತಿ ಒದಗಿದ ಸುದ್ದಿಯನ್ನು ಕೇಳಿ 'ಅಗಸ್ತ್ಯ'ರು ತಮ್ಮ ಹೆಂಡತಿಗೆ ನೀರಾಗಿ ತಮ್ಮ ಕಮಂಡಲವನ್ನು ಸೇರುವಂತೆ ಬೇಡಿಕೊಂಡು ದಕ್ಷಿಣಕ್ಕೆ ಬರುತ್ತಾರೆ. ದಕ್ಷಿಣದಲ್ಲಿ ಬ್ರಹ್ಮಗಿರಿ ಪರ್ವತವನ್ನು ಅವರು ತಲುಪಿದಾಗ ಅಲ್ಲಿ ವಿಷ್ಣು ಆಮಲಕ ಗಿಡವಾಗಿ ಹುಟ್ಟಿಕೊಂಡಿರುತ್ತಾರೆ. ಅವನ ಪೂಜೆಗಾಗಿ ಸ್ವಯಂ ಬ್ರಹ್ಮದೇವರು ಸ್ವರ್ಗದಲ್ಲಿಯ ವ್ರಜ ಹೊಳೆಯ ನೀರನ್ನು ತಮ್ಮ ಶಂಖದಲ್ಲಿ ತುಂಬಿಕೊಂಡು ಬ್ರಹ್ಮಗಿರಿ ಪರ್ವತಕ್ಕೆ ಬಂದಿರುತ್ತಾರೆ ಅಲ್ಲಿ ತಮ್ಮ ಶಂಖದ ನೀರನ್ನು ಆಮಲಕ ಗಿಡಕ್ಕೆ ಸುರುವುತ್ತಿರುವಾಗಲೇ ಅಗಸ್ತ್ಯರು ಕಲ್ಲಿನ ಮೇಲೆ ಇರಿಸಿದ ಅವರ ಕಮಂಡಲು ಜಾರುತ್ತದೆ, ಒಳಗಿದ್ದ ನೀರು ಸ್ವರ್ಗದ ವ್ರಜ ಹೊಳೆಯ ನೀರಿನೊಂದಿಗೆ ಕೂಡಿಕೊಂಡು ಹೊಳೆಯಾಗಿ ಹರಿಯ ತೊಡಗುತ್ತದೆ ಅವಳೇ ಕಾವೇರಿ.

ಇನ್ನೊಂದು ದಂತಕಥೆಯನ್ನು ಸ್ಕಂದ ಪುರಾಣ ಹೇಳುತ್ತದೆ. ಬಹಳ ಹಿಂದಿನ ಕಾಲದಲ್ಲಿ ವಿಂಧ್ಯ ಪರ್ವತ ಸೂರ್ಯನ ಜತೆ ಸ್ಪರ್ಧೆಗಿಳಿದು ಎತ್ತರೆತ್ತರವಾಗಿ ಬೆಳೆಯತೊಡಗಿದ್ದಿತು. ಇದನ್ನು ಕಂಡು ದೇವತೆಗಳು ಘಾಬರಿಯಾಗಿ ಅಗಸ್ತ್ಯ ಋಷಿಗಳನ್ನು ಬೇಡಿಕೊಂಡು ವಿಂಧ್ಯನ ಬೆಳವಣಿಗೆಯನ್ನು ಹೇಗಾದರೂ ತಡೆಯಬೇಕೆಂದು ಕೇಳಿಕೊಂಡರು. ಅದಕ್ಕಾಗಿ ಅವರಿಗೆ ನೀರಿನ ಕೊರತೆಯಾಗದಂತೆ, ಬೇಕೆಂದಲ್ಲಿ ತಪಸ್ಸು ಮಾಡಲು ಅನುಕೂಲವಾಗುವಂತೆ ಕೈಲಾಸದಲ್ಲಿದ್ದ ಕಾವೇರಿ ನದಿಯನ್ನು ಅವರ ಕಮಂಡಲದಲ್ಲಿ ತುಂಬಿಕೊಟ್ಟರು. ಅಗಸ್ತ್ಯರು ದಕ್ಷಿಣದ ಪ್ರವಾಸಕ್ಕೆ ಹೊರಟಾಗ ಅಡ್ಡವಾಗಿ ಎತ್ತರವಾಗಿ ನಿಂತ ವಿಂಧ್ಯ ಪರ್ವತ ಅಗಸ್ತ್ಯರ ಕಾಲಿಗೆ ಬೀಳುತ್ತಾನೆ. ಅಗ

೧೦೪ನೇ ಪುಟಕ್ಕೆ—









ಕಾವೇರಿಯ ಎರಡನೆಯ ತೀರ್ಥಕ್ಷೇತ್ರ—ಭಾಗಮಂಡಲ

← ತುಲಾಸಂಕ್ರಮಣದಂದು ಯಾತ್ರಿಕರು ಮೀಯುವ
ತಲಕಾವೇರಿ ತೀರ್ಥಕುಂಡ

ಕಾವೇರಿಯ ಉಗಮಸ್ಥಾನ—
ಬ್ರಹ್ಮಗಿರಿ ಪರ್ವತಾವಳಿ

ನಯನಮನೋಹರ ಬೃಂದಾವನ





← ಕೃಷ್ಣರಾಜಸಾಗರದಲ್ಲಿ ಪ್ರತಿಷ್ಠಾಪಿತ ‘ ಕಾವೇರಿ ’

ಕಾವೇರಿ ನೀರುಣಿಸಿದ ಮಂಡ್ಯಜಿಲ್ಲೆಯ ಕಬ್ಬಿನ ಕ್ಷೇತ್ರ





ಕಾವೇರಿಯ ಕೃಪೆಯಿಂದ ಬೆಳೆದ ಭತ್ತವನ್ನು ಸಂಗ್ರಹಿಸಿಡುವ ಜಪಾನ ಮಾದರಿಯ ಉಗ್ರಾಣ



ಕಾವೇರಿ ಸುತ್ತುವರಿದು ಹರಿಯುವ ಶ್ರೀರಂಗನಾಥ ದೇವಾಲಯ



ಕವಲೊಡೆದ ಕಾವೇರಿ ಮರಳಿ ಮಿಲನವಾಗುವ 'ಸಂಗಮ' ಕ್ಷೇತ್ರ



ತಲಕಾಡಿನ ಬಳಿಯ ಪ್ರಾಚೀನ 'ಮಾಧವಮಂತ್ರಿ ಅಣೆಕಟ್ಟು'



ಹನ್ನೆರಡು ವರ್ಷಗಳಿಗೊಮ್ಮೆ ಸಹಸ್ರಾರು ಯಾತ್ರಿಕರು ನೆರೆಯುವ ತಲಕಾಡು ಕಾವೇರಿ ತೀರ್ಥಕ್ಷೇತ್ರ



ತಲಕಾಡಿನಲ್ಲಿರುವ ಪಂಚಲಿಂಗಗಳಲ್ಲೊಂದಾದ ವೈದ್ಯನಾಥೇಶ್ವರನ ದೇವಾಲ



ಶಿವಸಮುದ್ರಮ್ ಜಲಪಾತ—ಗಗನಚುಕ್ಕಿ

ಮೆಟ್ಟೂರ ಅಣೇಕಟ್ಟಿನ ಬಳಿ ಮುನೀಶ್ವರನ ಪೂಜೆ





ಮೆಟ್ಟೂರ ಬಳಿ ಅಣೆಕಟ್ಟು

ಉಪನದಿ ಭವಾನಿ ಕಾವೇರಿಯನ್ನು ಸೇರಿಕೊಳ್ಳುತ್ತಿದ್ದಾಳೆ.



ಅಪೂರ್ವ ಶಿಲ್ಪಕಲೆಯ ಸಂಗಮೇಶ್ವರ ದೇವಾಲಯ



ತಿರುಚನಾಪಲ್ಲಿಯಲ್ಲಿ ಗಣಪತಿಯ ಪ್ರಸಿದ್ಧ ಶಿಲಾದೇವಾಲಯ



ತಿರುಚನಾಪಲ್ಲಿಯ ಶ್ರೀರಂಗಮ್‌ದಲ್ಲಿರುವ ಶ್ರೀರಂಗನಾಥ ದೇವಾಲಯ

ತಂಜಾವೂರು ಜಿಲ್ಲೆಗೆ ನೀರು ಹಂಚುವ ಕಲ್ಲಣ್ಕೆ ಅಣೆಕಟ್ಟು ↓





ಕಲ್ಲಣ್ಕೆ ಅಣೆಕಟ್ಟಿನ ನಿರ್ಮಾಪಕ 'ಕರಿಕಲ್ಲಣ' ರಾಜನ ಮು

↓ ಕಲ್ಲಣ್ಕೆ ಅಣಕಟ್ಟಿನಲ್ಲಿರುವ 'ಕಾವೇರಿ'ಯ ಮೂ





ಕಾವೇರಿ ತೀರದಲ್ಲಿರುವ ಕುಂಭಕೋಣಮ್ ಕ್ಷೇತ್ರ

ಕುಂಭಕೋಣಮ್‌ದ ಮೂರ್ತಿ ಶಿಲ್ಪಿಗಳು



ತಂಜಾವೂರಿನ ಬೃಹದೇಶ್ವರ ದೇವಾಲಯ

ಬೃಹದೇಶ್ವರ ದೇವಾಲಯದಲ್ಲಿನ ಬೃಹತ್ ನಂದಿ

ತಿರುವಾರೂರಿನಲ್ಲಿ ಕಾವೇರಿ ತಟಾಕದಲ್ಲಿರುವ ಒಂದು ದೇವಾಲಯ



ತ್ಯಾಗರಾಜರು ಜನಿಸಿದ ತಿರುವಾರೂರಿನ ಅವರ ಮನೆ





ತಿರುವಾಂಕೂರಿನಲ್ಲಿ ಕಾವೇರಿ ತೀರದಲ್ಲಿರುವ 'ಸಿಲೋ' ಭತ್ತದ ಕಣಜ



ಮಯೂರಂದಲ್ಲಿ ಸ್ನಾನ ಘಟ್ಟ

ಕಾವೇರಿಪಟ್ಟಣ : ಭಾಗಮಂಡಲದಿಂದ ಹೊರಟ ಕಾವೇರಿ ಇಲ್ಲಿ ಸಾಗರ ಸೇರುತ್ತಾಳೆ.





ತಮಿಳು ಸಂತ ಜ್ಞಾನಸಂಬಂಧರ್ ವಾಸಿಸಿದ ಮಯೂರಂದಲ್ಲಿರುವ ಮಯೂರನಾಥಸ್ವಾಮಿ ದೇವಾಲಯ



ತ್ಯಾಗರಾಜರ ಸಮಾಧಿಸ್ಥಳ ತಿರುವೈಯಾರದಲ್ಲಿ ಹರಿಯುವ ಕಾವ

ಕಾವೇರಿ ಸಾಗರದೊಂದಿಗೆ ಸಮ್ಮಿಳಿತಗೊಳ್ಳುವ ದೃಶ



# ಕನ್ನಡ ಕುವರಿ ಕಾವೇರಿ

(೯೭ನೇ ಪುಟದಿಂದ ಬಂದುದು)

ಅಗಸ್ತ್ಯರು "ನಾನು ದಕ್ಷಿಣಕ್ಕೆ ಹೋಗಿ ತಿರುಗಿ ಬರುತ್ತೇನೆ ನಾನು ತಿರುಗಿ ಬರುವವರೆಗೆ ನೀನು ಹೀಗೆಯೇ ಮಲಗಿ ಕೊಂಡಿರು" ಎಂದು ಆಜ್ಞಾಪಿಸುತ್ತಾರೆ. ವಿಂಧ್ಯ ಅವರ ಮಾತಿಗೆ ತಲೆಬಾಗುತ್ತಾನೆ. ಅಂದು ದಕ್ಷಿಣಕ್ಕೆ ಬಂದ ಅಗಸ್ತ್ಯರು ಮರಳಿ ಉತ್ತರಕ್ಕೆ ಹೋಗಲೇ ಇಲ್ಲ ಹೀಗಾಗಿ ವಿಂಧ್ಯ ಪರ್ವತ ಇನ್ನು ಮಲಗಿಕೊಂಡೇ ಇದ್ದಾನೆ. ಅಗಸ್ತ್ಯರು ದಕ್ಷಿಣಕ್ಕೆ ಬ್ರಹ್ಮಗಿರಿ ಪರ್ವತದ ಮೇಲೆ ವಾಸಿಸತೊಡಗುತ್ತಾರೆ. ಆಗ ದಕ್ಷಿಣದಲ್ಲಿ ಸೂರಪದ್ಮನೆಂಬ ರಕ್ಕಸನು ಮಳೆಯನ್ನೇ ತಡೆಹಿಡಿದು ನಿಲ್ಲಿಸಿರುತ್ತಾನೆ. ಅದರಿಂದ 'ಕ್ಷಾಮ' ತಲೆದೋರಿರುತ್ತದೆ. ಆಗ ಇಂದ್ರ ಗಣೇಶನನ್ನು ಕರೆದು ಹೇಗಾದರೂ ಮಾಡಿ ದಕ್ಷಿಣದಲ್ಲಿ ನೀರಿನ ಕೊರತೆಯನ್ನು ಹೋಗಲಾಡಿಸು ಎಂದು ಹೇಳುತ್ತಾನೆ. ಗಣೇಶ ಕಾಗೆಯ ರೂಪವನ್ನು ತಾಳಿ ಅಗಸ್ತ್ಯರ ಬಳಿ ಇದ್ದ ಕಮಂಡಲವನ್ನು ಉರುಳಿಸಿ ಬಿಡುತ್ತಾನೆ. ಆಗ ಕಮಂಡಲುವಿನಲ್ಲಿದ್ದ ಕಾವೇರಿ ಹೊಳೆಯಾಗಿ ಹರಿಯ ತೊಡಗುತ್ತಾಳೆ. ಇವು ನದಿಯ ಮಹಾತ್ಮೆಯನ್ನು ತಿಳಿಸುವ ದಂತ ಕತೆಗಳು. ಕತೆಗಳು ಹೇಗೋ ಇರಲಿ. ಕಾವೇರಿ ನಿಜಕ್ಕೂ ದಕ್ಷಿಣದ ಬರಗಾಲವನ್ನು ಹೊಡೆದು ಹಾಕುವಲ್ಲಿ ಯಶಸ್ವಿಯಾಗಿದ್ದಾಳೆ.

೪೭೫ ಮೈಲುಗಳ ದೀರ್ಘ ಪ್ರವಾಸದಲ್ಲಿ ಅವಳು ತಾನು ಹೋದ ಹೋದಲ್ಲಿ ಸುಭಿಕ್ಷೆಯನ್ನು ದಯಪಾಲಿಸಿದ್ದಾಳೆ. ಒಟ್ಟು ಒಂದು ಕೋಟಿಗೂ ಮಿಕ್ಕಿ ಎಕರೆಗಳಿಗೆ ಅವಳು ನೀರುಣಿಸುತ್ತಿದ್ದಾಳೆ ಕೊಡಗಿನಿಂದ ಹರಿದು ಬರುವ ಕಾವೇರಿಯನ್ನು ಕನ್ನಂಬಾಡಿಯ ಹತ್ತಿರ ಮೈಸೂರು ಶಿಲ್ಪಿ ಮೋಕ್ಷಗುಂಡಂ ವಿಶ್ವೇಶ್ವರಯ್ಯನವರು ಕೈ ಹಿಡಿದು ನಿಲ್ಲಿಸಿದರು. ತನ್ನ ರೈತರಿಗೆ ಅನುಕೂಲ ಮಾಡಿಕೊಡಲು ಅಣೆಕಟ್ಟು ನಿರ್ಮಾಣಕಾರ್ಯ ೧೯೧೧ರಲ್ಲಿ ಪ್ರಾರಂಭಿಸಿದರು ೧೯೩೨ರಲ್ಲಿ ಕನ್ನಂಬಾಡಿ ಅಣೆಕಟ್ಟು ಸಿದ್ಧವಾಯಿತು. ೮೬೦೦ ಫೂಟು ಉದ್ದವಾಗಿರುವ ಅಣೆಕಟ್ಟಿನ ಎತ್ತರ ೧೩೦ ಫೂಟು ೫೦ ಚದುರು ಮೈಲು ವಿಸ್ತಾರವಾದ ಸಾಗರ ನಿರ್ಮಾಣವಾಯಿತು. ಅದೇ ಕೃಷ್ಣರಾಜಸಾಗರ ಅಣೆಕಟ್ಟು. ಒಟ್ಟು ೧ ಲಕ್ಷ ೨೦ ಸಾವಿರ ಎಕರೆಗಳಿಗೆ ಈ ಅಣೆಕಟ್ಟಿನಿಂದ ನೀರು ಸರಬರಾಜು ಆಗತೊಡಗಿತು. ಮಂಡ್ಯ ಜಿಲ್ಲೆಯ ಮದ್ದೂರ ವರೆಗೂ ಅವಳ ನೀರು ಕಾಲುವೆಗಳಲ್ಲಿ ರಭಸದಿಂದ ಹರಿಯತೊಡಗಿತು.

ಮುಂದೆ ಇತಿಹಾಸ ಪ್ರಸಿದ್ಧ ಶ್ರೀರಂಗಪಟ್ಟಣವನ್ನು ಸೇರುವಾಗ ಕವಲೊಡೆದು ಊರನ್ನು ಸುತ್ತು ಹಾಕಿ ಮತ್ತೆ ಒಂದಾಗಿ ಮುಂದ ಹರಿಯ ತೊಡಗಿದಳು ಅವಳು ನಿರ್ಮಾಣಮಾಡಿದ ಮೊದಲ ದ್ವೀಪವಿದು. ಇದೇ ಆದಿರಂಗಂ. ಶ್ರೀರಂಗಪಟ್ಟಣ-ಇತಿಹಾಸವನ್ನೇ ನಿರ್ಮಿಸಿತು. ಕನ್ನಡ ವಿಜಯನಗರ ಸಾಮ್ರಾಜ್ಯದ ರಾಜಪ್ರತಿನಿಧಿಗಳು ಇಲ್ಲಿ ರಾಜ್ಯವಾಳಿದರು. ಅವರು ನಂತರ ಮೈಸೂರಿನ ಒಡೆಯರು-ತದನಂತರ ಸರ್ವಾಧಿಕಾರಿ ಹೈದರ, ಟಿಪೂ-ನಂತರ ಪುನಃ ಒಡೆಯರು, ಅದರ ಒಡೆಯರಾದರು. ಇಂದು ಶ್ರೀರಂಗಪಟ್ಟಣ ಕೇವಲ ಒಂದು ತಾಲೂಕಿನ ಸ್ಥಳವಾಗಿ ನಿಂತುಕೊಂಡಿದೆ.

ಮುಂದೆ ಶಿವನಸಮುದ್ರದಲ್ಲಿ ಕಾವೇರಿ ಪುನಃ ಕವಲೊಡೆಯುತ್ತಾಳೆ ಪುನಃ ದ್ವೀಪ ನಿರ್ಮಾಣ. ಇದು ಮಧ್ಯರಂಗಂ. ನಾಲ್ಕು ಮೈಲು ಮುನ್ನ ಶಿಂಷಾ ಹೊಳೆ ಇವಳನ್ನು ಕೂಡಿಕೊಳ್ಳುತ್ತಾಳೆ ಬಾರಾಚುಕ್ಕಿ ಗಗನ ಚುಕ್ಕಿ ಜಲಪಾತಗಳು ಬಲ ಎಡ ಬದಿಯಲ್ಲಿ ನಿರ್ಮಾಣಗೊಂಡಿವೆ. ಶಿವನಸಮುದ್ರದ ಬಳಿ ಶಿಂಷಾದಲ್ಲಿ ೧೯೦೨ ರಲ್ಲಿಯೇ ಜಲವಿದ್ಯುತ್ ನಿರ್ಮಾಣ ಕಾರ್ಯವನ್ನು ಕೈಗೊಳ್ಳಲಾಯಿತು. ೧೯೦೨ ರಲ್ಲಿ ೫೨೦೦ ಕಿಲೋವ್ಯಾಟ್ಸ್ ವಿದ್ಯುತ್‌ನ್ನು ನಿರ್ಮಾಣ ಮಾಡಲಾಗುತ್ತಿತ್ತು. ಇಲ್ಲಿಂದ ಕೋಲಾರ ಗೋಲ್ಡ್‌ಫೀಲ್ಡಿಗೆ ಈ ವಿದ್ಯುತ್‌ನ್ನು ಕೊಡಲಾಯಿತು. ವಿದ್ಯುತ್‌ನ್ನು ಹರಿಸಿಕೊಂಡು ಹೋಗುವ ಟ್ರಾನ್ಸ್‌ಮಿಶನ್ ಲೈನುಗಳ ಉದ್ದಳತೆ ೧೯೦೬ ರಲ್ಲಿ ಇಡೀ ಜಗತ್ತಿಗೇ ಅತಿ ಉದ್ದಾದ ಲೈನು ಎಂದು ಹೆಸರು ಪಡೆದಿದ್ದಿತು ಇಂದು ಶಿಂಷಾದಲ್ಲಿ ೪೨೦೦೦ ಕಿ.ವ್ಯಾ. ವಿದ್ಯುತ್ ನಿರ್ಮಾಣವಾಗುತ್ತಿದೆ.

ಕಾವೇರಿ ತಲಕಾಡು ಸೀಮೆಯನ್ನು ಪ್ರವೇಶಿಸುವಲ್ಲಿ ಒಂದು ಹಳೆಯ ಅಣೆಕಟ್ಟು ಇದೆ. ಅದೇ ಮಾಧವ ಮಂತ್ರಿ ಅಣೆಕಟ್ಟು. ಈ ಅಣೆಕಟ್ಟನ್ನು ಜಿಗಿದು ನುಗ್ಗಿ ನುಸುಳಿ ಪಾರಾದ ಕಾವೇರಿ ತಲಕಾಡನ್ನು ವಕ್ರಾಕಾರವಾಗಿ ಸುತ್ತಿ ಒಂದು ಭಾರೀ ಮಡುವನ್ನು ಮಾಡಿದ್ದಾಳೆ. ಅದೇ ಮಾಲಿಂಗೀ ಮಡುವು. ಇದೇ ಮಡುವಿನಲ್ಲಿ ರಂಗನಾಯಕಿ-ಶ್ರೀರಂಗರಾಯ - ವಿಜಯನಗರ ರಾಜಪ್ರತಿನಿಧಿಯ ಹೆಂಡತಿ, ಮೈಸೂರಿನ ರಾಜ ಒಡೆಯರ ಕೃತಿಗೆ ಬೇಸತ್ತು ಹಾರಿ ಪ್ರಾಣತೆತ್ತಳು. ಹಾಗೆ ಆತ್ಮಹತ್ಯೆ ಮಾಡಿಕೊಂಡು ಸಾಯುವಾಗ "ತಲಕಾಡು ಮರಳಾಗಿ ಮಾಲಿಂಗಿ ಮಡುವಾಗಿ ಮೈಸೂರರಸರಿಗೆ ಮಕ್ಕಳಾಗದೇ ಹೋಗಲಿ" ಎಂದು ಶಾಪ ಕೊಟ್ಟಳು. ಇಂದು ತಲಕಾಡು ಅರ್ಧಂಬರ್ಧ ಮರಳಿನಲ್ಲಿ ಮುಚ್ಚಿಹೋಗಿದೆ-ಮಾಲಿಂಗಿ ಮಡುವಾಗಿದೆ

ತಲಕಾಡು ಗಂಗರಸರು ರಾಜ್ಯವಾಳಿದ ನಾಡು. ಇಂದು ಇದೂ ತಾಲೂಕಿನ ಸ್ಥಳವಾಗಿ ನಿಂತುಕೊಂಡಿದೆ ಆದೂ ಕಾವೇರಿಯ ತಪ್ಪಲ್ಲ ಇಲ್ಲಿ ಹನ್ನೆರಡು ವರುಷಕ್ಕೊಂದು ಸಲ ಪಂಚಲಿಂಗೇಶ್ವರ ಜಾತ್ರೆಯಾಗುತ್ತದೆ.

ಕಾವೇರಿ ಮೈಸೂರು ಸೀಮೆಯನ್ನು ಬಿಡುವ ಮೊದಲು ಅವಳನ್ನು ಹೇಮಾವತಿ, ಕನಕಾವತಿ, ಲಕ್ಷ್ಮಣತೀರ್ಥ, ಲೋಕಪಾವನಿ. ಕಬಿನಿ, ಶಿಂಷಾ, ಅರ್ಕಾವತಿ ಮುಂತಾದ ಹೊಳೆಗಳು ಕೂಡಿಕೊಳ್ಳುತ್ತವೆ

ಮೈಸೂರು ಪ್ರವಾಸವನ್ನು ಮುಗಿಸಿದ ಕಾವೇರಿ ಮದ್ರಾಸ ರಾಜ್ಯವನ್ನು ಪ್ರವೇಶಿಸುತ್ತಾಳೆ. ಅವಳಿಗೆ ತಮಿಳರು ಅಥವಾ ಕನ್ನಡಿಗರು ಎಂಬ ಭೇದಭಾವವಿಲ್ಲ. ಇಲ್ಲಿಯೂ ತನ್ನ ಜನೋಪಕಾರಿ ಕೆಲಸ ಮುಂದುವರೆಸುತ್ತಾಳೆ.

ಮದ್ರಾಸ ರಾಜ್ಯದಲ್ಲಿ ಕಾವೇರಿಗೆ ಅಡ್ಡವಾಗಿ ಮೆಟ್ಟೂರ ಅಣೆಕಟ್ಟನ್ನು ಕಟ್ಟಲಾಗಿದೆ. ಈ ಅಣೆಕಟ್ಟಿನ ಕೆಲಸ ೧೯೨೫ ರಲ್ಲಿ ಪ್ರಾರಂಭವಾಗಿ ೧೯೩೪ ರಲ್ಲಿ ಮುಗಿಸಲಾಯಿತು. ೫೩೦೦ ಫೂಟು ಉದ್ದವಿದ್ದ ಈ ಅಣೆಕಟ್ಟಿನ ಎತ್ತರ ೨೧೪ ಫೂಟು ಇಲ್ಲಿ ೬೦ ಚದುರು ಮೈಲು ವಿಸ್ತಾರದ ಸಾಗರ ನಿರ್ಮಾಣವಾಗಿದೆ. ಅಲ್ಲಿಂದ ಮುಂದೆ ಸಾಗಿದ ಕಾವೇರಿಯನ್ನು ಭವಾನಿ ಎಂಬ ಹೊಳೆ ಕೂಡಿಕೊಳ್ಳುತ್ತಾಳೆ. ತದನಂತರ ತಿರುಚಿನಾಪಳ್ಳಿಯ ಬಳಿ ಪುನಃ ದ್ವೀಪ ನಿರ್ಮಾಣ ಅದೇ ಅಂತ್ಯರಂಗಂ. ಇಲ್ಲಿಯೇ 'ಶ್ರೀರಂಗಂ ದೇವಸ್ಥಾನವಿದೆ. ಇದೊಂದು ಬಹು ಪವಿತ್ರಸ್ಥಳ

ಮುಂದೆ ಕಲ್ಲಣೈ ಇಲ್ಲಿ ಚೋಳರಾಜ ಕರಿಕಲ್ಲನ್ ಭವ್ಯ ಪ್ರತಿಮೆ ಇದೆ ಕಾವೇರಿಯನ್ನು ನೀರಾವರಿಗಾಗಿ ಪ್ರಪ್ರಥಮವಾಗಿ ಬಳಸಿದ ರಾಜ ಈತ. ಇಲ್ಲಿ ಕಾವೇರಿಯನ್ನು ಐದು ಭಾಗವಾಗಿ ವಿಂಗಡಿಸಿ ಹರಿಯುವಂತೆ ಮಾಡಲಾಗಿದೆ ಪುನಃ ನೀರಾವರಿಗಾಗಿ ಆಕೆಯ ಬಳಕೆ ಕಲ್ಲಣೈ ಅಣೆಕಟ್ಟನ ಮೇಲೆ ಕಾವೇರಿಯ ಸುಂದರ ಪ್ರತಿಮೆ ಇದೆ. ಕಲ್ಲಣೈಯಿಂದ ಮುಂದೆ ಸಾಗಿದ ಕಾವೇರಿ 'ಕುಂಭಕೋಣಂ'ಕ್ಕೆ ಬರುತ್ತಾಳೆ. ಕುಂಭಕೋಣಂ ಮಹಾ ಪವಿತ್ರ ಸ್ಥಳ. ಇಲ್ಲಿಯೂ ೧೨ ವರುಷಕ್ಕೊಂದು ಸಲ ಜಾತ್ರೆ ಸೇರುತ್ತದೆ

ಮುಂದೆ ಸಾಗಿದ ಕಾವೇರಿ ತಂಜಾವೂರನ್ನು ಸೇರುತ್ತಾಳೆ ನೀರಾವರಿಗಾಗಿ ಕಾವೇರಿಯನ್ನು ಪೂರ್ತಿಯಾಗಿ ಬಳಸಿಕೊಂಡ ಜಿಲ್ಲೆ ತಂಜಾವೂರು. ಅದನ್ನು ದಕ್ಷಿಣದ ಭತ್ತದ ಕಣಜವೆಂದು ಕರೆಯುತ್ತಾರೆ ಅದಕ್ಕೆ ಕಾವೇರಿಯೇ ಕಾರಣೀಭೂತಳು.

ಮುಂದೆ ತಿರುವಾರೂರು ಬಳಿ ಹರಿವ ಕಾವೇರಿ ಅಲ್ಲಿಯೂ ಭತ್ತದ ಕಣಜವನ್ನು ತುಂಬಲು ಸಹಾಯ ಮಾಡುತ್ತಾಳೆ. ಮಯೂರಂ ಕಾವೇರಿ ತಟಾಕದ ಮತ್ತೊಂದು ಕ್ಷೇತ್ರ. ತಿರುವೈಯ್ಯಾರದಲ್ಲಿ ಕಾವೇರಿ ಅಬ್ಬೆ ಅಗಲವಾಗಿ ಹರಿಯುತ್ತಾಳೆ. ಪ್ರಸಿದ್ಧ ಸಂಗೀತಜ್ಞ ರಾಮಭಕ್ತ ತ್ಯಾಗರಾಯರ ಕರ್ಮಭೂಮಿ ಇದು ಇಲ್ಲಿಯೇ ಅವರ ಸಮಾಧಿ ಇದೆ.

ತದನಂತರ ಕಾವೇರಿ ಪ್ರಸಿದ್ಧ ಕ್ಷೇತ್ರ ಸ್ಥಳ ಚಿದಂಬರಂ ತಲುಪುತ್ತಾಳೆ. ಚಿದಂಬರಂದಲ್ಲಿ ಒಂದೇ ಗುಡಿಯಲ್ಲಿ ಶಿವ-ವಿಷ್ಣುಗಳಿಗೆ ಪೂಜೆ ಸಲ್ಲುತ್ತದೆ. ಬಹುಶಃ ಕಾವೇರಿ ಕನ್ನಡದಿಂದ ಒಯ್ದ ಸಂಸ್ಕೃತಿ ಅದಾಗಿರಬೇಕು. ಹರಿಹರ—ಶಂಕರನಾರಾಯಣ— ಶಿವರಾಮ ಮುಂತಾದ ಕನ್ನಡ ಹೆಸರಿನ ಸ್ಥಳಗಳು ಹರಿಹರರಲ್ಲಿಯ ಭೇದ ಕೊಡೆದು ಹಾಕಲು ಹುಟ್ಟಿದುವು.

ಹೀಗೆ ತನ್ನ ನಾಲ್ಕುನೂರಾ ಎಪ್ಪತ್ತೈದು ಮೈಲುಗಳ ಪ್ರವಾಸವನ್ನು ಮುಗಿಸಿ ಬಂಗಾಲ ಉಪಸಾಗರ ತಡಿಯಲ್ಲಿಯ ಕಾವೇರಿಪಟ್ಟಣಂದಲ್ಲಿ ಪತಿ ಸಾಗರರಾಜನನ್ನು ಕೂಡುತ್ತಾಳೆ

ಕಾವೇರಿಯ ಹುಟ್ಟಿದ ಮನೆ ಕನ್ನಡ, ಕೊಟ್ಟ ಮನೆ ತಮಿಳು ನಾಡು ಹುಟ್ಟಿದ ಮನೆಗೂ ಕೊಟ್ಟ ಮನೆಗೂ ಒಳ್ಳೆ ಹೆಸರು ತಂದ ಕಾವೇರಿ ಕೃಶಾಂಗಿಯಾಗಿ ಸಮುದ್ರರಾಜನನ್ನು ಕೂಡಿಕೊಳ್ಳುತ್ತಾಳೆ

ಅಂತಹ ಮಗಳನ್ನು ಪಡೆದ ಕನ್ನಡ ನಾಡು ಧನ್ಯ—ನಾಡವರು. ಸುದೈವಿಗಳು.



ದೀಪಾವಳಿ ಶುಭಾಶಯಗಳು · ದೀಪಾವಳಿ ಶುಭಾಶಯಗಳು · ದೀಪಾವಳಿ ಶುಭಾಶಯಗಳು

ನಿಮ್ಮ ಸೌಂದರ್ಯ ಮತ್ತು
ಮೋಹಕತೆ ಹೊಸ
ವರ್ಷದಲ್ಲಿಯೂ ದೀಪಾವಳಿಯಂತೆ
ಉಜ್ವಲವಾಗಿರಲಿ
ಎಂದು ನಾವು ಕೋರುತ್ತೇವೆ.

**ಶ್ರೀ ರಾಮಕೃಷ್ಣ ಆಯಿಲ್ ಮಿಲ್ಸ್**
**ಬಂದರ್ • ಮಂಗಳೂರು**



ಅನಿತಾ ಟಾಯಲೆಟ್ ಸೋಪು, ಸೋನಾ
ಸ್ಯಾಂಡಲ್ ಸೋಪು, ಕಸ್ತೂರಿ ಬಾರ್ ಸೋಪು,
ಮೇನಕಾ ಹೇರ್ ಆಯಿಲ್ಸ್ — ಇವುಗಳ ತಯಾರಕರು

everest/482/ROM K



# ಒಡೆದ ಘಂಟೆ

ಗೀತಾ ಕುಲಕರ್ಣಿ

"ಓ ಏನು ಅವಸರ...ಎಂಥ ಗಡಿಬಿಡಿ... ಪ್ರಾಣ ಹೋಗೋದಕ್ಕೂ ಪುರುಸೊತ್ತು ಸಿಗದಷ್ಟು ಕೆಲಸ ಬಿದ್ದಿದೆ ನನ್ನ ಪಾಲಿಗೆ. ಸ್ನಾನದ ನೀರು ಕಾದು ಕುದಿಯುತ್ತಿದ್ದರೂ ಈ ಹುಡುಗಿಗೆ ಸಿನೇಮಾ ಪ್ರಪಂಚ ಬಿಟ್ಟರೆ ಇನ್ನಾವುದಕ್ಕೂ ಎಚ್ಚರವಿಲ್ಲ...ನಡುಮಧ್ಯೆ ಈ ಶನಿಯೊಂದು ನನಗೆ ಗಂಟೇ ಬಿದ್ದಿದೆ...ಪಾತ್ರೆ ತೊಳೆಯಲು ಬೆಳಗ್ಗಿನಲ್ಲಿ ಕುಳಿತರೆ ತೊಳೆದ ಪಾತ್ರೆ ಅಡಿಗೆ ಮನೆ ಸೇರೋದು ಸೂರ್ಯ ಕಂತಿದ ಮೇಲೆ! ಹೆಚ್ಚು ಕಡಿಮೆ ಮಾತಾಡಿದರೆ ತೊಳೆಯುವ ಪಾತ್ರೆಯೂ ಅಲ್ಲೆ! ಮತ್ತವಳಿಗೇ ದಮ್ಮಯ್ಯ ಎನ್ನಬೇಕು...ಈ ಹಗಲಾದರೂ ಯಾಕಾಗುತ್ತದೋ?"

ಸುಮತಿ ತನ್ನ ಸ್ಥೂಲ ದೇಹದ ಭಾರ ಹೊರಲಾರದೆ ಉಸ್ಸೆಂದು ಕುಳಿತುಬಿಟ್ಟಳು. ಮೈಯಿಂದ ಬೆವರು ಧಾರಾಳವಾಗಿ ಇಳಿದು ಬಂದಿತ್ತು. ಅರ್ಧ ಅಡಿಗೆಯ ಕೆಲಸವೆಲ್ಲ ಮುಗಿದಿತ್ತು. ಆದರೆ ಸ್ಕೂಲಿನ ಅಂದಿನ ಪಾಠಕ್ಕೆ ತನ್ನದಿನ್ನು ಯಾವ ತಯಾರಿಯೂ ಆಗಿಲ್ಲ. ಮಗಳ ಸ್ನಾನ ಆಗೋದರೊಳಗೆ ಒಂದು ಬಾರಿ History Bookನಲ್ಲಿ ಕಣ್ಣೋಡಿಸಬೇಕಿತ್ತು ಸುಮತಿಗೆ. ಅಷ್ಟರಲ್ಲಿ ಶನಿಯಾಗಿ ಕಾಡುತಿದ್ದ ನೀಲಮ್ಮ "ಅಮ್ಮವರೇ ಹುಣಸೇಹುಳಿ ಕೊಡಿ....ತಾಮ್ರದ ಪಾತ್ರೆ ಕಪ್ಪಾಗಿ ಬಿಟ್ಟದೆ" ಕೂಗುತ್ತಾಳೆ.

ಅತ್ತ ಇತ್ತ ಓಡಾಡುವಾಗ ಸುಮತಿಗೆ ಕಣ್ಣಲ್ಲಿ ನೀರು ತುಂಬೋದೂ ಉಂಟು...ಇಷ್ಟೊಂದು ಮಾಂಸ ತನ್ನ ದೇಹದಲ್ಲಿ ಸೇರಿದ್ದು ಅವಳ ಉತ್ಸಾಹವನ್ನೇ ನುಂಗಿಬಿಡಬೇಕೇ! ಛಿ...ಛಿ... ತಲೆ ಚಿಡಿಸಿಬಿಡುತ್ತಾರೆ, ಕ್ಲಾಸಿನ ಹುಡುಗಿಯರು. ಅವರ ತುದಿ ಮೊದಲಿಲ್ಲದ ಪ್ರಶ್ನೆಗಳಿಗೆ ಉತ್ತರ ಕೊಡಬೇಕಾದರೆ ತಾನು ಪಡಬೇಕಾದ ಸಂಕಟ ಅವಳೆದುರು ಧುತ್ ಎಂದು ನಿಂತಿತು!

ಮನೆಯ ಆಗು-ಹೋಗು, ಪತಿಯ ಮಗಳ ಉಪಚಾರ ಮುಗಿಸಿ ತಾನು ಸ್ಕೂಲಿನ ಮೆಟ್ಟಿಲೇರುವುದೆಂದರೆ ಸುಮತಿಗೆ ಯಮಲೋಕದ ದರ್ಶನವಾದಂತೆ!

ಇದೆಲ್ಲ ದಿನದ ಪರಿಪಾಠವೆಂದು ಅವಳಿಗೆ ಅಭ್ಯಾಸವಾಗಬೇಕಾಗಿತ್ತು. ಆದರೆ ಅದೇಕೊ ಪ್ರತಿಯೊಂದು ದಿನವೂ ಹಿಂದಿನ ದಿನಕ್ಕೂ ಭಾರವಾಗಿಯೇ ದಿನಗಳು ಸಾಗುವಂತಾಗಬೇಕೇ?

ಈಗ ಎರಡು ತಿಂಗಳ ಹಿಂದೆ ಕಾಯಿಲೆಯಿಂದ ಸುಮತಿ ಹಾಸಿಗೆ ಹಿಡಿದಾಗ ನಾಗೇಶ ಹಲವಾರು ಬಾರಿ ಗಿಳಿಗೆ ಹೇಳಿದಂತೆ ತಿಳಿಸಿ ಹೇಳಿದ್ದ

"ಇಲ್ನೋಡು ಸುಮಿ...ನಿನಗೆ ವಿಶ್ರಾಂತಿ ಅಗತ್ಯವೆಂದು ಡಾಕ್ಟರು ಹೇಳಿದ್ದಿಲ್ವೆ? ಹೊರಲಾರದ ಹೊರೆ ಮೈಮೇಲೆ ಹೊತ್ತಿದ್ದೇಕೆ? ನಾನೊಬ್ಬ ದುಡಿದು ತರುವ ಹಣ ನಮ್ಮ ಸಂಸಾರಕ್ಕೆ ಸಾಲದೇ? ನೀನು-ನಾನು, ಪ್ರಭಾ! ಚಿಕ್ಕ ಚೊಕ್ಕಟ ಸಂಸಾರ ನಮ್ಮದು. ಇಲ್ಲದ ಹೆಚ್ಚಿನ ಆಶೆ ಏತಕ್ಕೆ?"

ಪತಿಯ ಮಾತೆಲ್ಲ ಅವಳೆದುರಿಗೆ ಗಾಳಿ ಮಾತು!

ಜ್ವರದಿಂದ ಕುದಿಯುತಿದ್ದ ಮೈಯಲ್ಲೂ ಪತಿಯ ಮಾತನ್ನು ಒಪ್ಪಿಕೊಳ್ಳಲು ಸಿದ್ಧಳಿಲ್ಲ. ಮುಖ ಗೋಡೆಯತ್ತ ತಿರುಗಿಸಿ ಮಲಗಿಬಿಟ್ಟಳು ಸುಮತಿ! ಅವಳೆದುರು ಅವಳದೇ ಸ್ವಪ್ನ-ಸಾಮ್ರಾಜ್ಯ!!

—ಮಗಳು ಸ್ನಾನ ಮುಗಿಸಿ ಬಂದೊಡನೆ ಬಚ್ಚಲು ಸೇರಿದ ಸುಮತಿ ಎರಡು ಬಿಂದಿಗೆ ನೀರು ಮೈಗೆ ಸೋಂಕಿಸಿ ಟವೆಲಲ್ಲಿ ಮೈಯನ್ನು ಪೂರಾ ಒರಸಿಕೊಳ್ಳದೆ ಸೀರೆ ಸುತ್ತಿಕೊಂಡು ಧಡಾರನೆ ಬಾಗಿಲು ದೂಡಿ ಹೊರ ಬಂದು ಹೆಜ್ಜೆ ಇಡೋದು ಹೊರಡುವ ಸಿದ್ಧತೆಗಾಗಿ. ಅವಸರವಸರವಾಗಿ ತಲೆ ಬಾಚಿ-ಮುಡಿ ಕಟ್ಟಿ ಪೌಡರಿನ ಪುಡಿ ಒಂದಿಷ್ಟು ಮುಖಕ್ಕೆ ಲೇಪಿಸಿ ಕುಂಕುಮ ಹಣೆಗಿಟ್ಟು-ಹಿಂದಕ್ಕೊಂದು ತಾಳ ಮೇಳವಿಲ್ಲದ ಸೀರೆ–ಬ್ಲೌವುಜ್ ತೊಟ್ಟು ಧಾವಿಸಿ ಅಡಿಗೆ ಕೋಣೆಗೆ ಕಾಲಿರಿಸುತ್ತಾಳೆ.

ಅಲ್ಲಿ ತಟ್ಟೆ–ಮಣೆಯಿಟ್ಟು ಮಗಳು ಪತಿ ತನಗಾಗಿ ಕಾಯುತ್ತಿರುವ ಚಿತ್ರ-ಈ ಎಲ್ಲ ಗಡಿಬಿಡಿಯಲ್ಲೂ ಅವಳಿಗೆ ತೃಪ್ತಿ ಕೊಡುವ ಪ್ರಸಂಗ. ಆಗೊಮ್ಮೆ ಉಬ್ಬಸಪಡುತ್ತಿರುವಂತೆಯೂ ನಗು ಹೊರಚಿಮ್ಮುತ್ತದೆ ಸುಮತಿಗೆ.

"ಏನಮ್ಮ ಕಪ್ಪುಸೀರೆಗೆ ಹಸುರ ಬ್ಲೌವುಜ್ ಎಂಥ ಮ್ಯಾಚಿಂಗ್ ಇದು?"

ಪ್ರಭಾ ಉಕ್ಕಿ ಬರುವ ನಗು ತಡೆದು ಕೇಳುತ್ತಾಳೆ.

"ಆ ಮ್ಯಾಚಿಂಗೆಲ್ಲ ನಿನಗೇ ಇರಲಿ...ನನಗೇಕೆ ಮುದುಕಿಗೆ ಅದೆಲ್ಲ? ಮರ್ಯಾದೆಯಿಂದ ಸ್ಕೂಲು ಸೇರಿದರಾಯಿತು..."

ಸುಮತಿಗೆ ಉತ್ತರಿಸಿ, ಅನ್ನ ನುಂಗುವುದಕ್ಕೆ ಸಮಯವಿಲ್ಲದೆ ಅವಸರ ಬೆನ್ನೇರಿ ಕುಳಿತಿರುತ್ತದೆ.

"ಏ...ಅಷ್ಟೇಕೆ ಅವಸರವೇ ಸುಮಿ ನಿನಗೆ? ಅನ್ನ ಗಂಟಲಲ್ಲಿ ನಿಂತೀತು. ನೀರು ಕುಡಿ...ರೇಸ್ ಕೋರ್ಸಿನ ಕುದುರೆಯಂತೆ ಓಡುತ್ತೀಯಲ್ಲ?"

"ನಿಮ್ಮ ಹಾಗೆ ಆಫೀಸಿನಲ್ಲಿ ಹಾಯಾಗಿ ಹರಟೆ ಕೊಚ್ಚಿ ಸಂಬಳ ಗಿಟ್ಟಿಸುವ ಭಾಗ ನನಗಿಲ್ಲ. ನನಗೆಂದೂ ಸ್ಕೂಲಿನ ಸಮಯ ಇಲ್ಲಿ ಕಳೆಯಲು ಮನಸ್ಸು ಒಪ್ಪದು ನೋಡಿ..."

-ದಾರಿಯಲ್ಲೂ ಇದೇ ಕಥೆ!

"ಅಮ್ಮಾ...ಕಾಲಿಗೆ ಕಲ್ಲು-ಮುಳ್ಳು ತಾಗಿ ಎಡವಿಬಿಟ್ಟರೇ? ಎದುರಿಗೆ ಬರುವ ಟಾಂಗಾದವನೇ ನಿನಗೆ ದಾರಿ ಬಿಡಬೇಕೇ? ಹೇಳು-ನೀನೇನು ಅಚೆ-ಈಚೆ ಸರಿಯುವವಳಲ್ಲ. ಸ್ವಲ್ಪ ನಿಧಾನ...ನಿನ್ನ ಸ್ಪೀಡಿಗೆ ನನಗೆ ನಡೆಯಲಿಕ್ಕಾಗದು ನೋಡಮ್ಮ..."

ಸುಮತಿ ಮಗಳ ಮಾತಿಗೆ ಕಿವಿಗೊಡುವ ಮೊದಲೇ ಅವಳ ಕಿವಿಗಳಿಗೆ ಕೇಳುತಿದ್ದ

ಹಾಸ್ಯದ ಮಾತು ಕೆಚ್ಚಿಗೆಬ್ಬಿಸುತ್ತದೆ. "ದೊಡ್ಡಾನೆ ಜೊತೆಯಲ್ಲಿ ಮರಿಯಾನೆ ಓಡುವ ಚಂದ ನೋಡೋ!" ಸುಮತಿ ಹಿಂದು ಮುಂದೆ ನೋಡದೆ ಎತ್ತಲಾದ ಕಾಲು ಎತ್ತಿಡುತ್ತಾಳೆ. "ಥೂ... ಕಾಲೇಜು ಕಲಿತರೂ ಹುಡುಗರ ಬುದ್ಧಿ ಮೂರು ಕಾಸಿನದು." ಗಂಟಲಲ್ಲಿ ಮಾತು ಗುಣಗುಣಿಸುತ್ತದೆ. ಸುರಿಯುತ್ತಿದ್ದ ಬೆವರನ್ನು ಒರೆಸಲೂ ಅವಳಿಗೆ ಸಮಯವಿಲ್ಲ.

— ಅಂತೂ ಇಂತೂ ಹೈಸ್ಕೂಲಿನ ಮೆಟ್ಟಿಲೇರುವಾಗ ಘಂಟೆ ಹೊಡೆದು ಆಗಲೇ ಪ್ರಾರ್ಥನೆ ಮುಗಿದಿರುತ್ತದೆ. ಉಬ್ಬಸಬಡುತ್ತ ಟೀಚರ್ಸ್ ರೂಮಿನಲ್ಲಿಯ ಕುರ್ಚಿಯಲ್ಲಿ ದೇಹ ಚೆಲ್ಲಿಕೊಂಡಾಗ "ಬವ್ವ, ಬದುಕಿದೆ" ಎಂದುಕೊಳ್ಳುತ್ತಾಳೆ ಸುಮತಿ. "ನೀರು" ಅವಳು ಕೇಳುವ ಮೊದಲೇ ಸುಶೀಲಾ ನೀರು ತುಂಬಿದ ಗ್ಲಾಸು ಎದುರಿಗಿಡುತ್ತಾಳೆ. ಕುಡಿಯುವ ಅವಸರಕ್ಕೆ ಗ್ಲಾಸಿನ ಅರ್ಧ ನೀರು ಕುತ್ತಿಗೆ ಸೀರೆಯನ್ನು ಒದ್ದೆಯಾಗಿರಿಸುತ್ತದೆ. ಲಗುಬಗೆಯಿಂದ ಪರ್ಸಿನೊಳಗಿಟ್ಟಿದ್ದ ಕರವಸ್ತ್ರ ಬಿಡಿಸಿ ನಿಧಾನವಾಗಿ ಮುಖ-ಹಣೆ ಕುತ್ತಿಗೆ ಒರಸಿಕೊಳ್ಳುತ್ತ ಪಕ್ಕದಲ್ಲೇ ಕುಳಿತಿದ್ದ ಸುಧಾಗೆ ಹೇಳುತ್ತಾಳೆ.

"ಇವೊತ್ತು ಭಾರಿ ಸೆಕೆ... ಏನು ಬಿಸಿಲಪ್ಪಾ ...ಗಾಳಿಯೇ ಇಲ್ಲ! ಬೆವರಿನ ಸ್ನಾನವಾದಂತೆ ಆಗಿಬಿಟ್ಟಿದೆ."

"ಈಗ ಮಳೆಗಾಲ... ಸೆಕೆ ಎಲ್ಲಿಂದ ಬಂತು ಸುಮತಿ? ನೀನು ಅವಸರದಲ್ಲಿ ಬಿಸಿಬಿಸಿಯೂಟ ಉಂಡು ಓಡಿ ಬಂದಿರಬೇಕು. ಅಲ್ಲದೆ ಮೈಯ ಭಾರವೂ ಸೇರಿಕೊಂಡಿದೆಯಲ್ಲ!"

"ನಿಜ... ನಿಜ ನಿಮ್ಮ ಮಾತು. ಗಡಿಬಿಡಿಯಲ್ಲೇ ಅನ್ನ ನುಂಗಿ ಓಡುತ್ತ ಬಂದೆ. ಮನೆಯಲ್ಲಿಯ ಕೆಲಸ ಒಂದೇ, ಎರಡೇ? ಅಷ್ಟಾಗಿಯೂ ಸ್ಕೂಲಿನ ಪ್ರಾರ್ಥನೆಯ ಸಮಯಕ್ಕೆ ನಾನೆಂದೂ ಹಾಜರಿರಲು ಸಾಧ್ಯವಾಗಿಲ್ಲ. ಈ ಮೈಯೊಂದು ನನಗೆ ಭಾರ! ನೀವು ಪುಣ್ಯವಂತರು ನೋಡಿ ಸುಧಾ, ಈ ಎಳೆ ಬಳ್ಳಿಯ ಮೈ ಹೂವಿನಷ್ಟು ಹಗುರ!"

ಅಷ್ಟರಲ್ಲಿ ಕ್ಲಾಸಿಗೆ ಹೋಗುವ ಹೊತ್ತಾಗಿಬಿಡುತ್ತದೆ. ಸುಮತಿ ನಿಧಾನವಾಗಿ ಎದ್ದು ನಿಂತು ಮೈಮುರಿದು ಹೆಜ್ಜೆ ಮುಂದಿಡುತ್ತಾಳೆ. ಗುಸುಗುಸು ಸದ್ದು ಕಿಲಿಪಿಲಿ ನಗುವಿನ ಸದ್ದಾಗುತ್ತದೆ. ಹುಡುಗಿಯರ ನಗು ತುಟಬಿಟ್ಟು ಕಣ್ಣಿನಲ್ಲಿ ತುಂಬಿತುಳುಕುತ್ತದೆ. "ಯಾವ ಸಿನೇಮಾ ಸ್ಟಾರ್ ಇಲ್ಲಿಗೆ ಬರುತ್ತಾರಂತೆ? ಈ ಬಿಸಿಬಿಸಿ ಚರ್ಚೆ ಅದರ ಬಗ್ಗೆ ನಡೆದಿತ್ತೆ? ಈಗ ಬಾಯಿಗೆ ಬೆರಳಿಟ್ಟರೆ ಕಚ್ಚಲು ಬಾರದ ಹಾಗೆ ಪಿಳಿಪಿಳಿ ಕಣ್ಣುಬಿಡುತ್ತ ಕೂತುಬಿಟ್ಟಿದ್ದಿರಲ್ಲ!"

ಪುಸ್ತಕಗಳ ಪುಟ ತಿರುಗಿಸಿದ ಪರ್ ಪರ್ ಸದ್ದು!!

"ಮೇಡಮ್ ಮೊನ್ನೆ ಅರ್ಧಕ್ಕೆ ಬಿಟ್ಟಿದ್ದ ಪಾಠ ಈಗ ಮುಂದುವರಿಸುತ್ತೀರಲ್ಲ?"

ಸುಮತಿ ಕಣ್ಣಿನ ಕನ್ನಡಕ ಸರಿಪಡಿಸಿ ಸುತ್ತೊಮ್ಮೆ ಕ್ಲಾಸಿನಲ್ಲಿ ದೃಷ್ಟಿ ಓಡಿಸಿ, ಕೇಳಿದ ಪ್ರತಿಮಾಳ ಮಾತಿಗೆ ಉತ್ತರ ಕೊಡುವ ಬದಲು ತಾನೇ ಕೇಳಿದಳು.

"ಎಲ್ಲಿ, ಅವಂತಿಕಾ ಎಲ್ಲಿ? ಏನು ಇಂದು ಸ್ಕೂಲಿಗೇ ಬಂದಿಲ್ಲವೆ? ಇಂದು ಯಾರಾದರೂ ಹೊಸ ಅತಿಥಿಯು ಆಗಮನವಾಗಿರಬೇಕು. ಅವರ ಮನೆಯಲ್ಲಿ!"

ಮೇಡಮ್‌ಗೆ ಅವಂತಿಯ ಮೇಲೆ ವಕ್ರದೃಷ್ಟಿ ಇದ್ದದ್ದು ಹುಡುಗಿಯರೂ ಬಲ್ಲರು. ಅವಂತಿ ಚೆಲುವೆ ಜಾಣೆ ಎಂದು ಎಲ್ಲರಿಂದಲೂ ಪ್ರಶಂಸೆಗೊಂಡರೆ ಈ ಮೇಡಮ್‌ಗೆ ಅದೇಕೋ ಹೊಟ್ಟೆಯುರಿ. ಅವಂತಿಯ ಮಾತಿಗೆ, ನಡಿಗೆಗೆ, ರೂಪಿಗೆ ಏನಾದರೂ ಕೊಂಕು ಮಾತು ದಿನದಲ್ಲಿ ಇದ್ದದ್ದೇ?

ಇಂದು ಕ್ಲಾಸಿಗೆ ಕಾಲಿಟ್ಟೊಡನೆ ಅವಂತಿ ಅವರ ಕಣ್ಣಿಗೆ ಬೀಳದಿದ್ದದ್ದೂ ಸುಮತಿಯ ಮುಂದಿನ ಯೋಚನೆಗೆ ತಡೆ ಹಾಕಿಬಿಟ್ಟಿತು

"ಯಾಕೆ ಅವಂತಿ ಸ್ಕೂಲಿಗೇ ಬಂದಿಲ್ಲವೇ?"

ಮತ್ತೊಮ್ಮೆ ಸುಮತಿ ಕೇಳಿದಾಗ ವಾಸಂತಿ ಎದ್ದು ನಿಂತಳು.

"ಮೇಡಮ್... ಅವಂತಿಗೆ ಮದುವೆ ಗೊತ್ತಾಗಿದೆ."

"ಏನೆಂದೆ? ಮದುವೆ ಅವಂತಿಗೆ? ಯಾವಾಗ? ಎಲ್ಲಿ? ಯಾರು? ನನಗೊಂದೂ ಗೊತ್ತೇ ಇಲ್ವಲ್ಲ?"

"ನಮಗೂ ಅಷ್ಟೇನೂ ತಿಳಿಯದು. ಹುಡುಗ ಎಮ್.ಎಸ್.ಸಿ. ಟೆಕ್ ಫಾರಿನ್ನಿಗೆ ಹೋಗ್ತಾನಂತೆ... ಚೆಲುವಿನಲ್ಲಿ ಅವಳಿಗೆ ತಕ್ಕವನಂತೆ!"



"ಓಹ್... ಸರಿ ನೀನು ಕೂತುಕೊ ವಾಸಂತಿ ..."

– ಮುಂದಿನ ಪಾಠದಲ್ಲಿ ಹೆಚ್ಚಿನ ಉತ್ಸಾಹ ಬರಲಿಲ್ಲ. ತೀರ ಸಪ್ಪೆ ನೀರಸ ಬೋಳು ಹುಳಿಯಂತೆ ಅಂದಿನ ಪಾಠವಾಯಿತು. ಸುಮತಿಯ ತಲೆಯಲ್ಲಿ ಅನಂತಿ-ಭಾವಿಪತಿ ಮದುವೆ ಇವುಗಳ ಚಿತ್ರಗಳಿಂದ ಮನಸ್ಸಿನ ನೆಮ್ಮದಿ ಕದಡುತ್ತ ಹೊರಟಿತ್ತು.

"ನಿಮಗೆ ಗೊತ್ತೆ ಮಿಸೆಸ್ ಶರ್ಮ, ನಮ್ಮ ಅನಂತಿಯ ಮದುವೆ ಗೊತ್ತಾಗಿದೆಯಂತೆ!"

"ನಾನೂ ಇಂದೇ ಕೇಳಿದೆ. ಅವಳ ತಂದೆ—ತಾಯಿ ಪುಣ್ಯವಂತರು ಅಪರೂಪದ ಹುಡುಗಿ ಅನಂತಿ. ಅದಕ್ಕೆ ತಕ್ಕ ರೂಪ-ಗುಣ. ಸರಿಯಾದ ಹುಡುಗ ಸಿಕ್ಕಿದ್ದು ಹಾಲಿಗೆ ಸಕ್ಕರೆ ಬೆರತಂತಾಯಿತು."

"ಅದೆಲ್ಲ ಸರಿ ಇಷ್ಟುಬೇಗ ಅದು ಹೇಗೆ ಗೊತ್ತಾಯಿತೋ? ಅಲ್ಲದೆ ಅವರ ಜಾತಿಯಲ್ಲ!"

"ರೂಪ ಗುಣ ಇದ್ದಾಗ ಜಾತಿಯ ಭೂತ ಎದುರು ನಿಲ್ಲುತ್ತದೆಯೆ. ಸುಮತಮ್ಮಾ...ಒಳ್ಳೆ ಸುದ್ದಿ ಕೇಳಿ ನನಗಂತೂ ತುಂಬ ಸಂತೋಷ ಅಲ್ವೆ?"

"ಅಲ್ಲವೆ ಮತ್ತೆ! ನಮ್ಮ ಸ್ಕೂಲಿನಲ್ಲಿ ಕಲಿತ ಹುಡುಗಿಗೆ ಒಳಿತಾದರೆ ನಮಗೂ ಹೆಮ್ಮೆಯೇ"

- ಸಂಜೆ ಮನೆ ಸೇರಿದ ಸುಮತಿ ಉಸ್ಸೆಂದು ಹಾಸಿಗೆಯಲ್ಲಿ ಬಿದ್ದಾಗ ಮಗಳು ಬಿಸಿಬಿಸಿ ಉಗಿಯಾಡುವ ಚಹದ ಕಪ್ಪು ತಂದು ಮುಂದಿಟ್ಟಾಗ, ಅದರ ಕಂಪು ಮೂಗಿಗೆ ತಾಗಿ ಹಾಯೆನಿಸಬೇಕು. ಆದರೆ ಇಂದಿನ ಚಹಾದಲ್ಲಿ ಅವಳಿಗೆ ರುಚಿ ಕಂಡು ಬರಲಿಲ್ಲ. ಯಾಂತ್ರಿಕವಾಗಿ ತುಟಿಗಳು ಚಹಾವನ್ನು ಹೀರಿದವು. ಮೈಯೆಲ್ಲೇನೊ ಕಾವು ಹುಟ್ಟಿಕೊಂಡಿತು.

ರಾತ್ರಿ ಊಟ ಮುಗಿಯಿತು, ಪತಿ ಆಫೀಸಿನ ಫೈಲಿನಲ್ಲಿ ಕಣ್ಣೋಡಿಸುತ್ತಿದ್ದಾಗ ಸುಮತಿ ಅಲ್ಲಿಗೆ ಬಂದು ಕುಳಿತಳು.

"ನೀನಿನ್ನೂ ಎಚ್ಚರಿದ್ದೀಯಾ? ಗಂಟೆ ಹನ್ನೊಂದು...ಇದು ಅರ್ಜಂಟಾಗಿ ಮುಗಿಯಬೇಕತ್ತು. ಅದಕ್ಕಾಗಿ ಮುಗಿಸಲು ಕುಳಿತು ಬಿಟ್ಟೆ"

"ನನಗೆ ನಿದ್ರೆಯೇ ಬರಲಿಲ್ಲ. ಏನೇನೋ ಹಾಳುವಿಚಾರ...ಇಲ್ಲದ ಹೆದರಿಕೆ..."

"ಯಾಕೆ ಇಲ್ಲದ ಯೋಚನೆ ಮಾಡುತ್ತೀಯಾ? ಆರೋಗ್ಯ ಸರಿಯಾಗಿದೆಯಿಲ್ಲ? ಅರ್ಧ ನೀನು ಹೆದರಿಕೊಂಡೇ ಹೀಗಾಗ್ತಿರೋದು"

"ಏನಾಗಿದ್ದೇನೆ? ಒಳ್ಳೆ ಗೂಳಿ ಬೆಳೆದ ಹಾಗೆ ಬೆಳೆದಿದ್ದೇನೆ. ನನಗಾವ ರೋಗವೂ ಬಂದಿಲ್ಲ. ನಾನೀಗ ಬಂದದ್ದು ಬೇರೆ ವಿಷಯಕ್ಕೆ...ನಮ್ಮ ಪ್ರಭಾಗೆ ತುಂಬ ಓದಿದ ಶ್ರೀಮಂತ ಹುಡುಗನ್ನ ಈಗಿನಿಂದಲೇ ಹುಡುಕಬೇಕಲ್ಲ"

"ಅಯ್ಯೊ ಹುಚ್ಚಿ...ಅಷ್ಟಕ್ಕೆ ಇಷ್ಟೊಂದು ಹೆದರಿಕೊಂಡು ರಾತ್ರಿ ನಿದ್ದೆಗೆಟ್ಟು ಇಲ್ಲಿಗೆ ಬಂದಿಯಾ? ಹುಡುಗಿ ಇನ್ನೂ ಚಿಕ್ಕವಳು. ಆಗುವ ಕಾಲಕ್ಕೆ ಸೌಭಾಗ್ಯ ತಾನಾಗಿಯೇ ಕೂಡಿ ಬರುತ್ತದ. ಬ್ರಹ್ಮ ಆಗಲೇ ಹುಡುಕಿ ಇಟ್ಟಿರುತ್ತಾನೆ. ನಿನಗೇಕೆ ಈಗಲೇ ಚಿಂತೆ?"

"ಹಾಗಲ್ಲ......ಇಲ್ನೋಡಿ ನಮ್ಮ ಪ್ರಭಾನ ರೂಪ-ಗಾತ್ರ ನನ್ನನ್ನೇ ಹೋಲುತ್ತ ಹೊರಟಿದೆ. ನಾಳೆ ಅವಳು ಹೀಗೆ ಬೆಳೆಯುತ್ತ ಹೋದರೆ-ಸುಂದರ ಸುಶಿಕ್ಷಿತ-ಶ್ರೀಮಂತ ಹುಡುಗ ಹೇಗೆ ದೊರೆತಾನು?"

ನಾಗೇಶನಿಗೆ ನಗು ಉಕ್ಕಿ ಬಂತು.

"ನಾನು ಶ್ರೀಮಂತನಿರಲಿಲ್ಲ ನಿಜ. ಆದರೆ ಸುಂದರ - ಸುಶಿಕ್ಷಿತ ಯುವಕನಾಗಿರಲಿಲ್ಲವೇ ? ನಿನಗೆ ನಾನು ಸಿಗಲಿಲ್ಲವೆ? ಹಾಗೆ ನಮ್ಮ ಪ್ರಭಾ... ನಿಗೂ ಗಂಡ ಸಿಗಬಾರದೇಕೆ ? ಸುಮತಿಯ... ಎದೆಯು ಬಡಿತ ಥಟ್ಟನೆ ನಿಂತಂತೆನಿಸಿತು. ಬೆಚ್ಚಿ... ಬಿದ್ದ ಅವಳು ಗಡಿಬಿಡಿಯಲ್ಲಿ ದೃಷ್ಟಿ ಎತ್ತ... ಲಾರದೆ ಒಳಕ್ಕೆ ಧಾವಿಸಿದಳು.

ನಾಗೇಶ ಮಡದಿಯನ್ನು ಚಂಚಲ ... ಮಾತು ಆಡಿಲಿಲ್ಲ ಮಾತಿಗೆ-ಮಾತಾಗಿ ಉತ್ತ... ರಿಸಿದನಷ್ಟೇ! ಸುಮತಿ ಒಳಕ್ಕೆ ಹೋಗುತ್ತಲೇ... ಉಳಿದಿದ್ದ ಕೆಲಸಕ್ಕೆ ಕೈ ಮುಂದೋಡಿಸಿ... ಸುಮತಿ ಹಾಸಿಗೆಯಲ್ಲಿ ಬಿದ್ದುಕೊಂಡಳಷ್ಟೆ! ಯೋಚನೆಯ ಮಡುವಿನಲ್ಲಿ ಬಿದ್ದ ಅವಳಿಗೆ ಕಿವಿ... ಯಲ್ಲಿ ಅದೇ ಮಾತು ಪಿಸುಗುಟ್ಟಿತು

"ನಿನಗೆ ನಾನು ಸಿಗಲಿಲ್ಲವೇ ? ಹಾಗೆ... ಪ್ರಭಾಗೂ ಗಂಡ ಸಿಗಬಾರದೇಕೆ ?"

× × ×

ಹಿಂದಿನ ನೆನಪು......ಅಂದು ಅಕ್ಕನೊಂದಿಗೆ... ಮಾರ್ಕೆಟ್ಟು ಮುಗಿಸಿ ದಾರಿ ನಡೆಯುತ್ತಿದ್ದಂತೆ... ಅಪರಿಚಿತ ಯುವಕ ಅಕ್ಕನೊಂದಿಗೆ ಬಹ... ಆತ್ಮೀಯವಾಗಿ ಮಾತನ್ನಾಡುತ್ತ ನಿಂತಿದ್ದಾಗ... ತಾನು ಆ ರೂಪವನ್ನು ಕಣ್ತುಂಬ ಹೀರಿದ್ದಳು... ಸುಂದರ ಸದೃಢ ಯುವಕನ ಬಳಿಯಲ್ಲಿ... ಅಷ್ಟೊಂದು ಸಮೀಪದಲ್ಲಿ ನಿಂತದಕ್ಕೋ ಏನೋ... ಅವಳ ಮೈರೋಮ ನಿಮಿರಿ ನಿಂತಿತ್ತು.

ಅಕ್ಕ ಮಾತು ಆಡುತ್ತ ತನ್ನ ಜೋಗಿಗೆ... ಯುವಕನನ್ನು ಮನೆಗೆ ಕರೆದು ತಂದಿದ್ದಳು

ಬಿಸಿ ಬಿಸಿ ಕಾಫಿ-ತಿಂಡಿ ಅವರೆದುರು ತಂದಿ... ಟ್ಟಾಗ ಅಕ್ಕನ್ನ ಅವರೇ ಕೇಳಿದ್ದರು.

"ನಿಮ್ಮ ತಂಗಿ ಈಗೇನು ಕಲಿಯುತ್ತಿದ್ದಾರೆ? ಕಲಿಯುವ ಜೊತೆಯಲ್ಲಿ ಬೇರಾವುದಾದರ... ಲಲಿತಕಲೆಗಳ ಬಗ್ಗೆ ಆಸಕ್ತಿ ಇದೆಯೇ ? ಇವ... ಹೆಸರಲ್ಲವೇ ಸುಮತಿ ಎಂದ ?"

"ಇವಳೇ ಸುಮತಿ ಈಗ B. A. Par... III ಸಂಗೀತದ ಹುಚ್ಚೂ ಇದೆ. ಅದಕ್ಕಂದೆ... ಅಪ್ಪನ್ನ ಬಿಟ್ಟು ನನ್ನ ಬಳಿಯಲ್ಲಿದ್ದು ಓದು... ಸಂಗೀತ ಮುಂದುವರಿಸಬೇಕೆಂದಿದ್ದಾಳೆ" ಅಂದ... ಅಪರಿಚಿತ ಯುವಕನ ಕಣ್ಣುಗಳಲ್ಲಿಯ... ಹೊಳಪು ಕಂಡಾಗ ಎನ್ನೆದೆಯಲ್ಲಿ ಆಸೆಯ... ಮೊಳಕೆಯೊಡೆಯತ್ತು. ಬಲೆ ಬೀಸಲು ಮನಸು... ಹೊಂಚು ಹಾಕಿತು !

ಇದಕ್ಕೆ ಕಾರಣ ?

ಈಗಾಗಲೇ ತಾನು ಹತ್ತೆಂಟು ವರಗಳ ಕಣ... ದುರು ಎದ್ದು ಕುಳಿತು ಓದಿ-ಹಾಡಿ, ಮನಸ್ಸು... ಮೈಗಳೆರಡೂ ದಣಿದಿದ್ದವು. ಆಸೆ ಚಿಗು... ತಿದ್ದಂತೆ ಕಮರಿಕೊಂಡಿತು- ತನ್ನ ದೇಹ... ಗಾತ್ರ ಬೆಳೆಯುತ್ತಿದ್ದಂತೆ "ವರಗಳ" ದೃಷ್ಟಿ... ಯಲ್ಲಿ ತಾನಿಂದು ದೂರವಾಗುತ್ತಿರುವ ಸತ್ಯ... ಅರಿವಾಗಿತ್ತು. ಒಳಗೊಳಗೆ ಹೃದಯ ಅಳು... ಲಿತ್ತು.

ಅಕ್ಕ ತಾನಾಗಿಯೇ ಅಂದು ಹೇಳಿದಳು.



"ಇವಳಿಗೆ ಇಂಗ್ಲೀಷ್ ಸ್ವಲ್ಪ ಹೇಳು ನಿಮಗೆ ಸಮಯ ಸಿಕ್ಕಾಗ ಅರ್ಧ ಘಂಟೆ ಪಾಠ ಹೇಳಲು ಸಾಧ್ಯವೇ ನಾಗೇಶ್?"

"ಅದಕ್ಕೆ ಇಷ್ಟೊಂದು ಸಂಕೋಚದ ಮಾತೇಕೆ? ಹೇಳಿಕೊಡು ಎನ್ನುವ ಹಕ್ಕಿದೆ, ಮತ್ತೇಕೆ ಹಿಂದು ಮುಂದು ನೋಡುತ್ತೀರಾ?"

"ಹಾಗಲ್ಲ ನಾಗೇಶ್ - ನಿಮ್ಮ ಓದೇ ನಿಮಗೆ ತೇ ಭಾರ! ಅದರ ಮೇಲಿಷ್ಟು ನಮ್ಮ ಭಾರ ಹೊರಿಸಲು...!!.

"ನೋಡಕ್ಕಾ...ಇಂಥ ಔಪಚಾರದ ಮಾತನ್ನಾಡಿದರೆ...ಈ ಮನೆಯ ಮೆಟ್ಟಿಲನ್ನೇರೋದಿಲ್ಲ. ಇದೋ ಹೊರಟೆ..." ಹಾಗೆ ಪ್ರಾರಂಭವಾದ ಗುರುತು ನಾಲ್ಕು ದಿನ ನಾಲ್ಕು ತಿಂಗಳಲ್ಲಿ ತನಗೆ ನಾಗೇಶನ್ನ ಬಹು ಸಮೀಪಕ್ಕೆ ಕಟ್ಟಿ ತಂದಿತ್ತು. ಅಕ್ಕನ ಪ್ರೋತ್ಸಾಹವೂ ಸಿಕ್ಕು ತನಗೆ ಸ್ವರ್ಗ ಮೂರೇ ಬೆರಳು ಉಳಿದಿತ್ತು! ಆದರೆ? ಈ ಸ್ನೇಹದ ಅರ್ಥ ತನ್ನಂತೆ ನಾಗೇಶ ನೆನೆಯದಿದ್ದರೆ ಮುಂದೆ? ಮುಂದೇನು? ಅವರು ಕಲಿಸುವ ಪಾಠದಲ್ಲಿ ಮೈಮರೆವ ತನ್ನನ್ನು ಅವರೇಕೆ ಕುಡಿ ನೋಟದಿಂದ ನೋಡಬಾರದು? ಆ ಹೃದಯದಲ್ಲಿ ತೆರೆಗಳ ತರಂಗಗಳೇಳುತ್ತಿಲ್ಲವೇ? ತನ್ನ ಬಗೆಗೆ ಮನಸ್ಸು ಏನೂ ನುಡಿಯಲಾರದೇ? ಅವರಂತರಂಗದ ನುಡಿಯನ್ನು ಹೇಗೆ ತಿಳಿಯಲಿ? ಇದೇ ಧ್ಯಾನ ತನ್ನದಾಯಿತು. ಒಂದು ದಿನ ಅಂಥ ಸಂದರ್ಭ ತಾನಾಗಿಯೇ ಒದಗಿ ಬಂತು.

ಮಳೆಗಾಲದ ಸಂಜೆ! ಆಗಸದಲ್ಲಿ ಕರಿಯ ಮೋಡ ತುಂಬಿ ಈಗ ಬರಲೋ, ಇನ್ನೊಂದು ಘಳಿಗೆಗೆ ಬರಲೋ ಎಂದು ಗದ್ದರಿಸಿ ಕೇಳುವ ತವಕ ತೋರುತ್ತಿದ್ದಂತೆ ಬಿರ್ರೆಂದು ಮಳೆ ತುಂಬ ರಭಸದಿಂದ ಬಂದೇ ಬಿಟ್ಟಿತು ಗಾಳಿಗೆ ಪಟಪಟನೆ ಹೊಡೆದುಕೊಳ್ಳುತ್ತಿದ್ದ ಕಿಟಕಿ ಬಾಗಿಲನ್ನು ಭದ್ರವಾಗಿ ಮುಚ್ಚಿ ಸುಮತಿ ಅಕ್ಕ ಮಾಡುತ್ತಿದ್ದ ಕೋಡಬಳೆಯನ್ನು ಉಗಿಯಾಡುತ್ತಿದ್ದ ಎಣ್ಣೆಯಲ್ಲಿ ತೆಲಿಬಿಟ್ಟಳು. ಹೊರಗಿನ ಮಳೆ ಚಳಿಗ ಬೆಚ್ಚಗಿನ ಒಲೆಯ ಶಾಖ ಅವಳಿಗೇಕೋ ತುಂಬ ಸುಖ ಕೊಟ್ಟಿತು. ಸೆರಗಿನಿಂದ ಮೈಮುಚ್ಚಿ ಬೆಚ್ಚಗೆ ಕುಳಿತಳು.

ಹೊರಗೆ ಬಾಗಿಲು ಕಟ್ ಕಟ್ ತಟ್ಟಿದ ಸದ್ದು.

"ಯಾರು ನೋಡು ಸುಮಿ...ನಿನ್ನ ಭಾವ ಊರಲ್ಲಿಲ್ಲ. ಬಂದಿದ್ದರೆ ಅದು ನಾಗೇಶ್ ಇರಬೇಕು ಆದರೆ ಇಂಥ ಮಳೆಯಲ್ಲಿ! ಹೋಗು ಬೇಗ ಹೋಗಿ ಬಾಗಿಲು ತೆರೆ ಸುಮಿ..."

ಹೊರಗೆ ಕಣ್ಣು ಕೋರೈಸುವ ಮಿಂಚಿನ ಬೆಳಕು! ಗುಡುಗು ಸಿಡಿಲಿನ ಅಬ್ಬರ! ಅವಳಿಗೆ ಭಯವನ್ನುಂಟು ಮಾಡಿದರೂ ಬಂದವರು ನಾಗೇಶ್ ಇರಬೇಕೆನ್ನುವ ಆತುರಕ್ಕೆ ಮುಂದೆ ಸಾಗಲು ಅಳುಕುತ್ತಿದ್ದ ಹೃದಯಕ್ಕೂ ವೇಗವಾಗಿ ಕಾಲುಗಳು ಹೊಕ್ಕೆ ಧಾವಿಸಿದವು

"ಅಕ್ಕಾ-ಅವರೇ...ಅಯ್ಯೊ ಇದೇನು ಮಳೆಯಲ್ಲಿ ಸ್ನಾನ ಮಾಡಿದಂತಾಗಿದೆ...!"

ಸುಮತಿ ಎದುರು ನೋಡಲಾರದೆ ಒಳಕ್ಕೋಡಿದಳು

ಅಕ್ಕ ಕೈಯಲ್ಲಿದ್ದ ಕೋಡಬಳೆ ಅಲ್ಲಿಯೇ ಇರಿಸಿ ಹೊರ ಬಂದಾಗ ನಾಗೇಶ್ ಛಳಿಯಲ್ಲಿ ಗಡಗಡ ನಡುಗುತ್ತ ನಿಂತಿದ್ದ. ತಲೆಗೂದಲಲ್ಲಿ ನೀರು ತೊಟ್ಟಿಕ್ಕುತಿತ್ತು.

"ಇದೇನು ನಿಮ್ಮ ಅವಸ್ಥೆ ನಾಗೇಶ್? ಈ ಮಳೆಯಲ್ಲಿ ಯಾರಾದರೂ ಬರುತ್ತಾರೆಯೆ? ಬಟ್ಟೆ ಬದಲಾಯಿಸಿ ತಲೆ ಒರಸಿಕೊಳ್ಳಿ...ನಾಳೆ ಜ್ವರ ಗಿರ ಬಂದೀತು!"

ಮಾತು ಮುಗಿಯುತ್ತಿದ್ದಂತೆ ಸುಮತಿ ಭಾವನ "ಲುಂಗಿ" ಶರ್ಟು ತಂದು ಅಕ್ಕನ ಕೈಗಿತ್ತಳು.

"ತೆಕ್ಕೊಳ್ಳಿ ಹೂಂ...ಬೇಗ ಬಟ್ಟೆ ಬದಲಾಯಿಸಿ...ಸಂಕೋಚ ನಾಚಿಕೆ ಇಂಥ ಸಮಯಕ್ಕಲ್ಲ."

ನಾಗೇಶ್ ಬಟ್ಟೆಯೊಂದಿಗೆ ಪಕ್ಕದ ಕೋಣೆಯಲ್ಲಿ ಕಾಲಿರಿಸಿದ ಒದ್ದೆಯಾದ ಶರ್ಟು-ಪ್ಯಾಂಟು ಬದಲಿಸಿ ಲುಂಗಿ ಶರ್ಟು ತೊಟ್ಟುಕೊಂಡ ತಲೆಗೂದಲಿನ ನೀರು ತೊಟ್ಟಿಕ್ಕುತ್ತಲೇ ಇತ್ತು!

"ಇಲ್ಲಿದೆ ಟವೆಲ್ಲು. ತಲೆಯ ನೀರು ಒರೆಸಬಾರದೇ? ನಿಮಗೆ ಶೀತವಾದರೆ?"

ಥಟ್ಟನೆ ಮುಖವೆತ್ತಿ ನಾಗೇಶ್ ಸುಮತಿಯತ್ತ ನೋಡಿದ. ಆ ಕಣ್ಣುಗಳಲ್ಲಿ ಕಾತರ ತುಂಬಿತ್ತು. ನಾಗೇಶ ನಕ್ಕು ಹೇಳಿದ.

"ಇಲ್ಲಿಂದ ನಾನು ಹೊರಟು ಹೋದ ಬಳಿಕ ಅಲ್ಲಿ ಯಾರಿದ್ದಾರೆ. ನನ್ನ ನೋಡಿಕೊಳ್ಳಲು? ನಮ್ಮ ಬದುಕೇ ಹೀಗೆ... ನಾಲ್ಕು ದಿವಸ ಇಲ್ಲಿ ನಾಲ್ಕು ದಿನ ಅಲ್ಲಿ!!"

ನಾಗೇಶ್ ತಿರುಗಿ ನೋಡಿದಾಗ ಸುಮತಿ ಅಲ್ಲಿರಲಿಲ್ಲ. ಟವೆಲ್ಲು ಕುರ್ಚಿಯ ಬೆನ್ನಿಗೆ ತಗಲಿಕೊಂಡಿತ್ತು!

ಹೊರಗಡೆ ಮಳೆ ರಭಸ ಕಡಿಮೆಯಾಗಿತ್ತು. ಈಗ ತುಂತುರು ಹನಿಗಳು ಉದುರುತ್ತಿರ

ಬೇಕು. ಕಾಫಿ. ಕೋಡುಬಳೆ ತಿನ್ನುತ್ತಿದ್ದ ನಾಗೇಶನಿಗೆ ಸುಮತಿ ಎಲ್ಲೂ ಕಂಡು ಬರಲಿಲ್ಲ ಅವಳೆಲ್ಲಿ? ಎಂದು ಕೇಳುವುದಾದರೂ ಹೇಗೆ?

"ಪಾಠಕ್ಕೆ ಬರುತ್ತಾರೆಯೋ ನಿಮ್ಮ ತಂಗಿ?"

"ಅವಳಿಗೇನೋ ತಲೆನೋವಂತೆ. ಇರಲಿ ಬಿಡಿ. ನಿಮಗೂ ರಜೆ ಆಗದೇ?"

"ಓಹೋ ಅದಕ್ಕೇನು? ರುಚಿಯಾದ ತಿಂಡಿ ಕಾಫಿ ಹೊಟ್ಟೆ ಸೇರಿತಲ್ಲ. ಇನ್ನು ಊಟದ ಚಿಂತೆಯೂ ಇಲ್ಲ. ಹಾಗೆ ಸುತ್ತಾಡಿ ಸಿನೇಮಾ ಥಿಯೇಟರಿಗೆ ನಮಸ್ಕಾರ ಹಾಕಿದರೆ ಇಂದಿನ ಕಾರ್ಯಕ್ರಮ ಮುಗಿದಂತೆ."

ನಾಗೇಶ್ ಮಾತಾಡುತ್ತಿದ್ದಂತೆ ಗಹಗಹಿಸಿ ನಕ್ಕುಬಿಟ್ಟ.

ಮತ್ತೆರಡು ದಿನಗಳೂ ಇನ್ನೇನೋ ಕೆಲಸಗಳ ಒತ್ತಡಕ್ಕೆ ಸಿಕ್ಕು ನಾಗೇಶ ಸುಮತಿಯ ಮನೆಯ ಬಳಿ ಹೋಗಲಾಗಲಿಲ್ಲ.

ಅಂದು ಬಂದಾಗ ಹೊರಗಿನ ಬಾಲ್ಕನಿಯಲ್ಲಿ ಅಕ್ಕ ನಿಂತದ್ದು ಕಂಡ ನಾಗೇಶ್, ಮುಗುಳ್ನಗೆ ನಗುತ್ತ ಮೆಟ್ಟಲೇರಿದ.

"ಎರಡು ದಿನ ಬರಲಾಗಲಿಲ್ಲ. ಊರಿಂದ ಅಪ್ಪಯ್ಯನ ಕಾಗದ ಬಂದಿತ್ತು. ಆಸ್ತಿಯ ಕೆಲಸಕ್ಕಾಗಿ ಕೋರ್ಟು ಕಚೇರಿ ಎಂದು ಅಲೆದೆ"

"ನೀವು ಬಂದಿದ್ದರೂ ಪಾಠ ನಡೆಯುತ್ತಿರಲಿಲ್ಲ ಎರಡು ದಿನಗಳಿಂದಲೂ ಸುಮಿ ಹಾಸಿಗೆ ಹಿಡಿದುಬಿಟ್ಟಿದ್ದಾಳೆ...ಅನ್ನ, ನೀರು ಮುಟ್ಟಿಲ್ಲ!"

"ಯಾಕೆ? ಏನಾಗಿದೆ ಕಾಯಿಲೆ?"

ನಾಗೇಶ ಗಾಬರಿಯಿಂದಲೇ ಕೇಳಿದ.

"ನನಗೊಂದೂ ಅರ್ಥವಾಗದಂತಾಗಿದೆ. ಮೊನ್ನೆ ನೀವು ಅದೇನೋ ಹೇಳಿದಿರಂತೆ? ನಾನೇಕೆ ಬದುಕಬೇಕು? ಯಾರಿಗಾಗಿ ಇರಬೇಕು? ಅದೇ ಮಂತ್ರವಾಗಿದೆ ಅವಳದು. ತಲೆದಿಂಬು ಕಣ್ಣೀರಿಂದ ಒದ್ದೆಯಾಗಿದೆ."

ನಾಗೇಶನ ತಲೆ ತಗ್ಗಿತ್ತು.

"ನಾನೇನೂ ನೋಯಿಸುವ ಮಾತು ಆಡಿಲ್ಲಕ್ಕ ನನ್ನ ನೆನಪಿಗೂ ಏನೂ ಬಾರದು. ಈ ಮನೆಯ ಬಗ್ಗೆ ನನಗೆ ನನ್ನದೆನ್ನುವ ಪ್ರೀತಿ ಇದೆ"

"ನೀವು ಇನ್ನಾರು ತಿಂಗಳಿಗೆ ಹೊರಟು ಹೋಗುತ್ತೀರಂತೆ?"

"ಅಹೋ ಅದೆ ...ಮತ್ತೆ ಹೋಗಲೇಬೇಕಲ್ಲ M. A. ಮುಗಿದ ನಂತರ ನನಗಿಲ್ಲೇನು ಕೆಲಸ ನೀವೇ ಹೇಳಿಯಕ್ಕ? ಇದಕ್ಕೆ ಸುಮಿ ಅಳುವ ಕಾರಣ?"

ಅಕ್ಕ ಒಂದು ಕ್ಷಣ ಮೌನವಾಗಿ ಕುಳಿತಳು. ಮತ್ತೆ ಬಂದ ಮಾತು ಅಳುತ್ತ ಬಂದಿತ್ತು.

"ನಾಗೇಶ್...ಸುಮಿ ಹುಚ್ಚು ಹಿಡಿದಂತೆ ಮಾತಾಡುತಿದ್ದಾಳೆ ಅವಳು...ನಿಮ್ಮನ್ನು ಬಿಟ್ಟು ಬದುಕಲಾರಳು ಅವಳ ಅಳಿವು-ಉಳಿವು ನಿಮ್ಮ ಕೈಯಲ್ಲಿ"

ನಾಗೇಶ್ ಗರಬಡಿದವನಂತೆ ಕುಳಿತುಬಿಟ್ಟ. ತಲೆಯೊಂದು ಬಾರಿ ಗಿರ್‌ರೆಂದು ತಿರುಗಿತು. ಅವನ ಕಣ್ಣೆದುರು ತಂದೆ-ತಾಯಿ-ತಮ್ಮಂದಿರ ಚಿತ್ರ ಕಟ್ಟಿತು ಸುಮಿಯಲ್ಲಿ ಅವನು ಕಾಣುತಿದ್ದದ್ದೂ ತನ್ನಕ್ಕನ ವಿಧವೆ ಮಗಳು ಚಿತ್ರಾನ ರೂಪ! ಅದೇ ಕನಿಕರ ಭಾವ ಸುಮತಿಗೆ ಪಾಠ ಹೇಳಲು ಪ್ರೇರೇಪಿಸಿತ್ತು

ಈಗವನ ಕಣ್ಣಿನಲ್ಲಿ ಸುಮತಿಯ ಚಿತ್ರ ಎದುರು ನಿಂತಿತು. ಇಷ್ಟೊಂದು ಕೂಲಂಕಷವಾಗಿ ಅವಳನ್ನೇನು ನೋಡಿರಲಿಲ್ಲ. ತನ್ನ ಮೈಭಾರಕ್ಕೆ ತೂಗ ನಡೆಯುತಿದ್ದ ಅವಳ ನಡಿಗೆ, ಮುಂದಬುದ್ಧಿಗೆ ತಾನೇ ಹಾಸ್ಯಮಾಡಿದ ಪ್ರಸಂಗ ನೆನಪಿಸಿಕೊಂಡ! ನಾಗೇಶ ಮನದಲ್ಲಿ ತಾನೇ

ತಾನಾಗಿ ಚಿತ್ರಿಸಿಕೊಳ್ಳುತ್ತಿದ್ದ "ಕೆಳಗೆ ಬೆಳ್ಳಗೆ ಎಳೆ ಬಳ್ಳಿಯ ಚೆಲುವಿನ ಹೆಣ್ಣೊ"ಂದು ಕಣ್ಮುಂದೆ ಸುಳಿದು ಮಾಯವಾಯಿತು. ಅವನ ಕಣ್ಣಾಲೆಗಳು ತುಂಬಿ ಬಂದಿದ್ದವು.

ಈ ಎಲ್ಲ ಅನರ್ಥಕ್ಕೆ ಕಾರಣ? ತನ್ನ ಸಂಕೋಚ ಸ್ವಭಾವ – ಮೃದು ಮನಸ್ಸು!! ಈಗೇನು? ಮುಂದೇನು? ತನ್ನಲ್ಲಿ ತಾನೇ ಕೇಳಿಕೊಂಡ ತನ್ನಿಂದಾಗಿ ಪ್ರಾಣ ತೊರೆಯುವ ಸನ್ನಾಹದಲ್ಲಿದ್ದ ಸುಮತಿಯನ್ನು ತಪ್ಪಿಸಿಕೊಳ್ಳಲಾಗದೆ- ಎದುರು ಬಂದು ಬೀಸಿದ್ದ ಬಲೆಯಲ್ಲಿ ನಾಗೇಶ್ ಸಿಲುಕಿಕೊಂಡ

× × ×

ಸುಮತಿ ವಿಚಾರ ಚಕ್ರದಲ್ಲಿ ಸುತ್ತುತಿದ್ದವಳಿಗೆ ಈಗ ಎಚ್ಚರ ಮೂಡಿತು. ಅವಳ ಕಣ್ಣು-ಮನಸ್ಸು ನಿದ್ದೆ ಇಲ್ಲದೆ ಅವಿಶ್ರಾಂತವಾಗಿ ಎಲ್ಲೆಲ್ಲೊ ಸುತ್ತುತಿದ್ದಾಗ–ನಾಗೇಶ ಆಫೀಸಿನ ಕೆಲಸ ಪೂರೈಸಿ ಆಗಲೇ ಹಾಸಿಗೆಯಲ್ಲಿ ನಿದ್ದೆಯಲ್ಲಿ ಮೈಮರೆತದ್ದು ಕಣ್ಣಿಗೆ ಬಿತ್ತು. ದಣಿದ ದೇಹ-ಮನಸ್ಸು ವಿಶ್ರಾಂತಿ ಪಡೆಯುತ್ತಿದೆ ಈ ವರೆಗೆ "ಈ ಜೀವಕ್ಕೆ" ತಾನು ಹೇಳದೆ ಇದ್ದ ಸಂಗತಿ ಇಂದಿನ ರಾತ್ರಿಯೆಲ್ಲ ತನ್ನೆದೆಯಲ್ಲಿ ಎಂಥ ಬಿರುಗಾಳಿ ಎಬ್ಬಿಸಿಬಿಟ್ಟದೆ? ನಾಗೇಶ್ ತನ್ನವನಾಗಲು ನಾನೆಷ್ಟು ನಾಟಕವಾಡಬೇಕಾಯಿತು?

ಇದೆಲ್ಲ ಇವರಿಗೆಲ್ಲಿ ಗೊತ್ತು? ಎಂದೇ ಅವರಿಂದು ಆಡಿದರ ಈ ಮಾತು !

"ನಾನು ಸಿಗಲಿಲ್ಲವೇ ನಿನಗೆ...ಹಾಗೆ ಪ್ರಭಾಗೂ ಗಂಡ ಸಿಗಬಾರದೇಕೆ?"

ಸುಮತಿ ಇನ್ನೊಂದು ಮಗ್ಗುಲಾಗಿ ಮಲಗಿದಳು.

ಅವಂತಿ! ಈ ಹುಡುಗಿಯ ಮೇಲೇಕೆ ನನಗಿಷ್ಟು ಅಸಹನೆ? ಮನಸ್ಸು ಚುಚ್ಚಿ ಕೇಳಿತು

ಮೃದು-ಮಧುರ ಪುಷ್ಪದಂತಿದ್ದ ಅವಳ ಅರಳುಮುಖ ! ಎಸಳಾದ ಎಳೆಯ ಮೂಗು ! ಒಲವಿನ ಮಾತು ! ನರ್ತಿಸುವ ನಡಿಗೆ ! ಆ ನಗುವಿನ ಸ್ವರ ! ತೊಡುವ ಬಟ್ಟೆಯಲ್ಲಿ-ಉಡುವ ಸೀರೆಯ ಚೆಲುವು ಎಲ್ಲರ ಕಣ್ಮನ ಸೆಳೆದರೆ-ತನಗೇಕೆ ಅವಳನ್ನು ಕಾಣುತ್ತಲೇ ಎದೆಯೊಳಗೆ ಸಂಕಟ ? ತಾತ್ಸಾರ ? ತಪ್ಪು ತನ್ನದೇ ? ಇಲ್ಲ ...ಇಲ್ಲ...ಅವಂತಿ ಸೊಕ್ಕಿನ ಮುದ್ದೆ ಏನು ಬಿಂಕ ಬಿನ್ನಾಣ ? ಅವಳ ಅಲಂಕಾರ ಯಾವ ಸಿನೇಮಾ ನಟಿಗೆ ಕಡಿಮೆ ? ತಂದೆ- ತಾಯಿಯ ಅಂಕೆಯಿಲ್ಲದ ಹುಡುಗಿ ಬಣ್ಣದ ಚಿಟ್ಟೆಯಾಗಿ ಹಾರಾಡದೆ ಇನ್ನೇನು? ಹಾಗೆ ಒಬ್ಬ ಜೊತೆಗಾರನನ್ನು ಬಲೆಗೆಳೆದೂ ಬಿಟ್ಟಳು ಶ್ರೀಮಂತಿಕೆಯ ಹೆಣ್ಣು ಹೇಗೆ ಕುಣಿದರೂ ಚಂದ-

ಆದರೆ ಅವಂತಿಯ ವರನಾಗುವ ಹುಡುಗ ಮುಂಬಯಿಯಲ್ಲಿ ಇದ್ದವನು.ಹಿಂದಿನ ಸಂಜೆ ಮಿಸೆಸ್ ಶರ್ಮಾ ಹೇಳಿದ್ದು ನೆನಪಾದರೂ ಅದನ್ನುಅಲ್ಲೇ ತಡೆದು ನಿಲ್ಲಿಸಿತು ಅವಳ ಬುದ್ಧಿ

ಬೆಳಗ್ಗಿನ ಕೋಳಿ ಕೂಗಿಗೆ ತೆರೆದಿದ್ದ ಸುಮತಿಯ ಕಣ್ಣೆವೆಗಳು ಮುಚ್ಚಿಕೊಂಡವು ದಿನದಂತೆ ನಾಗೇಶ್ ಎದ್ದಾಗ ಮಡದಿ ಬಿಕ್ಕಳಿಸಿ ಅಳುವ ಸ್ವರಕ್ಕೆ ಬೆಚ್ಚಿಬಿದ್ದು ನೋಡಿದರೆ ಸುಮತಿ ನಿದ್ದೆಯಲ್ಲಿ !

'ಅಯ್ಯೊ ಕರ್ಮವೇ' ನಿದ್ದೆಯಲ್ಲೂ ಇವಳೆದೆಗೆ ಶಾಂತಿ ಸಮಾಧಾನ ದೊರಕಬಾರದೇ ?' ಎಂದುಕೊಂಡೇ ಒಳಕ್ಕೆ ನಡೆದ

ಕ್ಲಾಸು ನಡೆದಾಗ ಸುಮತಿಗೆ ಎತ್ತಲೋ ಮನಸ್ಸು ಕುಳಿತಂತೆ ಕಣ್ಣೆವೆಗಳು ಮುಚ್ಚಿಕೊಳ್ಳಲು ತವಕಪಟ್ಟವು

ಅಂತೂ ಘಂಟೆ ಬಾರಿಸಿತು

"ನಿನ್ನೆ ನೀವು ಬಾರದಿರಲಿಲ್ಲ ಸುಮತಿ ಅವಂತಿ ತಾನೇ ಮದುವೆಯ ಆಮಂತ್ರಣ ಪತ್ರಿಕೆ ತಂದಿದ್ದಳು. ನಿಮ್ಮನ್ನ ತುಂಬ ಕೇಳಿ ಇದನ್ನು ಕೊಡಲು ಕೊಟ್ಟಿದ್ದಾಳೆ."

ಸುಮತಿಯ ಮುಖದಲ್ಲಿ ಆ ಮಾತಿಗೆ ಉತ್ಸಾಹದ ರಂಗು ಬರಲಿಲ್ಲ ನಿರುತ್ಸಾಹದ ಉತ್ತರವೇ ಬಂತವಳಿಂದ

"ನನಗೆಲ್ಲಿ ಹೋಗಲು ಸಮಯವಿದೆ? ಮಾಡಬೇಕಾದ ಕೆಲಸ ಗುಡ್ಡದಷ್ಟಿದೆ. ಬಂದ ಆಮಂತ್ರಣಕ್ಕೆ ಹೋಗುತ್ತ ಬಂದರೆ ದಿನಗಳೇ ಸಾಕಾಗಲಾರದು...ಹೋಗುವವರಿಗೆ ಬೇಡ ಎನ್ನಲಾರೆ ಆದರೆ ನನಗೇಕೋ ಇಷ್ಟವಿಲ್ಲಮ್ಮ ಶೋಭಾ"

— ಸಹದ್ಯೋಗಿ ಶೋಭಾಗೆ ಈ ಮಾತು ಕಿವಿಗೆ ಬೀಳುತಿದ್ದಂತೆ ಎದುರಿನ ಪ್ರಸಂಗದಲ್ಲಿ ಕಣ್ಣು ನೆಟ್ಟಿತ್ತು ಹೆಡ್‌ಮಿಸ್ಟ್ರೆಸ್ಸು ಪ್ಯೂನ್ ಸಿದ್ದಪ್ಪನಿಗೆ ಬಯ್ಯುತ್ತಿದ್ದರು-

"ಸಿದ್ದಪ್ಪಾ...ಘಂಟೆಗೇನಾಗಿದೆ? ಎಂಥಾ ಹಾಳು ಸ್ವರ ಬಂತು ಅದು ಹೀಗೇಕಾಗಿದೆ?"

"ಇಲ್ಲ ಮೇಡಮ್, ಘಂಟೆಗೆ ಸೀಳುಬಿದ್ದಿದೆ. ಅದಕ್ಕೆ ಅದರಿಂದ ಅಪಸ್ವರ ಹೊರಟು ಬಿಟ್ಟಿತು! ನನಗೂ ಬಾರಿಸಿದ ಮೇಲೆ ತಿಳಿದದ್ದು!!"

ಸಿದ್ದಪ್ಪನ ಮಾತು ಕೇಳುತ್ತಲೇ ಶೋಭಾಗೆ ಏನೋ ತಟ್ಟನೆ ನೆನಪಿಗೆ ಬಂತು.

- ನಿಜ...ಮೇಡಮ್ ಸುಮತಿಯ ಮನಸ್ಸಿಗೂ ಸೀಳು ಬಿದ್ದಿದೆ. ಅಲ್ಲಿಂದ ಎಂದೂ ಸುಸ್ವರ ಬರಲಾರದು...ಅವಳೊಂದು ಒಡೆದ ಗಂಟೆ! ಎಂದುಕೊಂಡ ಶೋಭಾ ಹೆಜ್ಜೆ ಮುಂದಿಟ್ಟಳು.






AFGHAN SNOW
AFGHAN SNOW







ಸಂಗೀತ ಸರಸ್ವತಿಯ ಆರಾಧನೆಯಲ್ಲಿ

# ಸಂಗೀತ-ಜೀವನ ಇವು ಬೇರೆಯೇ ಅಲ್ಲ

**ಮಲ್ಲಿಕಾರ್ಜುನ ಮನಸೂರ**

ಸಂಗೀತ ಹಾಗೂ ಜೀವನ-ನನ್ನಮಟ್ಟಿಗೆ ಇವೆರಡೂ ಬೇರೆಯಲ್ಲ. ನಾನು ಜೀವನದಲ್ಲಿ ಕಲಿತದ್ದು, ಕೇಳಿದ್ದು ಹಾಗೂ ಅನುಭವಿಸಿದ್ದು ಸಂಗೀತವೊಂದನ್ನೇ. ಅದು ನನಗೆ ಜೀವನೋಪಾಯವಷ್ಟೇಅಲ್ಲ, ಜೀವನ ಮಾರ್ಗವೂ ಆಗಿದೆ. ಕಳೆದ ೫೦ ವರುಷಗಳಲ್ಲಿ ನನ್ನ ಆಚಾರ, ವಿಚಾರ ಸಂಗೀತವೊಂದನ್ನು ಬಿಟ್ಟು ಬೇರೆ ಯಾವ ದಿಶೆಗೂ ಹೊರಳಿಲ್ಲವೆಂದು ವಿಶ್ವಾಸದಿಂದ ಹೇಳಬಲ್ಲೆ. ಬೇರೆ ವಿದ್ಯೆ ಕಲಿಯಬೇಕೆಂದಾಗಲೀ, ಬೇರೆ ಬಗೆಯ ಜೀವನ ನಡೆಸಬೇಕೆಂದಾಗಲೀ ನಾನು ಎಂದೂ ಯೋಚಿಸಿದವನಲ್ಲ. ಕಾರಣಾಂತರಗಳಿಂದ ಕೆಲ ಕಾಲ ನಾಟಕರಂಗವನ್ನು ಪ್ರವೇಶಿಸಿದ್ದೆ. ಆದರೆ ಅಲ್ಲಿ ಮನಸ್ಸು ನಿಲ್ಲಲಿಲ್ಲ. ಅವಕಾಶ ದೊರೆತೊಡನೆ ಅದರಿಂದ ಹೊರಬಿದ್ದು ಪುನಃ ಸಂಗೀತದ ಬೆನ್ನು ಬಿದ್ದೆ.

ಎಂಟು ವರ್ಷದ ಬಾಲಕನಿದ್ದಾಗಲೇ ನನಗೆ ಸಂಗೀತದ ಗೀಳು ಹಿಡಿಯಿತು. ನಮ್ಮ ಊರಲ್ಲಿ ನನ್ನ ತಂದೆಯವರು ಅಪ್ಪಯ್ಯ ಸ್ವಾಮಿಗಳು ಎಂಬ ಕರ್ನಾಟಕ ಸಂಗೀತಗಾರರಿಗೆ ಆಶ್ರಯ ನೀಡಿದ್ದರು. ಅವರು ಪಿಟೀಲು ಬಾರಿಸುತ್ತಿದ್ದರಲ್ಲದೆ ಊರಲ್ಲಿ ನಾಟಕಗಳನ್ನು ಕೂಡಿಸುತ್ತಿದ್ದರು. ಕೀಚಕವಧೆ ನಾಟಕದಲ್ಲಿ ಸೈರಂಧ್ರಿಯ ಪಾತ್ರವಹಿಸುತ್ತಿದ್ದ ನನ್ನ ಅಣ್ಣ ಬಸವರಾಜರಿಗೆ ಅವರು ಹಾಡು ಕಲಿಸುವದನ್ನು ನಾನು ಆಸಕ್ತಿಯಿಂದ ಕೇಳುತ್ತಿದ್ದೆ. ಓದು ಬರಹದಲ್ಲಿ ನನಗೆ ಆಸಕ್ತಿಯೇ ಇರಲಿಲ್ಲ.

ಮುಂದೆ ಅಣ್ಣನವರು ವಾಮನರಾವ್ ಮಾಸ್ತರರ ನಾಟಕ ಕಂಪನಿಗೆ ಸೇರಿದರು. ನನ್ನನ್ನು ಧಾರವಾಡದಲ್ಲಿ ಶಾಲೆಗೆ ಹಾಕಿದರು. ಒಮ್ಮೆ ವಾಮನರಾವ್ ಅವರ ಕಂಪನಿ ಧಾರವಾಡಕ್ಕೆ ಬಂದಾಗ ನಾನು ನಾಟಕ ನೋಡಲು ಹೋಗಿದ್ದೆ. ನಾನು ಬಸವರಾಜರ ತಮ್ಮನೆಂದು ತಿಳಿದಾಗ ವಾಮನರಾಯರು ನನಗೆ ಹಾಡುವಂತೆ ಹೇಳಿದರು. ಹಾಡಿದೆ, ಅವರಿಗೆ ಮೆಚ್ಚಿಕೆಯಾಯಿತು. ಕೂಡಲೇ ಕಂಪನಿಯಲ್ಲಿ ಸೇರಿಸಿಕೊಂಡೇಬಿಟ್ಟರು. ಮೂರು ತಿಂಗಳನಂತರ ತಂದೆಯವರು ಬಂದು ಕರೆದುಕೊಂಡುಹೋದರೂ ನಾಟಕ ಕಂಪನಿಯ ಮೇನೇಜರರು ಧಾರವಾಡಕ್ಕೆ ಬಂದಾಗ ಪುನಃ ಓಡಿಹೋಗಿ ಕಂಪನಿಗೆ ಸೇರಿಕೊಂಡೆ. ಹೀಗೆ ರಂಗಪ್ರವೇಶದೊಂದಿಗೆ ನಾನು ಜೀವನರಂಗದಲ್ಲಿ ಕಾಲಿರಿಸಿದೆ.

ನಾಟಕಗಳಲ್ಲಿ ನಾನು ಬಾಲಪಾತ್ರಗಳನ್ನು ವಹಿಸುತ್ತಿದ್ದೆ. ಅದರಲ್ಲಿ ಸಾಕಷ್ಟು ಹೆಸರೂ ದೊರೆತಿತ್ತು. ಆದರೆ ಅಣ್ಣನವರಿಗೆ ಇದರಿಂದ ಸಮಾಧಾನವಾಗಿರಲಿಲ್ಲ. ನನಗೆ ಗಾಯನ ಕಲಿಸಬೇಕೆಂಬುದು ಅವರ ಬಯಕೆಯಾಗಿತ್ತು. ಅವರ ಬಯಕೆ ಕೈಗೂಡುವ ಅವಕಾಶವೂ ಒಮ್ಮೆ ಸನ್ನಿಹಿತವಾಯಿತು.

ಗ್ವಾಲೇರ ಘರಾಣೆಯ ಹೆಸರಾದ ಗಾಯಕ ನೀಲಕಂಠ ಬುವಾ ಈಚಲಕರಂಜೀಕರ ಅವರು ಆಗ ಕರ್ನಾಟಕಕ್ಕೆ ಬಂದಿದ್ದರು. ಅವರ ಶಿಷ್ಯ ಪಾಂಡೆ ಮಾಸ್ತರ ಎಂಬವರು ನಮ್ಮ ಕಂಪನಿಯಲ್ಲಿದ್ದರು. ಅವರ ಸೂಚನೆಯಂತೆ ಅಣ್ಣನವರು ನನ್ನನ್ನು ನೀಲಕಂಠ ಬುವಾರ ಬಳಿ ಸಂಗೀತ ಕಲಿಯಲು ಕಳಿಸಿದರು. ಐದು ವರ್ಷಗಳ ವರೆಗೆ ಬುವಾರಲ್ಲಿ ಸಂಗೀತಾಭ್ಯಾಸ ಮಾಡಿದ ಬಳಿಕ ವಾಣಿವಿಲಾಸ ಕಂಪನಿಗೆ ಸೇರಿದೆ. ಆ ಕಂಪನಿಯವರು ನೀಲಕಂಠ ಬುವಾರನ್ನು ಕಂಪನಿಗೆ ಕರೆಸಿಕೊಂಡದ್ದರಿಂದ ಪುನಃ ಅವರ ಬಳಿ ನನ್ನ ಸಂಗೀತ ಅಭ್ಯಾಸ ಮುಂದುವರಿಯಿತು. ಕೆಲಸಮಯದ ನಂತರ ಕಂಪನಿ ಬಿಟ್ಟು ಧಾರವಾಡಕ್ಕೆ ಬಂದು ನೆಲೆಸಿದೆ. ಬುವಾರನ್ನು ಅಲ್ಲಿಗೇ ಕರೆಸಿಕೊಂಡು ಒಂದೂವರೆ ವರ್ಷದವರೆಗೆ ಮತ್ತೆ ಅವರಲ್ಲಿ ಸಂಗೀತ ಅಭ್ಯಾಸ ಮಾಡಿದೆ.

ಆಗ ನನಗೆ ೨೦ ವರ್ಷ. ಗಾಯಕನೆಂದು ಹೆಸರುಗಳಿಸಿಬಿಟ್ಟಿದ್ದೆ. ಗದುಗಿನ ಸ್ನೇಹಿತರು ಕೂಡಿ ಸಮಾರಂಭವೊಂದನ್ನು ಏರ್ಪಡಿಸಿ ಸಂಗೀತರತ್ನ ಎಂಬ ಪದವಿಯನ್ನು ಕೊಟ್ಟರು. ಎಚ್. ಎಮ್. ವಿ. ಕಂಪನಿಯಲ್ಲಿ ಕೆಲ ಧ್ವನಿ ಮುದ್ರಿಕೆಗಳನ್ನು ಕೊಟ್ಟೆ. ಅನೇಕ ಕಡೆಗಳಲ್ಲಿ ನನ್ನ ಗಾಯನ ಕಾರ್ಯಕ್ರಮಗಳೂ ನಡೆದವು.

ಆದರೆ ಮನಸ್ಸಿಗೆ ಸಮಾಧಾನವಿರಲಿಲ್ಲ. ಆತ್ಮತೃಪ್ತಿ ಇರಲಿಲ್ಲ. ಇನ್ನೂ ಹೆಚ್ಚು ವಿದ್ಯೆ ಸಂಪಾದಿಸಬೇಕೆಂಬ ಆಶೆ ಬಲವತ್ತರವಾಗಿತ್ತು. ಕೆಲ ಕಾಲ ಹುಬ್ಬಳ್ಳಿಯಲ್ಲಿದ್ದು ತೀವ್ರತರ ಅಭ್ಯಾಸ ನಡೆಸಿದೆ. ಕತ್ತಲಾದ ಕೂಡಲೇ ಪ್ರಾರಂಭವಾದ ನಮ್ಮ ಅಭ್ಯಾಸ ಬೆಳಗಿನವರೆಗೂ ನಡೆಯುತ್ತಿತ್ತು. ಮೆಚ್ಚುವ ಮಿತ್ರವೃಂದವೂ ದೊಡ್ಡದಾಗಿತ್ತು. ಆದರೆ ನನ್ನ ಗಾಯನ ನನಗೇ ತೃಪ್ತಿಯನ್ನುಂಟುಮಾಡುತ್ತಿರಲಿಲ್ಲ. ಒಂದೆರಡು ನೌಕರಿಗಳು ಬಂದರೂ ಅವನ್ನು ತಿರಸ್ಕರಿಸಿದೆ.

ಗಾಯನ ಕಾರ್ಯಕ್ರಮಗಳಿಗಾಗಿ ಮುಂಬೈಗೆ ಹೋಗುತ್ತಿದ್ದುದರಿಂದ ನನಗೆ ಅಲ್ಲಿ ಅನೇಕರ ಪರಿಚಯವಾಯಿತು. ಅವರಲ್ಲಿ ಶ್ರೀ ವಿಷ್ಣುಪಂತ ಪಾಗನೀಸರಿಗೆ ನನ್ನ ಮೇಲೆ ವಿಶೇಷ ಅಭಿಮಾನವಿತ್ತು. ಮುಂಬೈಯಲ್ಲಿದ್ದಾಗ ನಾನು ದಿನಾಲು ಅವರ ಅಂಗಡಿಗೆ ಹೋಗಿ ಕೂಡುತ್ತಿದ್ದೆ. ಹೆಚ್ಚಿನ ಶಿಕ್ಷಣ ಪಡೆಯಬೇಕೆಂಬ ಅಭಿಲಾಷೆಯನ್ನು ಅವರಿಗೆ ಕೋರಿದೆ. ಒಮ್ಮೆ ಗಾಯನ ಸಾಮ್ರಾಟ ಅಲ್ಲಾದಿಯಾ ಖಾನರ ಪುತ್ರ ಮಂಜೀಖಾನರು ಅಂಗಡಿಗೆ ಬಂದಾಗ ಪಾಗನೀಸರು ನನ್ನ ಪರಿಸ್ಥಿತಿಯನ್ನು ಅವರಿಗೆ ವಿವರಿಸಿದರು. ಮಂಜೀಖಾನರು ನನ್ನ ಧ್ವನಿಮುದ್ರಿಕೆಗಳನ್ನು ಕೇಳಿ ತಮ್ಮ ಗಾಯನ ಪದ್ಧತಿ ನನಗೆ ಹತ್ತುತ್ತದೆ ಎಂದರು.

# ನಾನು ಮತ್ತು ಸಂಗೀತ

ಸಂಗೀತಕ್ಕಾಗಿ, ಅದರ ಸಾಧನೆಗಾಗಿ, ಸಿದ್ಧಿ ಪಡೆಯುವುದಕ್ಕಾಗಿ ಜೀವನವನ್ನೇ ತೇಯ್ದವರು ಈ ನಾಲ್ವರು ಸಂಗೀತಗಾರರು — ಶ್ರೀ ಮಲ್ಲಿಕಾರ್ಜುನ ಮನ್ಸೂರ, ಶ್ರೀಮತಿ ಗಂಗೂಬಾಯಿ ಹಾನಗಲ್ಲ, ಶ್ರೀ ಭೀಮಸೇನ ಜೋಶಿ ಮತ್ತು ಶ್ರೀ ದೊರೆಸ್ವಾಮಿ ಅಯ್ಯಂಗಾರ. ಸಂಗೀತ ಅವರೆಲ್ಲರ ಜೀವನದ ಉಸಿರಾಗಿದೆ. ಅವರ ಜೀವನದಲ್ಲಿ ಸಂಗೀತ ಹಾಸುಹೊಕ್ಕಾಗಿ ಸೇರಿಕೊಂಡಿದೆ. ಸಂಗೀತಕ್ಕಾಗಿ ಅವರ ಪ್ರಾಣ ಮಿಡಿಯುತ್ತಿದೆ. ಸಂಗೀತವೇ ಅವರ ಜೀವನ ಸರ್ವಸ್ವ. ಅಖಿಲ ಭಾರತ ಖ್ಯಾತಿಯ ಈ ನಾಲ್ವರು ಸಂಗೀತಗಾರರು ತಮ್ಮ ಈ ಮಹಾಸಾಧನೆಯನ್ನು ಕುರಿತು, ತಮಗೆ ಬಂದ ಅನುಭವಗಳನ್ನು ಇಲ್ಲಿ ತಮ್ಮ ಮಾತುಗಳಲ್ಲಿ ನಿವೇದಿಸಿದ್ದಾರೆ. ಸಂಗೀತ ಪ್ರಸಾರದ ಬಗೆಗೆ ಅಮೂಲ್ಯವಾದ ಸಲಹೆ ಸೂಚನೆಗಳನ್ನು ಅವರಿಲ್ಲಿ ನೀಡಿದ್ದಾರೆ.

ಇದು ನಿಮಗೆ ಕರ್ಮವೀರನ ಈ ವರ್ಷದ ವಿಶೇಷ ಕಾಣಿಕೆ.

"ಹಾಗಾದರೆ ಕಲಿಸಿರಿ" ಎಂದುದಕ್ಕೆ ಒಪ್ಪಿಕೊಂಡರು. ನನಗೆ ಅದು ಕನಸೋ ಅಥವಾ ನನಸೋ ಎಂಬುದು ಗೊತ್ತಾಗಲಿಲ್ಲ. ಯಾಕೆಂದರೆ ಮೊದಲೇ ಮಂಜೀಖಾನರ ಗಾಯನ ಕೇಳಿದ್ದ ನನಗೆ ಅವರಂಥ ಗಾಯಕರು ಬೇರಿಲ್ಲವೆಂಬ ಭಾವನೆಯೇ ಉಂಟಾಗಿತ್ತು. ಆಗ ನನ್ನ ವಯಸ್ಸು ೨೩ ವರ್ಷ.

ಮಂಜೀಖಾನರ ಬಳಿ ನಾನು ಒಂದೂವರೆ ವರ್ಷದ ವರೆಗೆ ಗಾಯನ ಕಲಿತೆ. ದಿನಾಲೂ ಆರೇಳು ತಾಸುಗಳವರೆಗೆ ಸತತವಾಗಿ ಅವರು ಕಲಿಸುತ್ತಿದ್ದರು. ಇಲ್ಲಿಯೇ ನನಗೆ ಸಂಗೀತದ ದೃಷ್ಟಾಂತವಾಯಿತು. ಸಂಗೀತದ ಅಮಲು ಏರಿತು. ಅಹೋ ರಾತ್ರಿ ಅದರಲ್ಲೇ ಮಗ್ನನಾದೆ. ಜೀವನದಲ್ಲಿ ಅದೊಂದು ದೊಡ್ಡ ಪರಿಣಾಮವನ್ನು ಮಾಡಿತು.

ಅಷ್ಟರಲ್ಲೇ ಮಂಜೀಖಾನರ ದೇಹಾವಸಾನವಾದ್ದರಿಂದ ನನಗೆ ಸುತ್ತಲೂ ಕತ್ತಲೆ ಕವಿದಂತಾಯಿತು. ನನಗೆ ಬೇಕಾದ ಸಂಗೀತ ಕಲಿಸುವವರು ಹಿಂದುಸ್ತಾನದಲ್ಲಿಲ್ಲವೇ ಎಂಬ ಭೀತಿಯೂ ಮೂಡಿತು. ಎಲ್ಲವನ್ನೂ ಬಿಟ್ಟು ಬಂದು ಧಾರವಾಡದಲ್ಲಿ ನೆಲೆಸಿದೆ.

ಎರಡು ವರ್ಷಗಳ ನಂತರ ಅಲ್ಲಾದಿಯಾಖಾನರ ಬಳಿಗೆ ಹೋಗಿ ವಿದ್ಯೆ ನೀಡುವಂತೆ ಪ್ರಾರ್ಥಿಸಿದೆ. ತಮಗೆ ವಯಸ್ಸಾದ್ದರಿಂದ ಕಲಿಸಲು ಸಾಧ್ಯವಿಲ್ಲವೆಂದೂ ತಮ್ಮ ಇನ್ನೊಬ್ಬ ಪುತ್ರ ಬುರ್ಜಿಖಾನರ ಬಳಿ ಕಲಿಯಬಹುದೆಂದೂ ಅವರು ಸೂಚಿಸಿದರು. ಅದರಂತೆ ಆಗ ಕೊಲ್ಲಾಪುರದಲ್ಲಿರುತ್ತಿದ್ದ ಬುರ್ಜಿಖಾನರ ಬಳಿಗೆ ಹೋಗಿ ಅಭ್ಯಾಸ ಪ್ರಾರಂಭಿಸಿದೆ. ಎರಡು ವರ್ಷ ಕಲಿತ ಮೇಲೆ ನನಗೆ "ಸಂಗೀತ ಬಂತು" ಎಂದು ಅನಿಸತೊಡಗಿತು. ಮನಸ್ಸಿಗೆ ಸಮಾಧಾನವಾಯಿತು. ಆತ್ಮವಿಶ್ವಾಸದಿಂದ ಹಾಡಲು ಉಪಕ್ರಮಿಸಿದೆ.

ಸಂಗೀತದಲ್ಲಿ ಸ್ವರ ಅಭ್ಯಾಸ, ತಾಲ ಅಭ್ಯಾಸ, ರಾಗ ಅಭ್ಯಾಸ ಹೀಗೆ ಮೂರು ವಿಧಗಳಿವೆ. ಇದು ಸಂಗೀತಾಭ್ಯಾಸದ ಸಮಗ್ರ ಪದ್ಧತಿ. ಬುರ್ಜಿಖಾನರು ಈ ಪದ್ಧತಿಯಿಂದಲೇ ನನಗೆ ಕಲಿಸಿದರು. ಅವರ ಗಾಯನ ಪದ್ಧತಿಯಲ್ಲಿ ತಾಲ, ಸ್ವರ, ವಿಚಾರಗಳ ಸುಮಧುರ ಸಂಯೋಜನೆ ಇತ್ತು.

ಮಂಜೀಖಾನರು ನನಗೆ ಕಲಿಸುವಾಗ ತಮ್ಮೊಂದಿಗೆ ಹಾಡಿಸುತ್ತಿದ್ದರು. ಅದರಿಂದ ನನ್ನ ಕಲ್ಪನಾಶಕ್ತಿ, ವಿಚಾರ ಬೆಳೆಯಿತು. ಅಗಾಧವಾಗಿ ನೆಲೆ ಹತ್ತದಷ್ಟು ಬೆಳೆಯಿತು. ಈ ವಿಚಾರಕ್ಕೆ ಒಂದು ಚೌಕಟ್ಟು, ಬಿಗಿ, ನಿಯಮ ತಂದು ಕೊಟ್ಟವರು ಬುರ್ಜಿಖಾನರು. ನಿರ್ದಿಷ್ಟ ಚೌಕಟ್ಟಿನೊಳಗೆ ಸಂಗೀತವನ್ನು ಯಾವ ರೀತಿ ಬೆಳೆಸಬೇಕೆಂಬ ಬಗ್ಗೆ ನನಗೆ ಮಾರ್ಗದರ್ಶನ ದೊರೆತುದು ಅವರಿಂದಲೇ. ಶಿಷ್ಯರಿಗೆ ಕಟ್ಟಿಟ್ಟ ಸಂಗೀತವನ್ನು ಹೇಳಿಕೊಟ್ಟು ಮಕ್ಕಳಿಗೆ ಮಾತ್ರ ಸಂಗೀತ ಬೆಳೆಸುವ ಮೂಲಭೂತ ತತ್ತ್ವವನ್ನು ಹೇಳಿಕೊಡುವದು ಗುರುಗಳ ಪದ್ಧತಿ. ನನಗೆ ಬುರ್ಜಿಖಾನರು ಮಗನಿಗೆ ಕಲಿಸುವ ಪದ್ಧತಿಯಂತೆ ಕಲಿಸಿದರು. ತಮ್ಮ ಘರಾಣೆ, ಶಿಷ್ಯ ಪರಂಪರೆ ಉಳಿಯಬೇಕೆಂಬ ಅವರ ಆಶಯವೇ ಅದಕ್ಕೆ ಕಾರಣ. ತಮ್ಮ ತಂದೆ ಸಂಗೀತ ಪ್ರಚಾರ ಮಾಡಲಿಲ್ಲ ಎಂಬ ವಿವಂಚನೆಯೂ ಅವರಲ್ಲಿತ್ತು.

ಬುರ್ಜಿಖಾನರ ಬಳಿ ನಾನು ನಾಲ್ಕು ವರ್ಷ ಕಲಿತೆ—ಇನ್ನೂ ಕಲಿಯುತ್ತಿದ್ದೇನೆ ಎಂದರೂ ತಪ್ಪಾಗದು. ನನ್ನೊಂದಿಗೆ ಹಾಡು ಕಲಿಯುತ್ತಿದ್ದ ಬುರ್ಜಿಖಾನರ ಪುತ್ರ ಬಾಬಾನಿಂದ ಈಗಲೂ ಒಮ್ಮೊಮ್ಮೆ ಚೀಜುಗಳನ್ನು ತೆಗೆದುಕೊಳ್ಳುತ್ತಿದ್ದೇನೆ.

ನನ್ನ ಗಾಯನದ ಶೈಲಿ ಮಂಜೀಖಾನರದು. ಅವರ ಹಾಗೂ ಅಲ್ಲಾದಿಯಾಖಾನರ ಶೈಲಿ ಒಂದೇ ಆಗಿದ್ದರೂ ಅದರಲ್ಲೊಂದು ಪ್ರತ್ಯೇಕ ವೈಶಿಷ್ಟ್ಯವಿತ್ತು. ಆದರೆ ಕೆಲವರು ಹೇಳುವಂತೆ ಅವರಿಬ್ಬರ ಶೈಲಿ ಸಂಪೂರ್ಣ ಭಿನ್ನವಾಗಿದ್ದವೆಂಬುದು ನಿಜವಲ್ಲ.

ಸಂಗೀತದಲ್ಲಿ ನಾನೇನನ್ನಾದರೂ ಸಾಧಿಸಿದ್ದರೆ ಅದಕ್ಕೆ ಶಿವಯೋಗಿಗಳ ಕೃಪಾಶೀರ್ವಾದವೇ ಕಾರಣವೆಂದು ನನ್ನ ನಂಬುಗೆ. ಅಥಣಿಯ ಶಿವಯೋಗಿಗಳು, ಹುಬ್ಬಳ್ಳಿಯ ಶ್ರೀ ಸಿದ್ಧಾರೂಢರು, ಹಾವೇರಿಯ ಶಿವಬಸವಸ್ವಾಮಿಗಳು ನನ್ನ ಗಾಯನ ಕೇಳಿ "ಒಳ್ಳೆಯ ಗಾಯಕನಾಗು" ಎಂದು ಹರಸಿದ್ದರು.

ಸಂಗೀತದಲ್ಲಿ ನನಗೆ ಮಂಜೀಖಾನರು ಮಾರ್ಗದರ್ಶನ ಮಾಡಿದ್ದರೆ ಜೀವನಕ್ಕೆ ಮಾರ್ಗದರ್ಶನ ಮಾಡಿದವರು ಧಾರವಾಡದ ಮೃತ್ಯುಂಜಯ ಅಪ್ಪಗಳು. ನನ್ನ ಜೀವನದಲ್ಲಿ ಏನಾದರೂ ಉತ್ಕರ್ಷವಾಗಿದ್ದರೆ ಅದಕ್ಕೆ ಅಪ್ಪಗಳ ಕಾರುಣ್ಯವೇ ಕಾರಣ. ಪುಣೆಯಲ್ಲಿ ನೆಲೆಸುವ ಅವಕಾಶ ದೊರಕಿದ್ದರೂ ಅಪ್ಪಗಳ ಆಶೀರ್ವಾದ ಪಡೆಯಬೇಕೆಂಬ ಉದ್ದೇಶದಿಂದ ಧಾರವಾಡದಲ್ಲಿಯೇ ನೆಲೆಸಿದೆ. ಎಂಟು ವರ್ಷಗಳ ಹಿಂದೆ ಆಗಿನ ಆಕಾಶವಾಣಿ ಮಂತ್ರಿ ಡಾ. ಬಿ. ವಿ. ಕೇಸ್ಕರರ ಪ್ರಯತ್ನದಿಂದಾಗಿ ಧಾರವಾಡ ಆಕಾಶವಾಣಿಯಲ್ಲಿ ಸಂಗೀತ ಸಲಹೆಗಾರನಾಗಿ ಕೆಲಸಕ್ಕೆ ಸೇರಿದೆ. ಇಂದೂ ಅದರಲ್ಲಿಯೇ ಇದ್ದೇನೆ.

ಸಂಗೀತದ ಮೇಲೆ ನನಗಿರುವ ಮಮತೆ, ವಾತ್ಸಲ್ಯ ಹಾಗೂ ಭಕ್ತಿ ತಾಯಿಯ ಮೇಲೆ ಮಗುವಿಗಿರುವ ಮಮತೆಯ ರೀತಿಯದು. ಮಗು ತಾಯಿಯಿಂದ ತನ್ನ ಚಾಕರಿ ಮಾಡಿಸಿಕೊಳ್ಳುವದುಂಟು. ಆದರೆ ಅದು ದಾಸಿಯಿಂದ ಮಾಡಿಸಿ

ಮನಸೂರ ದಂಪತಿಗಳು



ಕೊಳ್ಳುವ ಚಾಕರಿಗಿಂತ ಸಂಪೂರ್ಣ ಭಿನ್ನವಾದುದು. ತಾಯಿಯ ಬಳಿ ಬೇಡುತ್ತೇವೆ; ದಾಸಿಗೆ ಆಜ್ಞಾಪಿಸುತ್ತೇವೆ. ಸಂಗೀತವನ್ನು ಜೀವನೋಪಾಯವನ್ನಾಗಿ ಮಾಡಿಕೊಂಡಾಗ ಜೀವನ ನಿರ್ವಹಣೆಗೆ ಅದರಿಂದ ಪಡೆದ ಸಹಾಯ ಮಗು ಬೆಳೆಯಲು ತಾಯಿಂದ ಪಡೆಯುವ ಸಹಾಯಕ್ಕೆ ಸಮನಾದುದು. ಹಾಡಿ ಹಣ ಸಂಪಾದಿಸಿ ಕುಟುಂಬ ಪೋಷಿಸಿದ್ದೇನೆ. ಆದರೆ ಹಾಡನ್ನು "ಮಾರಿಲ್ಲ." ಹಣ ಗಳಿಸಲು ಹಾಡಬೇಕೆಂಬ ವಿಚಾರ ನನ್ನ ತಲೆಯಲ್ಲಿ ಸುಳಿಯಲು ಆಸ್ಪದ ಕೊಡದಿದ್ದುದಕ್ಕಾಗಿ ನಾನು ಆ ಭಗವಂತನಿಗೆ ಕೃತಜ್ಞ. ನನ್ನ ಜೀವನದಲ್ಲಿ ಎಂದೆಂದಿಗೂ ಈ ಆಲೋಚನೆ ಬರದಿರಲೆಂದೇ ಅವನಲ್ಲಿ ನನ್ನ ಪ್ರಾರ್ಥನೆ. ಈ ವಿಚಾರದಿಂದಾಗಿ ನಾನು ಆರ್ಥಿಕ ಕಷ್ಟಗಳಿಗೆ ಸಿಲುಕಿರಬಹುದು; ಸಿಲುಕಿಯೂ ಇದ್ದೇನೆ. ಆದರೆ ಮಾನಸಿಕ ಸಂಕಷ್ಟಕ್ಕೆ ಸಿಲುಕಿಲ್ಲ. ಇದರಲ್ಲಿ ನನ್ನ ತಾಯಿಯ ಆಶೀರ್ವಾದ ಹಾಗು ಪ್ರೋತ್ಸಾಹ, ಸಹಧರ್ಮಿಣಿಯ,ಮಕ್ಕಳ ಸಹಕಾರವನ್ನು ನಾನು ಕೃತಜ್ಞತೆಯಿಂದ ನೆನೆಯಬೇಕಾಗಿದೆ. ಉಪವಾಸ ಬೀಳುವ ಪ್ರಸಂಗ ಬಂದರೂ ನನ್ನ ಸಹಧರ್ಮಿಣಿ ಅದನ್ನು ಸಂತೋಷದಿಂದ ಸಹಿಸಿದಳೇ ಹೊರತು ನಾನು ಸಂಗೀತ ಮಾರಿ ಹಣ ಗಳಿಸಬೇಕೆಂದು ಎಂದೂ ಅಪೇಕ್ಷಿಸಿದವಳಲ್ಲ. ವಿದ್ಯೆಗೆ ಅಗೌರವವಾಗುವ ರೀತಿಯಲ್ಲಿ ಬರುವ ಹಣ ಬೇಡವೆಂಬ ನನ್ನ ವಿಚಾರಕ್ಕೆ ಆಕೆಯ ಸಂಪೂರ್ಣ ಸಹಮತವಿತ್ತು. "ಬಡತನದಲ್ಲಿ ತೊಳಲಾಡುವ ಬದಲು ಸಿಕ್ಕಷ್ಟು ಹಣ ತೆಗೆದುಕೊಳ್ಳುವಂತೆ ನಿನ್ನ ಪತಿಗೆ ಹೇಳಬಾರದೆ?" ಎಂದು ನೆರೆಹೊರೆಯವರು ಆಗ್ರಹಪಡಿಸಿದಾಗ ಆಕೆ ಹೇಳುತ್ತಿದ್ದುದು ಒಂದೇ ಮಾತು "ಅದು ಅವರಿಗೆ ಸಂಬಂಧಿಸಿದ ವಿಷಯ. ಅವರು ಮಾಡಿದ್ದೇ ನನಗೆ ಸಂತೋಷ."

ನಾನು ಹಾಡು ಕಲಿಯಲು ವರ್ಷಗಟ್ಟಲೆ ಬೇರೆ ಊರುಗಳಿಗೆ ಹೋಗುತ್ತಿದ್ದಾಗ ನನಗೆ ಮನೆಯ ಚಿಂತೆಯೇ ಉಂಟಾಗದ ರೀತಿಯಲ್ಲಿ ಆಕೆ ಸಂಸಾರ ತೂಗಿಸಿಕೊಂಡು ಹೋಗಿದ್ದಾಳೆ. ಆಕೆಯ ಸಹಕಾರ ದೊರೆಯದಿದ್ದರೆ ನಾನು ಬಯಸಿದಂಥ ವಿದ್ಯೆ ಬಯಸಿದ ರೀತಿಯಲ್ಲಿ ಪಡೆಯಲು ಸಾಧ್ಯವಾಗುತ್ತಿತ್ತೋ ಇಲ್ಲವೋ ಹೇಳಲಾರೆ.

ಇದಿಷ್ಟು ನನ್ನ ಬಗೆಗಿನ ಮಾತು. ಇನ್ನು ಹಿಂದುಸ್ತಾನಿ ಸಂಗೀತ ಇಂದು ಯಾವ ಪರಿಸ್ಥಿತಿಯಲ್ಲಿದೆ ಎಂಬ ಬಗ್ಗೆ ಒಂದೆರಡು ಮಾತನ್ನು ಹೇಳಬಹುದು. ಸಂಗೀತ ಬೆಳೆಯುತ್ತಿದೆ, ಬೃಹದಾಕಾರವಾಗಿ ಬೆಳೆಯುತ್ತಿದೆ. ಸಂಗೀತ ಕಲಿಯಬೇಕೆಂಬವರ, ಕೇಳಬೇಕೆಂಬವರ ಸಂಖ್ಯೆ ದಿನೇ ದಿನೇ ಹೆಚ್ಚುತ್ತಿದೆ. ಆದರೆ ಈ ಬೆಳವಣಿಗೆ ಅಂಗವಿಕಲ ವ್ಯಕ್ತಿಯ ಬೆಳವಣಿಗೆಯಂತಿದೆಯೆಂದು ನನ್ನ ಭಾವನೆ. ಅದು ಆರೋಗ್ಯದಿಂದ, ಪರಿಪೂರ್ಣವಾಗಿ ಬೆಳೆಯುತ್ತಿಲ್ಲ. ಇದಕ್ಕೆ ಕಲಿಯುವವರಿಗಿಂತಲೂ ಕಲಿಸುವವರಲ್ಲಿಯ ದೋಷವೇ ಕಾರಣ. ಸಂಗೀತಾಭ್ಯಾಸಿಗಳಿಗೆ ಸರಿಯಾದ ಮಾರ್ಗದರ್ಶನ ಮಾಡುವ ಗುರುಗಳ ಸಂಖ್ಯೆ ಇಂದು ವಿರಳವಾಗಿದೆ. ರಾಗಗಳಲ್ಲಿಯ ಸ್ವರಗಳನ್ನು ಕಲಿಸಿದ ಮಾತ್ರಕ್ಕೆ ಗುರುವಿನ ಕರ್ತವ್ಯ ಮುಗಿಯಲಿಲ್ಲ. ಯಾಕೆಂದರೆ ಕೇವಲ ಸ್ವರಗಳ ಸಮೂಹ ರಾಗವೆನಿಸದು. ಪ್ರತಿಯೊಂದು ರಾಗಕ್ಕೂ ಒಂದು ವಿಶಿಷ್ಟವಾದ ವ್ಯಕ್ತಿತ್ವವಿದೆ. ವಿಶ್ವದ ಕೋಟ್ಯವಧಿ ಜನರಲ್ಲಿ ಪ್ರತಿಯೊಬ್ಬನನ್ನೂ ನಾವು ಭಿನ್ನವಾಗಿ ಗುರುತಿಸಬಹುದಾದಂತೆ ಪ್ರತಿಯೊಂದು ರಾಗವನ್ನೂ ಅದರ ಪ್ರತ್ಯೇಕ ವ್ಯಕ್ತಿತ್ವದಲ್ಲಿ ಗುರುತಿಸಬಹುದಾಗಿದೆ. ಹೊರಗಿನಿಂದ ನೋಡುವಾಗ ನಮ್ಮೆಲ್ಲರ ಕೈಗಳೂ ಒಂದೇ ಬಗೆಯಾಗಿ ಕಾಣಬಹುದು. ಆದರೆ ಒಬ್ಬನ ಬೆರಳಿನ ಗುರುತು ಇನ್ನೊಬ್ಬನದಂತಿರಲಾರದೆಂಬುದು ನಮಗೆಲ್ಲರಿಗೂ ಗೊತ್ತಿದೆ. ಅದೇ ರೀತಿ ಎರಡು ರಾಗಗಳಲ್ಲಿ ಒಂದೇ ಬಗೆಯ ಸ್ವರಗಳು ಕಂಡುಬಂದರೂ ಅವುಗಳಲ್ಲಿ ರಾಗದ ವ್ಯಕ್ತಿತ್ವಕ್ಕೆ ಅನುಗುಣವಾಗುವಂಥ ಸೂಕ್ಷ್ಮ ವ್ಯತ್ಯಾಸವಿದ್ದೇ ಇರುತ್ತದೆ. ಅವುಗಳ ಸಂಯೋಜನೆಯಲ್ಲಿಯೂ ವ್ಯತ್ಯಾಸವಿದೆ. ಈ ವ್ಯತ್ಯಾಸವನ್ನರಿತರೆ ಮಾತ್ರ ಸಂಗೀತ ಪ್ರಭಾವಿಯಾಗಬಲ್ಲದು. ಅದನ್ನು ಕಲಿಯುವವರಿಗೆ ಅರಿವು ಮಾಡಿಕೊಡುವದು ಗುರುಗಳ ಕರ್ತವ್ಯವಾದರೆ ಪ್ರೋತೃಗಳಿಗೆ ಅರಿವು ಮಾಡಿಕೊಡುವದು ಗಾಯಕನ ಕರ್ತವ್ಯ. ಇದು ಅರಿವಾಗುವವರೆಗೆ ಗಾಯಕನು ಎಷ್ಟೇ ಕಲಿತರೂ ಅಪೂರ್ಣನೆ ಸರಿ.

ಸ್ವರಗಳ ಬಗೆಗಿನ ಈ ಮಾತು ಲಯಕ್ಕೂ ಅನ್ವಯಿಸುತ್ತದೆ. ಸಂಗೀತಕ್ಕೆ ಸ್ವರ ತಾಯಿ, ಲಯ ತಂದೆಯೆಂದು ಹೇಳಿದ್ದಾರೆ. ಜೀವನದಲ್ಲಿ ನಡವಳಿಕೆ, ಶಿಸ್ತುಗಳನ್ನು ನಾವು ಕಲಿಯುವದು ತಂದೆಯಿಂದ. ನಡವಳಿಕೆ ಶಿಸ್ತು ಗೊತ್ತಿಲ್ಲದವನು ಉಡಾಳನೆನಿಸಿಕೊಳ್ಳುತ್ತಾನೆ. ಅದೇ ರೀತಿ ಲಯಬದ್ಧವಾಗಿರದ ಸಂಗೀತ "ಉಡಾಳ" ಸಂಗೀತವೆನಿಸುತ್ತದೆ. ಲಯಕ್ಕಿಂತ ಸ್ವರವೇ ಮುಖ್ಯ ಎನ್ನುವವರು, ಮಂಡ ಪೋಕರಿಯಾದರೂ ಅಡ್ಡಿ ಇಲ್ಲ, ಮಗ ಇದ್ದರೆ ಸಾಕು ಎಂದು ಹೇಳಿದಂತಾಗುತ್ತದೆ. ಮನುಷ್ಯನ ದೈಹಿಕ ಕ್ರಿಯೆಗಳನ್ನೊಳಗೊಂಡು ಸಮಗ್ರ ವಿಶ್ವದ ಚಟುವಟಿಕೆಗಳೆ ಲಯಬದ್ಧವಾಗಿ ನಡೆದಿರುವಾಗ ಸಂಗೀತದಲ್ಲಿ ಲಯಕ್ಕೆ ದ್ವಿತೀಯ ಸ್ಥಾನ ಕೊಡುವದು ಸಮಂಜಸವೇ? ಸಂಗೀತ ಶಿಕ್ಷಕನಾದವನು ಇವೆಲ್ಲವನ್ನು ವಿದ್ಯಾರ್ಥಿಗಳಿಗೆ ಬಿಂಬಿಸಿ ಹೇಳಿ, ಸರಿಯಾದ ಜ್ಞಾನ ಮಾಡಿಕೊಟ್ಟರೆ ಮಾತ್ರ ಸಂಗೀತ ಸರ್ವಾಂಗಪೂರ್ಣವಾಗಿ ಬೆಳೆಯಬಲ್ಲುದು. ಅದು ಹಾಗೆ ಬೆಳೆಯಬೇಕೆಂಬುದೊಂದೇ ನನಗಿರುವ ಬಯಕೆ.



# ಸಂಗೀತ ನನ್ನ ಜೀವನಸಂಗಾತಿಯಾಗಿ ಬಂತು!

ಗಂಗೂಬಾಯಿ ಹಾನಗಲ್ಲ

ನಮ್ಮದು ಸಂಗೀತಗಾರರ ಮನೆತನ. ನನ್ನ ತಾಯಿ ಅಂಬಾಬಾಯಿ, ಅಜ್ಜಿ ಕಮಲಾಬಾಯಿ ಒಳ್ಳೇ ಸಂಗೀತಗಾರರು. ನಾನು ಚಿಕ್ಕವಳಿದ್ದಾಗ ಮನೆಯಲ್ಲಿ ಸಂಗೀತದ ಬಗೆಗೆ ತುಂಬ ಚರ್ಚೆ ನಡೆಯುತ್ತಿದ್ದ ನೆನಪು ಬರುತ್ತದೆ. ಯಾವುದಾದರೂ ವಿಷಯದ ಮೇಲೆ ವಾದ - ವಿವಾದ ನಡೆಯಿತೆಂದರೆ ಯಾತರ ಪರಿವೆ ಇಲ್ಲದೆ ಹಗಲು ರಾತ್ರಿ ಎನ್ನದೇ ಈ ಚರ್ಚೆ ನಡೆಯುತ್ತಿತ್ತು. ಈ ಸಂಗೀತಮಯ ವಾತಾವರಣದಲ್ಲಿ ಬೆಳೆದು ಬಂದವಳಾದ ನನಗೆ ಸಂಗೀತದ ಕಡೆಗೆ ಸ್ವಾಭಾವಿಕವಾಗಿಯೇ ಒಲವು ಮೂಡಿದ್ದರೆ ಅದರಲ್ಲಿ ಆಶ್ಚರ್ಯವೇನೂ ಇಲ್ಲ. ಆದರೆ ನನ್ನ ಪೂರ್ವಜರೆಲ್ಲ, ನನ್ನ ತಾಯಿ ಕೂಡ ಕರ್ನಾಟಕ ಪದ್ಧತಿಯವರು. ಆ ಸಮಯದಲ್ಲಿ ಈ ಭಾಗದಲ್ಲಿ ಹಿಂದುಸ್ತಾನಿ ಸಂಗೀತದೊಂದಿಗೆ ಕರ್ನಾಟಕ ಪದ್ಧತಿಯೂ ತುಂಬ ಪ್ರಚಾರದಲ್ಲಿತ್ತು. ಆದರೆ ನನ್ನ ತಾಯಿ ನನಗೆ ಮಾತ್ರ ನಮ್ಮ ಮನೆತನದ ದನ್ನೇ ನಿಲ್ಲಿಸಿಬಿಟ್ಟರು. ಅವರ ಈ ತ್ಯಾಗವನ್ನು ನೆನೆದಾಗ ಈಗಲೂ ನನಗೆ ಕಣ್ಣೀರು ಬರುತ್ತದೆ, ನನ್ನ ಸಂಗೀತ ಜೀವನದ ಈ ಉತ್ಕರ್ಷಕ್ಕೆ ಇಷ್ಟೊಂದು ಕಾರಣೀಭೂತರಾದ ನನ್ನ ತಾಯಿ ನನ್ನ ಈ ಉತ್ಕರ್ಷವನ್ನು ನೋಡುವ ವರೆಗೆ ಬದುಕಿ ಉಳಿಯಲಿಲ್ಲವಲ್ಲ ಎಂದು. ಚಿಕ್ಕ ವಯಸ್ಸಿನಲ್ಲಿಯೇ ಅವರು ತೀರಿಕೊಂಡರು.

ಧಾರವಾಡದಿಂದ ನಾನು ಹುಬ್ಬಳ್ಳಿಗೆ ಬಂದು ನೆಲಸಿದಾಗ ನನಗೆ ಹದಿಮೂರು ವರುಷವಿರಬಹುದು. ಆಗ ಒಂದು ವರುಷದ ಮಟ್ಟಿಗೆ ಪಂಡಿತ ಹುಲಗೂರ ಕೃಷ್ಣಾಚಾರ್ಯರು ನನಗೆ ಸಂಗೀತ ಶಿಕ್ಷಣವನ್ನು ನೀಡಿದರು. ನಂತರ ನಾನೇ ಮನೆಯಲ್ಲಿ ಸಂಗೀತ ಸಾಧನೆಯನ್ನು ಮಾಡಿಕೊಳ್ಳುತ್ತ ಬಂದೆ. ಅದೇ ಸಂದರ್ಭದಲ್ಲಿ ಕರ್ನಾಟಕ ಕಥಕ್ ಮಂಡಳಿಯೊಂದಿಗೆ ಬಂದಿದ್ದ ಪ್ರತಾಪಲಾಲರು ಕುಮರಿ ಮೊನಲಾ



ಸಂಗೀತ ಸರಸ್ವತಿಯ ಆರಾಧನೆಯಲ್ಲಿ

ಈ ಪರಂಪರೆಯ ಸಂಗೀತ ಬೇಡವೆಂದು ನಿರ್ಧರಿಸಿ ಹಿಂದುಸ್ತಾನಿ ಸಂಗೀತ ಕಲಿಯಲು ಹಚ್ಚಿದರು. ಆಗ ಹಿಂದುಸ್ತಾನಿ ಸಂಗೀತ ಈ ಭಾಗದಲ್ಲಿ ಹೆಚ್ಚು ಪ್ರಚಲಿತವಿದ್ದುದಲ್ಲದೆ ಜನತೆಯ ಒಲವೂ ಅತ್ತ ಹೆಚ್ಚಿದ್ದುದನ್ನು ಗಮನಿಸಿ ನನ್ನ ತಾಯಿ ಹೀಗೆ ಮಾಡಿರಬೇಕು ಎಂದು ನನಗೆನಿಸುತ್ತದೆ.

ತಾಯಿಯೇ ನನ್ನ ಮೊದಲ ಗುರು. ನನ್ನ ಹತ್ತು-ಹನ್ನೊಂದನೇ ವರುಷದಿಂದಲೇ ಅವರು ನನ್ನ ಸಂಗೀತಪಾಠವನ್ನು ಪ್ರಾರಂಭಿಸಿದರು. ದಿನಾಲು ಒಂದು ಗಂಟೆಯಾದರೂ ನಾನು ಈ ಸಂಗೀತಾಭ್ಯಾಸ ಮಾಡಿಕೊಳ್ಳುವಂತೆ ಅವರು ನೋಡಿಕೊಳ್ಳುತ್ತಿದ್ದರು. ಆಗ ನಾನು ಧಾರವಾಡದ ರಾಷ್ಟ್ರೀಯ ಶಾಲೆಯಲ್ಲಿ ಅಭ್ಯಾಸ ಮಾಡುತ್ತಿದ್ದೆ. ಅದರ ಜೊತೆಗೆ ಒಳ್ಳೇ ಆಸ್ಥೆಯಿಂದ ಸಂಗೀತಾಭ್ಯಾಸವನ್ನು ನಾನು ಮಾಡುತ್ತಿದ್ದೆ. ನನ್ನ ಈ ಅಭ್ಯಾಸಕ್ಕೆ ವ್ಯತ್ಯಯ ಬರಬಾರದೆಂದೊ, ನಾನು ಆಕಸ್ಮಿಕವಾಗಿ ಕರ್ನಾಟಕ ಪದ್ಧತಿ ಅನುಸರಿಸಬಾರದೆಂದೊ ಏನೊ, ನನ್ನ ತಾಯಿ ಕೊನೆಕೊನೆಗೆ ಹಾಡುವ ದವುಗಳ ಪಾಠ ಹೇಳಿದರು. ಹೀಗೆ ಸ್ವಂತ ಸಾಧನೆಯಲ್ಲಿ ಕೆಲಕಾಲ ಸಾಗಿತು.

ಈ ಸಮಯದಲ್ಲಿ ಸವಾಯಿ ಗಂಧರ್ವರು ನನಗೆ ಗುರುವಾಗಿ ದೊರೆತರು. ಆದರೆ ಅವರು ನಾಟಕ ಕಂಪನಿಯಲ್ಲಿದ್ದವರು. ಹೆಚ್ಚು ಸಮಯ ಪುಣೆಯಲ್ಲಿಯೇ ಇರುವವರು. ಹುಬ್ಬಳ್ಳಿಗೆ ನಾಟಕ ಕಂಪನಿಯೊಂದಿಗೆ ಬಂದಾಗ ಮೊದಲ ಸಲ ಅವರು ನನಗೆ ಪಾಠ ಹೇಳಿದ್ದು, ಕೇವಲ ಆರೇಳು ದಿನಗಳ ವರೆಗೆ ಮಾತ್ರ. ಖರಜಮಿನ್ನತ್ ಮಾತ್ರ ಹೇಳಿಕೊಟ್ಟು ಅವರು ಹೋಗಿಬಿಟ್ಟರು. ಅವರು ಹೇಳಿದ್ದನ್ನೇ ನಾನು ಅಭ್ಯಾಸದಿಂದ ಸಾಧಿಸತೊಡಗಿದೆ. ದಿನಾಲು ಮೂರು ನಾಲ್ಕು ಗಂಟೆ ಕಾಲ ಸಂಗೀತ ಸಾಧನೆ ನಡೆಸುತ್ತಿದ್ದೆ. ಈ ವಿಷಯದಲ್ಲಿ ನನಗೆ ದತ್ತೋಪಂತ ದೇಸಾಯಿ ಮತ್ತು ನನ್ನ ಸೋದರಮಾವ ರಾಮರಾವ್ ಹಾನಗಲ್ಲ ಅವರಿಂದ ತುಂಬ ಮಾರ್ಗದರ್ಶನವು ದೊರೆಯುತ್ತಿತ್ತು. ಇವರಿಬ್ಬರೂ ನಾನು ಸಂಗೀತ ಸಾಧನೆಯಲ್ಲಿ ತೊಡಗಿರುವಾಗ ನನ್ನೆದುರು ಕುಳಿತು ನೆರವು ನೀಡುತ್ತಿದ್ದರು. ಹೀಗೆ ಗುರುವಿನಿಂದ ದೊರೆತ ಅಲ್ಪ ಶಿಕ್ಷಣವನ್ನ ಸ್ವಂತ ಸಾಧನೆಯಿಂದ ನಾನು ಬೆಳೆಯಿಸಿಕೊಂಡು ಬಂದೆ. ಆಗೀಗ ಕಾರ್ಯಕ್ರಮಗಳಿಗೂ ತೊಡಗಿದೆ.

ನಾನು ೧೮-೧೯ ವರುಷದವಳಿರುವಾಗಲೇ ಎಚ್. ಎಮ್. ವ್ಹಿ. ರವರು ನನ್ನ ಸಂಗೀತದ ಧ್ವನಿಮುದ್ರಿಕೆಗಳನ್ನು ಪಡೆಯಲಾರಂಭಿಸಿದರು. ಒಂದೊಂದು ಕಾರ್ಯಕ್ರಮದಲ್ಲಿ ಆರು

ಮಕ್ಕಳು, ಸೊಸೆಯಂದಿರು, ಮೊಮ್ಮಕ್ಕಳೊಂದಿಗೆ



ಧ್ವನಿಮುದ್ರಿಕೆಗಳನ್ನು (ಹನ್ನೆರಡು ಹಾಡುಗಳು) ಪಡೆಯುತ್ತಿದ್ದರು. ಶಾಸ್ತ್ರೀಯ ಸಂಗೀತವೇ ಮುಖ್ಯವಾಗಿರುತ್ತಿತ್ತು. ಆದರೆ ಕಂಪನಿಯವರ ಕೇಳಿಕೆಯ ಮೇರೆಗೆ ಮರಾಠಿ ಹಾಡುಗಳನ್ನು ಹಾಡಬೇಕಾಗುತ್ತಿತ್ತು. ನನ್ನ ತಾಯಿ ತಾನು ಕನ್ನಡ ಹಾಡುಗಳನ್ನು ಹಾಡುತ್ತಿದ್ದರೂ ನನಗೆ ಮಾತ್ರ ಕಲಿಸಲಿಲ್ಲ. ಅವನ್ನು ಕರ್ನಾಟಕಿ ಪದ್ಧತಿಯಿಂದಲೇ ಹಾಡುವುದು ಯೋಗ್ಯವಾದುದು; ಹಿಂದುಸ್ತಾನಿ ಪದ್ಧತಿ ಅದಕ್ಕೆ ತರವಲ್ಲ ಎಂಬ ಅಭಿಪ್ರಾಯ ಆಕೆಯದು. ಹೀಗಾಗಿಯೋ ಏನೊ ನಾನು ಕನ್ನಡ ಹಾಡುಗಳನ್ನು ಹಾಡಲು ಸಾಧ್ಯವಾಗಲೇ ಇಲ್ಲ.

ಹೀಗೆ ಧ್ವನಿಮುದ್ರಿಕೆಗಳನ್ನು ಕೊಡುವದಕ್ಕೆ ಮುಂಬಯಿಗೆ ಹೋದ ಸಂದರ್ಭದಲ್ಲಿಯೇ (೧೯೩೪-೩೫ ಇರಬಹುದು) ಎಚ್. ಎಮ್. ವಿ. ಅವರ ಒಂದು ಕೂಟದಲ್ಲಿ ಸಂಗೀತ ಕಾರ್ಯಕ್ರಮವೊಂದನ್ನು ಜರುಗಿಸಿದ. ನನ್ನ ಸಂಗೀತ ಸುಮಾರು ಒಂದುವರೆ ಗಂಟೆ ಕಾಲ ಜರುಗಿತು. ಅದು ನನ್ನ ಮೊದಲ ಸಂಗೀತ ಕಾರ್ಯಕ್ರಮ– ಇತರ ಪ್ರಸಿದ್ಧ ಸಂಗೀತ ಕಲಾವಿದರ ಸಮ್ಮುಖದಲ್ಲಿ. ನನಗೆ ಮೊದಲಿನಿಂದಲೂ ಸಭಾಕಂಪನವಾಗಲಿ – ಹೆದರಿಕೆಯಾಗಲಿ ಇದ್ದಿರಲೇ ಇಲ್ಲ. ನಾನು ಹಾಡಿದ ನಂತರ ಅಂದು ಮತ್ತೆ ಯಾರೂ ಹಾಡಲು ಮುಂದೆ ಬರಲೇ ಇಲ್ಲ – ಈಗುಂಟಾದ ಮಧುರವಾದ ವಾತಾವರಣವನ್ನು ತಮ್ಮ ಸಂಗೀತ ಕಾರ್ಯಕ್ರಮದಿಂದ ವಿರಸಗೊಳಿಸಬಾರದೆಂಬ ಅಭಿಪ್ರಾಯವನ್ನು ಅವರು ವ್ಯಕ್ತಪಡಿಸಿದರು.

[illegible] ವಿಶ್ವಾಸವನ್ನು ಕುದುರಿಸಿದ್ದು ನನಗೆ ತುಂಬ ಸಂತೋಷವುಂಟುಮಾಡಿತು. ಮುಂದೆ ಮುಂಬಯಿಯಲ್ಲಿ ಮ್ಯೂಜಿಕ್ ಸರ್ಕಲ್‌ದ ಆಶ್ರಯದಲ್ಲಿ ನನ್ನ ಮೊದಲ ಸಾರ್ವಜನಿಕ ಸಂಗೀತ ಕಚೇರಿ ನಡೆಯಿತು. ಆಗ ನನಗೆ ೨೩ ವರುಷಗಳಾಗಿರಬಹುದು.

ಇನ್ನೂ ಇಂಥ ಸಂಗೀತ ಕಚೇರಿಗಳನ್ನು ಜರುಗಿಸಬೇಕು; ಆಕಾಶವಾಣಿಯಲ್ಲಿ ಹಾಡಬೇಕು ಎಂಬ ಲವಲವಿಕೆ ನನಗೆ. ಹಣದ ಕಡೆಗೆ ನನ್ನ ಗಮನವಿರಲೇ ಇಲ್ಲ. ಅಂತೆಯೇ ಮುಂಬೈ ಮ್ಯೂಜಿಕ್ ಸರ್ಕಲ್‌ದವರು ೧೨೦ ರೂ. ಕೊಟ್ಟಾಗ ನಾನು ಹಿಂದುಮುಂದು ನೋಡದೇ ಒಪ್ಪಿಕೊಂಡಿದ್ದೆ. ಆಕಾಶವಾಣಿಯವರು 'ಟೆಸ್ಟ' ತೆಗೆದುಕೊಳ್ಳುವದಾಗಿ ಕೇಳಿದ್ದಕ್ಕೂ ಒಪ್ಪಿದ್ದೆ. ಆದರೆ ಎಚ್. ಎಮ್. ವ್ಹಿ. ಯ ರಮಾಕಾಂತ ರೂಪಜಿಯವರು ಕಲಾವಿದರಿಗೆ ತಕ್ಕ ಮನ್ನಣೆ ದೊರೆಯಲೇಬೇಕು ಎನ್ನುವವರು. ನನಗೆ ಹೀಗೆ ಅಗ್ಗದಲ್ಲಿ ಸಂಗೀತ ಕಚೇರಿ ನಡೆಸಲು ಅವಕಾಶ ಕೊಡಲಿಲ್ಲ. "ಹೀಗೆ ನೀವು ಮಾಡಿದರೆ ನಿಮ್ಮ ಸಂಗೀತದ ಬೆಲೆ ಕಡಿಮೆಯೆಂದು ಇವರು ಭಾವಿಸುವರು" ಎಂಬ ಹಿತೋಕ್ತಿಯನ್ನು ಹೇಳಿದರಲ್ಲದೇ ಆಕಾಶವಾಣಿ 'ಟೆಸ್ಟ'ಗೆ ಹೋಗದಂತೆ ನಮ್ಮನ್ನು ಕೋಣೆಯಲ್ಲಿ ಕೂಡಿ ಹಾಕಿ ಬೀಗ ಹಾಕಿಬಿಡುತ್ತಿದ್ದರು. ಹೀಗಾಗಿ ಆಕಾಶವಾಣಿಯಲ್ಲಿ ನಾನು ಹಣ ಪಡೆದೇ ಹಾಡಲು, ಯಾವೊಂದು ಪರೀಕ್ಷೆ ಇಲ್ಲದೇ ಹಾಡಲು ಅವಕಾಶ ದೊರೆಯಿತು. ಶ್ರೀಮತಿ ಹೀರಾಬಾಯಿ ಬಡೋದೆಕರ ಅವರು ಬಾರದ್ದರಿಂದ ಆಕಾಶವಾಣಿಯವರಿಗೆ ಬೇರೆಯವರನ್ನು ಅರಸಬೇಕಾಯಿತು. ಅವರು ನನ್ನನ್ನೇ ಆರಿಸಿ ಕಾರ್ಯಕ್ರಮ ನಡೆಯಿಸಿದರು. ಆಕಾಶವಾಣಿಯ ನನ್ನ ಈ ಮೊದಲ ಸಂಗೀತ ಕಾರ್ಯಕ್ರಮ ಹೀಗೆ ಅಪೂರ್ವ ರೀತಿಯಲ್ಲಿ ನಡೆಯಿತು. ಈ 'ಹೊಸ ಗಾಯಕಿ'ಯ ಹೆಸರನ್ನು ಮೊದಲಿಗೆ ತಿಳಿಸದ್ದರಿಂದ ಅನೇಕರು ಹೀರಾಬಾಯಿಯವರೇ ಹಾಡುತ್ತಿರುವರೆಂದು ಭಾವಿಸಿದ್ದರಂತೆ. ಅನೇಕರು ಫೋನು ಮಾಡಿಯೂ ಕೇಳಿದರಂತೆ. ಕೊನೆಯಲ್ಲಿ ನನ್ನ ಹೆಸರು ಸಾರಿದಾಗ ಈ 'ಹೊಸ ಗಾಯಕಿ' ಯಾರೆಂದು ಅವರಿಗೆಲ್ಲ ತಿಳಿದುಬಂದುದು. ಅನೇಕರು ನನ್ನನ್ನು ಪ್ರಶಂಸಿಸಿದರು. (ಹಾಗೆ ನೋಡಿದರೆ ಬೆಳಗಾವ ಕಾಂಗ್ರೆಸ್ ಅಧಿವೇಶನದಲ್ಲಿ ಸ್ವಾಗತಗೀತ ಮತ್ತು ವಂದೇ ಮಾತರಂ ಹಾಡಿದ ಐವರು ಬಾಲಿಕೆಯರಲ್ಲಿ ನಾನೊಬ್ಬಳಾದುದರಿಂದ ಅದೇ ಮೊದಲ ಸಾರ್ವಜನಿಕ ಕಾರ್ಯಕ್ರಮವೆನ್ನಬಹುದು.)

ಮುಂದೆ ಮೂರು ವರುಷಗಳ ನಂತರ ದಿಲ್ಲಿ ಆಕಾಶವಾಣಿಯಲ್ಲಿ ನನ್ನ ಸಂಗೀತ ಕಾರ್ಯಕ್ರಮ ಪ್ರಸಾರವಾಯಿತು. ಆಗ ತುಂಬ ಮೋಜಿನ ಘಟನೆಯೊಂದು ನಡೆಯಿತು. ನನಗಾಗ ಇಪ್ಪತ್ತೈದು ಇಪ್ಪತ್ತಾರು ವರುಷಗಳಿರಬಹುದು. ನೋಡಲು ಗಿಡ್ಡ ಆಳು – ಮೈ ತುಂಬಿಕೊಂಡಿರಲಿಲ್ಲ. ಹೀಗಾಗಿ ನಾನೇ ಗಾಯಕಿ ಎಂಬುದನ್ನು ಆಕಾಶವಾಣಿಯವರು ನಂಬಲು ಕೂಡ ಸಿದ್ಧರಿರಲಿಲ್ಲ. ದಿಲ್ಲಿ ನಿಲ್ದಾಣದಲ್ಲಿ ಇಳಿದು ನಾನು,ನನ್ನ ಸೋದರಮಾವ ಇಬ್ಬರೂ ಟಾಂಗಾ ಮಾಡಿಕೊಂಡು ರೇಡಿಯೋ ಸ್ಟೇಶನ್ನಿಗೆ ಹೋದೆವು. ರೇಡಿಯೋ ಸ್ಟೇಶನ್ನದಲ್ಲಿ ನಮ್ಮನ್ನು ಇವರು ಯಾರೋ ಎಂದು ಭಾವಿಸಿ ಹೊರಗೆ ಬೆಂಚಿನ ಮೇಲೆಯೇ ಕೂಡಿಸಿದರು. ನಾವೂ ಸಹ ಈಗ ಕರೆಯುತ್ತಾರೆ; ಆಗ ಕರೆಯುತ್ತಾರೆ; ಸ್ಟುಡಿಯೋಕ್ಕೆ ಹೋದರಾಯಿತು ಎಂದು ಹಾಗೆಯೇ ಕುಳಿತಿದ್ದೆವು. ನಮಗೆ ತಂಬೂರಿ ವಗೈರೆ ಕೊಡುವುದಿರಲಿ ಸ್ಟುಡಿಯೊದ ಒಳಗೂ ಕರೆದೊಯ್ಯಲಿಲ್ಲ. ಕಡೆಗೆ ನಾವೇ ಕೇಳಿ ತಂಬೂರಿ ತೆಗೆದುಕೊಂಡು ಸ್ಟುಡಿಯೊಕ್ಕೆ ಹೋಗಿ ಒಲ್ಲದ ಮನಸ್ಸಿನ ಸಾಥಿಗಳೊಂದಿಗೆ ಹೊಂದಿಕೊಂಡು ಸಮಯಕ್ಕೆ ಸರಿಯಾಗಿ ಕಾರ್ಯಕ್ರಮ ಪ್ರಾರಂಭಿಸಿದೆವು. ಕಾರ್ಯಕ್ರಮ ಕೊನೆಗೊಂಡಾಗ ಸಾಥಿಗಳು ನಿಬ್ಬೆರಗಾಗಿದ್ದರು. ಕೊನೆಗೆ ದಿಲ್ಲಿ ಆಕಾಶವಾಣಿಯ ಡೈರೆಕ್ಟರರು ಬಂದು ಅಭಿನಂದಿಸಿದಾಗ ಇಷ್ಟರವರೆಗೆ ನಾನು ಯಾರೆಂಬುದು ತಿಳಿಯಿತು. ಅವರೆಲ್ಲರೂ ಆಗ ತಮ್ಮ ಸಂತೋಷವನ್ನು ವ್ಯಕ್ತಪಡಿಸಿದರು.

೧೯೩೮ರಲ್ಲಿ ಕಲಕತ್ತೆಯ ಸಂಗೀತ ಪರಿಷತ್ತಿನಲ್ಲಿ ನಾನು ಹಾಡಿದ್ದು ನನ್ನ ಸಂಗೀತ ಜೀವನದಲ್ಲಿಯ ಮಹತ್ವದ ಸಂಗತಿಯೆಂದೇ ನನ್ನ ಭಾವನೆ. ನಾನು ಅಲ್ಲಿಗೆ ಹೋದುದು ನರ್ಗಿಸಳ ತಾಯಿ ಜದ್ದನಬಾಯಿಯವರ ಆಗ್ರಹದ ಮೇರೆಗೆ. ಈ ಸಮ್ಮೇಲನಕ್ಕೆ ನಾವು ಹೋದೊಡನೆ ನಮ್ಮ ಯೋಗಕ್ಷೇಮವನ್ನೇನೂ ನೋಡಿಕೊಂಡರು. ಆದರೆ ನನ್ನ

ನೇಪಾಳದಲ್ಲಿ ಭಾರತೀಯ ರಾಯಭಾರಿ ಸತ್ಕರಿಸಿದಾಗ ಅವರೊಂದಿಗೆ



ಹಾಡುಗಾರಿಕೆಯ ಬಗೆಗೆ ಸಂಘಟಕರಿಗೆ ತುಂಬ ಅಧೈರ್ಯವುಂಟಾದಂತೆ ತೋರಿತು. ಆ ಸಮ್ಮೇಲನಕ್ಕೆ ಬಂದಿದ್ದ ನಿಸಾರ ಹುಸೇನಖಾನರೆದುರು ಅವರು ಆಡಿಯೂ ತೋರಿಸಿದ್ದರೇನೊ! ಅಂದು ಯುಗಾದಿ ಪ್ರತಿಪದೆಯಾದುದರಿಂದ ನಾವು ಕಾಲಿಕಾ ಮಂದಿರಕ್ಕೆ ಹೋಗಿ ತಿರುಗಿ ಬಂದಾಗ ಅವರು ಸಂಗೀತ ಸಾಧನೆಯಲ್ಲಿ ತೊಡಗಿದವರು ನನ್ನನ್ನು ಕರೆದರು. "ನೀವೇನೂ ಸಾಧನೆ ಮಾಡಿಕೊಳ್ಳುವದಿಲ್ಲವೆ ?" ಎಂದು ಕೇಳಿದರು. ಏನೂ ತಿಳಿಯದೆ ನಾನು ಅದೇನೂ ಕಾರಣವಿಲ್ಲವೆಂದು ಹೇಳಿಬಿಟ್ಟೆ. ಆದರೆ ಅವರು ನಿಜವಾದ ಪರಿಸ್ಥಿತಿಯನ್ನು ತಿಳಿಸಿದರು. "ಸಂಘಟಕರು ನಿಮ್ಮ ಸಂಗೀತ ಕಾರ್ಯಕ್ರಮ ಹೇಗಾಗುವುದೂ ಎಂದು ಅಧೈರ್ಯಗೊಂಡಿದ್ದಾರೆ. ಸಾಧನೆಯ ನೆಪದಲ್ಲಿ ಅವರೆದುರು ನೀವು ಹಾಡಬಾರದೇಕೆ ? ಈಗ ನಾನು ಹಾಡುತ್ತಿಲ್ಲವೆ ?" ಎಂದು ಕೇಳಿದರು. ಹಾಗಾದರೆ ಸರಿ ಎಂದು ನಾನೂ ಸಾಧನೆಯ ನೆವದಲ್ಲಿ ಹಾಡಲಾರಂಭಿಸಿದೆ. ಸಂಘಟಕರಿಗೆ ಆಗ ಧೈರ್ಯವುಂಟಾಯಿತು. ಈ ಸಮ್ಮೇಳನದ ಕಾಲಕ್ಕೆ ನನಗೆ ಎಂಟು ಪದಕಗಳನ್ನು ಕೊಡುವದಾಗಿ ಸಾರಲಾಯಿತು. ಆದರೆ ಬಂದದ್ದು ಮಾತ್ರ ಕೇವಲ ಎರಡು. ನಾನು ಪದಕಗಳಿಗಾಗಿ ಅಲ್ಲಿಗೆ ಹೋದವಳಲ್ಲ, ಆ ಮಾತು ಬೇರೆ. ಆದರೆ ದಿವಂಗತ ಸೈಗಲ್‌ರಂಥವರು ಬೆನ್ನು ಚಪ್ಪರಿಸಿ ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿದರು. ಶ್ರೋತೃಗಳು ಕರತಾಡನದಿಂದ ತಮ್ಮ ವಿಶ್ವಾಸ ವ್ಯಕ್ತಪಡಿಸಿದರು. ಅಷ್ಟೇ ಸಾಕು.



ಮಗಳು ಕೃಷ್ಣಾ ಹಾನಗಲ್ಲ, ಸೋದರಮಾವನ ಮಗ ಶೇಷಗಿರಿ ಹಾನಗಲ್ಲರೊಂದಿಗೆ ಕಚೇರಿಯಲ್ಲಿ ತೊಡಗಿದ್ದಾಗ

ನಾನು ಇಷ್ಟೆಲ್ಲ ಸಮ್ಮೇಳನಗಳಿಗೆ ಹೋಗಿ ಬಂದರೂ, ಕಾರ್ಯಕ್ರಮ ಜರುಗಿಸಿದರೂ ಗುರುಗಳಲ್ಲಿ ನಿಯಮಿತವಾಗಿ ಶಿಕ್ಷಣ ಪಡೆದಿರಲಿಲ್ಲ. ೧೯೩೮ ರ ಹೊತ್ತಿಗೆ ಸವಾಯಿ ಗಂಧರ್ವರು ಕುಂದಗೋಳದಲ್ಲಿ ಬಂದು ನೆಲೆಸಿದ್ದರು. ಹೀಗಾಗಿ ಗುರುಸಾನ್ನಿಧ್ಯದಲ್ಲಿ ಶಿಕ್ಷಣ ಪಡೆವ ಸೌಭಾಗ್ಯ ಮತ್ತೆ ನನಗೆ ಲಭಿಸಿತು. ದಿನಾಲು ಕುಂದಗೋಳಕ್ಕೆ ಹೋಗಿ ಬರುತ್ತಿದ್ದೆ. ಕಿರಾನಾ ಘರಾಣ ಪದ್ಧತಿಯನ್ನು ಅವರು ನನಗೆ ಚೆನ್ನಾಗಿ ಹೇಳಿಕೊಟ್ಟರು. ಅವರು ಹೇಳುತ್ತಿದ್ದರು : "ಗಂಗೂ, ನೀನು ಈಗಾಗಲೇ ಸಂಗೀತ ಕಾರ್ಯಕ್ರಮಗಳನ್ನು ಜರುಗಿಸಿರುವಿ. ಹೆಸರನ್ನು ಪಡೆದುಕೊಂಡಿರುವಿ. ಎಲ್ಲವೂ ನಿನ್ನ ಸ್ವಂತ ಸಾಧನೆ ನಿಜ. ಆದರೆ ಪೂರ್ಣ ದೃಷ್ಟಿ ಕೊಟ್ಟವ ನಾನು." ಅವರ ಈ ಮಾತು ಅಕ್ಷರಶಃ ಸತ್ಯವಾದುದು. "ಗುರುವಿನ ಗುಲಾಮನಾಗದೆ ದೊರೆಯದಣ್ಣಾ ಮುಕುತಿ" ಎಂಬಂತೆ ಗುರು ಸಾನ್ನಿಧ್ಯದಲ್ಲಿ ನನ್ನ ಸಂಗೀತ ಶಿಕ್ಷಣವಿಲ್ಲದೆ ಅದು ನನಗೆ ಪರಿಪೂರ್ಣವೂ ಎನಿಸುತ್ತಿರಲಿಲ್ಲ. ಗುರುಗಳು ಗಂಡಾ ಸಮಾರಂಭವನ್ನು ನೆರವೇರಿಸಿ ನನ್ನನ್ನು ಶಿಷ್ಯೆಯಾಗಿ ಸ್ವೀಕರಿಸಿ ಶಿಕ್ಷಣ ನೀಡಿದ ನಂತರವೇ ನನ್ನ ಸಂಗೀತದಲ್ಲಿ ಅಪೂರ್ವ ಶಕ್ತಿ ಬಂದಂತೆ ನನಗನಿಸಿತು. ಮೂರು ವರುಷ ಕಾಲ ಗುರುಗಳು ನನಗೆ ಸಂಗೀತ ಶಿಕ್ಷಣ ನೀಡಿದರು. ಈ ಕಾಲವು ನನ್ನ ಸಂಗೀತ ಜೀವನದಲ್ಲಿ ಅತ್ಯಂತ ಅಪೂರ್ವವಾದುದು.

ಸಂಗೀತ ಸಮ್ಮೇಳನಗಳಿಗಾಗಿ, ಕಾರ್ಯಕ್ರಮಗಳಿಗಾಗಿ ನಾನು ಭಾರತದಲ್ಲೆಲ್ಲ ಸಂಚರಿಸಿ ಬಂದಿದ್ದೇನೆ. ಕರಾಚಿ, ಲಾಹೋರ, ಪೇಶಾವರ, ಲಖನೌ, ಕಲಕತ್ತಾ ಹೀಗೆ ಉತ್ತರದ ನಗರಗಳಿಗೂ ದಕ್ಷಿಣ ಭಾರತದ ಮದ್ರಾಸ- ತ್ರಿಚನಾಪಳ್ಳಿ ನಗರಗಳಿಗೂ ಹೋಗಿ ಬಂದಿದ್ದೇನೆ. ಈ ಎಲ್ಲ ಕಾರ್ಯಕ್ರಮಗಳಲ್ಲಿಯೂ ನನ್ನ ಮಗಳು ಕೃಷ್ಣಾ ಮತ್ತು ನನ್ನ ಸೋದರಮಾವನ ಮಗ ಶೇಷಗಿರಿ ನನ್ನ ಸಾಥಿಗಳಾಗಿ ಬಂದಿದ್ದಾರೆ. ಈಗಲೂ ನಾನು ಹೋದಲ್ಲೆಲ್ಲ ಅವರು ಬರುವರು. ನನ್ನವರೇ ಈ ರೀತಿ ಸಾಥಿಗಳಾಗಿ ಬರುತ್ತಿರುವುದು ನನಗೆ ಒಂದು ರೀತಿ ತುಂಬ ಪ್ರಯೋಜನಕಾರಿಯಾಗಿರುವುದು. ಎರಡು ಸಲ ಸಾಂಸ್ಕೃತಿಕ ಶಿಷ್ಟಮಂಡಳದ ಸದಸ್ಯೆಯಾಗಿ ವಿದೇಶಗಳಿಗೂ ಹೋಗಿ ಬಂದಿದ್ದೇನೆ. ಹನ್ನೊಂದು ವರುಷಗಳ ಹಿಂದೆ ನೇಪಾಳಕ್ಕೆ ಹೋಗಿದ್ದೆ. ಅದು ಗಾಂಧಿ ಜಯಂತಿಯ ಸಂದರ್ಭ. ಅಲ್ಲಿ ಎಂಟು ಸಂಗೀತ ಕಾರ್ಯಕ್ರಮಗಳು ಜರುಗಿದವು. ನೇಪಾಳಿಗರು ಹಿಂದುಸ್ತಾನಿ ಸಂಗೀತವನ್ನು ತುಂಬ ಮೆಚ್ಚಿದರು. ಅದು ಅವರಿಗೆ ತುಂಬ ಸೇರಿದಂತೆ ನನಗೆ ತೋರಿತು. ಶಾಸ್ತ್ರೀಯ ಸಂಗೀತಕ್ಕೆ ಅವರು ಅತಿ ಮಹತ್ವ ಕೊಡುವದನ್ನು ನಾನು ಅರಿತುಕೊಂಡೆ. ಸಂಗೀತವನ್ನು ಅವರು ಅತ್ಯಂತ ಆಸ್ಥೆಯಿಂದ ಆಲಿಸುವದನ್ನು ಕಂಡು ನನಗೆ ನಿಜವಾಗಿಯೂ ತುಂಬ ಆಶ್ಚರ್ಯವಾಯಿತು. ಅವರಿಗೆ ಈ ವಿಷಯದಲ್ಲಿ ಜ್ಞಾನವಿರುವದನ್ನು ಕಂಡುಕೊಂಡೆ. ಅಲ್ಲಿಯ ಸಂಗೀತಗಾರರೆಲ್ಲ ಸೇರಿ ನಮ್ಮನ್ನು ತುಂಬ ಆತ್ಮೀಯತೆಯಿಂದ ಸತ್ಕರಿಸಿದರು. ಅವರು ನೀಡಿದ ದೇಣಿಗೆಗಳು ನಮ್ಮನ್ನು ತುಂಬ ಮುಗ್ಧಗೊಳಿಸಿದುವು. ಅವರ ಆತ್ಮೀಯತೆ ನನ್ನನ್ನು ಮೂಕಗೊಳಿಸಿತು. 'ಅಚಲ ರಹೊ ರಾಜ ಆಕಾಶ ಧರಣಿ ಜಬ ತಕ ಇಂದ್ರಪತ ರಾಜಾ" ಎಂಬ ಚೀಜನ್ನು ಜಯ ಜಯವಂತಿ ರಾಗದಲ್ಲಿ ನಾನು ಮೊದಲ ದಿನ ಹಾಡಿದೆ. ಆ ಜನರಿಗೆ ಇದು ತುಂಬ ಪ್ರಿಯವಾಯಿತು. ನೇಪಾಳದ ದೊರೆಗಳಿಗೂ ಅದು ಹರ್ಷವುಂಟುಮಾಡಿದ್ದರೆ ಆಶ್ಚರ್ಯವಿಲ್ಲ. ಮುಂದೆ ಪ್ರತಿಯೊಂದು ಕಾರ್ಯಕ್ರಮದಲ್ಲಿಯೂ ಈ ಚೀಜನ್ನು ಹಾಡಲು ಅವರು ನನ್ನನ್ನು ಕೇಳಿಕೊಳ್ಳತೊಡಗಿದರು. ನೇಪಾಳದಿಂದ ಹಿಂತಿರುಗಿ ಬರುವಾಗ ನನಗೆ ನಿಜವಾಗಿಯೂ ದುಃಖವೆನಿಸಿತು.

ಈಗ ಆರು ವರುಷಗಳ ಹಿಂದೆ ಪಾಕಿಸ್ತಾನಕ್ಕೆ ಸಾಂಸ್ಕೃತಿಕ ಶಿಷ್ಟಮಂಡಳದಲ್ಲಿ ಸದಸ್ಯೆಯಾಗಿ ಹೋಗಿದ್ದೆ. ಅಲ್ಲಿ ಆಗ ವಿಷಮ ವಾತಾವರಣವಿದ್ದುದರಿಂದ ಕಾರ್ಯಕ್ರಮಗಳನ್ನು ಹಾಯಕಮಿಶನ್ನಿನ ಆವಾರದಲ್ಲಿಯೇ ಜರುಗಿಸಬೇಕಾಯಿತು. ಕೆಲವೇ ಜನರಿಗೆ ಈ ಕಾರ್ಯಕ್ರಮಕ್ಕೆ ಪ್ರವೇಶ ದೊರೆಯಿತು. ಹೀಗಾಗಿ ಅನೇಕರು ನಿರಾಶರಾಗಬೇಕಾಯಿತು. ಅಲ್ಲಿ ನಾಲ್ಕು ಕಾರ್ಯಕ್ರಮಗಳು ಮಾತ್ರ ನಡೆದುವು. ಜನತೆ ತುಂಬ ಹರುಷದಿಂದ ಈ ಕಾರ್ಯಕ್ರಮಗಳನ್ನು ಆಲಿಸಿತು. ನಾನು ಹೋದುದು ಪ್ರಜಾರಾಜ್ಯ ಉತ್ಸವದ ಸಂದರ್ಭದಲ್ಲಿ. ಅನೇಕ ವಿದೇಶಿ ರಾಯಭಾರಿ ವರ್ಗದವರೂ ಬಂದಿದ್ದರು.

ಕಾಶಿಯ ನಾರಿ ಪ್ರಚಾರಿಣಿ ಸಭೆ ನನಗೆ 'ಭಾರತೀ ಕಂಠ' ಎಂಬ ಬಿರುದನ್ನು ದಯಪಾಲಿ

ಸಿದೆ. ಮೈಸೂರು ಸಂಗೀತ- ನಾಟಕ ಅಕಡೆಮಿ ಬಹುಮಾನಿಸಿ ಗೌರವಿಸಿದೆ. ಆದರೆ ನನ್ನ ಮಟ್ಟಿಗೆ ಹೇಳಬೇಕೆಂದರೆ ಇಂಥ ಬಿರುದುಗಳ ಹುಚ್ಚು ನನಗಿಲ್ಲ. ಅವು ಅವಶ್ಯವೂ ಇಲ್ಲ. ಒಳ್ಳೆಯ ಸಂಗೀತಕ್ಕೆ ಬಿರುದುಗಳು ಬೇಕೆಂದು ನನಗನಿಸುವದಿಲ್ಲ. ಒಳ್ಳೆಯದಾಗಿರದ ಸಂಗೀತವನ್ನು ಯಾವ ಬಿರುದೂ ಒಳ್ಳೆಯದಾಗಿ ಮಾಡದು. ಸಂಗೀತ ಒಳ್ಳೆಯದಿದ್ದಾಗ ಬಿರುದು ಇದ್ದರೂ ಅಷ್ಟೇ, ಇಲ್ಲದಿದ್ದರೂ ಅಷ್ಟೇ ಎಂದು ನನಗನಿಸುವುದು.

ಸುಮಾರು ಕಳೆದ ನಾಲ್ವತ್ತು ವರುಷಗಳಿಂದ ನಾನು ಸಂಗೀತ ಸೇವೆಯಲ್ಲಿ ತೊಡಗಿದ್ದೇನೆ. ಈ ಸಮಯದಲ್ಲಿ ಕರ್ನಾಟಕಕ್ಕಿಂತ ಹೊರಗೆ ನಾನು ಹಾಡಿರುವುದೇ ಹೆಚ್ಚು ಎಂದು ಹೇಳಬೇಕು. ಯಾವ ಕಾಲಕ್ಕೂ ನಾನು ಶಾಸ್ತ್ರೀಯ ಸಂಗೀತವನ್ನು ಬಿಟ್ಟು ಹಾಡಿರುವದಿಲ್ಲ- ಸುಲಭ ಸಂಗೀತವೂ ಇಲ್ಲ.

ಈ ಹಿಂದಿಗಿಂತ ಇಂದು ಜನರಲ್ಲಿ ಸಂಗೀತದ ಬಗೆಗೆ ಒಳ್ಳೇ ಅಭಿರುಚಿಯುಂಟಾಗಿದೆ. ಆದರೆ ಒಳ್ಳೆಯ ಗಾಯಕರ ಸಂಖ್ಯೆಯೂ ಕಡಿಮೆಯಾಗಿದೆ. ಶಾಸ್ತ್ರೀಯ ಸಂಗೀತ ಕಾರ್ಯಕ್ರಮಗಳೂ ಆ ಮಾನದಿಂದ ಕಡಿಮೆಯಾಗತೊಡಗಿವೆ. ಸುಲಭಸಂಗೀತಕ್ಕೆ ಜನ ಮಾರುಹೋಗುತ್ತಿದ್ದಾರೆ. ಸಿನೇಮಾ ಸಂಗೀತದ ಪರಿಣಾಮ ಏನೆಂದು ನಾನು ಹೇಳಲಾರೆ. ಎಳೆಯರು ಸಿನೇಮಾ ಹಾಡುಗಳನ್ನು ಗುಣುಗುಣಿಸುವದೇನೂ ನಿಜ. ಈ ಹಿಂದೆ ದನಗಾಹಿಗಳೂ ನಾರಾಯಣರಾವ ವ್ಯಾಸ ಅವರ ಅಡಾಣಾ ರಾಗದ 'ಏರಿ ಮೋಹ ಜಾ' ಹಾಡನ್ನು ಹಾಡುತ್ತ ತಿರುಗಾಡುವದನ್ನು ನಾನು ನೋಡಿದ್ದೇನೆ. ಅಂತೇ ಸಿನೇಮಾ ಸಂಗೀತ ಶಾಸ್ತ್ರೀಯ ಸಂಗೀತದ ಮೇಲೆ ದುಷ್ಪರಿಣಾಮ ಮಾಡಿದೆಂದು ಹೇಳಲು ಬಾರದು.

ಹಾಗೆ ನೋಡಿದರೆ ಇಂದು ಸಂಗೀತ ಶಿಕ್ಷಣಕ್ಕೆ ಹೆಚ್ಚು ಅವಕಾಶವನ್ನು ಕಲ್ಪಿಸಲಾಗುತ್ತಿದೆ. ಸಂಗೀತ ಕಾಲೇಜುಗಳು ತಲೆಯೆತ್ತುತ್ತಲಿವೆ. ಸಂಗೀತವನ್ನು ಕಾಲೇಜಿನಲ್ಲಿ ಕಲಿಯುವುದೆಂದರೆ ಕೇವಲ ಅದರ ಜ್ಞಾನವನ್ನು ಮಾಡಿಕೊಂಡಂತೆ. ಅಲ್ಲಿ ಸಾಮೂಹಿಕವಾಗಿ ಸಾಧನೆ ಮಾಡುವುದು ಸಾಧ್ಯವೂ ಇಲ್ಲ; ಸಾಧುವೂ ಅಲ್ಲ. ಸಂಗೀತ ಸಾಧನೆ ಗುರುವಿನ ಸಾನ್ನಿಧ್ಯದಲ್ಲಿಯೇ ನಡೆಯಬೇಕು, ಅವನ ಮುಖಾಂತರವೇ ಅದು ಹಸ್ತಗತವಾಗುವುದು. ಸಂಗೀತದ ಅಭಿವೃದ್ಧಿಗಾಗಿ ಇಂದು ಶಿಷ್ಯವೃತ್ತಿಗಳನ್ನು ದಯಪಾಲಿಸಲಾಗುತ್ತಿದೆ. ಈ ಶಿಷ್ಯವೃತ್ತಿಗಳು ಸಂಗೀತದ ಎಲ್ಲ ಸಂಪ್ರದಾಯಗಳು ಬೆಳೆಯುವಂತೆ ಪ್ರತಿ ವರುಷ ಮೂರು-ನಾಲ್ಕು ವಿದ್ಯಾರ್ಥಿಗಳಿಗೆ ದೊರೆಯುವುದು ಅವಶ್ಯವೆಂದು ನನಗೆನಿಸುತ್ತದೆ.

ಸಂಗೀತದ ನನ್ನ ಸಾಧನೆಯನ್ನು ಈ ಕೆಲ ಮಾತುಗಳಲ್ಲಿ ಇಲ್ಲಿ ವಿಶದಪಡಿಸಿದ್ದೇನೆ. ನನ್ನ ಬಗೆಗೆ, ನನ್ನ ಸಂಗೀತದ ಬಗೆಗೆ ಇದಕ್ಕೂ ಹೆಚ್ಚು ನಾನು ಹೇಳುವುದು ಸಾಧ್ಯವೂ ಇಲ್ಲ, ಅದು ಸೂಕ್ತವೂ ಅಲ್ಲ. ಆ ವಿಷಯವನ್ನು ಶ್ರೋತೃಗಳಿಗೆ ಬಿಡುತ್ತೇನೆ - ನನ್ನ ಸಂಗೀತ ಸೇವೆಯನ್ನು ಅವರು ಮೆಚ್ಚಿಕೊಂಡಿದ್ದಾರೆ; ಇನ್ನೂ ಮೆಚ್ಚಿಕೊಳ್ಳುತ್ತಾರೆ ಎಂಬ ಭರವಸೆ ನನಗಿದೆ. ಇದೊಂದೇ ಸಮಾಧಾನ ನನಗೆ ಸಾಕು.



# ಸಂಗೀತ ನನ್ನ ಜೀವನ: ಉಸಿರು

ಭೀಮಸೇನ ಜೋಶಿ

'ಕರ್ಮವೀರ' ಪತ್ರಿಕೆಯ ಸಂಪಾದಕರು ತಮ್ಮ ದೀಪಾವಳಿ ಸಂಚಿಕೆಗೆ 'ನಾನು ಮತ್ತು ಸಂಗೀತ' ಈ ವಿಷಯವಾಗಿ ನಿಮ್ಮ ಆತ್ಮನಿವೇದನೆಯ ಲೇಖನವೊಂದನ್ನು ಬರೆದುಕೊಡಬೇಕೆಂದು ನನ್ನನ್ನು ಕೇಳಿಕೊಂಡರು. ಇದು ನನಗೆ ತುಂಬ ಸಂತೋಷವನ್ನುಂಟುಮಾಡಿತು. ಸಂಗೀತ ನನ್ನ ಜೀವನದ ಉಸಿರು; ಅದೇ ನನ್ನ ಜೀವನ. ಹೀಗಿರುವಾಗ ಈ ನನ್ನ ಸಂಗೀತದ ವಿಷಯವಾಗಿ ನಾನು ನಾಲ್ಕು ಮಾತುಗಳನ್ನು ಹೇಳಲು ಅವಕಾಶ ದೊರೆತುದು ಒಂದು ಅಪೂರ್ವವಾದ ಯೋಗವೆಂದೇ ನಾನು ಭಾವಿಸುವೆ.

ನಾನು ಸಂಗೀತಗಾರನಾದುದು ಹೇಗೆ? ಏಕೆ? ಕಾರಣವೆಂದರೆ ನಮ್ಮದು ಸಂಗೀತಗಾರರ ಮನೆತನವೇನೂ ಅಲ್ಲ. ನನ್ನ ತಂದೆ ತಾಯಿ ಸಂಗೀತಗಾರರೇನೂ ಅಲ್ಲ; ನಮ್ಮ ಮನೆತನದಲ್ಲಿ ಸಂಗೀತದ ಸವಿಯನ್ನು ಉಂಡು ಉಣಬಡಿಸಿದವರು ನಮ್ಮ ಅಜ್ಜ ಭೀಮಾಚಾರ್ಯರು. ಅವರ ಹಾಡುಗಾರಿಕೆಯನ್ನು ನಾನು ಕಂಡು ಕೇಳರಿಯದವ. ಅವರಲ್ಲಿ ಕಂಠಮಾಧುರ್ಯವಿದ್ದಂತೆ ಅದನ್ನು ಅರ್ಥಮಾಧುರ್ಯದಲ್ಲಿಯೂ ಪರಿವರ್ತಿಸುವ ಶಕ್ತಿ ಅವರಲ್ಲಿದ್ದಿತೆಂದು ನನ್ನ ತಂದೆಯವರು ಹೇಳುವರು. ನನ್ನ ಅಜ್ಜ ಪುರಾಣಿಕರು. ಪುರಾಣದಲ್ಲಿಯ ಸನ್ನಿವೇಶಗಳನ್ನು ಗೀತರೂಪದಲ್ಲಿ ಅವರು ಹಾಡತೊಡಗಿದರೆಂದರೆ ಶ್ರೋತೃಗಳು ಮಂತ್ರಮುಗ್ಧರಾಗಿ ಕುಳಿತಿರುತ್ತಿದ್ದರಂತೆ. ವಿಶೇಷತಃ ಜೋಗಿಯಾ ಮತ್ತು ಭೈರವಿ ರಾಗಗಳಲ್ಲಿ ಅವರು ಹಾಡುವುದನ್ನು ಕೇಳಬೇಕು ಎನ್ನುತ್ತಾರೆ ನನ್ನ ತಂದೆ. ಇದು ಬಹಳ ದಿನಗಳ ಹಿಂದಿನ ಮಾತು.

ನನ್ನ ಅಜ್ಜನ ಈ ಕಂಠಮಾಧುರ್ಯ ನನಗೆ ಒಲಿದುಬಂದಿತೇನೊ ! ಚಿಕ್ಕವನಿದ್ದಾಗಲೇ ಗಂಟೆಯ ನಾದ, ಬಜಂತ್ರಿಯ ಸಪ್ಪಳ ನನ್ನನ್ನು ಎಲ್ಲಿಗೂ ಸೆಳೆದೊಯ್ಯುತ್ತಿದ್ದುವು. ಬಜಂತ್ರಿಯ ಸಪ್ಪಳ ಓಣಿಯಲ್ಲಿ ಕೇಳಿಬರತೊಡಗಿದೊಡನೆ ನಾನು ಅದರ ಬೆನ್ನುಹತ್ತಿಬಿಡುತ್ತಿದ್ದೆ. (ನನ್ನ ತಂದೆ-ತಾಯಿ ಆನಂತರ ಈ ಸಂಗತಿಗಳನ್ನು ನನಗೆ ಹೇಳಿದ್ದು) ಒಂದು ಸಲವಂತೂ ನಾನು ಒಂದು ಬಜಂತ್ರಿ ಮೇಳದ ಹಿಂದೆ ಹೋದವ ಅಲ್ಲಿಯೇ ನಿದ್ದೆ ಬಂದು ಮಲಗಿದ್ದೆನಂತೆ. ನನ್ನ ತಂದೆ ಪೋಲೀಸ್ ಕಚೇರಿಗೆ ದೂರು ಕೊಡಲು ಹೋದಾಗ ನಾನು ಮಲಗಿದ ಮನೆಯವರು ಅಲ್ಲಿಗೆ ಕರೆದುತಂದರಂತೆ. ನನ್ನ ತಂದೆ ನನ್ನನ್ನು ಮನೆಗೆ ಕರೆದು ತಂದರು. ನಾನು ಎಳೆಯವನಿದ್ದಾಗ ಧ್ವನಿಪ್ರಭಾವ ನನ್ನ ಮೇಲೆ ತನ್ನಷ್ಟಕ್ಕೆ ತಾನೇ ಆದುದು. ಇದರ ಹೊರತಾಗಿ ತಾಯಿಯು ತುಂಬ ಮಧುರವಾಗಿ ದೇವರನಾಮಗಳನ್ನು ಹಾಡುತ್ತಿದ್ದಳು. ಆ ಹಾಡುಗಾರಿಕೆಯೂ ನನ್ನ ಮೇಲೆ ಪ್ರಭಾವ ಬೀರಿದ್ದಿರಬೇಕು. ಹೀಗೆ ನಾನು ಎಳೆಯವನಾಗಿದ್ದಾಗಲೇ ಸಂಗೀತದ ಕಡೆಗೆ ಒಲಿದೆ. ಈ ಹೊತ್ತಿಗೆ ನನ್ನ ತಂದೆ ಬಾಗಲಕೋಟೆಯಿಂದ ಗದುಗಿಗೆ ಬಂದಿದ್ದರು. ಅಲ್ಲಿ ನಾನು ಶಾಲೆಗೆ ಹೋಗತೊಡಗಿದೆ. ಶಾಲೆಯಿಂದ ಮರಳಿ ಬರುವಾಗ ಗ್ರಾಮೋಫೋನ್ ರಿಕಾರ್ಡ್ ಹಚ್ಚುವ ಅಂಗಡಿಯೆದುರು ನಿಂತುಬಿಡುತ್ತಿದ್ದೆ. 'ಆಡಿಸಿದಳೆಶೋದಾ' ಗೀತ ನನ್ನನ್ನು ತುಂಬ ಮುಗ್ಧಗೊಳಿಸುತ್ತಿತ್ತು. ಅದನ್ನು ಅನುಕರಿಸುವ ಯತ್ನವನ್ನು ನಾನು ಮಾಡುತ್ತಿದ್ದೆ. ಅದರಲ್ಲಿ ಸಫಲತೆಯೂ ದೊರೆಯಿತು. ಒಂದು ಸಲ ಮನೆಯಲ್ಲಿ ನನ್ನ ತಾಯಿ ಇದೇ ಹಾಡನ್ನು ಹಾಡಿದಾಗ, ನಾನು ಅವಳನ್ನು ತಿದ್ದಿ ರಿಕಾರ್ಡಿನಲ್ಲಿದ್ದಂತೆಯೇ ಹಾಡಿದೆ. ನನ್ನ ತಂದೆ-ತಾಯಿಗಳಿಗೆ ಇದರಿಂದ ಎಲ್ಲಿಲ್ಲದ ಅಚ್ಚರಿ.

ನನ್ನ ಒಲವು ಎತ್ತಕಡೆಗೆಂಬುದು ತಂದೆಯವರಿಗೆ ಇಂಥ ಘಟನೆಗಳು ಸ್ಪಷ್ಟವಾಗಿ ತಿಳಿಸಿಕೊಟ್ಟವು. ನನಗಾಗ ಹತ್ತು ವರುಷಗಳಾಗಿರಬಹುದು. ನನ್ನ ತಂದೆ ಶಾಸ್ತ್ರೀಯ ಶಿಕ್ಷಣ ಕೊಡಿಸುವ ಏರ್ಪಾಡು ಮಾಡಿದರು. ಗದಗಿನ ಪಂಚಾಕ್ಷರಿ ಗವಾಯಿಗಳ ಶಿಷ್ಯರಾದ ಚನ್ನಪ್ಪ ಕುರ್ತಕೋಟಿ ಅವರನ್ನು ನನ್ನ ಗುರುವಾಗಿ ಗೊತ್ತುಮಾಡಿದರು. ಭೀಮಪಲಾಸ ರಾಗದಿಂದ ನನ್ನ ಸಂಗೀತ ಶಿಕ್ಷಣ ಪ್ರಾರಂಭವಾಯಿತು.

ಭೀಮಸೇನ ಜೋಶಿ

ನಾನು ತುಂಬ ಸಂತೋಷದಿಂದಲೇ ನನ್ನ ಸಂಗೀತಾಭ್ಯಾಸ ಸಾಗಿಸತೊಡಗಿದೆ. ಹೀಗೆ ಏಳೆಂಟು ತಿಂಗಳು ಸಾಗಿರಬಹುದು. ನನ್ನ ತಂದೆಯವರಾಗ ಮೈಸೂರಿಗೆ ಹೆಚ್ಚಿನ ಶಿಕ್ಷಣಕ್ಕೆ ಹೋಗಿದ್ದರು. ಈ ಸಂಗೀತ ಸಾಧನೆಯನ್ನು ಹೆಚ್ಚಿಸುವ ಲವಲವಿಕೆ, ಅದನ್ನು ಸಾಧಿಸಲು ಎಲ್ಲಿಗೆ ಹೋಗಬೇಕು, ಮುಂಬಯಿಯೇ ಸರಿ, ಎಂದು ಒಂದು ದಿನ ಮನೆಯಲ್ಲಿ ಯಾರಿಗೂ ಹೇಳದೆ ಕೇಳದೆ ಗಾಡಿ ಹತ್ತಿದೆ. ಗಾಡಿಯಲ್ಲಿ ಹಾಡುತ್ತ ರೊಕ್ಕವನ್ನು ಸಂಪಾದಿಸಿದೆ; ಮುಂಬಯಿಯನ್ನು ಸೇರಿದೆ. ಆದರೆ ಅಲ್ಲಿ ನನ್ನ ಉದ್ದೇಶ ಸಾಧಿಸಲಿಲ್ಲ. ಹೀಗಾಗಿ ಮತ್ತೆ ಮರಳಿದೆ. ನಡುವೆ ವಿಜಾಪುರದಲ್ಲಿ ಇಳಿದು ಹಾಡುತ್ತ ತಿರುಗಾಡುವಾಗ ನನ್ನ ತಂದೆಯ ಸ್ನೇಹಿತರು ತಮ್ಮ ಮನೆಗೆ ಕರೆದೊಯ್ದರು. ಅನಂದಾಗಿ ನಾನು ಮತ್ತೆ ಮನೆ ಸೇರಿದೆ; ತಂದೆಯವರೊಂದಿಗೆ ಮೈಸೂರಿನಲ್ಲಿಯೇ ಕೆಲ ದಿನ ಇದ್ದೆ. ಅಲ್ಲಿಂದ ಗದುಗಿಗೆ ಬಂದಾಗ ಒಂದು ಸಂದರ್ಭದಲ್ಲಿ ಪಂಚಾಕ್ಷರಿ ಗವಾಯಿಗಳೆದುರು ಹಾಡಬೇಕಾಯಿತು. "ಇವನಿಗೆ ಹೆಚ್ಚಿನ ಸಂಗೀತ ಶಿಕ್ಷಣ ದೊರೆಯಬೇಕು" ಎಂದು ಅವರು ನನ್ನ ಬಗೆಗೆ ಅಪ್ಪಣೆ ಕೊಡಿಸಿದರು.

ಗದಗಿನಲ್ಲಿ ನನಗೆ ಸಂಗೀತ ಶಿಕ್ಷಣ ಹೆಚ್ಚಿನ ರೀತಿಯಲ್ಲಿ ದೊರೆಯುವುದು ಹೇಗೆ? ಇದೇ ಕಾಲಕ್ಕೆ ನನ್ನ ತಂದೆಯವರು ಮತ್ತೆ ಊರಿಗೆ ಹೋಗಿದ್ದರು. ಒಂದು ಸಣ್ಣ ನೆವದಿಂದಾಗಿ ಮತ್ತೆ ನಾನು ಸಂಗೀತಸರಸ್ವತಿಯನ್ನು ಹುಡುಕಿಕೊಂಡು ಹೊರಟೆ. ನನಗಾಗ ಯಾವ ಗೊತ್ತು ಗುರಿಯೂ ಇರಲಿಲ್ಲ– ಕೇವಲ ನಾನೊಬ್ಬ ಶ್ರೇಷ್ಠ ಸಂಗೀತಗಾರನಾಗಬೇಕೆಂಬ ಬಯಕೆ. ಗ್ವಾಲೇರಕ್ಕೆ ಬಂದು ಮಾಧವ ಸಂಗೀತ ವಿದ್ಯಾಲಯವನ್ನು ಸೇರಿದೆ. ಆದರೆ ನನ್ನ ತೃಷೆ ಇಂಗಲಿಲ್ಲ. ಅಲ್ಲಿಂದ ಜಲಂಧರ, ಮತ್ತೆ ಇಂದೂರ ಹೀಗೆ ಸಂಚರಿಸಿ ಕಲಕತ್ತೆಗೆ ಬಂದೆ. ಸನ್ಯಾಲ ಪಹಾರಿಯವರು ಒಂದು ತಿಂಗಳು ನನ್ನನ್ನು ಇರಿಸಿಕೊಂಡರು. ಅಲ್ಲಿಂದ ಜಲಂಧರಕ್ಕೆ ಮರಳಿದೆ. ಆಗ ಪಹಾರಿ ಸನ್ಯಾಲರು ಹೇಳಿದ ಮಾತುಗಳು ಇಂದಿಗೂ ನನ್ನ ಕಿವಿಯಲ್ಲಿ ನಿನದಿಸುತ್ತಿವೆ: "ನೀನು ಒಳ್ಳೆಯ ಸಂಗೀತ ಕಲಿ, ಸಿನೇಮಾ, ನಾಟಕಗಳಲ್ಲಿ ಸೇರಿ ಅಗ್ಗದ ಕೀರ್ತಿಗೆ ಬಲಿಯಾಗದಿರು." ಅಲ್ಲಿಂದ ಜಲಂಧರಕ್ಕೆ ಮರಳಿ ಬಂದೆ. ಅಲ್ಲಿ ಸಂಗೀತ ಪರಿಷತ್ತು ಸೇರಿದ್ದಿತು. ದಕ್ಷಿಣದಿಂದ ಮಾಸ್ತರ ಕೃಷ್ಣ, ಹಾಗೂ ನಾರಾಯಣರಾವ ವ್ಯಾಸ [illegible]

ಷ್ಟವು. ನಾನು ದಕ್ಷಿಣದವನೆಂದು ನನ್ನನ್ನು [illegible] ನನ್ನನ್ನು ಮಾತನಾಡಿಸಿದರು. ನಾನು ಬಂದುದರ ಉದ್ದೇಶವನ್ನು ತಿಳಿದುಕೊಂಡು, "ನಿನಗಿಲ್ಲಿ ಹೆಚ್ಚಿನ ಸಂಗೀತ ಶಿಕ್ಷಣ ದೊರೆಯಲಾರದು. ನೀನು ದಕ್ಷಿಣದಲ್ಲಿಯೇ ಅದನ್ನು ಪಡೆಯಬೇಕು" ಎಂದು ಸುಸ್ಪಷ್ಟವಾಗಿ ತಿಳಿಸಿದರು. ಪ್ರೊ. ಪಟವರ್ಧನರು ಸಹ "ನಿನಗಿಲ್ಲಿ ಸರಿಯಾದ ಶಿಕ್ಷಣ ದೊರೆಯಲಾರದು ಊರಿಗೆ ಹೋಗು" ಎಂದು ಹೇಳಿಬಿಟ್ಟರು. ನನಗಂತೂ ದಿಕ್ಕೇ ತೋಚದಾಯಿತು. ಸಂಗೀತ ವಿದ್ಯೆಯನ್ನು ಸಂಪಾದಿಸಲೆಂದು ಊರು ಬಿಟ್ಟು ಬಂದಿದ್ದೆ. ಸುಮಾರು ಒಂದೂವರೆ ವರುಷ ಈ ರೀತಿ ಅಲೆದಾಟದಲ್ಲಿಯೇ ಕಳೆದುಹೋಗಿತ್ತು. ಮೇಲಾಗಿ ಈ ಅಲೆದಾಟವೂ ನಿರರ್ಥಕವೆನಿಸಿತ್ತು. ಈ ಪರಿಸ್ಥಿತಿಯಲ್ಲಿ ನಾನು ಊರಿಗೆ ಹೇಗೆ ಹೋಗಬೇಕು? ತಂದೆಯವರಿಗೆ ಪತ್ರವನ್ನೇನೊ ಬರೆದೆ. ಆದರೆ ನನ್ನ ಸಂಗೀತ ಶಿಕ್ಷಣದ ಏರ್ಪಾಡು ಮಾಡಬೇಕೆಂದು ಕರಾರು ಹಾಕಿದೆ. ನಾನು ಊರಿಗೆ ಮರಳಿದೆ. ನನ್ನ ತಂದೆತಾಯಿ ತುಂಬ ಬಳಲಿದ್ದರು. ನನ್ನ ತಾಯಿಯಂತೂ ಒಂದೇ ಒಪ್ಪತ್ತು ಊಟ ಮಾಡಿ ಜೀವ ಹಿಡಿದಿದ್ದಳು. ನನ್ನ ಆಗಮನದಿಂದ ಅವರಿಗೆ ಹಿಡಿಸಲಾರದಷ್ಟು ಸಂತೋಷವಾಯಿತು.

ಈಗ ನನ್ನ ಶಿಕ್ಷಣಕ್ಕೆ ಗುರುಗಳನ್ನು ಹುಡುಕುವ ಕೆಲಸವು ಪ್ರಾರಂಭವಾಯಿತು. ಪುಣೆಯಲ್ಲಿ ಪ್ರಭಾತ ಸ್ಟುಡಿಯೋದಲ್ಲಿ ಕೆಲಸ ಮಾಡುತ್ತಿದ್ದ ಮಾಸ್ಟರ್ ಕೃಷ್ಣಾರನ್ನು ಗುರುವಾಗಿ ಪಡೆಯಲು ಹೋದಾಗ ನಾನು ಯಾರನ್ನೂ ಶಿಷ್ಯರನ್ನಾಗಿ ಪಡೆವ ಸ್ಥಿತಿಯಲಿಲ್ಲ ಎಂದು ಅವರು ಸ್ಪಷ್ಟವಾಗಿ ಹೇಳಿಕಳಿಸಿಬಿಟ್ಟರು. ಮುಂದೇನು ಎಂದು ವಿಚಾರಿಸುವಂತಾಯಿತು. ನಾನು ಹತ್ತು ವರುಷದವನಿರುವಾಗಲೇ ಸವಾಯಿ ಗಂಧರ್ವರ ಸಂಗೀತ ಕಾರ್ಯಕ್ರಮವೊಂದು ಗದುಗಿನಲ್ಲಿ ಜರುಗಿತ್ತು. ಅವರ ಗಾಯನದ ಪ್ರಭಾವ ನನ್ನ ಮೇಲೆ ತುಂಬ ಆಗಿತ್ತು. ಇಂಥವರು ನನ್ನ ಗುರುಗಳಾದರೆ ನನ್ನ ಪುಣ್ಯಕ್ಕೆ ಎಣೆಯುಂಟೆ? ಎಂದುಕೊಂಡಿದ್ದೆ. ಈ ನನ್ನ ಅಲೆದಾಟದಲ್ಲಿ ಆಗಾಗ ಅವರ ನೆನಪು ಮೂಡಿಬರುತ್ತಿತ್ತು. ನಾನದನ್ನು ವ್ಯಕ್ತಪಡಿಸುವುದಾದರೂ ಹೇಗೆ? ನನ್ನ ಮನಸ್ಸಿನ ಈ ಇಂಗಿತವು ತಂದೆಯವರಿಗೆ ತಿಳಿಯಿತೆಂಬಂತೆ ಅವರೂ ಈ ದಿಸೆಯಲ್ಲಿಯೇ ಪ್ರಯತ್ನಿಸತೊಡಗಿದ್ದರು. ಅವರು ಗುರುಗಳನ್ನು ಕಂಡು ಮಾತನಾಡಿ ಬಂದಿದ್ದರು. ಆ ಮೇರೆಗೆ ಅವರು ನನ್ನನ್ನು ಕುಂದಗೋಳಕ್ಕೆ ಕರೆದೊಯ್ದರು. ಗುರುಗಳು ತಂಬೂರಿ ಸರಿಪಡಿಸಿ ನನ್ನ ಕೈಗೆ ಕೊಟ್ಟರು. ನಾನು ಹಾಡಲಾರಂಭಿಸಿ ಐದು ನಿಮಿಷಗಳಾಗಿದ್ದವೊ ಇಲ್ಲವೊ ನನ್ನನ್ನು ತಡೆದು ನಿಲ್ಲಿಸಿ, "ಈಗ ಕಲಿತ ಬಹುಭಾಗವನ್ನು ಮರೆತರೆ ನಾನು ಕಲಿಸುತ್ತೇನೆ" ಎಂದು ನನ್ನನ್ನು ಶಿಷ್ಯನಾಗಿ ಸ್ವೀಕರಿಸಲು ಮುಂದಾದರು. ನನಗೆ ಹಿಡಿಸಲಾರದಷ್ಟು ಸಂತೋಷವಾಯಿತು– ನಾನು ಅಪೇಕ್ಷಿಸಿದ ಗುರುವೇ ನನಗೆ ದೊರೆತರು ಎಂದು. ಮಗ ಹಾದಿಗೆ ಹತ್ತುವಂತಾಯಿತಲ್ಲ ಎಂದು ತಂದೆಯವರೂ ಹಿರಿ ಹಿಗ್ಗಿದರು. ನಾನು ಕುಂದಗೋಳದಲ್ಲಿಯೇ ಉಳಿದೆ. ಮೊದಲು ನಾನು ಬೇರೆಯವರಲ್ಲಿದ್ದುಕೊಂಡು ಗುರುಸೇವೆ ಮಾಡುತ್ತ ಸಂಗೀತ ವಿದ್ಯೆಯನ್ನು ಪಡೆಯತೊಡಗಿದೆ. ವಿದ್ಯೆ ಬರಬೇಕಾದರೆ ತುಂಬ ಪರಿಶ್ರಮ ಬೇಕು ಎಂಬ ಪರಂಪರೆಗೆ ಸೇರಿದವರು ನನ್ನ ಗುರುಗಳು. ನಾನು ಈ ವಿದ್ಯೆಗಾಗಿ ಎಂಥ ಪರಿಶ್ರಮವನ್ನು ಮಾಡಲೂ ಸಿದ್ಧನಾಗಿದ್ದೆ. ಒಂದು ಸಲ ನನ್ನ ತಂದೆಯವರು ನನ್ನ ಈ ಪರಿಶ್ರಮ ನೋಡಿ ತಡೆಯಲಾರದೇ ಗುರುಗಳಿಗೆ ಹೇಳಲು ಹೋದರು. ಅದರಿಂದ ನನ್ನ ಶಿಕ್ಷಣ ನಿಲ್ಲುವ ಪ್ರಸಂಗವೇ ಬಂದಿತ್ತು. ಆದರೆ ನಾನು ತಂದೆಯವರಿಗೆ ಎಲ್ಲವನ್ನೂ ಸಹಿಸಲು ಸಿದ್ಧನಿರುವುದಾಗಿ ಹೇಳಿ ಕಳಿಸಿದೆ. ನನ್ನ ಈ ಗುರುಸೇವೆ ವ್ಯರ್ಥವಾಗಲಿಲ್ಲ. ನನಗೆ ತೊಂದರೆಯಾಗಬಾರದೆಂದು ಗುರುಗಳು ನನ್ನನ್ನು ಮನೆಯಲ್ಲೇ ಇರಿಸಿಕೊಂಡರು. ವಿದ್ಯಾಭ್ಯಾಸವು ಸರಾಗವಾಗಿ ಸಾಗಿತು. ಪೂರಿಯಾ– ಮಿಯಾ ಮಲ್ಹಾರ ರಾಗಗಳನ್ನು ಅವರು ಈ ಸಮಯದಲ್ಲಿ ನನಗೆ ಹೇಳಿಕೊಟ್ಟರು. ನನ್ನ ನಿಜವಾದ ಸಂಗೀತ ಶಿಕ್ಷಣ ಆಗ ಪ್ರಾರಂಭವಾಗಿತ್ತು. ಆದರೆ ದುರ್ವಿಧಿ ನನ್ನನ್ನು ಬೆಂಬತ್ತಿತ್ತು. ಗುರುಗಳು ನನ್ನ ತಂದೆಯನ್ನು ಬರಮಾಡಿಕೊಂಡು, "ಭೀಮಸೇನನಿಗೆ ಇನ್ನು ನಾನು ಕಲಿಸುವುದು ಸಾಧ್ಯವಿಲ್ಲ, ನೀವು ಕರೆದುಕೊಂಡು ಹೋಗಿರಿ" ಎಂದು ಹೇಳಿಬಿಟ್ಟರು. ನನ್ನ ತಂದೆ ಎಷ್ಟೇ ಹೇಳಿಕೊಂಡರೂ ಅವರು ತಮ್ಮ ನಿರ್ಣಯವನ್ನು ಬದಲಿಸಲಿಲ್ಲ.

ತಂದೆಯೊಂದಿಗೆ ನಾನು ಮರಳಿ ಮನೆಗೆ ಬಂದೆ. ನನಗೆ ಯಾವುದಕ್ಕೂ ಸಮಾಧಾನವಿರುತ್ತಿರಲಿಲ್ಲ. ನಾನು ಭಜನೆ, ಸಂಗೀತ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುತ್ತಿದ್ದೆನಾದರೂ ಅದರಲ್ಲಿ ಹುರುಪು ಇರುತ್ತಿರಲಿಲ್ಲ. ಆಗ ನನ್ನ ತಂದೆಯವರು, "ಸಂಗೀತಪ್ರಿಯರಾದ ಶ್ರೀ ರಾಘವೇಂದ್ರಸ್ವಾಮಿಗಳ ಸೇವೆ ಮಾಡಿ ಅವರಿಗೆ ಶರಣು ಹೋಗು" ಎಂದು ತಿಳಿಸಿದರು. ಆ ಮೇರೆಗೆ ಶ್ರೀ ಗುರುಗಳ ಸೇವೆಯಲ್ಲಿ ತೊಡಗಿದೆ. ಅದು ನನ್ನ ಮನಸ್ಸಿಗೆ ಸಮಾಧಾನ ನೀಡಿತು.

ಅಲ್ಲಿಂದ ಬಂದ ನಂತರ ನನ್ನ ಸಾಥಿಗಳೊಂದಿಗೆ ಅಭ್ಯಾಸ ಪ್ರಾರಂಭಿಸಿದೆ. ಅಲ್ಲಿ ನಡೆದ ಕಾರ್ಯಕ್ರಮಗಳಿಂದ ಪ್ರೋತ್ಸಾಹಿತನಾಗಿ ಸಂಚಾರ ಪ್ರಾರಂಭಿಸಿದೆ. ತೀರ್ಥಹಳ್ಳಿ, ಉಡುಪಿ, ಮಂಗಳೂರುಗಳಿಗೆ ನನ್ನ ಸಾಥಿಗಳೊಂದಿಗೆ ಹೋಗಿ ಬಂದೆ. ಇದರಿಂದ ನನಗೆ ಅಷ್ಟು ಹಣ ಬರದಿದ್ದರೂ ಹೆಸರು ಬಂತು– ಕೆಲಮಟ್ಟಿಗೆ ಸಮಾಧಾನವೂ ಆಯಿತು. ಈ ಹೊತ್ತಿಗೆ ಸವಾಯಿ ಗಂಧರ್ವರ ಷಷ್ಟ್ಯಬ್ದಿ ಸಮಾರಂಭ ಜರುಗಿತು. ಅದಕ್ಕೆ ಆಮಂತ್ರಣ ಬಂದುದರಿಂದ ತಂದೆಯವರೊಂದಿಗೆ ಆ ಕಾರ್ಯಕ್ರಮಕ್ಕೆ ಹೋದೆ. ಗುರುಗಳಿಗೆ ಉಡುಗೊರೆ ಸಲ್ಲಿಸಿದೆ. ಗುರುಗಳು ಅಂದು ನಡೆಸಿದ ಕಾರ್ಯಕ್ರಮದಲ್ಲಿ ನಾನು ಅವರಿಗೆ ಸಾಥಿಯಾಗಿ ನಿಂತೆ. ಕಳೆದು ಹೋದ ಮಾನಸಿಕ ಸಮಾಧಾನ ಮತ್ತೆ ಈಗ ದೊರೆಯಿತು.

ಈ ಸಮಾಧಾನದಲಿ. [illegible] [illegible] ಸಂಗತಿ [illegible]ವಾಯಿತು. ಅವರು ನನ್ನ ಶಿಕ್ಷಣವನ್ನು ಮುಂದುವರಿಸುವ ಭರದಲ್ಲಿರುವಾಗಲೇ ಈ ಹೊಸ ತೊಂದರೆ ಬಂದಿತು. ಅದಕ್ಕಿಂತ ಗಂಡಾ ಸಮಾರಂಭದ ಗಂಡಾಂತರವೊಂದು ಕಾದಿತ್ತು. ಈ ಸಮಾರಂಭವಾಗಿ ಗುರುಗಳು ನನ್ನನ್ನು ತಮ್ಮ ಶಿಷ್ಯನೆಂದು ಸಾರ್ವಜನಿಕವಾಗಿ ಸಾರಬೇಕಿತ್ತು. ಸಾವಿರದ ವರೆಗೆ ಗುರುದಕ್ಷಿಣೆ. ಮತ್ತೆ ಅದಕ್ಕೆ ತಗಲುವ ಖರ್ಚು. ನನ್ನ ಕಕ್ಕ ದೇವರಂತೆ ಬಂದು ಈ ಪ್ರಸಂಗದಲ್ಲಿ ನೆರವಾದರು. ಈ ಸಮಾರಂಭಕ್ಕೆ ಬೇಕಾಗುವ ಹಣವನ್ನು ಒದಗಿಸಲು ಅವರು ಮುಂದಾದರು. ಸುಮಾರು ಎರಡು ಸಾವಿರದವರೆಗೆ ಖರ್ಚಾಗಿರಬೇಕು. ಹುಬ್ಬಳ್ಳಿಯ ರೇಲ್ವೆ ಇನ್‌ಸ್ಟಿಟ್ಯೂಟ್‌ದಲ್ಲಿ ಈ ಸಮಾರಂಭ ಜರುಗಿ ಗುರುಗಳು ನನ್ನನ್ನು ಪುನಃ ಶಿಷ್ಯನಾಗಿ ಸ್ವೀಕರಿಸಿವರು. ಮತ್ತೆ ಕೆಲ ದಿನ ಅವರಿಂದ ಶಿಕ್ಷಣ ದೊರೆವಷ್ಟರಲ್ಲಿ ಅವರ ದೇಹಸ್ಥಿತಿ ಬಹಳಷ್ಟು ಕೆಟ್ಟು ಪುಣೆಗೆ ಹೋಗಬೇಕಾಯಿತು. ಕೊನೆಯವರೆಗೂ ಗುರುಸೇವೆ ಮಾಡಿದ್ದು ನನಗೊಂದು ಸಮಾಧಾನದ ಸಂಗತಿ. ಗುರುಗಳೊಂದಿಗೆ ನನ್ನ ಸಂಬಂಧ ಮಧುರವಾಗುವಂತೆ ಅನೇಕ ಹಿರಿ–ಕಿರಿಯ ಸ್ನೇಹಿತರು ನನಗೆ ತುಂಬ ನೆರವಾದರು. ಅವರನ್ನೆಲ್ಲ ನಾನಿಲ್ಲಿ ಕೃತಜ್ಞತೆಯಿಂದ ನೆನೆಯಬೇಕು.

ನಾನು ಪುಣೆಯಲ್ಲಿ ವಾಸಿಸತೊಡಗಿದ ನಂತರ, ನನ್ನ ಸಂಗೀತಗಾರನ ಜೀವನ ಪ್ರಾರಂಭವಾಯಿತೆಂದು ಹೇಳಬೇಕು. ದೇಶದ ನಾನಾ ಮೂಲೆಗಳಿಂದ ಕರೆಗಳು ಬರತೊಡಗಿದವು; ವಿವಿಧ ಭಾಗಗಳಲ್ಲಿ ಸೇರುವ ಸಂಗೀತ ಪರಿಷತ್ತುಗಳಿಗೆ ಆಮಂತ್ರಣಗಳು ಪ್ರತಿ ವರುಷವೂ ಬರತೊಡಗಿದುವು. ನಾನು ಅವಕಾಶ ಮಾಡಿಕೊಂಡು ಈ ಎಲ್ಲ ಪರಿಷತ್ತುಗಳಿಗೆ ಹೋಗಿ ಬರುವೆ. ನನ್ನ ಸಂಗೀತ ಹಾಡಲು ಅವಕಾಶ ದೊರೆಯುವಂತೆ ಖ್ಯಾತರ ಸಂಗೀತ ಕೇಳುವ ಸೌಭಾಗ್ಯವೂ ಈ ಕಾಲಕ್ಕೆ ಸಿಗುವುದು.

ನನ್ನ ಸಂಗೀತ ಜೀವನದಲ್ಲಿ ಹಲವಾರು ಮಹತ್ವದ ಘಟನೆಗಳು ಜರುಗಿವೆ. ಕೆಲವನ್ನು ಮಾತ್ರ ಇಲ್ಲಿ ಹೇಳುವೆ. ಮೂರು–ನಾಲ್ಕು ವರುಷಗಳ ಹಿಂದೆ ಇಂದಿನ ಗೃಹ ಮಂತ್ರಿ ಶ್ರೀ ಯಶವಂತರಾವ ಚವ್ಹಾಣರ ನೇತೃತ್ವದಲ್ಲಿ ನನ್ನ ಸಂಗೀತ ಕಚೇರಿಯೊಂದು ಜರುಗಿತು. ಸುಮಾರು ಒಂದು ಗಂಟೆ ಕಾಲ ನಾನು ಹಾಡಿದೆ. ಆದರೆ ಶ್ರೋತೃಗಳ ಕೋರಿಕೆಯ ಮೇರೆಗೆ ಮತ್ತೆ ಒಂದು ಗಂಟೆ ನಾನು ಹಾಡಬೇಕಾಯಿತು. ಇನ್ನೊಂದು ಸಲ ಜಳಗಾಂವದಲ್ಲಿ ತುಂಬ ಸೆಕೆ ಇದ್ದುದರಿಂದ ಅಂದು ಧ್ವನಿಯೇ ಹೊರಡಲಿಲ್ಲ. ನನಗೆ ತುಂಬ ಬೇಸರವಾಯಿತು. ಅನಿವಾರ್ಯವಾಗಿ ಮರಳಿ ಬಂದೆ. ಆದರೆ ಒಂದು ವಾರದ ನಂತರ ಅಲ್ಲಿಗೆ ಹೋಗಿ ನನ್ನ ಸಂಗೀತ ಕಾರ್ಯಕ್ರಮ ಜರುಗಿಸಿದೆ. ನಾಲ್ಕೈದು ಗಂಟೆ ಕಾಲ ನಡೆದ ಈ ಕಚೇರಿಯನ್ನು ಅಲ್ಲಿಯ ಜನ ಈಗಲೂ ನೆನೆಸುತ್ತಿರುವುದು ನನಗೆ ತಿಳಿದುಬಂದಿದೆ. ಬೆಂಗಳೂರಲ್ಲಿ ಮಹಾರಾಷ್ಟ್ರ ಮಂಡಳದಲ್ಲಿ ನನ್ನ

ಸಂಗೀತ ಕಾರ್ಯಕ್ರಮವೊಂದು ಜರುಗಿತು. ತುಂಬ ಶ್ರೀಮಂತರೊಬ್ಬರು ಸ್ವಲ್ಪ ತಡವಾಗಿ ಬಂದರು. ನಾನು ಮೊದಲಿನಿಂದ ಪ್ರಾರಂಭಿಸಬೇಕಾಗುವದೇನೊ ಎಂದುಕೊಂಡೆ. ಅವರು ಹಾಗೇನೂ ಬೇಡ, ನಿಮ್ಮ ಸಂಗೀತ ಸಾಗಲಿ ಎಂದು ಹೇಳಿ ಮರುದಿನ ತಮ್ಮಲ್ಲಿಗೆ ಆಮಂತ್ರಿಸಿದರು. ಅಲ್ಲಿ ನನ್ನ ಪರೀಕ್ಷೆ ನಡೆಯುವದೆಂದು ನನಗೇನು ಗೊತ್ತು? ಪ್ರಸಿದ್ಧ ಸಂಗೀತ ಪರೀಕ್ಷಕರೊಬ್ಬರು ನನಗೆ ತಂಬೂರಿ ಸಾಥಿಯಾಗಿ ಕುಳಿತು ನನ್ನನ್ನು ಪರೀಕ್ಷೆಗೀಡುಮಾಡಿದರು. ದೇವರ ದಯೆಯಿಂದ ನಾನು ಅದರಲ್ಲಿ ಯಶಸ್ವಿಯಾದೆ. ನನ್ನ ಕಕ್ಕ ರಾಮಾಚಾರ್ ಜೋಶಿ ಅವರಂತೂ ಇದರಿಂದ ತುಂಬ ಆಶ್ಚರ್ಯಗೊಂಡರು. ಇನ್ನೊಮ್ಮೆ ಧಾರವಾಡದಲ್ಲಿ ಒಬ್ಬರು 'ಚಂದ್ರಿಕಾ' ಹಾಡುವದನ್ನು ಕೇಳಿ ನನಗೆ ಬೇಸರ ಬಂದಿತು. ಯಾಕೆ ಹೀಗೆ ಕೀಸರು ಬಾಸರು ಇಡಿಸಿದ್ದಾರೆ ಇವರು ಎಂದು ಅಂದುಕೊಂಡೆ. ಮನೆಗೆ ಹೋದೊಡನೆ ಏನಾಯಿತೊ ಏನೊ! ಅಂದು ಬೆಳತನಕ 'ಚಂದ್ರಿಕಾ ಹಿ ಜಣು' ಚೀಜನ್ನು ವಿವಿಧ ರೀತಿಯಲ್ಲಿ ಹಾಡಿದೆ. (ಬಹುಶಃ ಚಂದ್ರಿಕಾ ಭೀಮಸೇನ ಎಂದು ನನಗೆ ಹೆಸರು ಬರಲು ಈ ಘಟನೆ ಕಾರಣವಾಗಿರಬೇಕು).

ಈಚೆಗೆ ಲತಾ ಮಂಗೇಶಕರ ಅವರನ್ನು ಪುಣೆಯಲ್ಲಿ ಸತ್ಕರಿಸಲಾಯಿತಷ್ಟೆ. ನನಗೂ ಈ ಸಮಾರಂಭಕ್ಕೆ ಆಮಂತ್ರಣವಿದ್ದಿತು. ನಾನು ಹೋಗಿದ್ದೆ. ಲತಾಮಂಗೇಶಕರರಿಂದ ಯಾರೂ ಹಾಡಿಸಬಾರದೆಂದು ಸಂಘಟಕರು ಕೋರಿದ್ದರು. ಅವರೇ ನನಗೊಂದು ಭಜನ್ ಹೇಳಲು ಕೇಳಿಕೊಂಡಾಗ ಲತಾ ಅವರೂ ಹಾಡಬೇಕೆಂದು ನಾನು ತಿಳಿಸಿದೆ. ಅದಕ್ಕೆ ಲತಾ ಒಪ್ಪಿದರು. ನಾನೊಂದು ಭಜನ್ ಹಾಡಿದ ನಂತರ ಅವರೂ ಒಂದು ಭಜನೆಯನ್ನು ಹಾಡಿದರು.

ಅಫಘಾನಿಸ್ತಾನಕ್ಕೆ ಸ್ವಾತಂತ್ರ್ಯ ಉತ್ಸವ ಸಂದರ್ಭದಲ್ಲಿ ಸಾಂಸ್ಕೃತಿಕ ಶಿಷ್ಟಮಂಡಳದ ಸದಸ್ಯನಾಗಿ ನಾನು ಹೋಗಿದ್ದೆ. ಆ ಜನ ನಮ್ಮನ್ನು ತುಂಬ ಉಪಚರಿಸಿದರು. ನಮ್ಮ ಸಂಗೀತದ ಸಿರಿವಂತಿಕೆಯನ್ನು ನಾವಲ್ಲಿ ಮೆರೆದೆವು. ನಮಗೆಲ್ಲರಿಗೂ ಅದು ತುಂಬ ಸಂತೋಷವನ್ನುಂಟುಮಾಡಿತು.

ನನ್ನ ತೋಡಿ ರಾಗವನ್ನು ಕೇಳಿದ ಡೆನ್ಮಾರ್ಕದ ಚಿತ್ರನಿರ್ಮಾಪಕ ಲೂಯಿ ವ್ಯಾನ್ ಗಸ್ಟೀನ್ ಕಳೆದ ವರುಷ ಸಪ್ಟಂಬರದಲ್ಲಿ ಪುಣೆಗೆ ಬಂದು ನಾನು ತೋಡಿ ರಾಗ ಹಾಡುವುದರ ಒಂದು ವರ್ಣಚಿತ್ರವನ್ನು ತೆಗೆದುಕೊಂಡು ಹೋಗಿದ್ದಾನೆ. ಹತ್ತು ನಿಮಿಷದ ಚಿತ್ರ ಧ್ವನಿಮುದ್ರಿಕೆ ಇದು. ಇದರಲ್ಲಿ ಕಥೆ ಯಾವುದೂ ಇಲ್ಲ. ನನ್ನ ಈ ರಾಗವು ಅವನನ್ನು ಮುಗ್ಧಗೊಳಿಸಿದ್ದರಿಂದ ಅದರ ವಿಶೇಷ ಚಿತ್ರ ತೆಗೆದುಕೊಳ್ಳಬೇಕೆಂದು ಅವನು ಹಂಬಲಿಸಿದ್ದನಂತೆ.

ಇದರಿಂದ ಸಂಗೀತಕ್ಕೆ ಯಾವ ಮತಭೇದವಿಲ್ಲ, ಎಲ್ಲರನ್ನೂ ಆಕರ್ಷಿಸಬಲ್ಲುದು ಎಂದೆನಿಸಿತು. ೧೯೫೮ ರಲ್ಲಿ ಮೈಸೂರು ದಸರಾ ಉತ್ಸವದಲ್ಲಿ ನನ್ನ ಕಚೇರಿ ನಡೆದ ಸಂದರ್ಭದಲ್ಲಿಯೇ ದಿ. ಟಿ. ಚೌಡಯ್ಯ, ವಾಸುದೇವಾಚಾರ್ಯ ಅವರು "ಸಂಗೀತದಲ್ಲಿ ಭೇದವಿಲ್ಲ; ಎಲ್ಲವೂ ಒಂದೇ" ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದರು.

ನಾನು ಗುರುಗಳಲ್ಲಿ ಕಲಿತದ್ದು ಪೂರಿಯಾ, ತೋಡಿ, ಮುಲ್ತಾನಿ, ಮಿಯಾ ಮಲಹಾರ, ಭೈರವಿ ರಾಗಗಳನ್ನು ಮಾತ್ರ. ಆದರೆ ಅವರ ಅನೇಕ ರಾಗಗಳನ್ನು ಕೇಳಿದ್ದೇನೆ. ಆ ನೆನಪು ಮಾಸದೆ ಹಾಗೆ ಉಳಿದಿದೆ. ಅವರು ಅನೇಕ ನಾಟಕದ ಪದಗಳನ್ನು ಹೇಳುವದನ್ನು ಕೇಳಿ ನಾನು ಧನ್ಯನಾಗಿದ್ದೇನೆ. ಅವರ ಅಳಿಯ ಡಾ. ದೇಶಪಾಂಡೆ ಅವರು ಮೊದಲ ಸಲ ಅಳಿಯತನಕ್ಕೆಂದು ಬಂದಾಗ "ಜಾದೂ ಭರೇರಿ ಕೋನ ಅಲಬೇಲಿ, ಕೀನಾರ ರಸೀಲ್" ಗಾರಾ ಠುಮರಿಯನ್ನು ಬೇರೆ ಬೇರೆ ಭಾವನೆಯಿಂದ ಸುಂದರವಾದ ಸ್ವರಗಳ ಗುಂಫಿನಿಂದ ಹಾಡಿದ್ದನ್ನು ನಾನು ಮರೆಯಲಾರೆ. ಇನ್ನೊಮ್ಮೆ ಕಾಪ್ಸೇದಲ್ಲಿ 'ಚಂದ್ರಿಕಾ ಹೀ ಜಣು' ಪದವನ್ನು ಅವರು ಹಾಡಿದರು. ನಾನು ಅದನ್ನೆಂದಿಗೂ ಮರೆಯಲಾರೆ. ಹೀಗೆ ಗುರುಗಳ ಸಂಗೀತ ಕೇಳಿ, ಅವರ ಶಿಕ್ಷಣಕ್ಕೊಳಗಾಗಿ ನಾನು ಕಲಾತ್ಮಕ ದೃಷ್ಟಿಯೊಂದನ್ನು ಬೆಳೆಸಿಕೊಂಡು ಬಂದೆ. ಕಿರಾನಾ ಘರಾನಾದ ಪದ್ಧತಿಯನ್ನು 'ನನ್ನತನ' ತುಂಬಿ ಬೆಳೆಸಿಕೊಂಡು ಬರುವ ಬಗೆಯನ್ನು ಅರಿತುಕೊಂಡೆ. ಅವರಿಂದಾಗಿಯೇ ನನ್ನ ಸಂಗೀತಕ್ಕೆ ಈ ಗುಣವಿಶೇಷವೊಂದು ದೊರೆಯಿತು.

ದಿವಂಗತ ಕೆರೂರ ವಾಸುದೇವಾಚಾರ್ಯರ ಸಂಗೀತ ನಾಟಕ 'ನಳದಮಯಂತಿ'ಗೆ ಸಂಗೀತ ಜೋಡಿಸಿದ ಮಾತು ಹೇಳದೆ ನನ್ನ ಈ ವಿವರಣೆ ಅಪೂರ್ಣವೆನಿಸುವುದು. ಅದು ತುಂಬ ಯಶಸ್ವಿಯಾಗಿ ಬಾಗಲಕೋಟೆ, ಧಾರವಾಡ, ಹುಬ್ಬಳ್ಳಿಗಳಲ್ಲಿ ಪ್ರಯೋಗವಾಗಿ ನನ್ನ ಮನಸ್ಸಿಗೆ ಸಮಾಧಾನ ತಂದಿತು. ಸಂಗೀತವನ್ನು ನಾನು ಹಾಡುವಂತೆ ಸಂಗೀತ ದಿಗ್ದರ್ಶಕನಾಗಿಯೂ ಕೆಲಸ ಮಾಡಬಲ್ಲೆ ಎನಿಸಿತು. ಸಂಧ್ಯಾರಾಗ (ಕನ್ನಡ), ಬಸಂತ ಬಹಾರ (ಹಿಂದಿ) ಮತ್ತು ಹಲವಾರು ಮರಾಠಿ ಸಿನೇಮಾಗಳಲ್ಲಿ ಶಾಸ್ತ್ರೀಯ ಸಂಗೀತವನ್ನು ಆಧರಿಸಿದ ಗೀತಗಳಿಗೆ ಹಿನ್ನೆಲೆ ಸಂಗೀತವನ್ನು ನಾನು ನೀಡಿದ್ದೇನೆ. ಇದೀಗ ತಾನಸೇನ ಮರಾಠಿ ನಾಟಕದ ಸಂಗೀತ ದಿಗ್ದರ್ಶನದ ಹೊಣೆಯನ್ನು ವಹಿಸಿಕೊಂಡಿದ್ದೇನೆ. ಇದಕ್ಕೆ ಕಾರಣ ಸಿನೇಮಾ ಸಂಗೀತದಿಂದ ಶಾಸ್ತ್ರೀಯ ಸಂಗೀತದ ಮೇಲೆ ದುಷ್ಪರಿಣಾಮವಾಗಿಲ್ಲವೆಂದು ನನ್ನ ಅಭಿಪ್ರಾಯ. ತದ್ವಿರುದ್ಧ ಸಿನೇಮಾ ಸಂಗೀತವು ಶಾಸ್ತ್ರೀಯ ಸಂಗೀತದ ಪ್ರಚಾರಕ್ಕೆ ಹೆಚ್ಚು ಆಸ್ಪದ ಮಾಡಿಕೊಟ್ಟಿದೆ. ಯಾವುದೆ ಸಂಗೀತಕ್ಕಾದರೂ ಶಾಸ್ತ್ರೀಯ ಸಂಗೀತವೆ ಮೂಲವಲ್ಲವೆ?

ಸಂಗೀತ ಇಂದು ಜನತೆಗೆ ತಲುಪಿದೆ. ಜನ ಮೊದಲಿಗಿಂತ ಹೆಚ್ಚು ಅದನ್ನು ಮೆಚ್ಚತೊಡಗಿದೆ. ನಾವು ಸಂಗೀತಗಾರರೂ ಜನರಲ್ಲಿ ಸಂಗೀತಾಭಿರುಚಿಯನ್ನು ಬೆಳೆಸುತ್ತ ಹೋಗಬೇಕು. ಇದು ಸಾವಕಾಶವಾಗಿ ಆಗಬೇಕಾದ ಕೆಲಸ. ಅದನ್ನು ಸರಿಯಾಗಿ ನಾವು ನಡೆಯಿಸಿಕೊಂಡು ಬರಬೇಕು.



ಸಂಗೀತ ಸರಸ್ವತಿಯ ಆರಾಧನೆಯಲ್ಲಿ

ನನ್ನ ಸಂಗೀತಜೀವನದ ಕುರಿತು ಕೆಲವೊಂದು ಮಾತುಗಳನ್ನು ನಾನಿಲ್ಲಿ ಹೇಳಿದ್ದೇನೆ. ಆದರೆ ನಾನು ಕಲಿಯುವುದು ಮುಗಿದಿದೆಂದು ಭಾವಿಸುವದಿಲ್ಲ. ಜಗತ್ತಿನ ವಿವಿಧ ಸಂಗೀತ ಪದ್ಧತಿಗಳನ್ನು ಅಭ್ಯಸಿಸಬೇಕೆಂಬ ಬಲವಾದ ಇಚ್ಛೆ ನನಗಿದೆ. ನನ್ನ ಪ್ರತಿಯೊಂದು ಸಂಗೀತ ಕಾರ್ಯಕ್ರಮದಲ್ಲಿಯೂ ಹೊಸತನ್ನು ಅಭಿವ್ಯಕ್ತಪಡಿಸಬೇಕೆಂಬ ಅಪೇಕ್ಷೆ ನನ್ನದು. ಆ ರೀತಿ ನಡೆದು ಶ್ರೋತೃಗಳನ್ನು ನಾನು ಮೆಚ್ಚಿಸುತ್ತ ಬಂದಿದ್ದೇನೆ. ಅದೇ ನನಗೊಂದು ಸಮಾಧಾನದ ಸಂಗತಿ.

ನನ್ನ ಸಂಗೀತಜೀವನದ ಈ ಯಶಸ್ಸಿಗೆ ನನ್ನ ಸಂಗೀತವಿದುಷಿ ಪತ್ನಿ ವತ್ಸಲಾಳ ಸಹಾಯ-ಸಹಕಾರಗಳೇ ಮುಖ್ಯಕಾರಣ. ಮನೆಯಲ್ಲಿ ಯೋಗ್ಯ ಸಂಗೀತ ವಾತಾವರಣ ನನಗೆ ದೊರೆವುದರಿಂದ ನಾನು ಈ ಸಂಗೀತ ಸಾಧನೆಯಲ್ಲಿ ಪ್ರಗತಿ ಸಾಧಿಸಲು ಮುನ್ನಡೆಯಲು ಸಹಾಯಕವಾಗಿದೆ. ಅದೇ ರೀತಿ ನನ್ನ ತಂದೆ ಗುರಾಚಾರ್ಯ ಜೋಶಿ, ಕಕ್ಕ ರಾಮಾಚಾರ್ಯ ಜೋಶಿ ಮತ್ತಿತರರು ಅನೇಕ ರೀತಿಯಲ್ಲಿ ನನ್ನ ಸಂಗೀತಜೀವನ ಸುಗಮ ರೀತಿಯಲ್ಲಿ ಸಾಗಲು ಸಹಾಯ ಸಲ್ಲಿಸಿದ್ದಾರೆ-ಸಂಗೀತ ನನ್ನ ಜೀವನದುಸಿರಾಗುವಂತೆ ಮಾಡಿದ್ದಾರೆ. ಅವರಿಗೆಲ್ಲ ಹೆಚ್ಚಾಗಿ ನನ್ನ ಶ್ರೋತೃವರ್ಗಕ್ಕೆಲ್ಲ ನಾನು ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.



# ಸಂಗೀತವೇ ನನ್ನ ಪ್ರಾಣ

* ದೊರೆಸ್ವಾಮಿ ಅಯ್ಯಂಗಾರ

ನಾನು ಬಿ. ಎ. ಪದವೀಧರನಾಗಬೇಕು, ಸರಕಾರಿ ಉದ್ಯೋಗದಲ್ಲಿರಬೇಕು ಎಂಬ ಹಂಬಲ ನನ್ನ ತಾಯಿ ತಂದೆಯರಿಗೆ ಇರಲಿಲ್ಲ; ನನ್ನ ಗುರುಗಳಿಗಂತೂ ಮೊದಲೇ ಇರಲಿಲ್ಲ. ಸಂಗೀತ ಕಲಿಯಬೇಕು. ಸಂಗೀತಗಾರನಾಗಬೇಕು–ಅದರಲ್ಲೂ ವೈಣಿಕನಾಗಬೇಕು ಎಂಬುದೇ ಎಲ್ಲರ ಆಸೆ. ಅದಕ್ಕೆ ತಕ್ಕ ವಾತಾವರಣವೂ ಇದ್ದಿತು.

ನಾನು ಹುಟ್ಟಿ ಬೆಳೆದ ಊರು ಮೈಸೂರು. ನಮ್ಮ ರಾಜ್ಯದಲ್ಲಿ ಮೈಸೂರು ಸಂಗೀತದ ತವರುಮನೆಯಾಗಿದ್ದ ಕಾಲ. ಮಹಾರಾಜರು ಸ್ವತಃ ಸಂಗೀತದ ಮೇಲೆ ಅಪಾರ ಅಭಿಮಾನ ಇಟ್ಟು ಸಂಗೀತಗಾರರಿಗೆ ವಿಶೇಷ ಪ್ರೋತ್ಸಾಹ ಕೊಡುತ್ತಿದ್ದ ಕಾಲ. ದಕ್ಷಿಣ ಭಾರತದ ಪ್ರಖ್ಯಾತ ವಿದ್ವಾಂಸರು ಮಾತ್ರವಲ್ಲ ಉತ್ತರ ದೇಶದ ಸಂಗೀತಗಾರರೂ ಅರಮನೆಗೆ ಬರುತ್ತಿದ್ದರು. ಮಹಾರಾಜರ ಮುಂದೆ ಹಾಡಿ 'ಸೈ' ಎನಿಸಿಕೊಳ್ಳುವುದೆಂದರೆ ಸಾಮಾನ್ಯದ ಮಾತಾಗಿರಲಿಲ್ಲ. ಆಸ್ಥಾನದಲ್ಲಿದ್ದ ಪ್ರಮುಖ ವಿದ್ವಾಂಸರಲ್ಲಿ ನಮ್ಮ ಗುರುಗಳಾದ ವೀಣೆ ವೆಂಕಟಗಿರಿಯಪ್ಪನವರೂ ಒಬ್ಬರು. ನಮ್ಮ ತಂದೆಯವರೂ ಆಸ್ಥಾನ ವಿದ್ವಾಂಸರಾಗಿದ್ದರು.

ನನ್ನ ಶಿಷ್ಯನನ್ನು ಮಹಾಸ್ವಾಮಿಗಳ ಸಮ್ಮುಖದಲ್ಲಿ ವೀಣೆ ನುಡಿಸುವಂತೆ ಮಾಡಬೇಕು ಎಂಬ ಬಯಕೆ ನಮ್ಮ ಗುರುಗಳಿಗೆ; ನನ್ನ ಮಗನೂ ಅರಮನೆಯಲ್ಲಿ ವೀಣೆ ನುಡಿಸಿಯಾನೆ ಎಂಬ ಆಕಾಂಕ್ಷೆ ನಮ್ಮ ತಂದೆಯವರಿಗೆ. ಇವರಿಬ್ಬರ ಈ ಆಸೆ–ಆಕಾಂಕ್ಷೆಯನ್ನು ಈಡೇರಿಸುವುದು ನನ್ನ ಪಾಲಿಗೆ ಬಂದ ಕರ್ತವ್ಯವಾಗಿದ್ದಿತು.

೧೯೨೦ರಲ್ಲಿ ನಾನು ನಮ್ಮ ತಾಯಿ ತಂದೆಯರಿಗೆ ಹಿರಿಯ ಮಗನಾಗಿ ಹುಟ್ಟಿದೆ. ಮನೆಯಲ್ಲಿ ಸಂಗೀತದ ವಾತಾವರಣ.. ನಮ್ಮ ತಾಯಿಗೂ ಸಂಗೀತದ ಮೇಲೆ ಅಮಿತವಾದ ಆಸಕ್ತಿ. ಶಾಸ್ತ್ರೋಕ್ತವಾದ ಸಂಗೀತ ಕಲಿತಿದ್ದರು ಎನ್ನಲು ಆಗದು; ಆದರೆ ಸಂಪ್ರದಾಯದ ಹಾಡುಗಳನ್ನು ಮಧುರವಾಗಿ, ಭಾವಪೂರ್ಣವಾಗಿ ಅನುಭವಿಸಿ ಹಾಡುತ್ತಿದ್ದರು. ತಂದೆಯವರು ಕೊಳಲು ವಿದ್ವಾಂಸರೂ ಆಗಿದ್ದರು. ಚಿಕ್ಕಂದಿನಲ್ಲೇ ಬಾಲ್ಯಪಾಠ ಪ್ರಾರಂಭವಾಯಿತು. ಹಾಡುವುದನ್ನು ಕಲಿತೆ. ೮ನೇ ವಯಸ್ಸಿನಲ್ಲೆ ವೀಣೆ ಕಲಿಯುವುದಕ್ಕೆ ಪ್ರಾರಂಭಿಸಿದೆ. ವೀಣೆಯ ಮೇಲೆ ದಿನೇ ದಿನೇ ಆಸಕ್ತಿ ಹೆಚ್ಚಿತು ನನಗೆ. ೧೪–೧೫ ವರ್ಷದ ತನಕ ಹಾಡುತ್ತಲೂ ಜತೆಗೆ ವೀಣೆ ನುಡಿಸುತ್ತಲೂ ಇದ್ದೆ.

ನನ್ನ ೮ನೇ ವಯಸ್ಸಿನಲ್ಲಿಯೇ ನಮ್ಮ ತಂದೆಯವರು ಖ್ಯಾತ ವಿದ್ವಾಂಸರಾದ ಶ್ರೀ ವೆಂಕಟಗಿರಿಯಪ್ಪನವರ ಬಳಿ ಕಳುಹಿಸಿದರು. ನನ್ನ ಮೇಲೆ ಅಪಾರ ಅಭಿಮಾನ ಅವರಿಗೆ. ತಾವು ಕಲಿತಿರುವುದನ್ನೆಲ್ಲ ನನಗೆ ಕಲಿಸಿಬಿಡಬೇಕು, ಅರಮನೆಯಲ್ಲಿ ಮಹಾರಾಜರ ಸಮ್ಮುಖದಲ್ಲಿ ನಾನು ವೀಣೆ ನುಡಿಸಬೇಕು; ಪ್ರಭುಗಳಿಂದ 'ಸೈ' ಎನಿಸಿಕೊಳ್ಳಬೇಕು ಎಂಬುದು ಅವರ ಮಹದಾಕಾಂಕ್ಷೆ. ಅದು ದೇವರ ದಯೆಯಿಂದ ಈಡೇರಿತು.

೧೯೩೩. ಮಹಾರಾಜರ ಮುಂದೆ ನನ್ನ ವೀಣಾವಾದನ ಆಯಿತು. ಆಗ ನನಗೆ ೧೪–೧೫ ವರ್ಷ. ಮೆಚ್ಚಿಗೆಯೂ ಬಂದಿತು. "ವೆಂಕಟ–ಗಿರಿಯಪ್ಪನವರೇ, ಹುಡುಗ ಪರವಾಗಿಲ್ಲ... ಚೆನ್ನಾಗಿ ತಯಾರು ಮಾಡಿದೀರಿ. ಇನ್ನೂ ಚೆನ್ನಾಗಿ ತಯಾರು ಮಾಡಿ" ಎಂದು ಬಾಯಿ ತುಂಬ ಹೊಗಳಿದರು, ಮಹಾರಾಜರು. ನಮ್ಮ ಗುರುಗಳಿಗೆ ಆದ ಆನಂದ ಅಷ್ಟಿಷ್ಟಲ್ಲ... (ಇದಕ್ಕೆ ಮೊದಲು ೧೫ ದಿನ ನನ್ನನ್ನು ಒಂದೇ ಸಮನೆ ಅರೆದುಬಿಟ್ಟಿದ್ದರು!) ಹಿರಿಹಿರಿ ಹಿಗ್ಗಿದರು. ಅಂದಿನಿಂದ ಇನ್ನೂ ಹೆಚ್ಚೆಚ್ಚು ಕಾಲ ನನಗೆ ಹೇಳಿಕೊಟ್ಟರು. ತಾವು ಹೋಗುತ್ತಿದ್ದ ಕಚೇರಿಗಳಿಗೆಲ್ಲ ನನ್ನನ್ನೂ ಕರೆದುಕೊಂಡು ಹೋಗಲು ಪ್ರಾರಂಭಿಸಿದರು. ವೇದಿಕೆ ಹತ್ತಿಸಿದರು. ಜತೆ ಜತೆಯಲ್ಲೇ ವೀಣೆ ನುಡಿಸು ಎಂದು ಹೇಳಿ, ಅವಕಾಶ ಕೊಡುತ್ತಿದ್ದರು... ನಡು ನಡುವೆ ಪ್ರೋತ್ಸಾಹಿಸುತ್ತಿದ್ದರು ಅವನ್ನೆಲ್ಲ... ಇಂದು ನೆನೆಸಿಕೊಂಡರೇ ನನ್ನ

ಪತ್ನಿ, ಮಕ್ಕಳೊಂದಿಗೆ





ಸ್ವರ ಪ್ರಸ್ತಾವನೆ ಹಾಕುವಾಗ

ಮೈ ನವಿರೇಳುತ್ತದೆ; ಕಣ್ಣು ತೇವವಾಗುತ್ತದೆ. ಯಾವ ಜನ್ಮದಲ್ಲಿ ಅದೆಷ್ಟು ಪುಣ್ಯ ಮಾಡಿದ್ದೇನೋ ನಾನು; ಅಂಥ ಮಹಾನುಭಾವರು ನನಗೆ ಗುರುಗಳಾಗಿ ಲಭಿಸಿದರು.

ತನ್ಮಧ್ಯೆ ನನ್ನ ಶಾಲಾ-ಕಾಲೇಜು ವ್ಯಾಸಂಗವೂ ಕುಂಟುತ್ತ ಎಡವುತ್ತ ಸಾಗುತ್ತಿತ್ತು! ನನಗೆ ಶ್ರದ್ಧೆ-ಆಸಕ್ತಿ ಇರಲಿಲ್ಲ. ಎಸ್. ಎಸ್. ಎಲ್. ಸಿ. ಯಲ್ಲಿ ಮೊದಲು ಸಾರಿಗೆ ಪಾಸಾಗಲಿಲ್ಲ. ಮನೆಯವರಿಗೆಲ್ಲ ದುಃಖವಾದರೂ ನನಗೆ ಮಾತ್ರ ಫಲಿತಾಂಶ ನೋಡಿ ಸಂತೋಷವಾಯಿತು. ಈಗಲಾದರೂ 'ಓದುವುದು ಸಾಕು ಎನ್ನುತ್ತಾರೆ' ಎಂದುಕೊಂಡಿದ್ದೆ. ಪುನಃ ಕಟ್ಟುವಂತೆ ಹೇಳಿದರು. ಪಾಸಾಗಿಬಿಟ್ಟೆ. ಪುನಃ ಇಂಟರ್‌ನಲ್ಲಿ ಪಲ್ಟಿ ಹೊಡೆದೆ. ಈಗಲಾದರೂ 'ಇಲ್ಲಿಗೆ ಸಾಕು' ಎನ್ನುತ್ತಾರೋ ಎಂದಿದ್ದೆ. ಊಹೂಂ....ಪುನಃ ಕಟ್ಟಿದೆ, ಪಾಸಾದೆ. ಬಿ.ಎ. ಗೆ ಹೋದೆ. ಇದಕ್ಕೆ ಕಾರಣ ನನ್ನ ತಂದೆಯವರ ಸ್ನೇಹಿತರು. ಬಂಧುಗಳು. "ಸಂಗೀತಗಾರನಾದರೇನು, ಒಂದು ಸ್ಕೂಲ್ ಫೈನಲ್ ಆದರೂ ಆಗಿರಬೇಕು ಸ್ವಾಮಿ ನಿಮ್ಮ ಮಗ" ಎಂದು ಅವರ ಬಂಧುಗಳು ಬಂದು ಒತ್ತಾಯಪಡಿಸುತ್ತಿದ್ದರು. ನನಗೋ ಸ್ವಲ್ಪವೂ ಇಷ್ಟವಿರಲಿಲ್ಲ. ಸಂಗೀತದ ಹುಚ್ಚು ಹಿಡಿದಿತ್ತು. ಅಂತೂ ಬಿ. ಎ. ಪಾಸು ಮಾಡಿದೆ. ಆ ಪದವಿಯಿಂದ ನನಗೆ ಯಾವ ವಿಧದ ಪ್ರಯೋಜನವೂ ಇಲ್ಲವಾದರೂ ನಷ್ಟವೇನೂ ಇಲ್ಲ !!

ಆಗಿನ ಕಾಲದ ಗುರು-ಶಿಷ್ಯ ಸಂಬಂಧ ಈಗ ಇಲ್ಲ ಸ್ವಾಮಿ. ನನ್ನ ಗುರುಗಳು ಬಿಡಿಗಾಸು ತೆಗೆದುಕೊಳ್ಳುತ್ತಿರಲಿಲ್ಲ. "ನನ್ನ ಕಣ್ಣೆದುರಿನಲ್ಲೇ ನನ್ನ ಶಿಷ್ಯ ದೊರೆಸ್ವಾಮಿ ಖ್ಯಾತಿಯ ಶಿಖರವೇರಬೇಕು...." ಇದೊಂದೇ ಅವರ ಧ್ಯೇಯವಾಗಿದ್ದಿತು. ಈಗ ಅಂಥ ಗುರುಗಳು ಎಲ್ಲಿದಾರೆ? ನನಗೇ ಕೆಲವರು ಶಿಷ್ಯರಿದ್ದಾರೆ. ನಮ್ಮ ಗುರುಗಳ ಹಾಗೆ ನಾನಿಲ್ಲ....ಅಲ್ಲದೆ ಸಂಗೀತದ ದಾಹ ಇರುವಂಥ ಶಿಷ್ಯರೂ ಅಷ್ಟಾಗಿಲ್ಲ....

೧೯೫೧ರಲ್ಲಿ ನಮ್ಮ ಗುರುಗಳು ದೇವರ ಸನ್ನಿಧಿಗೆ ಹೋದರು. ಬಹಳ ದಿನ ನಾನು 'ತಬ್ಬಲಿ'ಯಂತೆ ಇದ್ದೆ. ನಮ್ಮ ತಾಯಿ ತಂದೆಯರು ಬಹಳ ಸಮಾಧಾನ ಮಾಡುತ್ತಿದ್ದರು. ಜೀವನವೇ ಶೂನ್ಯವಾಗಿರುವಂತೆ ನನಗನಿಸುತ್ತಿತ್ತು. ಅಷ್ಟು ಪ್ರಭಾವ ಬೀರಿದ್ದಾರೆ ನನ್ನ ಗುರುಗಳು ನನ್ನ ಮೇಲೆ.

ಕಂಚಿ ಕಾಮಕೋಟಿ ಜಗದ್ಗುರುಗಳ ದರ್ಶನ ಮಾಡಿಸಿ ಆಶೀರ್ವಾದ ತೆಗೆಸಿ ಕೊಟ್ಟರು. ೩೦ ವರ್ಷಗಳಾದವು. ಇಂದಿಗೂ ಕಣ್ಣಮುಂದೆ ನಿಲ್ಲುತ್ತದೆ ಆ ಚಿತ್ರ. ನಮ್ಮ ಗುರುಗಳು ಅನೇಕ ಸಾರಿ ಜಗದ್ಗುರುಗಳ ಸಮ್ಮುಖದಲ್ಲಿ ವೀಣೆ ನುಡಿಸಿ ಮೆಚ್ಚಿಕೆ ಗಳಿಸಿದ್ದರು. ೧೯೩೮ರಲ್ಲಿ ನನ್ನನ್ನೂ ಕರೆದುಕೊಂಡು ಹೋದರು. "ನಿನ್ನ ವೀಣಾವಾದನ ಆಗಲಿ" ಅಂದರು ಸ್ವಾಮಿಗಳು. ಆದರೆ ಗುರುಗಳು, "ತಮ್ಮ ಆಶೀರ್ವಾದ ನನಗೆ ಯಥೇಷ್ಟವಾಗಿ ಆಗಿದೆ; ನಮ್ಮ ಈ ಶಿಷ್ಯನಿಗೆ ಆಗಬೇಕು; ಇವನ ಮೇಲೆ ಸ್ವಾಮಿಗಳ ಕೃಪಾದೃಷ್ಟಿ ಬೀಳಬೇಕು" ಅಂದರು. ನಾನು ನುಡಿಸಿದೆ. ಸ್ವಾಮಿಗಳು ಬಹಳ ಸಂತೋಷಪಟ್ಟು, ಬಾಯಿತುಂಬ ಹರಸಿದರು. ಪೀತಾಂಬರ ಹೊದಿಸಿದರು.

ಆಕಾಶವಾಣಿಗೂ ಸಹ ನನ್ನ ಗುರುಗಳೇ ಪರಿಚಯ ಮಾಡಿಕೊಟ್ಟರು. ೧೯೩೪-೩೫ರಲ್ಲೆ ಮೈಸೂರಿನಲ್ಲಿ ಗೋಪಾಲಸ್ವಾಮಿಯವರ 'ಆಕಾಶವಾಣಿ'ಯಲ್ಲಿ ನುಡಿಸಿದ್ದೇನೆ.

ತಿರುಚಿರಪಳ್ಳಿ ಆಕಾಶವಾಣಿ ಕೇಂದ್ರದಿಂದ ೧೯೩೯ರಲ್ಲಿ ಮೊದಲ ಬಾರಿಗೆ ನನ್ನ ವೀಣಾವಾದನ ಪ್ರಸಾರವಾಯಿತು. ಹಿಂದಿನ ದಿನ ನಮ್ಮ ಗುರುಗಳದು; ಮರುದಿನ ನನ್ನದು-ಹೀಗೆ ಪ್ರೋಗ್ರಾಂ ಇಟ್ಟಿದ್ದರು.

ವೀಣೆಯೊಂದಿಗೆ





ಅಭ್ಯಾಸದಲ್ಲಿ ತೊಡಗಿದಾಗ

೧೯೫೨ರಲ್ಲಿ ದೆಹಲಿ ಆಕಾಶವಾಣಿಯವರು (ಆಗ ಕೇಸ್ಕರರು ಇದ್ದರು) ಅಖಿಲ ಭಾರತ ಸಂಗೀತ ಕಚೇರಿ ಪ್ರಸಾರ ಕಾರ್ಯಕ್ರಮ ಪ್ರಾರಂಭಿಸಿದರು. ನನಗೆ ೫ ಅಥವಾ ೬ನೆಯ ಅವಕಾಶ ಸಿಕ್ಕಿತು. ವಾದ್ಯ ಕಚೇರಿಗಳಲ್ಲಿ ನನ್ನದೆ ಮೊದಲನೆಯದು ಎಂದು ನೆನಪು....

ದೆಹಲಿ, ಮದರಾಸು, ಮುಂಬಯಿ, ಕಾನ್ಪುರ, ತಿರುಚಿ, ಕಲ್ಕತ್ತ, ಕೇರಳ, ಗ್ವಾಲಿಯರ್, ಆಂಧ್ರ ಮೊದಲಾದ ಅನೇಕ ಕಡೆಗಳಲ್ಲಿ ಆಗಾಗ್ಗ ಕಚೇರಿಗೆ ಹೋಗುತ್ತೇನೆ. ಈಗ ಬೆಂಗಳೂರು ಆಕಾಶವಾಣಿಯ ಸಂಗೀತ ವಿಭಾಗದಲ್ಲಿ ಇದ್ದೇನೆ.

ಒಳ್ಳೆ ಇಬ್ಬರು ಶಿಷ್ಯರು–ಸಂಗೀತ ಕಲಿಯಬೇಕು ಎಂಬ ಆಸೆ ಇರುವವರು ಸಿಕ್ಕರೆ ಹೇಳಿಕೊಡಬೇಕು; ಉಚಿತವಾಗಿಯೇ ಹೇಳಿಕೊಡಬೇಕು ಎಂಬ ಹಂಬಲ ಇದೆ. ಹಾಗೆ ಮಾಡಿದರೆ ನಮ್ಮ ಗುರುಋಣವನ್ನೂ ತಕ್ಕಮಟ್ಟಿಗೆ ತೀರಿಸಿದಂತಾಗುತ್ತದೆ....ಸಂಗೀತ ಕಲಿಯುವುದಕ್ಕೆ, ಈ ಕಲಯಲ್ಲಿ ಸಾಕಷ್ಟು ಪಾಂಡಿತ್ಯ ಗಳಿಸುವುದಕ್ಕೆ ಕೆಲ ಮುಖ್ಯ ಅಂಶಗಳು ಪೂರ್ತಿಯಾಗಬೇಕಾದುದು ಅವಶ್ಯಕ.

ಒಳ್ಳೆಯ ವಾತಾವರಣ, ಸನ್ನಿವೇಶ–ಮನೆಯಲ್ಲಿ, ಹೊರಗೆ ಇರಬೇಕು. ಮನೆಯಲ್ಲಿ ಸಾಮಾನ್ಯವಾಗಿ ಎಲ್ಲರಿಗೂ ಸಂಗೀತದ ಮೇಲೆ ಅಭಿರುಚಿ ಅಥವಾ ಅಭಿಮಾನವಾದರೂ ಇರಬೇಕು.

ನಮ್ಮ ತಂದೆಯವರು ಸ್ವತಃ ಸಂಗೀತಗಾರರು. ತಾಯಿಯಿಂದ ಚಿಕ್ಕಂದಿನಿಂದ ಸಂಪ್ರದಾಯದ ಹಾಡುಗಳನ್ನು ಹಾಡುತ್ತಿದ್ದರು. ಹಿರಿಯ ಮಗನಾದ ನನಗೆ ಸಂಗೀತವೇ ಪ್ರಾಣ ಆಯಿತು. ಇಂದಿಗೂ, ನಮ್ಮ ತಂದೆಗೆ ೮೧ ವರ್ಷ, ತಾಯಿಗೆ ೬೬ ವರ್ಷ–ಮನೆಯಲ್ಲಿ ಸದಾ ಸಂಗೀತ ಇರಬೇಕು ಅವರುಗಳಿಗೆ. ನನ್ನ ತಮ್ಮ ದೇಶಿಕಾಚಾರ್, ಕೊಳಲು ಅಭ್ಯಾಸ ಮಾಡಿದಾನೆ. ಇನ್ನೊಬ್ಬ ತಮ್ಮ ಶ್ರೀನಿವಾಸಯ್ಯಂಗಾರ್ ಬಿ. ಎಸ್‌ಸಿ., ಬಿ. ಇಡಿ. ಮಾಡಿಕೊಂಡು ಮೇಸ್ಟ್ರಾಗಿದಾನೆ. ಪಿಟೀಲು ಅಭ್ಯಾಸ ಮಾಡಿದಾನೆ. ಇಬ್ಬರು ತಂಗಿಯರು ಇದಾರೆ. ಅವರೂ ಹಾಡುತ್ತಾರೆ. ಹೀಗೆ ಮನೆಯಲ್ಲಿ ಹಾಡುಗಾರಿಕೆ, ವೀಣೆ, ಪಿಟೀಲು, ಕೊಳಲು ಎಲ್ಲಾ ಇದೆ. ವಿದ್ವಾಂಸರುಗಳ ಸಂಗೀತವನ್ನು ತಪ್ಪದೆ ಕೇಳಬೇಕು, ತುಂಬಾ ಸಾಧನೆ ಮಾಡಬೇಕು. ಮನೆಯಲ್ಲೂ ಮಕ್ಕಳಿಗೆ ಸಂಗೀತದ ಗಂಧ ಇದೆ. ನನ್ನದು ಮಿತ ಕುಟುಂಬ. ಮೂರು ಗಂಡು ಒಂದು ಹೆಣ್ಣು. ಇವರಲ್ಲಿ ಒಬ್ಬನನ್ನಾದರೂ ನನ್ನ ದಾರಿಗೆ ಎಳೆದುಕೊಳ್ಳಬೇಕು ಎಂದಿದ್ದೇನೆ. ಪರಂಪರಾನುಗತವಾದ ಈ ವಿದ್ಯೆ ಮುಂದೆ ಮುಂದೆ ಸಾಗುತ್ತ ಇರಬೇಕು.

ಎಲ್ಲಕ್ಕಿಂತ ಮುಖ್ಯವಾಗಿ ದೈವಾನುಗ್ರಹ, ಹಿರಿಯರ ಆಶೀರ್ವಾದಬೇಕು. ನಮ್ಮ ರಾಜ್ಯದಲ್ಲಿ ಈ ಕಲೆ ಬೆಳಗಬೇಕು. ಹಿಂದೆ ಪಡೆದಿದ್ದ ಉನ್ನತ ಸ್ಥಾನವನ್ನೇ ಪಡೆಯಬೇಕು. ಇದಕ್ಕಾಗಿ ನನ್ನ ಕೈಲಾದ ಸೇವೆ ಸಲ್ಲಿಸಬೇಕು ಎಂಬುದೇ ನನ್ನ ಆಸೆ........



# ಕಾನೂನು ಮತ್ತು ಸಮಾಜ ಸುಧಾರಣೆ

ಎಸ್. ಎಸ್. ಪಾಟೀಲ

ತತ್ಕಾಲೀನ ಸಮಾಜದ ಭದ್ರತೆಯ ದರ್ಶಕವೆಂದರೆ ಆ ದೇಶದ ಕಾನೂನಿನ ಪರಿಸ್ಥಿತಿಯೆಂದು ಧಾರಾಳವಾಗಿ ಹೇಳಬಹುದು. ಕಾನೂನಿನ ಸರ್ವಪ್ರಥಮ ಉದ್ದೇಶವೆಂದರೆ ಸಮಾಜದಲ್ಲಿಯ ಭದ್ರತೆಯನ್ನು ಕಾಯುವದು ಮತ್ತು ಸಮಾಜದಲ್ಲಿ ಶಾಂತಿ–ಸುವ್ಯವಸ್ಥೆಗಳು ನೆಲೆಸುವಂತೆ ಮಾಡುವದು. ಯಾವದೇ ಕಾಲಕ್ಕೆ ಕಾನೂನಿನ ಉದ್ದೇಶಗಳೇ ಇವು ಆಗಿವೆ. ಕಾನೂನಿನ ವ್ಯಾಖ್ಯೆಯು ಜಡವಾದುದು. ಎಲ್ಲರಿಗೂ ಸಮ್ಮತವಾಗುವಂಥ ವ್ಯಾಖ್ಯೆಯು ಇನ್ನೂವರೆಗೂ ಸಿಕ್ಕಿಲ್ಲ. ದಾರ್ಶನಿಕರು ಕರೆಯುವಂಥ ಸಹಜ ಕಾನೂನಾಗಲಿ ಅಥವಾ ದೇವರ ಶಾಶ್ವತ ಕಾನೂನಾಗಲಿ ಬೇರೆ ವಿಧಿ–ನಿಯಮಗಳಿಗೆ ಸಂಬಂಧಪಟ್ಟವು. ಕಾನೂನಿನ ಸರ್ವ ಸಾಮಾನ್ಯ ಅರ್ಥದಲ್ಲಿ ಅಂದರೆ ದೇಶದಲ್ಲಿಯ ಶಾಸಕರು ಸಮಾಜದ ಹಿತದ ಸಲುವಾಗಿ ಮಾಡಿದ ಕಾನೂನುಗಳನ್ನು ಇಲ್ಲಿ ಪರಿಶೀಲಿಸಲು ಅಡ್ಡಿ ಇಲ್ಲ.

ಕಾನೂನನ್ನು ಮಾಡುವದು ಜನ–ಸಾಮಾನ್ಯರ ಹಿತಕ್ಕಾಗಿ. ಕಾನೂನು ಇಲ್ಲವಾದರೆ ಯಾವ ಪರಿಸ್ಥಿತಿಯು ಇಲ್ಲಿ ತೋರಬಹುದೆಂದು ಕಲ್ಪಿಸಿ ನೋಡಿದರೆ ಸಾಕು– ಅನುಭವಿಸಬೇಕಾದ ಅವಶ್ಯಕತೆ ಇಲ್ಲ. ಕಾನೂನನ್ನು ಮಾಡುವಾಗ ಬಡವರು–ಬಲ್ಲಿದರೆಂದು ಭೇದಭಾವವನ್ನು ಲಕ್ಷ್ಯದಲ್ಲಿಟ್ಟುಕೊಳ್ಳುವದಿಲ್ಲ. ಅಥವಾ ವಿಶಿಷ್ಟ ಪರಿಸ್ಥಿತಿಯ ಸಲುವಾಗಿ ಕಾನೂನನ್ನು ಮಾಡುವದಿಲ್ಲ. ಎಲ್ಲ ಕಾಲಕ್ಕೆ ಎಲ್ಲ ಪರಿಸ್ಥಿತಿಗಳಲ್ಲಿ ಎಲ್ಲರಿಗೂ ಕಾನೂನು ಅನ್ವಯಿಸುತ್ತದೆ. ಅಪವಾದಗಳು ಕಡಿಮೆ. ಕಾನೂನಿನ ಸರ್ವವ್ಯಾಪಕ ಶಕ್ತಿಗೆ ಮೊರೆ ಹೋಗಲೇಬೇಕು. ಸಮಾಜ ಮತ್ತು ಕಾನೂನಿನ ಸಂಬಂಧವೆಂದರೆ ಸಮಾಜವು ವ್ಯವಸ್ಥಿತವಾಗಿ ಸರಳವಾಗಿ ನಡೆಯುವಂತೆ ಅನುಕೂಲ ಮಾಡಿಕೊಡುವದರ ಸಲುವಾಗಿ ಮಾಡಿದಂಥ ಕೆಲವೊಂದು ನಿಯಮಗಳು ಮತ್ತು ನಿಬಂಧನಗಳು.

ಅನಾಗರಿಕ ಪರಿಸ್ಥಿತಿಯಲ್ಲಿದ್ದಾಗ ಯಾವುದೇ ವಿಧಿ–ನಿಯಮಗಳ ಅವಶ್ಯಕತೆಯು ಇರುವದಿಲ್ಲ. ಆದರೆ ಸಮಾಜ ಮುಂದುವರೆದಂತೆ ಸಮಾಜಚಕ್ರಗಳು ಸರಳವಾಗಿ ನಡೆಯಲು ನಿಯಮಗಳ ಅವಶ್ಯಕತೆಯು ಹೆಚ್ಚಾಗುತ್ತದೆ. ವ್ಯಕ್ತಿಯು ಸಮಾಜವನ್ನು ಬಿಟ್ಟಿಲ್ಲ. ವ್ಯಕ್ತಿಸ್ವಾತಂತ್ರ್ಯದ ಕೊನೆಯ ಸೀಮೆ ಅಂದರೆ ಅದರಿಂದ ಸಮಾಜದ ಘಾತವಾಗಬಾರದು. ಈ ದೃಷ್ಟಿಯಿಂದ ಕಾನೂನನ್ನು ಬೆಳೆಸಲಾಗುತ್ತಿದೆ ಮತ್ತು ಕಾನೂನನ್ನು ಮಾಡುವವರು ಈ ದೃಷ್ಟಿಯಿಂದ ಈ ಸಮಸ್ಯೆಯ ಕಡೆಗೆ ನೋಡುತ್ತಾರೆ.

ಸರಕಾರದ ಉದ್ದೇಶವು ಈಗ ಬದಲಾಗಿದೆ. ಮೊದಲಿಗೆ ಬಹು ಜನರ ಹಿತಕ್ಕಾಗಿ ಸರಕಾರದ ಅವಶ್ಯಕತೆ ಇತ್ತು. ಈಗ ಎಲ್ಲರ ಹಿತಕ್ಕಾಗಿ ಎಂದು ಅದರ ವ್ಯಾಖ್ಯೆಯನ್ನು ಬದಲು ಮಾಡಬೇಕಾಗಿದೆ. ಎಲ್ಲರ ಹಿತದ ದೃಷ್ಟಿಯಿಂದ ಯೋಗ್ಯವಿದ್ದ ಕ್ರಮಗಳನ್ನು ತೆಗೆದುಕೊಳ್ಳುವದು ಸರಕಾರದ ಆದ್ಯ ಕರ್ತವ್ಯವಾಗಿದೆ. ಕಾನೂನನ್ನು ಸೃಷ್ಟಿಸುವದು ಇದೇ ದೃಷ್ಟಿಯಿಂದಲೇ. ಔದ್ಯಮಿಕ ಕ್ರಾಂತಿಯಿಂದಾಗಿ ಜಗತ್ತಿನಲ್ಲಿ ಸರಕಾರದ ಅಸ್ತಿತ್ವದ ಉದ್ದೇಶವೇ ಬದಲಾಗಿದೆ. ಮೊದಲಿನಂತೆ ಅದು ಕೆಲವೊಬ್ಬರ ಸೊತ್ತಲ್ಲ. ಪ್ರಜಾಪ್ರಭುತ್ವವನ್ನು ಒಪ್ಪಿಕೊಂಡ ನಂತರ ಪ್ರಜೆಗಳ ಮನಸ್ಸಿನ ಮೇಲೆ ಸರಕಾರವು ನಡೆಯುತ್ತದೆ. ಜನರಿಗೆ ಬೇಡವಾದ ಕಾನೂನುಗಳನ್ನು ಜನರ ಮೇಲೆ ಹೇರುವದು ಅಸಾಧ್ಯ. ಆದರೆ ಪ್ರಜಾಪ್ರಭುತ್ವದಲ್ಲಿ ಮುಖಂಡರು ಸಾಮಾನ್ಯವಾಗಿ ತಮಗೆ ಬೇಕಾದವುಗಳನ್ನು ತಮ್ಮೊಡನೆ ತೆಗೆದುಕೊಂಡು ಮುಂದೆ ಹೆಜ್ಜೆಯನ್ನಿಡಬೇಕಾದ ಸನ್ನಿವೇಶವಿದೆ. ಹಾಗಿದ್ದಲ್ಲಿ ಕಾನೂನಿನಿಂದ ನಾವೇನಾದರೂ ಸಾಧಿಸಬಹುದೇ ಎಂಬ ಮಹತ್ವದ ಪ್ರಶ್ನೆ ತಲೆದೋರುತ್ತದೆ– ಕಾನೂನಿನ ಉದ್ದೇಶಗಳು ದ್ವಿವಿಧವಾಗಿವೆ. ಜನತೆಯಲ್ಲಿ ಜಾಗರೂಕತೆ ಹುಟ್ಟಿ ಪರಿಪಕ್ವವಾದ ಕಾಲಕ್ಕೆ ಜನತೆಗೆ ಬೇಕಾದ ಕಾನೂನನ್ನು ನಿರ್ಮಿಸುವದು ಒಂದು ಹಾದಿ. ಈ ದೃಷ್ಟಿಯಲ್ಲಿ ನೋಡಿದರೆ ಜನತೆಯನ್ನು ಕಾನೂನು ಅನುಸರಿಸಿ ಬರಬೇಕಾಗುತ್ತದೆ. ಅವರಿಗೆ ಬೇಕಾದ ಕಾಲಕ್ಕೆ ಅವರ ಇಚ್ಛೆ ಮತ್ತು ರುಚಿಗಳನ್ನು ನೋಡಿಕೊಂಡು ಕಾನೂನನ್ನು ಮಾಡಬಹುದು. ಪ್ರಾಚೀನ ಕಾಲದಲ್ಲಿ, ಕಾನೂನನ್ನು ಬೇಕಾದ ಕಾಲಕ್ಕೆ ತತ್ಕಾಲೀನ ಪಂಡಿತರು ಪರಿಸ್ಥಿತಿಯನ್ನು ತಿಳಿದುಕೊಂಡು ಅದರ ನಿವಾರಣಕ್ಕಾಗಿ ಅನುಕೂಲವಾದ ಕಾನೂನನ್ನು ನಿರ್ಮಿಸುತ್ತಿದ್ದರು. ಜನತೆಯ ಮನಸ್ಸು ಚಂಚಲ. ಜನತೆಯನ್ನು ಹಿಡಿದುಕೊಂಡುಹೋಗುವದು ದುಸ್ತರ ಕಾರ್ಯ. ಜನಪ್ರಿಯತೆ ಯಾವಾಗಲೂ ಕ್ಷಣಿಕವಾದುದು. ಇವೆಲ್ಲವುಗಳನ್ನು ನೋಡಿದರೆ ಜನತೆ ಕಾನೂನನ್ನು ಅನುಸರಿಸುವಂತೆ ಮಾಡುವದು ಕಷ್ಟಸಾಧ್ಯವೆಂದು ಅನ್ನಬಹುದು.

ಸಮಾಜಕ್ಕೆ ಬೇಕಾದ ಕೆಲವೊಂದು ಅವಶ್ಯಕತೆಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು ಅವಕ್ಕೆ ಪೋಷಕವಾಗುವಂತೆ ಕಾನೂನನ್ನು ಸೃಷ್ಟಿಸುವದೇ ಶಾಸಕರ ನಿಜವಾದ ಕರ್ತವ್ಯವೆಂದು ಅನ್ನಬಹುದು. ಸಮಾಜದ ರಚನೆಗಾಗಿ ಕಾನೂನು ತನ್ನದೇ ಆದ ಒಂದು ಮಹತ್ವದ ವಿಶಿಷ್ಟ ಸ್ಥಾನದಿಂದ ಪ್ರಭಾವವನ್ನು ಬೀರಬಲ್ಲದು. ಭದ್ರತೆಯಿದ್ದರೆ ಸಮಾಜದ ಪ್ರಗತಿಯು ಸಾಧ್ಯ. ಕಾನೂನಿನಿಂದ ಭದ್ರತೆಯು ಸಾಧ್ಯ. ಇವೆರಡರ ಸಂಗಮದಿಂದಲೇ ರಾಜ್ಯದಲ್ಲಿ ಸೌಖ್ಯ– ಶಾಂತಿಗಳು ನೆಲೆಸಬಲ್ಲವು. ಸಮಾಜದ ರಚನೆಗಾಗಿ ಕಾನೂನು ಅತ್ಯಂತ ಮಹತ್ವದ್ದು. ಯೋಗ್ಯವಾದ ಕಾನೂನನ್ನು ನಿರ್ಮಿಸಿದರೆ ಸಮಾಜದ ಪುನಾರಚನೆಯಲ್ಲಿ ಅದು ಸಹಾಯಕಾರಿಯಾಗಬಲ್ಲದು.

ಕಾನೂನು ರಾಜರ ರಾಜ. ಅದರ ಗಾಂಭೀರ್ಯಕ್ಕೆ ಎಲ್ಲರೂ ತಲೆಬಾಗಲೇಬೇಕು. ಕಾನೂನಿನ ದೃಷ್ಟಿಯಲ್ಲಿ ಎಲ್ಲರೂ ಒಂದೆ. ಕಾನೂನು ಸರ್ವವ್ಯಾಪಕ ಶಕ್ತಿಯುಳ್ಳದ್ದು ಮತ್ತು ಎಲ್ಲರಿಗೂ ಅನ್ವಯಿಸುವಂಥದು. ಕಾನೂನಿನ ಬಲೆಯಲ್ಲಿ ಸಿಕ್ಕು ಪಾರಾಗುವುದು ಕಠಿಣ. ಇಂಥ ಶಕ್ತಿಯುತ ಅಸ್ತ್ರದಿಂದ ಸಮಾಜದ ಸುಧಾರಣೆಯಾಗದೇ ಮತ್ತೆ ಯಾವದರಿಂದ ಆಗಬಲ್ಲದು ? ಸಮಾಜ ಸುಧಾರಣೆಯೇ ಕಾನೂನಿನ ಮುಖ್ಯ ಉದ್ದೇಶ– ಸಮಾಜವನ್ನು ಯೋಗ್ಯ ರೀತಿಯಲ್ಲಿ ಇಟ್ಟು ಅದರಲ್ಲಿ ಲೋಪದೋಷಗಳನ್ನು ಮತ್ತು ವೈಷಮ್ಯಗಳನ್ನು ಹೊಡೆದುಹಾಕುವದು ಕೇವಲ ಕಾನೂನಿನಿಂದ ಸಾಧ್ಯ. ಬೇರಾವ ಸಾಧನಗಳಿಂದ ಈ ಕಾರ್ಯವು

ಆಗಬಾರದು. ಸಮಾಜದ ಅಭಿವೃದ್ಧಿಗಾಗಿ ಕಾನೂನನ್ನು ವ್ಯವಸ್ಥಿತ ರೀತಿಯಲ್ಲಿ ಉಪಯೋಗಿಸಬಹುದು. ಕಾನೂನಿನಿಂದ ಸರ್ವಸಮ್ಮತವಾದ ಸೌಂದರ್ಯಯುಕ್ತ ಸಮಾಜದ ಸೃಷ್ಟಿಯು ಸಾಧ್ಯವಾದುದು. ಪ್ರಾಚೀನ ಭಾರತದಲ್ಲಿ ಕೂಡ ಕಾನೂನಿನ ಬಗ್ಗೆ ಇದೇ ರೀತಿಯ ಆದರ ಭಾವವಿತ್ತು. ಆದರೆ ಆ ಕಾಲದಲ್ಲಿ ಸಮಾಜಕ್ಕೆ ಈಗಿನಂಥ ವಿಶಿಷ್ಟ ಸಮಸ್ಯೆಗಳು ಇದ್ದಿಲ್ಲ. ಆದರೆ ಸಂಸ್ಕೃತಿ ಮತ್ತು ಕಾನೂನಿನ ನಡುವೆ ಘನಿಷ್ಠವಾದ ಸಂಬಂಧವಿರುವದರಿಂದ ಪ್ರಾಚೀನ ಭಾರತದ ಅತ್ಯುತ್ತಮ ಸಂಸ್ಕೃತಿಯನ್ನು ಅವಲೋಕಿಸಿದಾಗ ಅಲ್ಲಿ ಕಾನೂನಿನ ವ್ಯವಸ್ಥೆಯು ಚೆನ್ನಾಗಿ ಇರಲೇಬೇಕೆಂದು ಊಹಿಸಬಹುದು– ವೇದಕಾಲದಲ್ಲಿಯ 'ಸಭೆ'ಗಳಾಗಲಿ ಅಥವಾ ಅದರ ನಂತರದಲ್ಲಿ ಬಂದ ಸ್ಮೃತಿಕಾರರಾಗಲಿ ರಾಜರಿಗೆ ಯೋಗ್ಯ ಕಾಲದಲ್ಲಿ ಯೋಗ್ಯ ಮಾರ್ಗದರ್ಶನ ಮಾಡಿದ್ದರಿಂದ ಈ ಪ್ರಗತಿಯು ಸಾಧ್ಯವಾಗಿದೆಂದು ನಿರ್ಣಯಿಸಲಿಕ್ಕೆ ಏನೂ ಆತಂಕವಿಲ್ಲ. ಪರಂಪರೆಯಿಂದಲು ಕೂಡ ಕಾನೂನಿನಿಂದ ಸಮಾಜವನ್ನು ಪುನರ್ಘಟಿಸಬಹುದೆಂದು ಹೇಳಬಹುದಾದ ಪ್ರಮೇಯವಿದೆ. ನಿದರ್ಶನಾತ್ಮಕ ಕೆಲವೊಂದು ಉದಾಹರಣೆಗಳನ್ನು ಇಲ್ಲಿ ಕೊಡಬಹುದು.

ಕಳೆದ ಶತಮಾನದಲ್ಲಿ ಭಾರತದಲ್ಲಿ ಇದ್ದ ಸತಿ ಪದ್ಧತಿಯು ಕಾನೂನಿನ ಬಲದಿಂದ ಪೂರ್ಣವಾಗಿ ಮಾಯವಾಯಿತು. ಕಾನೂನು ಇಲ್ಲವಾಗಿದ್ದರೆ ಅದು ಇನ್ನೂ ಇರಬಹುದಾಗಿತ್ತೇನೊ. ಅದೇ ರೀತಿಯಾಗಿ ಅಮೇರಿಕೆಯಲ್ಲಿ ಅಬ್ರಹಾಂ ಲಿಂಕನ್ನರ ಮುಂಧೋರಣೆಯ ಪ್ರತಿಫಲವಾಗಿ ಗುಲಾಮಗಿರಿಯು ಕಾನೂನಿನ ಬಲದಿಂದ ನಾಶ ಮಾಡುವದರಲ್ಲಿ ಬಂದಿತು.

ಸ್ವಾತಂತ್ರ್ಯೋತ್ತರ ಭಾರತವು ಸಮಾಜವಾದವನ್ನು ಅವಲಂಬಿಸಿ ಸಮಾಜವನ್ನು ರಚನೆಗೊಳಿಸುವ ನಿರ್ಣಯವನ್ನು ಕೈಕೊಂಡದ್ದರಿಂದ ಅದಕ್ಕೆ ಅನುಗುಣವಾಗಿ ಅನೇಕ ಕಾನೂನುಗಳನ್ನು ಮಾಡಿದೆ. ಜಮೀನದಾರಿ ನಿರ್ಮೂಲನ ಕಾನೂನುಗಳು ಇವುಗಳಲ್ಲಿ ಮಹತ್ವದ್ದು ಆಗಿವೆ. ಈಗಿನ ಪರಿಸ್ಥಿತಿಯಲ್ಲಿ ಈ ಕಾನೂನು ಎಷ್ಟು ಜನಪ್ರಿಯವಾಗಿದೆ ಅನ್ನುವದನ್ನು ಇಲ್ಲಿ ಹೇಳುವ ಅವಶ್ಯಕತೆ ಇಲ್ಲ. ಇದರಿಂದಾಗಿ ಒಂದು ವರ್ಗಕ್ಕೆ ಕಡಿತ ಬಿದ್ದರೂ ಬಹು ಜನರ ಹಿತವು ಇದರಿಂದ ಆದಂತಾಗಿದೆ. ಸಮಾಜ ರಚನೆಯ ಕಾರ್ಯದಲ್ಲಿ ಇದರಿಂದ ಬಹಳಷ್ಟು ಉಪಯೋಗವಾಗುವದರಲ್ಲಿ ಸಂಶಯವಿಲ್ಲ.

ಅದೇ ರೀತಿಯಾಗಿ ಕರಭಾರ ಕಾನೂನುಗಳಿಂದಾಗಿ ಶ್ರೀಮಂತರ ಮೇಲೆ ಕರಭಾರವು ಬಹಳೇ ಆಗಿರುವದರಿಂದ ಸಮಾಜದಲ್ಲಿ ವೈಷಮ್ಯವು ಬಹಳ ಕಡಿಮೆಯಾಗಿರುವದು. ಕಾನೂನಿನ ಭೀತಿಯಿಂದಾಗಿ ಎಷ್ಟೋ ಜನರು ಸರಿಯಾಗಿ ನಡೆದುಕೊಳ್ಳುತ್ತಾರೆ.

ಈಗಿನ ಯುಗದಲ್ಲಿ ಯೋಜನೆಗೆ ಪ್ರಾಧಾನ್ಯವಿದೆ. ಯೋಜನೆ ಇಲ್ಲದೆ ಯಾವ ಕಾರ್ಯವೂ ಸಿದ್ಧಿಸದು. ೧೦–೧೫ ವರುಷಗಳ ಮುಂದಿನ ಸಮಾಜದ ಚಿತ್ರವನ್ನು ಕಣ್ಣಿಟ್ಟುಕೊಂಡು ಕಾನೂನುಗಳನ್ನು ಆ ತೆರನಾಗಿ ಕ್ರಮೇಣ ವ್ಯಾಪ್ತಿಯಲ್ಲಿ ತರುವದು ಶ್ರೇಯಸ್ಕರವಾದ ವಿಷಯ. ಅದೇ ರೀತಿಯಾಗಿ ಮಾಡುವದು ಉತ್ತಮವೆಂದು ಕಾಣುತ್ತದೆ.

ಇನ್ನೊಂದು ಮೇಲಿಂದ ಮೇಲೆ ಕೇಳಬರುವ ದೂರೆಂದರೆ ಕಾನೂನನ್ನೇನೋ ಮಾಡಿದ್ದಾಯಿತು. ಆದರೆ ಕಾನೂನನ್ನು ಅಧಿಕಾರದಲ್ಲಿ ಉಪಯೋಗಿಸುವವರು ಉತ್ತಮರಾಗಿಲ್ಲವಾದರೆ ಕಾನೂನನ್ನು ಮಾಡಿದ್ದು ವ್ಯರ್ಥವೆನ್ನುತ್ತಾರೆ. ಈ ರೀತಿಯ ಹೇಳಿಕೆಯಲ್ಲಿ ತಥ್ಯವಿದೆನ್ನುವದನ್ನು ಒಪ್ಪಬೇಕಾದರೂ ಇದಕ್ಕೊಂದು ಪಾರ್ಶ್ವವಿದೆ ಅನ್ನುವದನ್ನೂ ಒಪ್ಪಲೇಬೇಕು. ನಾವೀಗ ಸಂಕ್ರಮಣ ಕಾಲದಲ್ಲಿರುವದರಿಂದ ಇಂಥ ಕೆಲವೊಂದು ಸಂಶಯಗಳು ಉದ್ಭವಿಸುತ್ತವೆ. ಕಾಲಾಂತರದಿಂದ ಈ ಪರಿಸ್ಥಿತಿಯು ಕೊನೆಗಾಣುವದು. ಆದರೆ ಸಂಕ್ರಮಣಕಾಲಕ್ಕೆ ಸಿಕ್ಕ ಕೆಲವೊಂದು ಜೀವಗಳು ದುಃಖ ಸಂಗೀತವನ್ನು ಹಾಡುವದನ್ನು ಬಿಡುವದಿಲ್ಲ. ಕಾಲಚಕ್ರದ ಗಾಲಿಗಳನ್ನು ಹಿಂದೆ ತಿರುಗಿಸಲು ಸಾಧ್ಯವಿಲ್ಲ. ಸಮಾಜದ ಮುನ್ನಡೆಯಲ್ಲಿ ಕೆಲವೊಂದು ವರ್ಗಗಳು ನಾಶವನ್ನಪ್ಪುವದು ಪ್ರಗತಿಯ ದ್ಯೋತಕ ಮತ್ತು ಅನಿವಾರ್ಯ.

# ಅಮೇರಿಕನ್ ಅಳಿಯ ಅನ್ನ ಸೋವಿಯತ್ ಸೊಸೆ

ಕೇವಲ ಸ್ತ್ರೀ ಪಾತ್ರಗಳುಳ್ಳ ಏಕಾಂಕ

## ಪಾತ್ರ ಪರಿಚಯ :



ಗಂಗಾಬಾಯಿ :— ಎಂಭತ್ತು ವರುಷಗಳ ವೃದ್ಧ ವಿಧವೆ
ಬಾಜೂಮನೆ ಭಾಗೀರಥಿಬಾಯಿ :— ಎಪ್ಪತ್ತೈದು ವರುಷಗಳ ವೈದಿಕ ಮುತ್ತೈದೆ
ಕಾವೇರಿ :— ಗಂಗಾಬಾಯಿಯ ನಾಲ್ವತ್ತರ ಅವಿವಾಹಿತ ಮೊಮ್ಮಗಳು - ಶಿಕ್ಷಿಕೆ
ಶರಯೂ :— ಕಾವೇರಿಯ ಸಾರಸ್ವತ ಸ್ನೇಹಿತೆ
ಶಾಲ್ಮಲಾ :— ಭಾಗೀರಥಿಬಾಯಿಯ ಮೂವತ್ತೈದರ ಹಿರಿಯ ಸೊಸೆ
ವಿಶಲೆಸ್ಕೊವಾ :— ಭಾಗೀರಥಿಬಾಯಿಯ ಭಾವೀ ಸೋವಿಯಟ್ ಸೊಸೆ (No. 2)



## ದೃಶ್ಯ ೧

( ಜೋಡಿ ಮಹಡಿಯ ಮನೆಗಳ Common ಅಂಗಳ, Common ತುಳಸೀಕಟ್ಟೆ, ಗಂಗಾಬಾಯಿ ತಮ್ಮ ಮನೆಹೊಸ್ತಿಲಿಗೆ ಕೂತು ಮರದಲ್ಲಿಯ ಅಕ್ಕಿ ಹಸನಮಾಡುತ್ತಿದ್ದಾಳೆ. ಬಾಜೂ ಮನೆಯ ಭಾಗೀರಥಿಬಾಯಿ ತಮ್ಮ ಮನೆಯ ದೀಪ ತಂದು ತುಳಸಿಯ ವೃಂದಾವನದ ಮಾಡದಲ್ಲಿಟ್ಟು ನಮಸ್ಕರಿಸಿ ಆದ ಮೇಲೆ)

ಭಾ ಅಲ್ರೀ ಗಂಗಾಬಾಯೀ ಮೂರುಸಂಜೀ, ಚಾಳೀಸ ಸುದ್ಧಾ ಹಾಕಿಲ್ಲಾ ಅಕ್ಕೀ ಹಸನಮಾಡತ ಇದ್ದೀರಿ. ಹ್ಯಾಂಗ ಕಾಣಸಬೇಕು ಅಂತೀನಿ

ಗಂ : ನೀವು ಮಾತಾಡಿದ್ದು ಈ ಕಿವಿಗೆ ಹ್ಯಾಂಗ ಕೇಳಿಸತೈತಿ ಹೇಳ್ರಿ ಅದಕ್ಕೂ ಏನು ಚಾಳೀಸಾ ಹಾಕಿಲ್ಲ ಹಾಂಗ, ದೇವರು ಕೊಟ್ಟ ಬೆಳಕಿನಾಗ ಕಣ್ಣಿಗೆ ಕಂಡಷ್ಟು ಆರಿಸತೀನಿ.

ಭಾ : ದೀಪಾನಾರ ಹಚ್ಚಿಕೊಳ್ರೀಲ್ಲಾ.

ಗಂ : ಯಾರಿದ್ದಾರ ಮನ್ಯಾಗ ದೀಪಾಹಚ್ಚಲಿಕ್ಕೆ?

ಭಾ : ನಾ ಸ್ವಿಚ್ ಹಾಕಿಕೊಡ್ಲೇನು ?

ಗಂ : ಅದೇನು ಹಾಕತೀರೊ ಏನೊ ಹಾಕು ಹುರುಗೊತ್ತಿಗಿಲ್ಲದ ಮತ್ತ ಹೋಗಿ ಬಿಡತಾವ. ಈ ನಳಾ, ಈ ದೀಪಾ ನೆಚ್ಚಿಕೊಂಡರ ತೀರೇ ಹೋತು.

ಭಾ : ಹೌದೇಳ್ರಿ ಅದರಾಗ ಈಗೀಗಂತು ಕಣ್ಣು ಮುಚ್ಚಾಲಿ ಆಡಿಧಾಂಗ ಮಾಡತಾವ ಈ ಇಲೆಕ್ಟ್ರೀ ದೀಪ. ಹೀಂಗ ಹತ್ತುತಾವ ಹೀಂಗ ಆರಿ ಹೋಗತಾವ

ಗಂ : ಕಾಲಾನೇ ವಿಪರೀತ ಬಂದದರೇ ಭಾಗೀರಥಿಬಾಯಿ. ಅಲ್ಲಾ ಹರಿಯೋದು ನೀರಿನ ಹುಟ್ಟು ಗುಣಾರೆವ. ಅದೆಲ್ಲಾ ಬಿಟ್ಟು ಅದನ್ನ ಕಟ್ಟಹಾಕತೀನಿ ಅಂತ ನದೀಗೆ ಒಡ್ಡು ಹಾಕಿದರ ಭೂಮಿತಾಯಿ ನಡಗದ ಬಿಟ್ಟಾಳೇನು ? ಮನಶಾ ಅಸರಾಗ್ಯದ ಕೆಲಸಾ ಮಾಡಲಿಕ್ಕೆ ಹೋಗಬಾರದು ನೋಡ್ರಿ.

ಭಾ : ಅಲ್ಲಾ ಯಂತ್ರ ಯಾವುದು, ಮನಶಾ ಯಾರು ಇದs ತಿಳೀಧಾಂಗ ಆಗೇದ ಈಗಿನ ದಿನದಾಗ. ಅಲ್ರಿ ಹುಟ್ಟು-ಸಾವು ಹಣೇಬರೆಹದಾಗ ಬರೆಧಾಂಗ ಆಗತಾವ; ಆದೆಲ್ಲಾ ಬಿಟ್ಟು ಹರಿಯೋ ನದೀಗೆ ಒಡ್ಡು ಹಾಕಿದಾಂಗ ಹಡೆಯೋ ತಾಯಿಗೂ—

ಗಂ : (ನಕ್ಕು) ಛಲೋ ಹೇಳಿದಿರಿ. ಈತ್ತೀನದ ಎಲ್ಲರೂ ಕಂಸನ ಅಪರಾವತಾರ ಮಕ್ಕಳು ಹುಟ್ಟಬಾರದು ಅಂತ ಯಂತ್ರಾ ಮಾಡತಾರಂತ, ತಂತ್ರಾ ಮಾಡತಾರಂತ. ಇಂಥಾ ಪರಿಯಿಂದ ಮದಿವಿನಾರ ಯಾಕ ಮಾಡಬೇಕು? ಇದ್ದಾಳ ನೋಡ್ರಿ ನಮ್ಮ ಮೊಮ್ಮಗಳು. ಮೊನ್ನೆ ಛಟ್ಟ ಅಮಾಸಿಗೆ ಎರಡಿಪ್ಪತ್ತು ತುಂಬಿದವು. ನೌಕರಿ ಮಾಡತಾಳಂತ. ನೌಕರೀನೊ ಲೌಕರೀನೊ...ಅಲ್ಲಾ ನಾವೆಲ್ಲಾ ಎಂಟು ವರುಷಕ್ಕ ಮದವಿ ಮಾಡಿಕೊಂಡು ಮುತ್ತೈದಿ ಸಾವಿತ್ರಿ ಆಗಿ ಹಣೆಗೆ ಥಾಳಾಗಿ ಕುಂಕುಮ, ಗಲ್ಲಕ ಅರಿಷಣ ಹಚ್ಚಿಕೊಂಡು ಗೌರೀ ಪೂಜಿ, ವಟ ಸಾವಿತ್ರಿ ಪೂಜಿ ಮಾಡಿ ಹದಿನೈದು ತುಂಬೂದರಾಗ ಐದುಮಕ್ಕಳ ತಾಯಂದಿರು ಆಗಿರತಿದ್ವಿ. ಏನು ಧಾಡಿ ಆಗತಿತ್ತು ನಮಗ?...ಹರದಾರಿ ನೆಲಾ ನಡದು ಹಸ್ತ



ಮಡೀಲೆ ದೇವರ ಅಭ್ಯುತಕ್ಕ ಹೊಂಡದ ನೀರು ತಗೊಂಡು ಬರತಿದ್ದೆ ನರಗುಂದದಾಗ ಇದ್ದಾಗ. ಈಗಿನವೇನ್ರೆ ನಮ್ಮವ್ವಾ ಬಚ್ಚಲದಾಗ ನಳಾ ಇದ್ದರೂ ಒಲಿಮ್ಯಾಲಿನ ಹಂಡೆ ತುಂಬಲಿಕ್ಕೆ ರಬ್ಬಲಿಂದು ಪಂಪ ಹಚ್ಚತಾವ, ಮುಗ್ಗಲತನಾ ಅಂದರ ಸೀಮಾ ಮೀರಿದ ಮುಗ್ಗಲತನ... ನನಗ ನೋಡ್ರಿ ಈಗ ನಾಕಿಪ್ಪತ್ತರಮ್ಯಾಲೆ ಆತು. ಇನ್ನ ಹತ್ತಾರು ವರುಷ ಆತು ಅಂದರ ನನಗ ಬದುಕಿ ಇರಲಿಕ್ಕೂ ಅಧಿಕಾರ ಇಲ್ಲ. ಆದರೂ ನೋಡ್ರಿ ಇನ್ನೂ ನಾಲ್ಕು ಭಕ್ಕರೀ ಕಟೀತೀನಿ.

ಭಾ · ಅಲ್ಲಾ ನಿಮ್ಮ ಮಗಳು ಮಡಿವಿ ಆಗದ ಇದ್ದಾಳಲ್ಲಾ ಅದೇ ಛಲ್ರೋ ಏನೊ ಅನಿಸತದ ನೋಡ್ರಿ ಒಮ್ಮೊಮ್ಮೆ. ಯಾಕಂದರ ನಮ್ಮ ಮನೀ ಹಾಂಗ ನಿಮ್ಮ ಮನಿ ಇನ್ನೂ ಏಕಾಕಾರ ಆಗಿಲ್ಲ. ನೋಡಿದಿರಿಲ್ಲೊ ನಮ್ಮ ಮಗನ ಹಿರೇತನ. ಅಲ್ಲಾ ನಮ್ಮದು ನೋಡಿದ್ರ ದೊಡ್ಡ ವೈದಿಕ ಮನೆತನ ಏನ್ರೆವ. ನಮ್ಮ ತೌರುಮನಿಯುವರಂತೂ ಅಗ್ನಿಹೋತ್ರಿಗಳು. ನಮ್ಮ ಮಾವಂದಿರಾರೇ ಏನು ಕಡಿಮಿ ಅಂತೀರಿ. ವರ್ಷಾ ವರ್ಷಾ ಉತ್ತರಾದಿಮಠದ ಸಮಾರಾಧನಿಯೊಳಗ ಇವರಿಗೆ ವೇದ ಮಂತ್ರಾ ಹೇಳಿದ್ದಕ್ಕ ಬೆಳ್ಳಿ ವಾಟಿಗಾ ಇಪ್ಪತ್ತೈದು ರೂಪಾಯಿ ದಕ್ಷಿಣೆ ತಪ್ಪಿದ್ದ ಅಲ್ಲಾ.

ಗಂ : ನಿಮ್ಮ ಯಜಮಾನ್ರೂ ಹಾಂಗಾರ –

ಭಾ : ಅವರೇನು ಮಂತ್ರಾ ಹೇಳತಾರ ಮಣ್ಣಾಗ, ಯಾವಾಗ ಸರಕಾರೀ ನೌಕರೀಗೆ ಸುರು ಮಾಡಿದರು, ವೈದಿಕ ವೃತ್ತಿಗೆ ತರ್ಪಣಾ ಕೊಟ್ಟ ಹಾಂಗ ಆತು. ಆದರೂ ರಾಯರ ಆರಾಧನಿಯೊಳಗ ಸ್ವತಃ ಅಷ್ಟೋತ್ತರ ಮಾಡಿಕೋತ ಬಂದಾರ ಇದs ನಮ್ಮ ಪುಣ್ಯ ಅನಬೇಕು. ಈಗ ಪಿಂಚಣಿ ಆದ ಮ್ಯಾಲಂತೂ ನಿತ್ಯ ದೇವರ ತಲೀಮ್ಯಾಲೆ ಅಷ್ಟು ನೀರಾರ ಹಾಕಸತಾರ. ಆದರ ನಮ್ಮ ಮಗಾ ಇದ್ದಾನ ನೋಡ್ರಿ ಯಾವಾಗ ಕಾಲೇಜ ಕಟ್ಟ ಹತ್ತೀದನೊ ಆವಾಗ ನಮ್ಮ ಕುಲಾನ ಕಟ್ಟ ಹಾಂಗ ಆತು. ಅಲ್ರೀ ಅದು ತನ್ನ ಗೆಳೆಯನ ತಂಗಿ ಅಂತ, ಸ್ವಾರ್ತರ ಮನೀ ಕೆನಾ- ಏನು ಮಹಾ ರಂಭಾ ಊರ್ವಶೀ ಹೇಳೂ ಹಾಂಗಿಲ್ಲ. ಅಂಥಾದು ಮಾಡಿಕೊಂಡರ ಆಕಿನ್ನ ಮಾಡಿಕೋತೀನಿ ಅಂತ ಕೂತಾಬಿಟ್ಟ. ಮಾಡತೀರೇನಿನ್ನ ? ಹಿರೇ ಗಂಡಸ ಮಗಾ ಬ್ಯಾರೆ, ಕಲಿಕೆಟ್ಟು ದೇಶಾಂತರಕ್ಕಂತ ಹೋಗಿ ಕೂತರ ಮಾಡೂದೇನು ?

ಗಂ : ಅಯ್ಯಯ್ಯ! ಈಗಂತೂ ವಿಲಾಯತಿಗೆ ಹೋಗೋದು ಅಂದರ ಅಡಗಿಮನಿ ಪಡಸಾಲಿಗೆ ಹೋಧಾಂಗ ಮಾಡ್ಯಾರ ನೋಡ್ರಿ.

ಭಾ : ವಿಲಾಯತಿ ಯಾಕ್ರೆ ನಮ್ಮವ್ವ ಚಂದ್ರಲೋಕಕ್ಕ ಸುದ್ದಾ ಹೋಗಲಿಕ್ಕೆ ಹತ್ಯಾರಂತಲ್ಲ. ನಮ್ಮಗಾ ಧೀರನ ಹೇಳ್ತಿದ್ದನ್ರೆವ್ವಾ. ಮದಿವಿ ಆದಮ್ಯಾಲೆ ಅದೇನೋ ಜೇನುತುಪ್ಪ ಚಂದಪ್ರ ಅಂತಲ್ಲಾ ಅದನ್ನ ಮಾಡಲಿಕ್ಕೆ ಇನ್ನ ಜನಾ ಚಂದ್ರಲೋಕಕ್ಕ ಹೋಗತಾರ, ಅಂಥಾದು ನಾವೂ ಕಾಶ್ಮೀರಕ್ಕ ಹೋದರೇನು ತಪ್ಪು ಅಂತ ಹೇಳಿ ತಮ್ಮ ಕಚೇರಿ ಕೆಲಸದ ನೆವಾ ಮಾಡಿಕೊಂಡು ಹೇಣ್ತೀನ್ನ ಕರಕೊಂಡು ಹೋಗಿ ಬಂದ ನೋಡ್ರೆವಾ. ಅಲ್ಲೋ ಕಾಶೀಗರ ಹೋಗಿ ಬಾರೋ ಪುಣ್ಯಾ ನಾರ ಬಂದೀತು, ಕಾಶ್ಮೀರ ಅಂದರ ಏನೋ ಅದು ಒಂದು ತೀರ್ಥ ಅಲ್ಲಾ, ಕ್ಷೇತ್ರ ಅಲ್ಲಾ ಅಂತ ಸಾರಿ ಸಾರಿ ಹೇಳಿದಿವಿ ಕೇಳಿದರ ಹೌದಲ್ಲೊ?

ಗಂ : ಅಲ್ರೀ, ಕೂಸಿ ಸ್ವಾರ್ತರ ಮನಿಯಾಕಿ ಅಂತೀರಿ ವೈಷ್ಣವ ಮನೀಗೆ ಬಿದ್ದಮ್ಯಾಲೆ ಆತಲ್ಲಾ.

ಭಾ : ಅದೆಲ್ಲಾ ಖರೇ ಗಂಗಾಬಾಯ್ರ. ಆದರೂ ಮನೀ ಆಚಾರ ಅವಿಚಾರ ಎಲ್ಲಿ ಹೋಗತಾವ ? ಮತ್ತೇನು ಹಿರೇ ಅಕ್ಕನ ಚಾಳಿ ಅನ್ನುಹಾಂಗ ಸಣ್ಣಾವ ಇವನ ಮ್ಯಾಲ ಶಿಖರ ಇಡತಾನ- ಅಣ್ಣನ ಕಿಂತಾ ಹೆಚ್ಚಿಗಿ ಕಲ್ತಾವ ತಮ್ಮ ಅಂಬಾವಾ. ಕೇಳ್ತಿರೇನು.

ಗಂ : ಇದೇನು ಹೇಳ್ತೀರಿ ಬ್ರಾಹ್ಮಣರು ಇನ್ನೂ ಎಂಥೆಂಥಾ ಅನ್ಯ ಜಾತೀ-ವನ್ನ. ಅನ್ಯ ದೇಶದವನ್ನ ಮಾಡಿಕೊಳ್ಳಿಕ್ಕೆ ತಯಾರಾಗ್ಯಾರ. ಅದೇನೂ ಎಲ್ಲಾ ಐಕ್ಯ ಅಂತಲ್ಲ. ಮಡೀ ಮೈಲಿಗಿ, ಶಿಕ್ಷಣ ಅಶಿಕ್ಷಣ ಧರ್ಮಿ-ಷ್ಠರು ಧರ್ಮಲಂಡರು ಏಕಾಕಾರ ಆಗೂದ ಈ ಐಕ್ಯ ಅಂತ ಕಾಣ-ಸ್ತದ. ಜಾತಿ, ಭಾಷಾ ಎಲ್ಲಾ ಬಿಟ್ಟು ಇನ್ನ ಜಗತ್ತ ಒಂದು ಮಾಡವ-ರಂತ

ಭಾ : ಮಾಡಲೇಳ್ರಿ. ನಾವೂ ನೀವೂ ನಾಳ್ಯೋ ನಾಡದೋ ಅಪ್ಪಣಿ ತಗೊಂಬವರು ನಮಗ್ಯಾಕ ಈ ಚಿಂತಿ.... ಮೂರು ಸಂಜಿ ಲಕ್ಷ್ಮೀ ಬರೂ ಹೊತ್ತು. ಎಲ್ಲಾ ಮನ್ಯಾಗೂ ಅಷ್ಟು ದೀಪಾ ಹಚ್ಚಿ ಬರತೀನಿ. ನೀವೂ ಹಚ್ಚರಿ. (ಹೋಗುವಳು)

## ದೃಶ್ಯ ೨

(ಈ ದೃಶ್ಯದ ರಂಗರಚನೆ ಒಂದಿಷ್ಟು ಹೊಸತರಹ. ಎರಡೂ ಮನೆಗಳ ತಲೆಬಾಗಿಲಿನ ಮೆಟ್ಟಿಲುಗಳ ಮೇಲೆ ಗಂಗಾಬಾಯಿ ಭಾಗಿರಥಿಬಾಯಿ ಕೂತಿದ್ದಾರೆ. ಇಬ್ಬರೂ ತಂತಮ್ಮ ಪಡಸಾಲೆಗಳೊಳಗೆ ನಡೆಯುವ ಮಾತುಕತೆಗಳನ್ನು ಕೇಳುತ್ತಿದ್ದು ಒಬ್ಬರನ್ನೊಬ್ಬರು ನೋಡಿರುವುದೇ ಇಲ್ಲ. ತಲೆಬಾಗಿಲುಗಳು ತೆರೆದಿರುವುದರಿಂದ ಎರಡೂ ಮನೆಗಳ ಪಡಸಾಲೆಗಳು ಕಾಣುತ್ತವೆ. ಪ್ರೇಕ್ಷಕರ ಎಡಗಡೆಯ ಗಂಗಾಬಾಯಿಯ ಮನೆಯ ಪಡಸಾಲೆಯಲ್ಲಿ ಕಾವೇರಿಯೊಡನೆ ಶರಯೂ ಕಾಣುತ್ತಾಳೆ. ಇನ್ನೊಬ್ಬರೂ ಇನ್ನೊಬ್ಬರ ಬಗ್ಗೆ ಮಾತುಕತೆ ನಡೆಸಿದ್ದಾರೆ. ಆ ಇನ್ನೊಬ್ಬರು ಮಾತ್ರ ರಂಗಭೂಮಿಯ ಮೇಲೆ ಕಾಣಿಸುವದಿಲ್ಲ. ಪ್ರೇಕ್ಷಕರ ಬಲಗಡೆಯ ಭಾಗೀರಥಿ ಮನೆಯ ಪಡಸಾಲೆಯಲ್ಲಿ ಶಾಲ್ಮಲೆ ಮತ್ತು ತನ್ನ ಮೈದುನನ ಪರಿಚಿತೆ ವಿಶಲೆಸ್ಕೊವಾ ಎಂಬ ಸೋವಿಯಟ್ ತರುಣಿಯೊಡಿಗೆ.)

ಕಾವೇರಿ : ನಮ್ಮ ವಿನೋಬಾಜೀ ಅದನ್ನೇ ಹೇಳ್ತಾರ ಜೈ ಜಗತ್ ಅಂತ. ಮಾನವತೆ ಎಲ್ಲಾ ಸೀಮಿತದ ಗೋಡೆಗಳನ್ನ ಒಡ್ದು ಕೆಡವಿ ಇವೊತ್ತು ಒಂದೇ ವಿಶ್ವಕಕ್ಷೆಯೊಳಗ ಬರತಾ ಅದ

ಶರಯೂ : ಬಹಳ ಸರಿಯಾಗಿ ಹೇಳಿದಿರಿ ಹಾ!

ಗಂಗಾ : (ತನ್ನೊಳಗೇ)ಏನಂತಾವೊ ಏನೊ! ಕಕ್ಷ ಪಾಳ್ಯಾದಾಗ ತರತಾವಂತ. ಮತ್ತಿನ್ನೇನು ಉಂಡಿ ಅವಲಕ್ಕಿ ಏನರ ಮಾಡಿಕೊಂಡು ಮಡೀಲೆ ಕಟ್ಟಿಕೊಂಡು ಹೋಗತ್ತಿದ್ದಾವು

ಶ : ನನ್ನ ಅಕ್ಕನನ್ನ ಮಹಾರಾಷ್ಟ್ರಕ್ಕೆ ಚಿಕ್ಕಮ್ಮನನ್ನ ಮದ್ರಾಸಕ್ಕೆ ಕೊಟ್ಟದೆ.

ಕಾ : ನೀವಂತೂ ಬಂಗಾಲಿಬಾಬು ಕೈಹಿಡಿದುಬಿಟ್ಟದ್ದೀರಿ (ಇಬ್ಬರೂ ನಗುವರು)

ಶ : ನಮ್ಮ ಸಂಬಂಧ ಭಾರತದ ಭೂಮಿಗೇ ಸೀಮಿತ ಆಯ್ತು. ನೀವು ಜೈ ಜಗತ್ ಅಂತೀರಲ್ಲಾ?

ಕಾ (ನಕ್ಕು) ಶರಯೂ ನನಗ ಈ ಭಾರತ ಅಂದರ ಗೂಪಮಂಡೂಕ

ಅನಸಕದ. ಈ ಕಪ್ಪೆಗಳು ಸಮುದ್ರದಾಚೆಯ ಜಗತ್ತು ನೋಡಬೇಕು! ಏನಂತೀರಿ?

ಗಂ : ಅಯ್ಯ ಹಣೇಬಾರ! ನಡಸ್ಯಾವಾರೆ ಏನಿವು ಅಂತೀನಿ. ಮತ್ತೇನಾರ ಬೇತ ನಡಸ್ಯಾವೊ ಏನು ಮತ್ತ.

ಭಾ : (ಶಾಲ್ಮಲಾ ಮತ್ತು ಪರಿಚಿತೆಯ ಮಾತು ಕೇಳಿ) ಎಲ್ಲೀದ ನಮ್ಮವ್ವ ಮಡೀ ಮಡೀ ಅಂತ ನಾವು ಸತ್ತರ ಇವ್ನೇನೋ ಸಾಯೋದಕ್ಕ ಮಡಿ ಅಂತಾವಂತ... ಹೊಸ ಹೊಸ ಶಬ್ಬ ಬ್ಯಾರೆ ಹೇಳಿ ಕೊಡಲಿಕ್ಕೆ ಹತ್ಯಾಳ ತನಗ್ಯಾಕ ಬೇಕಾಗಿತ್ತೊ!

ಶಾಲ್ಮಲಾ : ನಿಮ್ಮ ಹೆಸರು ಏನು?

ವಿಶಲೆಸ್ಕೊವಾ : Pardon?

ಶಾಲ್ಮಲಾ : ಪಾರ್ಡನ್ ಅಂತ ಎಲ್ಲಿ ಹೆಸರು ಇರತಾವ?

ವಿ : ಹ್ಯಾಸರೂ means ?

ಶಾ: ಓಹೋ ಹೀಂಗs ! Name. What is your name ?

ವಿ: ವಿಶಲೆಸ್ಕೊವಾ!

ಭಾ : ಅಯ್ಯ ಸುಡ್ಲೀ ಬ್ಯಾಂಬೀದ ಕಾಣಸ್ತದ ಹಾಂಗಾರ. ವಿಶಾಲಾಕ್ಷವ್ವ! ಮತ್ತ ನೆಟ್ಟಗ ನಾಲಿಗಿ ಹೊರಳಿಸಿ ಮಾತಾಡಲಿಕ್ಕೆ ಏನಾಗೇದ ಧಾಡಿ, ವಿಶಾಲಾಕ್ಷವ್ವ ಅಂತ.

ಶಾ : ಹಾಂಗಾರ ನೋಡ್ರಿ- ಇವ್ನೊತ ಮೂರು ಶಬ್ದಾ ಕಲ್ತರಿ. 'ಹೇಂಡತಿ' ಅಂದರ Wife; ಮಡಿ ಅಥವಾ ಸಾಯು ಅನ್ನಲಿಕ್ಕೆ die; ಹೆಸರು ಅಂದರ name.

ವಿ : Thank you. And for Husband. ಕೆನ್ನಡಾ ಏನ?

ಶಾ : ಗಂಡ.

ವಿ : Pardon?

ಶಾ : ಗಂಡ, ಗಂಡ ಗಂಡ... (ಎಂದು ಜೋರಾಗಿ ಹೇಳುವಳು)

ವಿ : ಗ್ಯಾಂಡಾ...Oh like ಯು ಗ್ಯಾಂಡಾ... minus ಯು- ಗ್ಯಾಂಡಾ.

ಭಾ : ಏನು ನಡಿಸ್ಯಾವ ಇವು- ಗಂಡಾ ಹೇಣ್ತಿ ಆಟಾ!... ಸುಡ್ಲಿ ಇದು ಮತ್ತ ಗಂಡೋ ಹೆಣ್ಣೊ? ಯಾರಿಗ್ಗೊತ್ತ ನನ್ನ ತಾಯಿ! ತಲಿ ನೋಡಿದರ ಶುದ್ಧ ಗಂಗಾ ಭಾಗಿರಥೀನೂ ಅಲ್ಲಾ. ಕುಂಕುಮ ಸೌಭಾಗ್ಯವತಿ ಮುತ್ತೈದೀನೂ ಅಲ್ಲಾ... ಮತ್ತೇನು ಫ್ಯಾಶನ್ನ! ಹೆಣ್ಣೋಳೂ ಕ್ಯಾಪಿನಹಾಂಗ ತಲಿ ಕೂದಲಾ ಕತ್ತರಿಸಿಕೊಳ್ಳೋದು ಎಷ್ಟು ಅವಲಕ್ಷಣ ಬೇಕೋ ಅಷ್ಟು ಅವಲಕ್ಷಣ ಏನೋ ಅಂತಾವಲ್ಲ – ಬಾಬ್ಬೊ, ಪಾಬ್ಬೊ...

ಶರಯೂ : ನಾನಂತೀನಿ ನಮ್ಮ ದೃಷ್ಟಿಯನ್ನ ವಿಶ್ವವಿಶಾಲಗೊಳಿಸ ಬೇಕಾದರ ಇಂಗ್ಲೀಷ್ ಭಾಷೆ ಭಾರತ ನೆಲದೊಳಗ ಚಿರವಾಗಿ ನೆಲಸಬೇಕು ಅಂತ.

ಕಾ : ಭಾಷೆ ಅನ್ನೋದು ನಾಲಗೆ ವಿಷಯ ಭಾವ ಅನ್ನೋದು ಹೃದಯದ ವಿಷಯ. ಮಾನವ ಹೃದಯ ಅನ್ನೋದು ಒಂದೇ ಇರತದ. ಅದು ಭಾರತೀಯ ಆದರೇನು, ಅಮೇರಿಕನ್ ಆದರೇನು ಈಗ ನೋಡ್ರಿ ನಾನು ಇಂಡಿಯನ್ ಆದರೇನು? ಮೈ ಬಣ್ಣ ಬೇರೆ ಬೇರೆ ಆದರೂ ಒಳಗಿನ ಮುಷ್ಟಿ ಆಕಾರದ ಹೃದಯದ ಬಣ್ಣ ಮಾತ್ರ ಎಲ್ಲಾರದೂ ಕೆಂಪಗೆ...ಏನ ದ್ರಿ?...

ಶ : ಹೌದು ನಿಜ. You are perfectly right.

ಕಾ : ಅಮೇರಿಕನ್ ಮೈಗೆ ಭಾರತೀಯ ಹೃದಯವನ್ನ transplant ಮಾಡಬಹುದು...I dont mean their Heart operation-but change and exchange of Hearts...

ಶ : ಎಂತಹ ಸುಂದರ ವಿಚಾರ ಹೇಳಿದಿರಿ. ಅಮೇರಿಕಾದ ಮೈಗೆ ಭಾರತದ ಹೃದಯ transplant ಮಾಡಬೇಕು...ವಿಶ್ವಭಾವೈಕ್ಯ ಇದು.

ಕಾ : ಹೌದು ನಿಜ ಈಗೀಗಂತೂ ಅನೇಕ ಅಮೇರಿಕನ್ ಮಹಿಳೆಯರು ಭಾರತೀಯ ಮಹಿಳೆಯರ ಹಾಂಗ ಸೀರೆ ಉಟ್ಟುಕೊಳ್ಳಲಿಕ್ಕೆ ಕಲ್ತಾರ. ಎಲೆ ಮಣೆ ಮೇಲೆ ಕೂತುಗೊಂಡು ಊಟಾ ಮಾಡತಾರ. ಬರಿಗೈಲೆ

ಬಾಳೆ ಎಲೆಯಿಂದ ಶಾವಿಗಿ ಪಾಯಸ ಕೂಡ ಉಣ್ಣಲಿಕ್ಕೆ ಸಮರ್ಥರು ಆಗ್ಯಾರ...

ಶರಯೂ : ಪರಸ್ಪರ ತಿಳುವಳಿಕೆ, ಸದ್ಭಾವನೆಗಳು ಬೆಳೆಯಲಿಕ್ಕೆ ಇಂತಹ ಸಾಮಾಜಿಕ ಸಂಬಂಧ, ವಿಚಾರ ವಿನಿಮಯ ಬೇಕು.

ಭಾ : ಏನಂತಾಳ ಈಕಿ! ಯಾರೋ ಅಮೇರಿಕಾದ ಮುತ್ತೈದಿ ಮಾತು ಹೇಳತಾಳ.

ಗಂ : (ತನ್ನೊಳಗೆ) ಏನಂತಾವ ಇವು. ರಶಿಯೊಾದಾಗ ಎಲ್ಲಾ ಕುಂಕು ಮದ ಬಣ್ಣ!...ತನಗ ನೋಡಿದರ ಹಸರು ಹಣೇಮ್ಯಾಲೆ ಬೊಟ್ಟು ಕುಂಕುಮ ಇಲ್ಲ.

ಶಾ : ಅಂದರ ನೀವು ನಮ್ಮ ಮೈದುನನ ಜೋಡಿ Ph. D. ಅಭ್ಯಾಸ ಮಾಡಲಿಕ್ಕೆ ಬಂದೀರೇನು ?

ಭಾ : ಏನ ಪಚಡೊ, ಏನೋ!...ನಿನ್ನ ಮೈದುನನ ಜೋಡಿ ಏನು ಓದ ತಾಳ ಈಕಿ! ಮತ್ತೇನು...ಓದತಾಳೊ ಏನೊ ಊದತಾಳೊ ಅವನ ಕಿವ್ಯಾಗ.

ಶಾ : ಅಂದರ ನಮ್ಮಲ್ಲಿಯ ಕೌಟುಂಬಿಕ ಜೀವನದ ಅಭ್ಯಾಸ ಮಾಡಿ Ph. D. ಮಾಡುವವರೇನು ನೀವು ?

ವಿ : Yes, yes...ನಿಜಾ. ನಿಮ್ಮ ಮಕ್ಕಳು ಸಂಖ್ಯೆ ?

ಶಾ : ಮೂರು ಗಂಡು, ಮೂರು ಹೆಣ್ಣು!

ವಿ : ( ಬಾಯಿಮ್ಯಾಲೆ ಕೈಯಿಟ್ಟುಕೊಂಡು ) My God!...ಸ್ಟಾಪ್ ಮಾಡಿರಿ...You must have only three !

ಭಾ : ಅಯ್ಯಯ್ಯ! ಈಕಿ ಮಂಕೀ ಹಾಕೋ ವೈದ್ಯಳು ಕಾಣಸ್ತದ'... ಮಕ್ಕಳು ಉಂಡರ ಕೇಡಲ್ಲ ಅಂತಾರ. ಬಾಣಂತಿತನ ಮಾಡಲಿಕ್ಕೆ ನಾ ಗಟ್ಟಿ ಇದ್ದೀನಿ. ಈಕಿಗೆ ಯಾಕ ಇಷ್ಟು ಘಾಬರಿ' ತಾ ಬರತಾಳೇನು ಬಾಣಂತಿತನಕ್ಕ.

ವಿ : ನಿಮ್ಮ ಗಂಡಾ- brother -

ಶಾ : (ನಕ್ಕು) ಮೈದುನ ಅಂತಾರ.

ವಿ : (ನಕ್ಕು) Sorry...ಮಾಯಡ್ ದೋನ್!...ನಿಮ್ಮದು ಮಾಯಡ್ ದೋನ್ ಒಳ್ಳೆಯವರು.

ಭಾ : ಅಯ್ಯ ಸುಡ್ಲಿ! ಹುಡುಗನ ಮ್ಯಾಲೆ ಏನೋ ಘಾಲು ಹಾಕಿಧಾಂಗ ಕಾಣತದ ಈಕಿ ಈಗ ಇದಕ್ಕ ಮೂಗುದಾಣ ಹಾಕಬೇಕು (ಅವರ ಬಳಿಗೆ ಸಮೀಪಿಸಿ, ಏನs ಶಾಲ್ಯಲಾ, ಕೂತುಬಿಟ್ಟಿಲ್ಲ ಹರಟಿ ಹೊಡ ಕೋತ!...ಇದೇನು ಗಂಡೊ-ಹೆಣ್ಣೊ...ಏನು ಗಂಡುರಾಮ್ಯೊ !

ವಿ : (ನಮಸ್ಕಾರ ಮಾಡಿ) ನಮಸ್ತೆ!

ಶಾ : ಇವರು ನಮ್ಮ ಅತ್ತೆವರು.

ವಿ : Pardon?
( ಭಾಗೀರಥಿಬಾಯಿ ವಿಚಿತ್ರವಾಗಿ ನೋಡತೊಡಗುವಳು )

ಶಾ : ನಮ್ಮ Mother in-law !

ವಿ : ಓ! Good good! ನಮಸ್ತೆ... ಅಟ್ಟಿವಾರು !

ಭಾ : ನಿನಗೆಲ್ಲಿ ಅತ್ತೆವರ ನಾಸು ?

ವಿ : Pardon ?

ಭಾ : ಏನಂತಾಳೊ ಏನೊ.

ಶಾ : ಆಕೀ ಜೋಡಿ ಸ್ವಲ್ಪ ಮಾತಾಡ್ರಿ, ಅತ್ತೆವರ ಬಹಳ ಸ್ವಾರಸ್ಯ ವ್ಯಕ್ತಿ. ನಮ್ಮ ಕಡೆಯು ಕೌಟುಂಬಿಕ ಜೀವನ ಹ್ಯಾಂಗ ಇರತದ ನಮ್ಮ ಸಂಸ್ಕೃತಿ. ಸಂಪ್ರದಾಯ, ನಮ್ಮ ಊಟ ಉಡಗಿ ಗೌರಿ-ಗಂಗಿ ಹಬ್ಬ ಹುಣ್ಣಿವಿ ಎಲ್ಲಾ ಅಭ್ಯಾಸ ಮಾಡಲಿಕ್ಕೆ ಬಂದಾರ.

ಭಾ : ಹೂಂ. ನೀ ಸಾಲಿ ಹಾಕಿ ಕಲಿಸಲಿಕ್ಕೆ ಕೂತಿಯೇನೊ ನಮ್ಮ ಹಬ್ಬಾ ಹುಣ್ಣಿವಿ, ನಮ್ಮ ಮಡೀಮ್ಯಲಗಿ ತಗೊಂಡು ತಾಯೇನು ಮಾಡತಾಳಂತ. ನೀ ಮತ್ತ ಆಕಿನ್ನ ಅಷ್ಟು ಅಡಿಗಿಮನ್ಯಾಗ ಹೊಗಿಸಿ ಮೈಲಿಗಿ ಕಲಸ ಬ್ಯಾಡಾ. ಆಚಾರವಂತರ ಮನೀ ನಮ್ಮದು. ಬೇಕಾದರ ನಿಮ್ಮ ತೌರುಮನಿಯೊಳಗ ಮೈಲಿಗಿ ನಿಂದ ಕಲಿಸು, ಸಾಲೀನಾರ ಕಲಿಸು.

ಶಾ : ವಿಶಲೊಸ್ಕೊವಾ ಅಂದರ ಮಡಿವಂತಿಕೆಗೇನೂ ಕಡಿಮಿ ಇಲ್ಲಾ.

ಭಾ : ಹೌದು ಕೂದಲಾ ಕತ್ತರಿಸಿಗೊಂಡು ಮಡೀ ಹೆಂಗಸರ ಹಾಂಗ ಇದ್ದಾಳ.

ಶಾ : ಅಯ್ಯ ಬಿಡ್ರಿ ಅತ್ತೆವರ ವಾಗತ್ಯದ ಮಾತು ಆಡಬ್ಯಾಡರಿ.

ವಿ : (ನಕ್ಕು) ಏನು? ಏನು? ಶಾಲ್ಯಾಲಾದೇವೀ?

ಭಾ : ಅಯ್ಯ ಖೋಡಿ ಕನ್ನಡ ಎಲ್ಲಾ ಅರ್ಥಮಾಡಿಕೊಳ್ಳಲಿಕ್ಕೆ ಹತ್ಯಾಳೊ ಏನೊ!

ಶಾ : ಕನ್ನಡ ಅಷ್ಟ ಅಲ್ಲಾ. ನಮ್ಮನ್ನ ನಿಮ್ಮನ್ನ ಕೂಡಾ ಅರ್ಥಮಾಡಿಕೊಂಡಾಳ. ಹಾಂಗ ನೋಡಿದರ ನಮ್ಮ ಮೈದುನ ದೇವರನ್ನ ಸುದ್ದಾ ಅರ್ಥಮಾಡಿಕೊಂಡಾಳ-

ಭಾ : ಅಂತೀಯರೆ ಏನ ನಮ್ಮನ್ನ ?

ವಿ : ಜಗಳ, ಜಗಳ No-no ! ಪ್ರೀತಿ, ಪ್ರೀತಿ !

ಭಾ : ಅಯ್ಯ ಪ್ರೀತಿ! ಯಾರಿಗೆ ಬೇಕಾಗೇದ ನಮ್ಮನ್ನ ನಿನ್ನ ಪರದೇಶೀ ಪ್ರೀತಿ.

ಶಾ : ಪರದೇಶದಿಂದ ಬಂದರೂ ಪರದೇಶಿ ಅಲ್ಲ ಅತ್ತೆವ್ರ, ಆಕಿ ತಂದಿ, ತಾಯಿ ಎಲ್ಲಾರೂ ಇದ್ದಾರ.



ಭಾ : ನೀಯಾಕ ಈಗ ಅವರ ಕುಲಾ ಗೋತ್ರ ಎಲ್ಲಾ ಕೇಳಲಿಕ್ಕೆ ಹೋಗ್ತಿದ್ದಿ?...ಹೂಂ. ತಾಸು ರಾತ್ರಿ ಆತು. ಇನ್ನೂ ಇಲ್ಲೇ ಕುಕ್ಕರಿಸ್ಯಾಳ ಅಲ್ಲಾ ಈಕಿಗೇನು ಅಡಿಗಿ–ಕೆಲಸಾ ಇಲ್ಲೇ ಇಲ್ಲೇನು? (ವಿ-ಗೆ) ಥಣ್ಣಗ ಅಷ್ಟು ಕುಂಕವು ಹಚ್ಚಿಕೊಂಡು ಹೋಗ ನನ್ನವ್ವ-ರಾತ್ರಿ ಆತು ನಿನ್ನ ಜೋಡಿ ಇನ್ಯಾರು ಬರಬೇಕಿನ್ನ. (ಶಾ ಗೆ) ಯಾಕ ಸಂಜಿ ಅಡಿಗಿ ಇಲ್ಲೇನು ಇವೊತ್ತ? (ಒಳಗೆ ಹೋಗುವಳು)

ಕಾ : ಶರಯೂ ಮೊನ್ನೆ ಅಮೇರಿಕೆಯಿಂದ ಭಾಗವತರ್ ಅಂತ ದಕ್ಷಿಣಾದಿ ಸಂಗೀತಗಾರರು ಬಂದಿದ್ದರು: ಏನು ಅವರ ಸಂಗೀತ! ನೋಡು ಶರಯೂ, ನನಗ ಕೂಡ ದಕ್ಷಿಣಾದಿ ಸಂಗೀತ ಬಾಯಿಗೆ ಒಲಿಯೂದಿಲ್ಲ ಅಂಥಾದ್ದು ಅವರ ಕಚೇರಿ ಕೇಳಿದರ ಥೇಟ್ ಅಯ್ಯಂಗಾರ್ರ ಅಂಕೊಂಡು ಕುಡಿದಹಾಂಗ ಹಾಡಿದರು!

ಶ : ಅಲ್ಲಾ ಕಾವೇರಿ, ಅಮೇರಿಕನ್ನರು ನಮ್ಮ ಭಾರತೀಯ ಸಂಗೀತ ಸಂಸ್ಕೃತಿ ಸಾಮಾಜಿಕತೆ ಇವುಗಳನ್ನೆಲ್ಲಾ ಒಂದು ರಾಜಕೀಯ ತಂತ್ರ ಅಂತ ಅಭ್ಯಾಸ ಮಾಡತಾ ಇದ್ದಾರೊ ಇಲ್ಲಾ ಕೇವಲ ಕಲಾಪ್ರೇಮವೊ?

ಕಾ : ಕೇವಲ ಕಲಾಪ್ರೇಮ ಕೇವಲ ಶುದ್ಧ ಮಾನವೀಯ ಪ್ರೇಮ ಹೇಳಿದೆನಲ್ಲ - ಭಾರತೀಯ ಹೃದಯವನ್ನು ಗೆಲ್ಲುವಂತಹ ಮೋಹನಾಸ್ತ್ರ ಅಮೇರಿಕಾ ಪಡೆದದ.

ಶ . Transplantation of Indian heart! ಅಲ್ಲೇನು?

ಕಾ : ಅಲ್ಲ ಅಮೇರಿಕೆಯ ಮೈಗೆ ಭಾರತೀಯ ಹೃದಯದ ಕಸಿ! ಹೃದಯ ವಿನಿಮಯ.

ಶ ಕಾವೇರಿ ಜಗತ್ತು ಒಂದಾಗಬೇಕಾದರೆ ಜಗತ್ತಿನ ಹೃದಯಗಳು ಒಂದಾಗಬೇಕು-

ಕಾ : ಎಲ್ಲಾ ಹೃದಯಗಳೂ ಕೂಡಿ ಒಂದು ದೊಡ್ಡ ಹೃದಯ ಆಗಬೇಕು. ಮಹಾಮಾನವ ಹೃದಯ.

ಶ : ಸಂಯುಕ್ತರಾಷ್ಟ್ರ ಹೃದಯಾ ಅನ್ನಬೇಕಾದರೆ.

ಕಾ : ಬಹಳ correct ಆಗಿ ಹೇಳಿದೆ ಶರಯೂ. ಜಗತ್ತಿನಲ್ಲಿ ಯುದ್ಧ ಅನ್ನೋದು ಇಲ್ಲವಾಗಿ ಶಾಶ್ವತವಾದ ಶಾಂತಿ ಅನ್ನೋದು ನಿಲ್ಲಬೇಕಾದರೆ—

ಶ : ಪ್ರೀತಿಯ ಪಾಯಾ ಬೇಕು.

ಕಾ : ಹೌದು. ಯುದ್ಧದ ಅಪಾಯ ಹೋಗಲಾಡಿಸಲಿಕ್ಕೆ ಪ್ರೀತಿಯ ಪಾಯಾ ಹಾಕಬೇಕು.

ಶ : ಈ heart transplantation ಅನ್ನೋದು ದೇಶದಿಂದ ದೇಶಕ್ಕೆ dollar ನ ಹಾಂಗ exchange money ಆದ ಹಾಗೆ ಆಗಬೇಕು.

ಕಾ : ಆದರೆ ಯಾವ ಹೃದಯವೂ ಅಪಮೌಲ್ಯ ಹೊಂದಬಾರದು.

ಶ : Blood Banks ಇದ್ದ ಹಾಗೆ ಹೃದಯಗಳ ಬ್ಯಾಂಕುಗಳೂ ಇರಬೇಕು

ಕಾ ಹೌದು ಹೃದಯಗಳ World Bank ಒಂದು ಇರಬೇಕು. ಹೃದಯ ದರಿದ್ರರಿಗೆ ಅದು ಹಾರ್ದಿಕ ಸಂಪತ್ತನ್ನು ಸಾಲವಾಗಿ ಕೊಡಬೇಕು

ಶ : ಕಾವೇರಿ ಈ ಅಂತಾರಾಷ್ಟ್ರೀಯ ಮಟ್ಟದ ಮೇಲೆ ಪ್ರಪಂಚ ಹೃದಯ ಸಂಸ್ಥೆ ಅನ್ನೋದನ್ನ ಕಟ್ಟುವ ಉದ್ದೇಶದಿಂದ ನೀವೇ ಮೊದಲ ಪಾಯಾ ಹಾಕಬೇಕು. ಏನಂತೀರಿ ಇದಕ್ಕ?

ಕಾ ಶರಯೂ ನೀವು ಭಾಷೆ ಗೋಡೆಗಳನ್ನು ಭೇದಿಸಿ ನಿಮ್ಮ ಹೃದಯ ವೈಶಾಲ್ಯ ತೋರಿದ್ದೀರಿ. ನಾನೂ ಕೂಡ ನನ್ನ ಹೃದಯವನ್ನ ಅಮೇರಿಕೆಯ ಹೃದಯಕ್ಕೆ ವಿನಿಮಯ ಮಾಡಿಕೊಳ್ಳಬೇಕು ಅಂತ ನಿರ್ಧರಿಸಿದ್ದೀನಿ.

ಶ : Congratulations! ಅಮೇರಿಕನ್ ಅಳಿಯ! ಆದರೆ ಆ ಪುಣ್ಯಾತ್ಮ ಯಾರು ಅಂತ ಕೇಳಬಹುದೆ?

ಗಂ : ಏನು ಕಿವಿ ಕಚ್ಚ್ಯಾಡಲಿಕ್ಕೆ ಹತ್ಯಾವ ಇವು ಅಂತೀನಿ...ಇಷ್ಟಕ್ಕ ಬಿಟ್ಟರ ಬಗಿಹರಿಯೂದಿಲ್ಲ (ಪಡಸಾಲೆಯೊಳಗೆ ಪ್ರವೇಶಿಸಿ) ಯಾರ ಜೋಡಿ ಹರಟಿಕೊಚ್ಚಲಿಕ್ಕೆ ಹತ್ತೀದಿ ಹರೇಮಿ? ಗಂಡಸರ್ಯಾರೂ ಬಂದಿಲ್ಲ ಹೌದಲ್ಲೊ ಖೋಲ್ಯಾಗ?

ಕಾ : ಇವರು ನನ್ನ ಗೆಳತಿ ಅವ್ವಾ ಶರಯೂ

ಗಂ : ಓಹೋ! ಅಯೋಧ್ಯಾದ ಶರಯೂ ನದಿ ಕಾವೇರಿಗೆ ಹರದ ಬಂತೇನು?

ಶ : ಇಲ್ಲಾ ಅಜ್ಜೀ ಕಾವೇರಿ ನದಿ ಹರೀತಾ ಹರೀತಾ ನೈಗಾರಾ ಧಬಧಬೆಯೊಳಗ ಕೂಡಲಿಕ್ಕೆ ಹತ್ತೇದ

ಗಂ : ನನಗೇನು ತಿಳೀಬೇಕು ನಿಮ್ಮ ನಾಗರಾ ಪಾಗರಾ...ಅದೇನು ಪುರಾಣದಾಗ ಬಂದಿಲ್ಲಾ, ಪುಣ್ಯಕಥಿಯೊಳಗ ಬಂದಿಲ್ಲಾ ಶರಯೂ ಅಂದರ ಯಾವ ಜಾತಿ?

ಕಾ : ನದೀ ಜಾತಿ ಅವ್ವ. ನೀರಿನ ಜಾತಿ!

ಗಂ : ಹೂಂ! ಎಲ್ಲರೂ ನದೀ ಜಾತಿಯವರ ಇದ್ದೀವಿ ಬಿಡು ಯಾಕ ಶರಯೂ ಯಾವ ಜಾತಿ ನಿಮ್ಮದು?

ಕಾ: ಸಾರಸ್ವತ!

ಗಂ : ಏನಂತ? ಸ್ಮಾರ್ತರ?







ಕಾ : ಅಲ್ಲವ್ವ ! ಸರಸ್ವತೀ ಜಾತಿಯವರು, ಸರಸ್ವತೀ ಕುಲದವರು. ಸಾರಸ್ವತರು ಅಂದರ ಸರಸ್ವತಿನ್ನ ಒಲಿಸಿಕೊಂಡವರು ಅಂತ ಅರ್ಥ.

ಗಂ : ಮೊದಲ ಲಕ್ಷ್ಮೀನ್ನ ಒಲಿಸಿಗೋ, ಆ ಮ್ಯಾಲೆ ಸಂಸ್ಕೃತಿ. ಲಗ್ನ ಆಗೇದೇನ?

ಕಾ : ಹೂಂ! ಶಾಂತಿನಿಕೇತನದ ಸೊಸೆ ಈಕೆ!

ಗಂ : ಯಾರ ಸೊಸಿ? ನಾಯಕ ಶಾಂತಾಬಾಯಿರ ಸೊಸಿನ?...ನೋಡಲಿಕ್ಕೆ ಛಂದ ಇದ್ದಾಳ ಬಿಡು ಗೌರಿ ಹಾಂಗ.

ಕಾ : ಇವರ ಮನಿ ಅಂದರ ಪುಟ್ಟ ಭಾರತ ಇದ್ದ ಹಾಂಗ. ಎಲ್ಲಾ ರಾಷ್ಟ್ರೀಯ ಭಾಷೆಗಳ ಸಂಯುಕ್ತ ಸಂಘ ಆಗೇದ ಇವರ ಮನಿ. ಎಲ್ಲಾ ಭಾಷಾದಿಂದನೂ ಒಬ್ಬೊಬ್ಬ ಅಳಿಯಂದಿರು.

ಗಂ : ಅಯ್ಯ ಇದೇನ ಕಾವೇರಿ ಯಾರೋ ಗಂಡಸರು ಬಂಧಾಂಗ ಕಾಣಸ್ತದ. ನೋಡು ಎಂಥಾ ಲಕ್ಷಣಾಗಿ ಗಾಂಧಿ ಟೊಪ್ಪಿಗಿ ಹಾಕ್ಯಾನ. ಭಂಗಾರದ ಮೈ ಬಣ್ಣ! ಥೇಟ ಪುಟ್ಟ ನೆಹರೂನ್ಹಾಂಗ ಕಾಣತಾನ ನೋಡು...ಯಾರು ಬೇಕ್ರಪ? ಬರ್ರಿ. ಒಳಗ.

(ಹೋಗುವಳು)

## ದೃಶ್ಯ ೩

(ದೃಶ್ಯ ಯೋಜನೆ ಎರಡನೆಯ ದೃಶ್ಯದಂತೆ)

ಗಂಗಾ : ಖೋಡಿ ತಾಯಿಯಿಲ್ಲದ ಹುಡಿಗೆ ಅಂತ ಒದಿಷ್ಟು ಅಚ್ಛೆ ಮಾಡಿ ತಲಿಮ್ಯಾಲೆ ಕೂಡಿಸಿಕೊಂಡಾ ನಿಮ್ಮಪ್ಪ. ಅವನದೇ ತಪ್ಪು ನೀನಾರೆ ಏನು ಮಾಡೀ? ಈಗ ಅವನಿಗೇ ತಿರುಗಿಬಿದ್ದು ಅವಾ ನೋಡಿದ ವರಕ್ಕ ಮೂಗು ಮುರಿತೀಯಲ್ಲ? ಅಲ್ಲಾ ನಿನ್ನ ಮನಸ್ಸಿನೊಳಗಾರ ಏನದ? ಹೆಣ್ಣು ಹುಡಿಗಿ ಆಗಿ ಮದುವೆ ಒಲ್ಲೆ ಅಂದರ ನಾಳೆ ಏನು ಎಲ್ಲಿಮ್ಮನ ಗುಡ್ಡದಾಗ ಜೋಗತಿ ಆಗತೀ ಏನು ? ಬ್ರಾಹ್ಮಣರ ಮನೆತನದಾಗ ಹುಟ್ಟಿ ಹೀಂಗ ಅಡ್ನಾಡಿತನ ಮಾಡಿದರ ಇದ್ದವರೇನು ಉರ್ಲ ಹಾಕಿಕೊಂಡರ ಸೈ ...

ಕಾವೇರಿ : ಅಲ್ಲs ಅಜ್ಜಿ ಮದುವೆ ಆಗೋ ಉದ್ದೇಶ ಆದರೂ ಏನು?

ಗಂಗಾ : ಅಯ್ಯ ನನ್ನ ಹಣೇಬರಹ ! ಇದಂಥಾ ಪ್ರಶ್ನೆ ಕೇಳತೀಯೆ ಹುಚ್ಚಖೋಡಿ ನೀ ಏನು ಹೆಣ್ಣಾರ ಹೌದಲ್ಲೊ ! ಯಾರಿಗ್ಗೊತ್ತು, ಮತ್ತ ಈಗಿನ ಕಾಲದಾಗ ಹೆಣ್ಣು ಹೋಗಿ ಗಂಡೂ ಆಗತಾವಂತ! ದೇವರ ನಮ್ಮಪ್ಪ. ಥಣ್ಣಗ ಹಾಂಗೇನಾದರೂ ನಮ್ಮ ಕಾವೇರಿ ಗಂಡಸಾಗಿ ಬಿಟ್ಟರ ಜೋಡು ಕಾಯಿ ಒಡಸತೀನಿ ನಿನಗ!

ಕಾವೇರಿ : ಅಲ್ಲಜ್ಜೀ ಭಾರತೀಯ ಸಂವಿಧಾನದೊಳಗ ಪುರುಷರಿಗೆ ಇರೋ ಅಷ್ಟೇ ಅಧಿಕಾರ ಸ್ತ್ರೀಯರಿಗೂ ಅದ.

ಗಂಗಾ : ಹುಚ್ಚಖೋಡಿ ಸರಕಾರದ ಮಾತು ಶ್ರಾದ್ಧ ನೇಮಕ್ಕ ಲಾಗು ಆದೀತೇನ! ನಾಳೆ ನೀರು ಬಿಡಲಿಕ್ಕೆ ಅಂತಾರೆ ಒಬ್ಬ ಮಗಾ ಬ್ಯಾಡೇನು? ಇನ್ನೇನು ಬರಬರತ ಸ್ವತಂತ್ರ ಅಧಿಕಾರ ಅಂತ ಹೇಳಿ ಹೆಂಗಸರು ಸುದ್ದಾ ನೀರು ಬಿಡಲಿಕ್ಕೆ..... ಥೂ ನಮ್ಮವ್ವ ಇಲ್ಲಿಲ್ಲದ ಅವಲಕ್ಷಣದ ವಿಚಾರ!

ಕಾವೇರಿ : ಅಜ್ಜೀ ಮದಿವಿ ಆಗೂದು ಅಂದರ ನೀರ ಬಿಡಲಿಕ್ಕೆ ಒಬ್ಬ ಗಂಡಸ ಮಗನ್ನ ತಯಾರು ಮಾಡೂದು, ಅಷ್ಟ ಅಂತೀ ಏನು?

ಗಂಗಾ : ಯಾಕ ಊಟ ಉಡಿಗಿ, ಸಂಸಾರಾ, ಹಬ್ಬ ಹುಣ್ಣಿವಿ ಯಾವುದೂ ಬ್ಯಾಡಾ ಅಂತೀ ಏನು?

ಕಾವೇರಿ : ಸಂಸಾರ ಅಂದ ಮ್ಯಾಲೆ ಸುಖದಿಂದ ಸಾಗಬೇಕೊ ಬ್ಯಾಡೊ?

ಗಂಗಾ : ಅಯ್ಯ ಇದೇನು ಪ್ರಶ್ನೆ ಕೇಳತೀಯೆ? ನಾಳೆ ಗಂಡಸ ಮಗನ ತಾಯಿ ಆದಿ ಅಂದರ ಯಾರಿಗೆ ಸುಖ-ಸಂತೋಷ ಆಗಲಿಕ್ಕಿಲ್ಲ?

ಕಾವೇರಿ : ಸುಖ ಸಂತೋಷ ಆಗಬೇಕಾದರ ಮದಿವಿ ಹಿಂದ ಪ್ರೀತಿ ಅಂತ ಬೇಕಾಗತದ. ಪ್ರೀತಿ ಇಲ್ಲದ ಮದಿವಿ ಮಾಡೂದು ಅಂದರ ಗೂಣಕ್ಕ ಎತ್ತು ಕಟ್ಟಿದ ಹಾಂಗ.

ಗಂಗಾ : ಸಾಕು ಬಾಯಿ ಹರಿ ಬಿಡಬ್ಯಾಡ. ನಮ್ಮ ಪುರಾಣದಾಗ ಅಹಲ್ಯಾ ದ್ರೌಪದಿ, ಸೀತಾ ಇವರ ಉದಾಹರಣೆ ಎಲ್ಲಾ ಏನು ಹೇಳತಾವ?

ಕಾವೇರಿ : ಏನು ಹೇಳತಾವ ಎಲ್ಲಾರೂ Love marriage ಮಾಡಿಕೊಂಡಿದ್ದರು ಅಂತ ಹೇಳತಾವ ಅಹಲ್ಯಾ ಅಂತೂ ಸನ್ಯಾಸಿ ಕಾಲಾಗ ಬ್ಯಾಸತ್ತು ದೇವೇಂದ್ರನ ಕೈ ಹಿಡಿದಳು; ದ್ರೌಪದಿ ಅಂತೂ ಈಗಿನ ಕಾಯದೇಕ್ಕ ವಿರುದ್ಧ ಆಗಿ ಐದು ಮಂದಿನ್ನ ಮಾಡಿಕೊಂಡಳು ಸೀತಾ ಅಂತೂ ಶರ್ತ ಇಟ್ಟು ಮದಿವಿ ಆದಳು. ಅಜ್ಜೀ, ನಮ್ಮ ಪತಿವ್ರತೆಯರ personal file ತಗದು ನೋಡಿದರ ಎಲ್ಲಾನೂ ಅಕ್ರಮನs ಅವ. ಪತಿವ್ರತೆಯರು ಅನ್ನೋ ವಿಕ್ರಮ ಸ್ಥಾಪಿಸೋದರೊಳಗ ಅಕ್ರಮದ ವ್ಯವಹಾರಕ್ಕ —

ಗಂಗಾ : ಹೋಗ ನಿನ್ನ ಸುಡ್ಲಿ, ನಿನ್ನ ಜೋಡಿ ಯಾರು ವಾದಾ ಮಾಡತಾರ. ತಲಿತಿರುಕರ ಹಾಂಗ ಮಾತಾಡಿಕೋತ......ಮನ್ಯಾಗಾರ ಕುಕ್ಕರಿಸತೀಯೋ ಏನು ಬಾಗಿಲಾ ಮುಂದ ಮಾಡಿಕೊಂಡು ಹೋಗಲ್ಯೊ? ಹಿತ್ತಲ ಕಡೆ ಕೆಲಸ ಅದ

ಕಾ : ಮನ್ಯಾಗ ಇರತೀನಿ ಅಜ್ಜಿ ನೀ ಏನೂ ಕಾಳಜಿ ಮಾಡಬ್ಯಾಡಾ—

ಗಂ : (ಹೊರಗೆ ನೋಡಿ ಅಯ್ಯ, ಖೋಡಿ ಆ ಗಾಂಧಿಟೊಪ್ಪಿಗಿ ಚೆಲುವ ಮತ್ತ ಬಂದ ನೋಡ...ಏನು ಮಾರಿಮ್ಯಾಲಿನ ಕಳೇ !.... ಮನ್ಮಥಾ ಆಗ್ಯಾನ!... ನೋಡಿಕೋ ಹಾಂಗಾರ ಬರ್ತೀನಿ. (ಒಳಗೆ ಹೋಗುವಳು)

ಕಾ : (ತನ್ನೊಳಗೆ) ಅಜ್ಜಿಗೆ ಗಾಂಧೀಟೊಪ್ಪಿಗಿ ಗೂಢ ಇನ್ನೂ ಅರ್ಥ ಆಗಿಲ್ಲ! ಬರೇ ಒಂದು ಗಾಂಧೀಟೊಪ್ಪಿಗಿ ಅಷ್ಟ ಯಾಕ ಒಳಗಿನ ಅಂತಃಕರಣ ಸುದ್ದಾ ಗಾಂಧೀ! ಅಮೇರಿಕಾಕ್ಕ ಗಾಂಧೀಟೊಪ್ಪಿಗಿ ಹಾಕಿಧಾಂಗ ಆಗೇದ.

(ಒಳಗಿನಿಂದ ಅಜ್ಜಿ : ಬಾಗಿಲಾ ಬಡಕೊಂಡ ಕೂಡಬ್ಯಾಡಾ. ಬರೊ ಹೋಗೂ ಅವರು ಇರತಾರ. ಮನ್ಯಾಗ ಇರೂ ಮತ್ತ)

...(ನಕ್ಕು) ಬಾಗಿಲು ತಗದs ಅದ...ನನ್ನ ಹೃದಯದ ಬಾಗಿಲ,

ಭಾಗ್ಯದ ಬಾಗಿಲ ಮನೆಯ ಬಾಗಿಲ ಎಲ್ಲಾನೂ ತೆರೆದೇ ಅದ ಅಜ್ಜೀ ಕಾಳಜೀ ಮಾಡಬ್ಯಾಡ......

(ಇತ್ತ –)

ಭಾ : ಅಯ್ಯ ಯಾರೋ ಮುತ್ತೈದಿ ಸಾವಿತ್ರಿ ಬಂದಾಳ ನೋಡ ಶಾಲ್ಮಲಾ ಬಾಯಿ ... ಬಾರವ್ವ ಒಳಗ ಬಾ. ಅರಿಷಣ ಕುಂಕುಮಕ್ಕ ಕರೀಲಿಕ್ಕೆ ಬಂದೀ ಕಾಣತದ. ಯಾರ ಮನಿಯಾಕೆವ್ವ ನೀನು ?

ಶಾಲ್ಮಲಾ : (ಪ್ರವೇಶಿಸುತ್ತ ಹೊಸ ಮುತ್ತೈದೆಯ ವೇಷದಲ್ಲಿ ಬಂದ ವಿಶಲೊಸ್ಕೋವಾಳನ್ನು ಗುರುತಿಸಿ, ನಕ್ಕು ಸನ್ನೆ ಮಾಡಿ ಬಂದ ಕೂಡಲು ತಿಳಿಸುವಳು) ಇವರು ದೊಡ್ಡ ವೈದಿಕ ಮನೆತನದವರ ಅತ್ತೆವರ ಅಯ್ಯ ಕೂತುಗೋಳ್ರಿ ನಿಂತಬಿಟ್ರೆಲ್ಲಾ. ಲಕ್ಷ್ಮೀದೇವಿ ಅಂತ ಇವರ ಹೆಸರು.

ಭಾ : ಅಯ್ಯ ಹುಡಿಗಿ ಥೇಟು ಲಕ್ಷ್ಮೀದೇವಿನ ಆಗ್ಯಾಳ. ಮದಿವಿ ಆಗೇದೇನವಾ ? ಯಾರ ಮನೀಯಾಕಿ ನೀನು ?

ಶಾ : ಇನ್ನೂ ಮದಿವಿ ಆಗಿಲ್ಲ.

ಭಾ : ಅಯ್ಯಯ್ಯ ಹೀಂಗೇನು ? ನನಗ ಮದಿವಿ ಆಧಾಂಗ ಕಾಣಿಸಿತು.

ಶಾ : ಕರಿಮಣಿ ಅಲ್ಲದು - ಸಾದಾ ನೆಕ್ ಲೇಸು...

ಭಾ : ಯಾರಮನೀಯಾಕಿ ?

ಶಾ : ಇಲ್ಲಿ ಕಾಲೇಜಿಗೆ ಹೊಸಾ ಪ್ರೊಫೆಸರ ಬಂದಾರ, ಅವರ ಮಗಳು.

ಭಾ : ನಮ್ಮ ನರಸಿಂಹ ಅಭ್ಯಾಸ ಮಾಡೂ ಕಾಲೇಜ ಏನು ?

ಶಾ : ಹೌದು ನಮ್ಮ ಮೈದುನದೇವರ ಕಾಲೇಜಿನ್ಯಾಗ

ಭಾ : ಯಾಕ ಬಂದಿದ್ದೆವಾ ಲಕ್ಷ್ಮೀದೇವಿ? ಕೂತುಗೋ ನೋಡಿದರ ನ ಮನಸ್ಸಿಗೆ ಒಂದು ಥರಾ ಆನಂದ ಅನಿಸತದ

ವಿ : ನಮಸ್ಕಾರ ... (ಸಾಷ್ಟಾಂಗ ನಮಸ್ಕಾರ ಮಾಡುವಳು)

ಭಾ : ಅಯ್ಯಯ್ಯ ಇರ್ಲಿ ಏಳನಮ್ಮವ್ವ ಎಷ್ಟು ರೀತಿಬಾತಿಲೆ ಛಲೋ ಅದ ಹುಡಿಗಿ

ವಿ : ನಿಮ್ಮ ಆಶೀರ್ವಾದ.

ಭಾ : ದೃಷ್ಟಿ ಆದೀತ ಬಿಡ ನಮ್ಮವ್ವ ! ... ಈಗ ಯಾಕ ಬಂದಿದ್ದಿ ?

ವಿ : ನಿಮ್ಮ ಆಶೀರ್ವಾದ !

ಭಾ : ಕೇಳಿದೇನ ಶಾಲ್ಮಲಾಬಾಯಿ!....ಛಲೋ ಶುಚಿರ್ಭೂತ ವೈದಿಕರ ಮಗಳ ಆಗಿರಬೇಕು ಈ ಹುಡಿಗಿ! ನೋಡಲಿಕ್ಕೂ ಹಾಂಗ ಛಂದ ಇದ್ದಾಳ! ಮೊಳಕಾಲಿಗೆ ಬಡಿಯೋ ಹಾಂಗ ಉದ್ದ ಹೆಳಲೇನು, ತಿದ್ದಿ ಮಾಡಿದ ಹಾಂಗ ಕಣ್ಣು ಮೂಗು ಏನು, ಮೈಮಾಟ ಏನು ಛಂದ! ಇದ್ದರ ಇಂಥಾ ಹೆಣ್ಣುಮಕ್ಕಳು ಇರಬೇಕು ನೋಡು.

(ವಿ–ಏನು ಮಾತಾಡಿದರು ಅಂತ ಕೈಸನ್ನೆಯಿಂದ ಕೇಳುತ್ತಾಳೆ. ಶ್ಯಾ- ಆಶೀರ್ವಾದದ ಸನ್ನೆ ಮಾಡಿ ಉತ್ತರಿಸುತ್ತಾಳೆ.)

ವಿ : ನಿಮ್ಮ ಆಶೀರ್ವಾದ !

ಭಾ : ಇಂಗ್ರೇಜಿನೂ ಕಲತಾಳ ಕಾಣತದ.

ವಿ : Yes!....ಇಲ್ಲಾ! (ಶಾಮಲಾ ಗಾಬರಿಗೊಂಡು 'ಹೌದು' ಎಂದು ಗೋಣು ಹಾಕುವಳು, ಹೌದು!

ಶಾ : ಅಂದರ ಇಂಗ್ರೇಜಿ ಐಚ್ಛಿಕ ವಿಷಯ ಅಲ್ಲಂತ. ಕಾಲೇಜಿನಾಗ ಸಂಸ್ಕೃತ ಅಭ್ಯಾಸ ಮಾಡತಾರ

ವಿ : ಹೌದು !

ಭಾ : ಅದರೇನು. ಹೆಣ್ಣು ಹುಡುಗರು ಸಂಸ್ಕೃತ ಕಲತು ಮಾಡಬೇಕೇನು? ಅವರೇನು ದೇವರಪೂಜಿ ಮಾಡಬೇಕಾಗಿಲ್ಲ, ಮಂತ್ರಾ ಹೇಳಬೇಕಾಗಿಲ್ಲ.

ವಿ : ನಿಮ್ಮ ಆಶೀರ್ವಾದ.
(ಶಾ. ಮತ್ತೆ ತಪ್ಪು ಎಂದು ತಲೆ ಅಲ್ಲಾಡಿಸಿದಳು )

ಭಾ : ಛಲೋ ಅದ ಎಲ್ಲಾದಕ್ಕೂ ನನ್ನ ಆಶೀರ್ವಾದ.

ವಿ : ಹೌದು....(Confused) ಇಲ್ಲಾ!....ಶ್ರೀಹರಿ !



ಶಾ : ಅತ್ತೆವರ, ಇವರು ಮೌನಗೌರೀವ್ರತಾ ಆಚರಿಸತ ಇದ್ದಾರ ದೇವರ ನಾಮೋಚ್ಚಾರದ ಹೊರತು ಇನ್ನ ಮೂರು ತಿಂಗಳ ಇನ್ನೇನೂ ಮಾತಾಡೋದಿಲ್ಲ. ಹೌದು ಅಲ್ಲ ಆಶೀರ್ವಾದ, ಶ್ರೀಹರಿ! ಇಷ್ಟೆ ಶಬ್ದ ಉಚ್ಚಾರ ಮಾಡತಾರ

ಭಾ : ನೋಡವ್ವ! ನಮ್ಮಂಥವರಿಗೆ ಸುದ್ಧಾ ಮೌನಗೌರಿ ವ್ರತಾ ಮಾಡಲಿಕ್ಕ ಆಗಿಲ್ಲ ಅಂಥಾದ್ದು ಇನ್ನೂ ಕೌಮಾರ್ಯದೊಳಗ ಇದೇನು ನಿಷ್ಠಾ ಅಂದರ ಬಹಾಳ ದೊಡ್ಡ ಮಾತು...

ವಿ : ನಿಮ್ಮ ಆಶೀರ್ವಾದ ಶ್ರೀಹರಿ ಇಚ್ಛೆ !

ಭಾ : ಹೌದ ನಮ್ಮವ್ವ!! [ಅತ್ಯಂತ ವಾತ್ಸಲ್ಯದಿಂದ ಹಣೆಗೆ ಕೈ ಹಚ್ಚಿ ಬೆರಳು ಮುರಿಯುವಳು.] ನಿಮ್ಮ ಗೋತ್ರ ಏನವ್ವ ಲಕ್ಷ್ಮೀದೇವಿ?

ವಿ : ಸ್ಟಾಲಿನ್‌ಗ್ರಾಡ್' !! [ಮರೆತು ನಾಲಿಗೆ ಕಚ್ಚಿಕೊಳ್ಳುವಳ . ಶ್ಯಾಲ್ಮಲಾ ಬೆರಳು ಜಾಡಿಸಿ ಒದ್ದಾಡುವಳು ]

ಶಾ : ಅಂದರ ಅತ್ತೆವರ, ಸಂಸ್ಕೃತದೊಳಗ ಗೋತ್ರ ಅನ್ನಲಿಕ್ಕೆ ಗ್ರಾಡ್ ಅಂತಾರ.

ಭಾ : ಯಾವ ಗೋತ್ರಂತ ?

ಶಾ : ಶಾಲೀವಾನ್ ಅಂತ!

ಭಾ : ಅಯ್ಯ ಅದೆಂಥಾದ್ದ?

ಶಾ : ಗೋತ್ರ ಬಿಡತದಲ್ರೀ ಅತ್ತೆವರ?

ಭಾ : ನಾನೂ ಅದ ವಿಚಾರ ಮಾಡತಿದ್ದೆ ಹೌದೇಳು, ಅವರ ಗೋತ್ರ ಯಾವುದಾರ ಇರಲಿ. ನಮ್ಮ ಗೋತ್ರ ಬಿಡತದ ಆತು.

ಶಾ : ಅಂತಃಕರಣಾನ ಪ್ರಮಾಣ.

ಭಾ : ಆಗಲಿ ಇವರೂ ಮನೀಗೆ ಬರ್ಲಿ ಹೇಳ್ತಿನಿ. ನಮ್ಮ ನರಸಿಂಹ ನೋಡ್ಯಾನೇನು ಈ ಹುಡಿಗಿನ್ನ.

ಶಾ : ನೋಡಿದಹಾಂಗೇನೂ ಇಲ್ಲ ಆದರ ನೀವು ಹಿರೇರು ನಿಶ್ಚಯ ಮಾಡಿದಮ್ಯಾಲೆ ಅವರು ನೀವು ಹಾಕಿದ ಗೆರಿ ಎಂದಾದರೂ ದಾಟಲಿಕ್ಕೆ ಸಾಧ್ಯ ಅದ ಏನು ಅತ್ತೆವರ?

ಭಾ : ಏನs ಲಕ್ಷ್ಮೀದೇವಿ......(ಅತ್ಯಂತ ಭಾವನಾಪೂರ್ಣವಾಗಿ) ನಮ್ಮ ಮನೀಗೆ ಲಕ್ಷ್ಮೀದೇವಿ ಆಗಿ ಬರತೀ ಏನು? ಬಂದಬಿಡು ನನ್ಮನ್ನ ನನ್ನ ಸೊಸಿಆಗಿ...ಹೊಟ್ಟತುಂಬ ಹರಸ್ತೀನಿ ನೋಡು.

ವಿ : (ಸಾಷ್ಟಾಂಗ ನಮಸ್ಕಾರಮಾಡಿ) ನಿಮ್ಮ ಆಶೀರ್ವಾದ.

ಭಾ : ಮುತ್ತೈದಿ ಸಾವಿತ್ರಿ ಆಗು!...ಗಂಡಸ ಮಗನ ತಾಯಿ ಆಗು!

ವಿ : ರೂಸೋ ಭಾರತ್ ಜಿಂದಾಬಾದ್ !

ಭಾ . ನೋಡಿದ್ಯಾ ಹ್ಯಾಂಗ ಅರಳು ಹುರಿಧಾಂಗ ಸಂಸ್ಕೃತ ಮಾತಾಡತಾಳ

(ಇತ್ತ)

ಶರಯೂ : (ಪ್ರವೇಶಿಸುತ್ತ) ಅಜ್ಜೀ–

ಅಜ್ಜಿ : (ಪ್ರವೇಶಿಸಿ) ಯಾರು ಶರಯೂ ಏನು?...ಬಾರs ನಿನ್ನ ಗೆಳತಿ ಬಾಗಲಮುಂದ ಇರು ಅಂತ ಸಾರಿ ಸಾರಿ ಹೇಳಿದರೂ ಎಲ್ಲೋ ಹೋಗಿ ಬಿಟ್ಟಾಳ ನೋಡು.

ಶರಯೂ : ನನಗ ಬಾಗೀಮುಂದ ಇರೂ ಅಂತ ಹೇಳಿ ಹೋಗ್ಯಾಳ... ಅಲ್ಲಾ ಅಜ್ಜೀ, ಗಾಂಧೀ ಟೊಪ್ಪಿಗಿ ನೆಹರೂ ಶರ್ಟ–

ಅಜ್ಜಿ : ಹೌದೇಳು!...ಯಾರ ಹುಡುಗನ ಅವ?......ಹುಡುಗ ಎಷ್ಟು ಚೆಲುವ ಇದ್ದಾನ

ಶರಯೂ : ದೊಡ್ಡ ಜಹಗೀರದಾರರ ಮಗಾ' ಬಾಜೂಮುನಿ, ನಮ್ಮ ಮನೆಯವರ ಸ್ನೇಹಿತ. ಹುಡುಗ ಭಲೋ ವರಾ ಇದ್ದಾನು.



ಅಜ್ಜಿ : ವರಾ ಏನೋ ಇದ್ದಾನ. ಯಾರಿಗೆ ಗಂಟು ಹಾಕಲಿ ಹೇಳು! ...ನಾ ಗಂಟ ಹಕ್ಕೊಳ್ಳಾ ಮತ್ತ? ನಿನ್ನ ಗೆಳತಿ ನೋಡು ಚಿರಕುಮಾರಿ ಆಗಿರತೀನಿ ಅಂತಾಳಲ್ಲ !

ಶರಯೂ : ಇಲ್ಲಾ ಅಜ್ಜೀ-ನಾನು ನಿಮಗ ತಿಳಿಸಲಿಕ್ಕೆ ಅಂದs ಬಂದೀನಿ. ಕಾವೇರೀನು ಒಪ್ಪಿಕೊಂಡಾಳ. ಹುಡುಗ ಕನ್ಯಾ ನೋಡ ಲಿಕ್ಕೆ ಬರಬಹುದು ಹೌದಲ್ಲೊ?

ಅಜ್ಜಿ : ಗೋತ್ರ ಏನಂತ? ಜಾತಕ ಎಲ್ಲೆ? ಗುಣಾ ಕೂಡತಾವಿಲ್ಲೊ?

ಶರಯೂ : ಹುಡಗ ಹುಡಿ' ಕೂಡಿದಮ್ಯಾಲೆ ಗುಣಾ ತಾವೇ ಕೂಡು ತಾವ ಅಜ್ಜಿ...ಅಕಾ ಕಾವೇರಿ ಬಂದಳು ನೋಡ್ರಿ...ಕಾವೇರಿ ಅಟ್ಲಾಂಟಿಕ್ ಸಾಗರಕ್ಕ ಸೇರಲಿ !

## ದೃಶ್ಯ ೪

( ದೃಶ್ಯ : ಮೊದಲನೆಯ ದೃಶ್ಯದ ಹಾಗೆ )

ಭಾ : ಅಲ್ರೀ ಗಂಗಾಬಾಯೀ ಇನ್ನೂ ಅಕ್ಕಿ ಹಳಮಾಡೂದು ತಪ್ಪ ಲಿಲ್ಲೇನು ನಿಮಗ?

ಗಂ : ರಾಜ್ಯ ಸಿಕ್ಕರೂ ರಾಗೀ ಬೀಸೂದು ತಪ್ಪಲಿಲ್ಲಂತ...

ಭಾ : ಅಲ್ರೀ ಗಂಗಾಬಾಯ್ರಿ, ಹ್ಯಾಂಗಿದ್ದಾನ ಹೊಸ ಅಳಿಯಾ?

ಗಂ : ನಿಮ್ಮ ಮುಂದೇನು ಮುಚ್ಚಿಡೂದದನ?... ಹುಡುಗ ಕೈತೊಳ ಕೊಂಡು ಮುಟ್ಟುಹಾಂಗ ಇದ್ದಾನ. ಚೆಲುವ, ಭಲೋ ಗುಣಾ ಅವ. ನಮ್ಮ ಕಾವೇರಿ ಮನಸಾ ಅಂಸಿಕೊಂಡಾಳ. ನಮಗಾರ ಹೆಚ್ಚೇನ ಬೇಕು ಹೇಳ್ರಿ... ಬ್ರಾಹ್ಮಣಾರ ಇರಲಿ ಬ್ಯಾರೇ ದೇಶದಾವನಾರ ಇಲಿ; ಬ್ಯಾರೆ ಭಾಷಾದವನಾರ ಇರಲಿ. ಮುಖ್ಯ ಮನಸ್ಸು ಅಂತಃ ಕರಣ ನಿರ್ಮಲ ಇದ್ದಮ್ಯಾಲೆ ಆತು... ನಿಮ್ಮ ಸೊಸಿ ಏನಂತಾಳ?

ಭಾ : ನಿಮ್ಮ ಮುಂದೇನು ಮುಚ್ಚಿ ಇಡೂದದನ?... ಹುಡುಗಿ ಕೈತೊಳ ಕೊಂಡು ಮುಟ್ಟಬೇಕು. ಚೆಲುವಿ ಭಲೋ ಗುಣ ಉಳ್ಳಾಕೀ! ಹುಡಿಗಿ ಗೌರಿ ಆಗೇದ ಗೌರಿ. ಮನೀಗೆ ಮಹಾಲಕ್ಷ್ಮೀನ ನಡಕೊಂಡು ಬಂಧಾಂಗ ಆಗೇದ... ಯಾವುದಾರೇ ದೇಶ ಆಗಿರಲಿ, ಯಾವುದಾರೇ ಭಾಷಾ ಆಗಿರಲಿ ನಮ್ಮ ನರಸಿಂಹಗಂತೂ ಲಕ್ಷ್ಮೀದೇವಿ ಖರೇ ಆಗ್ಯಾಳ...ಅಲ್ರೀ ಗಂಗಾಬಾಯಿ ಈಗ ಜಗತ್ತೇ ಒಂದು ಆದ ಹೊತ್ತಿನ್ಯಾಗ ನಾವು ಬ್ರಾಹ್ಮಣರು, ವೈಷ್ಣವರು, ಉತ್ತರಾದಿಮಠದವರು ಅಂತ ಸಣ್ಣ ಸಣ್ಣ ಗ್ವಾಡಿ ಕಟಗೊಂಡು ಕೂಡಲಿಕ್ಕೆ ಆಗತದೇನು ಹೇಳ್ರಿ ಕೊಚ್ಚಿಕೊಂಡ ಬಂದ ಪ್ರವಾಹ ಇಂಥಾ ಸಣ್ಣ ಸಣ್ಣ ಗ್ವಾಡಿ ಎಲ್ಲಾ ನುಂಗಿ ಹಾಕತದ. ಅಂಥಾಂಗ ನಿಮ್ಮ ಅಳಿಯಾ ಯಾವ ಊರವರಂತ?

ಗಂ : ಊರು ಇರಲಿ. ದೇಶ ಯಾವುದು ಅಂತಕೇಳ್ರಿ! ಅಮೇರಿಕಾದ ಅಳಿಯಾ! ಅದೇನೋ ಹೇಳತಾರಲ್ಲ ಕಸಿ ಮಾವಿನ ಹಣ್ಣು ಬಹಾಳ ಸವಿ ಅಂತ. ಹಾಂಗ ನಮ್ಮದೂ ಕಸಿ ಸಂಬಂಧಾ. ಎರಡು ಹೃದಯಾ ಕಸಿ ಮಾಡಿಧಾಂಗ ಆಗೇದ

ಭಾ : ನಮ್ಮದಾರ ಏನಂತೀರಿ. ನಮ್ಮ ಸೊಸಿ ಮೊದಲ ಕೂದಲು ಕತ್ತರಿಸಿಗೊಂಡ ಬಂದಿದ್ದ ರಶಿಯಾದ ಗಂಡ್ರ್ಯಾವೀನ ಈಗ ಕುಲವಧು ಆಗಿ ಬಂದಾಳ...

ಗಂ : ಗಂಗಾವನಾ ಕಟ್ಟಿಗೊಂಡು ಬಂದಾಳೇನು ಹಾಂಗಾರ ?

ಭಾ : ಯಾವ ವನಾನಾರೇ ಕಟಕೊಂಡು ಬರಲಿ ಅಂತೂ ಮನಿಗೆ ಕೀರ್ತಿ ತಂದಾಳ ಆತು ಎರಡು ಕುಲಾ ಉದ್ಧಾರ ಮಾಡೋ ಮುತ್ತೈದಿ ಆಗಿ ಬಂದಾಳ ಈ ಸೋವಿಯಟ್ ಸೊಸಿ.

ಗಂ : ಸೋವಿಯಟ್ ಸೊಸಿನ?...ಎಂಥಾ ಭಲೋ ಹೆಸರು ಅದ ಅಲ್ರಿ

ಭಾ : ಮನಸ್ಸು ಒಪ್ಪಿದ ಮ್ಯಾಲೆ ಹೆಸರು ಒಪ್ಪಿಗಿ ಆಗದ ಏನು? ನಿಮ್ಮದಾರ ಏನು ಮತ್ತ-

ಗಂ : ಅಮೇರಿಕಾದ ಅಳಿಯಾ!

ಭಾ : ಹೂಂ! ಸೋವಿಯಟ್ ಸೊಸಿ!



- ೧ -

ನೆಳಲಿನ ಹಿಂದೆ ನೆನಪು— ನೆನಪಿನ ಹಿಂದೆ ನಾನು- ಅನುಭವದ ಟಾರ್ಚ್ ಹಿಡಿದುಕೊಂಡು ಚಿತ್ತಮಸಣದ ತುಂಬಾ ಅಲೆದಾಡಿದೆ.

ಪಾಪ! ದಿಕ್ಕು ದಿವಾಳಿ ಇಲ್ಲದೆ ಎಷ್ಟೋ ಚಿತೆಗಳು ಹೊತ್ತಿ ಉರಿಯತೊಡಗಿದ್ದವು. ಕೆಲವು ಹಸಿಬಿಸಿ ಬೇಯತೊಡಗಿದ್ದವು.

ಕತ್ತೆ ಕಿರುಚಿದಂತೆ, ವಿಚಾರಗಳ ಗೋರಿಯನ್ನೆಲ್ಲ ಕೆದರುತ್ತ ಸಾಗಿದ್ದೆ.

* * *

ಸ್ವಾತಂತ್ರ್ಯಾನಂತರ ಸುಮಾರು ೧೯೪೮ರಲ್ಲಿಯ ಘಟನೆಯ ನೆನಪು......

(ಅದಕ್ಕೆ ಹಿನ್ನೆಲೆಯಾಗಿ ನಿಲ್ಲುತ್ತದೆ. ಸ್ವಾತಂತ್ರ್ಯ ಪೂರ್ವದ ಕಥೆ- ಎಲ್ಲಾ ಕ್ಲೋರೋಫಾರ್ಮ್ ಸೇವನೆಯ ಸುಷುಪ್ತ)

ಅದೇ ಆಗ ಮೊಗಲೈರಾಜ್ಯ, ರಜಾಕಾರರಿಂದ ಮುಕ್ತಿ ಪಡೆದು ಭಾರತ ಒಕ್ಕೂಟಕ್ಕೆ ಸೇರಿಕೊಂಡು ಸಮಾಧಾನದ ನಿಟ್ಟುಸಿರು ಬಿಟ್ಟಿತ್ತು.

ಇನ್ನೂ ಅಲ್ಲಲ್ಲಿ ರಜಾಕಾರರಿಂದ ಚಿತ್ರ ವಿಚಿತ್ರ ಕಥೆಗಳು ಜನಮನದಲ್ಲಿ ಕೇಳಿಬರತೊಡಗಿದ್ದವು

ನಾನು ಹತ್ತು ಹನ್ನೆರಡು ವರ್ಷಗಳ ನಂತರ ಕೊಪ್ಪಳಕ್ಕೆ ಹೋಗಿದ್ದೆ. ಅಲ್ಲಿಯ ಗುಡ್ಡ ಅದರ ಬಳಿ ಹರಿಯುವ ಹಿರೇಹಳ್ಳ- ಗುಡಿ ಗುಂಡಾರ- ನನ್ನ ಬಾಲ್ಯ ಜೀವನಕ್ಕೆ ಕನ್ನಡಿ ಹಿಡಿದಂತಿದ್ದವು. ರೈಲುನಿಲ್ದಾಣದ ಬಳಿ ಇದ್ದ ಗೋಪಾಲರಾಯರ ಬಂಗಲೆ...

ಆಗ ನಾನು ಹೋಗಿದ್ದು ನೌಕರಿಯ ಅನ್ವೇಷಣೆಯಲ್ಲಿ. ಯುದ್ಧ, ದಂಗೆಗಳ ಹಾವಳಿ ಮುಗಿಯಿತೆನ್ನುವಷ್ಟರಲ್ಲಿ ಬರಗಾಲದ ಭೀಷಣ ರೇಖೆಗಳು ಮೂಡತೊಡಗಿದ್ದವು.

ಆಕಾಶದ ತುಂಬೆಲ್ಲಾ ಬರೀ ಬಿಳೀ ಮೋಡಗಳೇ. ಹಿಮಸಾಗರದಲ್ಲಿ ತೇಲಿಬರುವ ಮಂಜಗಡ್ಡೆಗಳಂತೆ ಹರಿದಾಡತೊಡಗಿದ್ದವು. ಊರ ಸುತ್ತಲೂ ಹೊಲಗಳು ಭೂದೇವಿಯ ಎದೆಯೇ ಬಿರಿದಂತೆ ಬಿರುಕು ಬಿಟ್ಟು ಬಂಜರಾಗಿ ಬಿದ್ದಿದ್ದವು

ಥರ್ಮಾಮೀಟರಿನಲ್ಲಿ ಜ್ವರ ಏರುವಂತೆ- ಪೇಟೆಯಲ್ಲಿ ಕಾಳುಕಡಿಗಳ ಧಾರಣೆಯು ಹೆಚ್ಚತೊಡಗಿತ್ತು. ಮಾರಿಯ ಮಾರಣ ಹೋಮ ನಡೆಯಿತು ಬಡವರ ಮೂಳೆಗಳೂ ಮಾರಾಟಕ್ಕೆ ಬಂದವು. ಜನರೆಲ್ಲಾ ಗುಳೆಕಟ್ಟಿಕೊಂಡು ನಡೆದಿದ್ದರು. ಹೊಟ್ಟೆಗೆ ಹಿಟ್ಟು ಸಿಗುವ ಸ್ಥಳವನ್ನರಿಸಿಕೊಂಡು. ಕೊಪ್ಪಳಕ್ಕೆ ಬಂದು ಆಗಲೇ ಏಳೆಂಟು ದಿವಸಗಳಾಗಿದ್ದವು. ಆದರೆ ನೌಕರಿಯು ನಾಪತ್ತೆ.

ಅಂದು ನನಗೂ ಬಹಳ ಹಸಿವೆಯಾಗಿತ್ತು ಕಿಸೆಯಲ್ಲಿ ನಾಲ್ಕಾಣೆಯ ಹೊರತು ಮತ್ತೊಂದು ಪೈ ಇರಲಿಲ್ಲ. ಅದನ್ನೇ ಕೊಟ್ಟು ಬಾಳೆಹಣ್ಣುಗಳನ್ನಾದರೂ ತೆಗೆದುಕೊಳ್ಳೋಣ ಎಂದು ಹಣ್ಣಿನ ಅಂಗಡಿ ಬಳಿ ಬಂದೆ.

"ಹ್ಯಾಗೆ ಕೊಟ್ಟೆ?"

"ಎರಡಾಣೆಗೆ ಒಂದು"

"ಆಣೆಗೆ ಎರಡು ಕೊಡೋದಿಲ್ಲೇನು?"

"ನಿಮ್ಮ ಅಪ್ಪನ ಮನೀವು ಅಂತ ಮಾಡೀ ಏನು?" ಆಣೆಗೆ ಎರಡು ಕೊಡಲಿಕ್ಕೆ- ಬೇಕಾದ್ರೆ ತೊಗೊ ಸಾಕಾದ್ರ ಬಿಡು-" ಅವನ ಆ ಬಿರುಸು ನುಡಿಗಳಿಂದ ನನ್ನ ಮನಸ್ಸಿಗೆ ಬರೆಕೊಟ್ಟಂತಾಯಿತು. "ಇಂಥ ಸೊಕ್ಕಿನ ಸೂಳೇಮಕ್ಕಳ ಚಮಡಾ ಸುಲೀಬೇಕು" ಎನ್ನಿಸಿತು


ನೆಳಲು-
ನೆನಪು
ಶ್ರೀನಿವಾಸ ಕುಲಕರ್ಣಿ
K.Desai

"ವ್ಯಾಪಾರ ಮಾಡಲಿಕ್ಕೆ ನಿಂತೀಯೋ? ಏನು ಹಜಾಮತಿ ಮಾಡಲಿಕ್ಕೆ ನಿಂತೀಯೋ?"

ಎಂದು ನಾನು ಸಿಟ್ಟಿನಿಂದ ಕೇಳಿದೆ.

"ಹೋಗ್ಹೋಗು. ನಿನ್ನಂಥ ಗಿರಾಕಿನ್ನ ಭಾಳಾ ನೋಡೇನಿ. ಕೈಯಾಗ ಕಾಸಿಲ್ಲಾ ಮೈಯಾಗ... ಅದೇನೋ ಅಂತಾರಲ್ಲಾ ಹೋಗು ನಮ್ಮಲ್ಲೆ ಹಣ್ಣ ಇಲ್ಲ..."

ಎಂದು ಬಿರುನುಡಿ ಆಡಿದ, ಆ ಸೊಕ್ಕಿನ ವ್ಯಾಪಾರಿ. ನನ್ನ ಮನಕ್ಕೆ ಬಹಳ ನೋವಾಯಿತು. ಮೊದಲೇ ಹಸಿವೆಯ ದಾಹ ಮತ್ತಷ್ಟು ವಿಪ್ಲವಗೊಂಡೆ-ಉಪ್ಪಿಲ್ಲದೇ ಉರಿಯುವ ಇಂಥ ಜನಕ್ಕೆ ಒಂದು ಕಾಲ ಬಂದೀತು ತೂಗುವ ತೊಟ್ಟಿಲು ನಿಲ್ಲದೇ ಹೋದೀತೆ? ಆ ವ್ಯಾಪಾರಿ ನನಗೊಬ್ಬನಿಗೇ ಹಾಗೆ ಅಂದವನಲ್ಲ-ಬಂದ ಗಿರಾಕಿಗಳಿಗೆಲ್ಲಾ ಹೀಗೇ ಬಡಬಡಿಸುತ್ತಿದ್ದ. ಹತ್ತಿರದಲ್ಲಿಯೇ ಇದ್ದ ಇನ್ನೊಂದು ಅಂಗಡಿಗೆ ಹೋಗಿ ನಾಲ್ಕಾಣೆ ಕೊಟ್ಟು ಎರಡು ಬಾಳೆಗಳನ್ನು ತೆಗೆದುಕೊಂಡೆ.

ಇನ್ನು ಅವುಗಳನ್ನು ಸುಲಿದು ತಿನ್ನಬೇಕೆನ್ನುವವನಿದ್ದೆ. ಭರ್ರನೇ ಹದ್ದಿನಂತೆ ಬಂದೆರಗಿ ಒಂದು ಹುಡುಗ ನನ್ನ ಕೈಯಲಿದ್ದ ಬಾಳೆ ಹಣ್ಣುಗಳನ್ನು ಕಸಿದುಕೊಂಡು ಓಡತೊಡಗಿದ

ನನ್ನ ಮುಂದೆ ಇವನೆಷ್ಟು ಓಡಿಹೋಗಬಲ್ಲ ಧಾವಿಸಿ ಹಿಡಿದು ನಿಲ್ಲಿಸಿದೆ.

ಆ ಹುಡುಗನಿಗೆ ಏಳೆಂಟು ವರ್ಷಗಳಿರ ಬಹುದು ಹರಿದ ಅಂಗಿ. ಕೆದರಿದ ಕೂದಲು, ಬೆದರಿದ ಕಣ್ಣುಗಳಿಂದ ನಡುಗ ಹತ್ತಿದ

"ನಿನ್ನ ಹೆಸರೇನು?" ನಾನು ಕೇಳಿದೆ.

ಆ ಹುಡುಗ ಭಯದಿಂದ ತೊದಲುತ್ತ-"ತಪ್ಪಾಯ್ತು ಕ್ಷಮಿಸ್ರಿ...ನನ್ನ ಪೋಲೀಸರ ಕೈಯಾಗ ಕೊಡಬ್ಯಾಡ್ರಿ..."ಎಂದಳತೊಡಗಿದ.

"ನಿನ್ನ ಹೆಸರೇನು?"

ಅವನ ತಲೆಯ ಮೇಲೆ ಕೈಯಾಡಿಸುತ್ತ ಕೇಳಿದೆ ಮತ್ತೆ ನಾನೇನು ಮಾಡಲಿಕ್ಕಿಲ್ಲವೆಂದು ಆ ಹುಡುಗನಿಗೆ ಎನ್ನಿಸಿರಬೇಕು.

ನುಡಿದ.

"ರಾ.. ಮು..."

"ರಾಮೂನ...ಹೆಸರು ಎಷ್ಟು ಛೊಲೊ ಅದ ..ಹಸಿವಿ ಆಗೇದೇನು"?

"ಹೂಂ"

ಗೋಣು ಹಾಕಿದ ಆ ಹುಡುಗ.

"ಕೈಯಾಗಿನ ಹಣ್ಣು ತಿನ್ನು-ಗಾಬರಿಯಾಗ ಬೇಡ." ಎಂದು ಹೇಳಿದೆ.

ನಿಮಿಷದಲ್ಲಿಯೇ ಹಣ್ಣಿನ ಸಿಪ್ಪೆ ಸುಲಿದು ನುಂಗಹತ್ತಿದ ಆ ಹುಡುಗ. ನಾನು ನೆಟ್ಟ ದೃಷ್ಟಿಯಿಂದಲೇ ನೋಡುತ್ತ ನಿಂತೆ ಕೊನೆಯ ತುತ್ತು ಅವನು ನುಂಗುವದರಲ್ಲಿದ್ದ.

ನಾನು ಕೇಳಿದೆ.

"ನಿನ್ನ ಅಪ್ಪಾ...ಅವ್ವಾ...ಇಲ್ಲ..."

ಬಹುಶಃ ಆ ತುತ್ತು ಗಂಟಲೊಳಗೇ ಸಿಕ್ಕಿರಬೇಕು. ಗಂಟಲ ಮೇಲೆ ಕೈಯಾಡಿಸಿಕೊಂಡು—"ಇಲ್ಲ" ಎಂದ ಆ ಹುಡುಗ.

ಕೇಳಬಾರದಿತ್ತು- ಎಂದುಕೊಂಡಿತು ನನ್ನ ಮನ—

* * *

ಊರಿನ ಅಗಸೆಯ ಬಳಿ ಒಂದು ಮಾರೆಮ್ಮನ ದೇವಾಲಯವಿದೆ. ಜನರಿಗೆಲ್ಲ ಅವಳ ಮೇಲೆ ಬಹಳ ವಿಶ್ವಾಸ.

ಯಾರೋ ಹೇಳಿದರುಃ ಅವಳ ಭಜನೆ ಮಾಡುತ್ತ ತಲೆಯ ಮೇಲೆ ನೀರಿನ ಕೊಡ ಹೊತ್ತುಕೊಂಡು ಹೋಗಿ. ಸ್ನಾನಮಾಡಿಸಿ ಬಂದರೆ ಪ್ರೀತಳಾಗಿ ಮಳೆ ಸುರಿಸುತ್ತಾಳೆಂದು

ಇಡೀ ಊರಿನ ಜನವೇ ಹೊರಟಿತು, ದೇವಾಲಯದತ್ತ. ಎಲ್ಲರ ಮೈಯಲ್ಲಿಯೂ ಮಾರೆಮ್ಮನೇ ಪ್ರವೇಶಿಸಿದಂತಿತ್ತು.

ಮಾರೆಮ್ಮನಿಗೆ ಹಲವಾರು ಕೊಡಗಳ ಸ್ನಾನ ಮಾಡಿಸಿದ ಪೂಜಾರಿ. ಯಾರೋ ಒಬ್ಬರು-ಅವಳಿಗೆ ಕುಂಕುಮ ವೀಳ್ಯದೆಲೆಯ ಪೂಜೆ ಮಾಡಿಸಿದರು.

ಮತ್ತೊಬ್ಬರು ಕೋಳಿಗಳನ್ನು ಆಹುತಿ ಕೊಟ್ಟರು. ಮಗದೊಬ್ಬ ಭಕ್ತ ಕುರಿಯನ್ನು ಬಲಿ ನೀಡಿದ.

ಸನಾದಿ ನಗಾರಿಗಳು ಗಗನ ಗಡಚಿಕ್ಕುವಂತೆ ಮೊಳಗಿದವು. ಮಳೀ ಸುರೀಲಿ, ಕೆರೆ ಭಾವಿ, ಹೊಳೆ ಹಳ್ಳ ತುಂಬಿ ಹರೀಲಿ ಮಾರೆಮ್ಮಾ ನಿನಗೆ ಸಾವಿರ ಕೋಳಿ- ಬಲಿ ಕೊಡ್ತೀವಿ ಎಂದು ಭಕ್ತಾದಿಗಳು ಮೂಢ ಭಕ್ತಿಯಿಂದ ಕುಣಿದಾಡಿ ಮನೆಗೆ ಬಂದರೂ ಮಳೆ ಹನಿ ಬದಲು ಕಣ್ಣೀರು ಸುರಿಯಿತಷ್ಟೇ!

* * *

ಆ ದಿನದ ಸಂಜೆ. ಆಗಸವೆಲ್ಲ ಟೊಮ್ಯಾಟೊ ಹಣ್ಣಿನ ಬಣ್ಣದಂತಾಗಿತ್ತು ದನಕರುಗಳು "ಗಳಗಳ" ಗೆಜ್ಜೆಯ ಗುದ್ದಿಯ ಸದ್ದು ಮಾಡುತ್ತ ಮನೆಗಳತ್ತ ನಡೆದಿದ್ದವು.

ಹೊತ್ತು ಮುಳುಗುವಷ್ಟರಲ್ಲಿ ಗೂಡು ಸೇರಬೇಕೆಂದು ಖಗ ವಿಹಗಗಳು ಕಲಕಲರವಗೈಯುತ್ತ ಸಾಗಿದ್ದವು.

ಗುಡ್ಡದ ಪಶ್ಚಿಮಕ್ಕಿರುವ ಹೊಲದ ಬದುವಿನ ಮೇಲೆ ಒಂದು ವ್ಯಕ್ತಿ ಕುಳಿತಿತ್ತು. ನಡುವಯಸ್ಸು, ಉದ್ದನೆಯ ದಾಡಿ, ತಲೆಯ ಮೇಲೆ ರುಮಾಲವಿದೆ. ಗೆರೆ ಮೂಡಿದ ಹಣೆ ಅವನ ಹೃದಯದ ಅನಂತ ವೇದನೆಯನ್ನು ಸೂಚಿಸುವಂತಿತ್ತು. ಒಳಹೊಕ್ಕ ಕಣ್ಣುಗಳು, ಅನುಭವದ ಮಡವುಗಳಂತಿದ್ದವು.

ಆ ವ್ಯಕ್ತಿಯನ್ನು ಬರಗಾಲದ ಆಘಾತ ಚೇತರಿಸಿಕೊಳ್ಳದಂತೆ ಮಾಡಿತ್ತು. ದಿನವಿಡಿ ಹೊಲದ ಬದುವಿನ ಮೇಲೆ ಕುಳಿತು ನೀರಡಿಸಿ ನಿಂತ ಹೊಲದ ಹಂಬಲವನ್ನು ಕಂಡು ಕಣ್ಣೀರಿಟ್ಟು ಮನೆಗೆ ಮರಳುತ್ತಿದ್ದ.

ಎಂದಿನಂತೆ ಅಂದೂ ಅವನು ಎದ್ದ, ಗದ್ದದ ಮೇಲೆ ಇರಿಸಿದ ಕೈಯನ್ನು ಬಿಡಿಸಿಕೊಂಡು.

ಅದೇ ನಿಟ್ಟುಸಿರು ಅವನ ಎದೆಯುಸಿರು ಒಡಲುಸಿರೂ ಆಗಿದ್ದವು ಮಗ್ಗುಲಲ್ಲೇ ಹಾವಿನಂತೆ ಸುರುಳಿ ಸುತ್ತಿಕೊಂಡು ಬಿದ್ದ ರುಮಾಲನ್ನು ಚಟಪಟನೆ ಜಾಡಿಸಿ, ತನ್ನ ನೀಳ್ತೋಳುಗಳಿಂದ ಸುತ್ತಿಕೊಂಡು ಗಿಡದ ಬಳಿ ಕಟ್ಟಿದ ಎತ್ತುಗಳಿಗೆ ರಂಟೆಯನ್ನು ಕಟ್ಟಿ ಹೊಡೆದುಕೊಂಡು ನಡೆದ, ಕಾಯಕವೇ ಕೈಲಾಸವೆಂಬುದನ್ನು ಸಾರುವ ಬಸವೇಶ್ವರನಂತೆ.

ದಾರಿಯುದ್ದಕ್ಕೂ ಆ ಮುದುಕ ಯೋಚಿಸತೊಡಗಿದ. ಒಂದಕ್ಕೂ ಉತ್ತರ ದೊರೆತಂತೆ ಕಾಣಲಿಲ್ಲ. ಅನುಭವದ ಎಸಳುಗಳು ಹೃದಯದಲ್ಲಿ ದಳದಳವಾಗಿ ಅರಳಿನಿಂತವು ಅವನೆಂದುಕೊಂಡ—

ಹಗಲು ರಾತ್ರಿ ಒಂದರ ನಂತರ ಒಂದು ಕಾಲಚಕ್ರದಲ್ಲಿ ಉರುಳುತ್ತಲೇ ಇವೆ. ಸುಖ ದುಃಖ, ಜನನ ಮರಣ, ಈ ದ್ವಂದ್ವಮಯ ಜೀವನದಲ್ಲಿ, ಇವುಗಳೂ ದ್ವಂದ್ವವಾಗಿವೆ.

ಅದೇ ದಿನ್ನೆಯ ಮೇಲೆ ಕುಳಿತುಕೊಂಡು ಅದೇ ತನ್ನ ಹೊಲವನ್ನು ನೋಡುತ್ತ ಎಷ್ಟೋ ಹಗಲುಗಳನ್ನು ಕಳೆದ. ಆದರೆ ಆ ವರ್ಷದ ಒಂದು ಹಗಲೂ ಅವನಿಗೆ ಪ್ರಯೋಜನವಾಗಲಿಲ್ಲ. ಬರಿ ಆಯುಷ್ಯದ ಅವಧಿ ಕಡಿಮೆಯಾಗುತ್ತ ನಡೆದಿತ್ತಷ್ಟೇ!

ಇಂದೂ ಒಂದು ತೊಟ್ಟು ಮಳೆ ಹನಿ ಬೀಳಲಿಲ್ಲ. ಬಹುಶಃ ದೇವರಿಗೆ ತನ್ನ ಪ್ರಾರ್ಥನೆ ಮುಟ್ಟಿರಲಿಕ್ಕಿಲ್ಲ. ಕೆಟ್ಟ ಕಲಿಕಾಲ, ಧರ್ಮ, ನೀತಿ, ಬಾಳು ಎಲ್ಲವೂ ಇದರಡಿಯಲ್ಲಿ ಸಿಕ್ಕು ನುಚ್ಚು ನೂರಾಗುತ್ತಿದೆ. ಆದರೆ ಅತಿವೃಷ್ಟಿ ಅದರಲ್ಲಿ ಮನೆಮಾರು, ಊರು ಎಲ್ಲವೂ ಕೊಚ್ಚಿಕೊಂಡು ಹೋಗಿಬಿಡುತ್ತವೆ.

ಇಲ್ಲದಿದ್ದರೆ– ಕುಡಿಯಲಿಕ್ಕೆ ಮುಕ್ಕು ನೀರು ಸಹಿತ ಸಿಕ್ಕುವದಿಲ್ಲ. ಬತ್ತಿದ ಹೊಳೆಹಳ್ಳ. ಬಂಜರು ಗದ್ದೆ ಹೊಲ ಕಣ್ ಕಣ್ ಬಿಡುತ್ತವೆ. ಅವನೆಂದುಕೊಂಡ.

ಇದೆಲ್ಲ ಕಾಲದ ಮಹಿಮೆ. ತಮ್ಮ ಅಜ್ಜ ಮುತ್ತಜ್ಜರ ಕಾಲಕ್ಕೆ ಹೀಗಿತ್ತೆ? ಬೀಜ ಬಿತ್ತಿ ಬಂಗಾರ ಬೆಳೆಯುತ್ತಿದ್ದರು. ಈಗೆಲ್ಲಿದೆ ಅದೆಲ್ಲ? ಹುಲ್ಲು ಕರಿಕೆ ಸಹಿತ ಬೆಳೆಯೋದಿಲ್ಲ.

ನಿಮಿಷ ನಿಮಿಷಕ್ಕೆ ಸಮಸ್ಯೆಗಳು ಪೆಡಂಭೂತದಂತೆ ಬೆಳೆದು ನಿಲ್ಲುತ್ತವೆ.

ನನಗೆ ನಿಜವೆನಿಸುತ್ತದೆ, ಜಗತ್ತು ಮಿಥ್ಯ ಎಂದು ಶಂಕರಾಚಾರ್ಯರು ಹೇಳುವ ಮಾತು

ಜಗತ್ತಿನಲ್ಲಿ ಸತ್ಯ ಯಾವುದೆಂದರೆ ಹಸಿವೆ... ಹಸಿವೆ...ಅದೇ ದಾಹ ಅದೇ ದಳ್ಳುರಿ, ಆ ವ್ಯಕ್ತಿಯ ಹೃದಯ ಒಡಲ ಶಿಖಿಯಾಗಿತ್ತು.

ಅವನು ದಿನಾಲು ಸಂಜೆ ವರೆಗೆ ಕುಳಿತು ಮಳೆ ಬಾರದ್ದನ್ನು ಕಂಡು ನಿರಾಶನಾಗಿ ಮರಳುತ್ತಿದ್ದ.

ನನಗೆ ರಾಮಕೃಷ್ಣ ಪರಮಹಂಸರ ಸಾಧನೆಯ ದಿನಗಳು ನೆನಪಾದವು. "ದೇವಾ ಜೀವನದ ಒಂದು ದಿನ ಉರುಳಿತು. ಅವರೆಂದು ಕೊಳ್ಳುತ್ತಿದ್ದಂತೆ ಅವನೂ ಅಂದುಕೊಳ್ಳುತ್ತಿದ್ದ-ಇಂದೂ ಮಳೆ ಬರಲಿಲ್ಲ.

ನಾನು ಅಂದುಕೊಳ್ಳುತ್ತ ನಡೆದಿದ್ದೆ-'ಇವತ್ತೂ ನನಗೆ ನೌಕರಿ ಸಿಗಲಿಲ್ಲ' ಎಂದು.

ಮೂವರು ಅಂದುಕೊಳ್ಳುತ್ತಿದ್ದುದು ಬೇರೆ ಬೇರೆಯಾಗಿದ್ದರೂ ವಿಧಿತ ಒಂದೇ ಆಗಿತ್ತು.

ಹಸಿವೆ ಹೊಟ್ಟೆಯಲ್ಲಿ ಬೇತಾಳದಂತೆ ತಾಳ ಹಾಕಹತ್ತಿತ್ತು. ಹೋಟೆಲಿನಲ್ಲಿ ಬ್ರೆಡ್ ಕೇಳಿದರೆ 'ತುಟ್ಟಿ'. ಊರ ಹೊರಗೆ ಹೋಗಿ ಸಂಜೆ ಹವೆ ತಿಂದರೆ ಯಾರಪ್ಪನದೇನು ಎಂದುಕೊಂಡು ನಾನು ನಡೆದಿದ್ದೆ.

ಬೀದಿಯ ತುಂಬೆಲ್ಲ ಜನರ ನೂಕುನುಗ್ಗಾಟ, ತೆರೆಗಳಂತೆ ಗುಂಪು ಗುಂಪಾಗಿ ಹೊರಟದ್ದರು. ನನಗೆನ್ನಿಸಿತು ಇಲ್ಲಿ ಓಡಾಡುವರಲ್ಲಿ ಎಷ್ಟು ಭಿನ್ನತೆ ಇದೆ ಆಚಾರ-ವಿಚಾರ, ವೇಷ-ಭೂಷಣ, ಎಲ್ಲವೂ ಭಿನ್ನ. ಆದರೂ ಭಿನ್ನತೆಯಲ್ಲಿ ಏಕತೆ ಇಲ್ಲವೆ?

ಊರ ಹೊರಗೆ ಬಂದಂತೆಲ್ಲ ಸಮುದ್ರದಂಡೆಯಿಂದ ದೂರ ದೂರ ಹೋದಂತೆ ಜನರ ದನಿ ಕೇಳಿಸಹತ್ತಿತ್ತು. ಎದುರಿಗೆ ಬಂದ ವ್ಯಕ್ತಿಯನ್ನು ಕೇಳಿದೆ,

"ಏನು ಇಮಾಮ್, ಅಲ್ಲಾಗ ನಿನ್ನ ಪ್ರಾರ್ಥನಾ ಕೇಳಿಸಲಿಲ್ಲೇನು?"

"ಏನು ಸಾಹೇ ದಿಕ್ಕಾ-ಮಾಡಪ್ಪಾ- ಎಲ್ಲಾ ಅಲ್ಲಾನ ಮನಸ್ಸಿಗೆ ಬಂದದ್ದು ಆಗ್ತದ- ಮತ್ತೊಮ್ಮೆ ಮನೀಕಡೆ ಬಾ." ಎನ್ನುತ್ತ ಹಾಗೆಯೇ ಅವನು ಮುಂದುವರೆದ. ಇಮಾಮನ ಯೋಚನೆಯೇ ವಿಚಿತ್ರ ಸತ್ಯ-ಕಠೋರ ಸತ್ಯ

ಅವನ ಆ ಯೋಚನೆಗಳಿಗೆ ಮುಂದೆ ಮುಂದೆ ಹೊರಟ ಎತ್ತಿನ ಕೊರಳೊಳಗಿನ ಗೆಜ್ಜೆಗಳ 'ಘಿಲು ಘಿಲು' ನಾದ ಹಿಮ್ಮೇಳ ಹಿಡಿದಂತಿತ್ತು.

- ೨ -

ವಿಶಾಲವಾದ ಕಂಪೌಂಡಿನ ಮಧ್ಯ ಇದ್ದ ಇಮಾಮನ ಸಾಹುಕಾರ ಗೋಪಾಲರಾಯರ ಮಹಲು ಮುಂಭಾಗ ಮುರಿದು ಬಿದ್ದಿತ್ತು. ಕಿಡಕಿಗಳ ಪಳಿಗಳು ಬಗ್ಗಿಹೋಗಿದ್ದವು ಸುಂದರವಾಗಿ ಏರಿಸಿದ್ದ ಗಾಜಿನ ಬಾಗಿಲಗಳು ಒಡೆದು ಹೋಗಿ ಅಲ್ಲಲ್ಲಿ ಸೀಳಿದ ಗ್ಲಾಸುಗಳು ನಿಂತಿದ್ದವು. ಬಿಲ್ಡಿಂಗಿನ ಬಣ್ಣವೂ ಮಾಸಿ ಹೋಗಿತ್ತು.

ಅದರ ಹಿಂಬದಿಯಲ್ಲಿಯೇ ಇಮಾಮ್‌ನ ಮನೆ. ಅದರ ಅವಸ್ಥೆಯೂ ಹಾಗೆಯೇ ಆಗಿತ್ತು.

ವರಾಂಡದ ಛತ್ತೂ ಬಿದ್ದುಹೋಗಿತ್ತು. ಅದನ್ನು ದಾಟಿದರೆ ಒಂದು ಕೋಣೆ. ಅದಕ್ಕೆ ಹೊಂದಿದ ಇನ್ನೊಂದು ಕೋಣೆ ಅಡುಗೆ ಮನೆ. ಅದರ ಹಿಂದೆ ಹಿತ್ತಲು. ಅದನ್ನೇ ಇಮಾಮ್ ದಂಡಕ್ಕಿಯಾಗಿ ಮಾಡಿಕೊಂಡಿದ್ದ. ನೋಡುವವರ ಕಣ್ಣಿಗೆ ಆ ದೃಶ್ಯ ಮುದುಕನ ಬೊಚ್ಚು ಬಾಯಿಯಂತಾಗಿತ್ತು.

ಇಮಾಮ್ ಎತ್ತುಗಳನ್ನು ಹೊಡೆದುಕೊಂಡು ಹೋಗಿ ದಂಡಕ್ಕಿಯಲ್ಲಿ ಕಟ್ಟಿದ. ಅಲ್ಲಿಯೇ ಬಿದ್ದ ಹಸಿರಿನ ಹೆಸರೇ ಇಲ್ಲದ ಬಾಣಂತಿಯ ಬಣ್ಣದಂತಹ ಹುಲ್ಲಿನ ಕಡ್ಡಿಗಳನ್ನೇ ಆರಿಸಿ ಅವಕ್ಕೆ ತಿನ್ನಲು ಹಾಕಲು ಹೋದಾಗ-ಅವನ ಜೀವ ಹಿಂಡಿದಂತಾಯಿತು. ಅವನಿಗರಿಯದಂತೆ ಕಣ್ಣಲ್ಲಿ ಹನಿ ತುಂಬಿ ನಿಂತವು. ಒಮ್ಮೆ ಎತ್ತುಗಳ ಕಡೆಗೆ ಒಮ್ಮೆ ತನ್ನ ಕೈಯಲ್ಲಿದ್ದ ಹುಲ್ಲಿನ ಕಡೆಗೆ ನೋಡಿದ.

ಎತ್ತುಗಳೂ ಒಣಗಿದ ಕಡ್ಡಿಯಂತಾಗಿದ್ದವು. ಡುಬ್ಬದ ಎಲುವುಗಳು ಡುಬರಿಯಾಗಿ ಎದ್ದು ಕಾಣುತ್ತಿದ್ದವು. ಪಕ್ಕೆ ಎಲವುಗಳು ಕಟ್ಟಿಗೆಗಳನ್ನು ಹೊಂದಿಸಿದಂತೆ ಕಾಣುತ್ತಿದ್ದವು. ಒಂಟೆಯ ಗೋಣಿನಂತೆ ಅವುಗಳ ಗೋಣು ಉದ್ದಕ್ಕೆ ಚಾಚಿ ಬಂದಿತ್ತು ಗಂಗೆದೊಗಲು ಮುದುಕಿಯ ಮೊಲೆಗಳಂತೆ ಜೋತುಬಿದ್ದಿದ್ದವು. ಬರಗಾಲದ ಹೆಣದಂತಿದ್ದ ಆ ಎತ್ತುಗಳೂ ದೀನ ದೃಷ್ಟಿಯಿಂದ ಇಮಾಮ್‌ನನ್ನೇ ನೋಡತೊಡಗಿದವು ಅವೂ ಯಜಮಾನನ ಪರಿಸ್ಥಿತಿಯನ್ನು ಕಂಡು ಕಣ್ಣೀರಿಟ್ಟವು. ಅವನೂ ಅವುಗಳನ್ನು ನೋಡಿ ಹಂಬಲಿಸಿದ-

"ಅಲ್ಲಾ ನಾನು ಯಾವ ಪಾಪಮಾಡೀನಿ ಅಂತಾ ಈ ಶಿಕ್ಷಾ ಕೊಡಲಿಕ್ಕೆ ಹತ್ತಿ-ಪಾಪ ಈ ಮೂಕಪ್ರಾಣಿಗಳೂ ಸಹಿತ ಹೊಟ್ಟೆಗೆ ಹಾಕಲಿಕ್ಕೆ ಆಗಲಾರದ ಸಾಯಿಸಲಿಕ್ಕೆ ಹತ್ತೀನಿ - ಯಾವ ಸುಖಾ ಕೊಡ್ತೀನಿ ಅಂತಾ ಇವ್ನ ನನ್ನ ಹತ್ತೆ ಇಟಗೊಳ್ಳಿ - ಯಾರಾದರೂ ಸಾಹುಕಾರರಿಗೆ ಕೊಟ್ರೆ ಮೇವಾದ್ರೂ ಹಾಕ್ಯಾರು- ಇನ್ಯಾವ ಆಶಾದಿಂದ ಇಟಗೊಳ್ಳಿ......

"ನಾನು ಅವತ್ತು ಖರೀದಿ ಮಾಡಿಕೊಂಡು ಬಂದಾಗ ಹ್ಯಾಂಗ ಇದ್ದವು. ಈಗ ಹ್ಯಾಂಗ ಆದವಲ್ಲಾ- ಎತ್ತುಗಳನ್ನು ಖರೀದಿ ಮಾಡಿಕೊಂಡು ಬರಲಿಕ್ಕೆ ಸಾಹುಕಾರು ಅವತ್ತು ನನಗ ಹೇಳಿದ್ರು"......

ಇಮಾಮ್ ಆ ಸ್ವಪ್ನದಲ್ಲಿ ತೇಲಿಹೋದ. ಆ ಸ್ವಪ್ನ ಎಂಥ ಸುಂದರ ಸ್ವಪ್ನ ಅವನ ಪಾಲಿಗೆ ನೈಯಲ್ಲಿ ರೋಮಾಂಚನ ಆಗಬೇಕು. ಅಂಥಾ ಸುಂದರ ದಿನಗಳು

ಇಂದೆಲ್ಲಾ ಅವು ಮಂಜುಹನಿ ಮುಸುಕಿದ ಕನ್ನಡಿಯಂತೆ......ಅವತ್ತು......

ಇಮಾಮ್ ಪ್ರಾಣಿಗಳ ಸಂತೆಗೆ ಹೋಗುವ ಸಡಗರದಲ್ಲಿ ಜರದ ರುಮಾಲನ್ನು ಸುತ್ತಿಕೊಂಡು ಗೋಪಾಲರಾಯರ ಬಳಿ ಬಂದಿದ್ದ. ಮುಖದಲ್ಲಿ ಏನೋ ಹೊಸದನ್ನು ತರುತ್ತಿದ್ದೇನೆ ಎಂಬ ಸಂತಸ

ಅದನ್ನು ನೋಡಿ ಗೋಪಾಲರಾಯರು –

"ಏನು ಇಮಾಮ್ ಇವತ್ತೇನು ಇಷ್ಟೊಂದು ಸಂತೋಷದೊಳಗ ಇದ್ದೀ?"

– ಎಂದು ಕೇಳಿದರು.

"ಯಾಕ ಸಾಬ್, ಇವತ್ತು ಎತ್ತು ಖರೀದಿ ಮಾಡಿಕೊಂಡು ಬರೋಣ ಅಂದಿದ್ದು ಮರ್ತಹೋಯ್ತೇನು? – ನಡೀರಿ ಜಲ್ದಿ ಹೋಗೋಣ"......

ರುಮಾಲನ್ನು ಸರಿಪಡಿಸಿಕೊಳ್ಳುತ್ತ ನುಡಿದ.

ಇಮಾಮನ್. "ಓ! ಹೌದಲ್ಲ ಮರ್ತ ಹೋಗಿತ್ತು."

ಎಂದು ರಾಯರು ಜ್ಞಾಪಿಸಿಕೊಂಡು

"ಏ ಸೀತಾ. ಸೀತಾ...ಇಲ್ಲೀ ನೋಡು-ಇಮಾಮ್ ಎತ್ತು ಖರೀದಿಮಾಡಲಿಕ್ಕೆ ಎಷ್ಟು ಶಿಸ್ತಾಗಿ ಹೊಂಟಾನ" ಎಂದು ಹೆಂಡತಿಯನ್ನು ಕರೆದರು.

ಸೀತಾಬಾಯಿ ಹೊರಗೆಬಂದು ನೋಡಿದರು. ಅವಳ ಹೃದಯವೂ ತುಂಬಿಬಂತು ಇಮಾಮನ ಬಗೆಗೆ ಅವರಿಗೆ ಅಪಾರ ಆದರ, ಅಭಿಮಾನ.-

"ಇಮಾಮ್ ನಿನ್ನ ಎತ್ತಿಗೆ ಏನ ಹೆಸರಿಡ್ತಿ?" — ನಗುತ್ತ ಕೇಳಿದರು.

"ನಿಂದೊಂದು ಇನ್ನೂ; ಕೂಸು ಹುಟ್ಟೋದಕ್ಕಿಂತ ಮುಂಚೆ ಕುಲಾಯಿ ಹೊಲಿಸಿದರು ಅಂದ್ಹಂಗ ಮಾಡ್ತಿ ಅಲ್ಲಾ....ಖರೀದಿಅರ ಮಾಡಕೊಂಡ ಬರ್ತೀವಿ ತಡಿ"

-ಎಂದು ರಾಯರು ಶರ್ಟನ್ನು ಹಾಕಿಕೊಳ್ಳುತ್ತ ನುಡಿದರು.

"ನಹಿ ಸಾಹಿಬ್-ನಾನು ಅದಕ್ಕೆ ಆಗ್ಲೆ ಹೆಸರು ಹುಡುಕಿಬಿಟ್ಟೇನಿ"

-ಎಂದ ಉತ್ಸಾಹದಿಂದ ಇಮಾಮ್.

"ನೋಡ-ಸೀತಾ ನೀ ಅಂದಕೊಂಡ್ಹಂಗ ಆತು ನೋಡು ಅವ ಆಗ್ಲೆ ಹೆಸರು ಹುಡಕಿಬಿಟ್ಟಾನ ಏನು ಹೇಳಿಬಿಡು ಇಮಾಮ್" ಎಂದು ರಾಯರು ಅವನೆಡೆಗೆ ಹೊರಳಿ ಕೇಳಿದರು.

"ಹನುಮಾ, ಭೀಮಾ ಅಂತಾ ಇಡಬೇಕು ಅಂತ ಮಾಡಿ ಏನೊ?" -ಎಂದು ಸೀತಾಬಾಯಿ ಮಧ್ಯ ಬಾಯಿಹಾಕಿದರು.

"ಓ ನಹಿ ಅಮ್ಮಾ-ಅದಕ್ಕೆ ಸೂರಜ ಚಾಂದ ಅಂತ ಕರೀತೀನಿ" ಎಂದು ಇಮಾಮ್ ಹೇಳಿದಾಗ ಅವನ ಮುಖ ಮಿನುಗಿತು.

"ನೋಡು ಸೀತಾ-ಎಷ್ಟು ಚಂದ ಹೆಸರ ಹುಡಕ್ಯಾನ ಇಮಾಮ್" ಎಂದರು ಗೋಪಾಲರಾಯರು.

ಅವೇ ಸೂರಜ ಚಾಂದ ಇಂದು ತಮ ತೇಜಸ್ಸನ್ನೆಲ್ಲ ಕಳೆದುಕೊಂಡು ಗ್ರಹಣ ಹಿಡಿದ ಸೂರ್ಯ-ಚಂದ್ರರಂತಾಗಿವೆ. ಆದರೆ ಅಂದು -

ಗುರುವಾರ ನಮ್ಮೂರಲ್ಲಿ ಪ್ರಾಣಿಗಳ ಸಂತೆಯಾಗುತ್ತದೆ. ಮಾಂಟಗಾರರು ಸುತ್ತುಮುತ್ತಲು ಹಳ್ಳಿಗಳಿಂದ ಬರುತ್ತಾರೆ, ಅದರಂತೆ ಗ್ರಾಹಕರೂ ಸಹ.

ಅಂದು ಇಮಾಮ್ ಒಳ್ಳೆಯ ಸಡಗರದಿಂದಲೇ ಸಂತೆಗೆ ಹೋಗಿದ್ದ.

ಒಂದು ಕಡೆ ಎತ್ತುಗಳ ಸಾಲು ಜೊತೆ ಜೊತೆಯಾಗಿ ಕವಾಯತು ಮಾಡಲು ಸಿದ್ಧವಾಗಿದ್ದ ಸೈನಿಕರಂತೆ ನಿಂತಿದ್ದವು. ಮತ್ತೊಂದೆಡೆಗೆ ಎಮ್ಮೆ, ಕೋಣ, ಕುರಿಗಳು, ಸಿದ್ಧ ಪೋಲಿಸ ಪಡೆಯಂತೆ ಸಜ್ಜಾಗಿದ್ದವು ಬುಟ್ಟಿ ಬುಟ್ಟಿಗಳ ತುಂಬ ಕೋಳಿಗಳ ಸಾಲು ಸೆರೆಮನೆಯಲ್ಲಿರಿಸಿದ ಕೈದಿಗಳಂತೆ ಇದ್ದವು.

ಅವನು ಹತ್ತಾರು ಜತೆಗಳನ್ನು ನೋಡಿದ, ಒಂದೂ ಮನಸ್ಸಿಗೆ ಬರಲಿಲ್ಲ.

ಎಷ್ಟು ಹೊತ್ತಾದರೂ ಇವನ ಆಯ್ಕೆ ಮುಗಿಯೋದಿಲ್ಲ ಎಂಬುದಕ್ಕೆ ಗೋಪಾಲರಾಯರಿಗೆ ಬೇಸರ ಬಂದು ನುಡಿದರು, "ಏನೋ ನಿಂದು ಇನ್ನೂ ಆರಸೋದು ಮುಗಿವಲ್ತು."

ಕೊನೆಗೊಮ್ಮೆ ಇಮಾಮನ ಎತ್ತುಗಳ ಆಯ್ಕೆ ಮುಗಿಯಿತು. ಅವುಗಳ ಬಳಿ ಹೋದ ಕೂಡಲೇ ಅವನ ಮನಸ್ಸು ತುಂಬಿಬಂತು. ಅವುಗಳ ಕತ್ತು ಹಾಗೂ ಬೆನ್ನಮೇಲೆ ಕೈಯಾಡಿಸಿ ಒಡೆಯನಿಗೆ ತನ್ನ ಮನಸ್ಸಿನ ಇಂಗಿತವನ್ನು ಸೂಚಿಸಿದ.

ಅವೆರಡೂ ಎತ್ತುಗಳು ದಷ್ಟಪುಷ್ಟವಾಗಿ ಎತ್ತರವಾಗಿ ಬೆಳೆದು ಬೆಳ್ಳಗೆ ಸಣ್ಣಗೆ ಹಿಮಬೆಟ್ಟಗಳಂತೆ ನಿಂತಿದ್ದವು. ಚೂಪಾದ ಉದ್ದನೆಯ ಕೋಡುಗಳು ಇಕ್ಕಳದಂತೆ ಒಂದಕ್ಕೊಂದು ಹೊಂದಿಕೊಂಡಿದ್ದವು

ನೋಡಲಿಕ್ಕೂ ಅವು ಅವಳಿ ಜವಳಿ ಏನೋ ಎನ್ನುವಂತಿದ್ದವು. ಆದರೆ ಒಂದರ ಮುಖದ ಮೇಲೆ ಸ್ವಲ್ಪ ಕಲೆ ಇತ್ತು. ಅದಕ್ಕೆ ಇಮಾಮನು ಚಾಂದ ಎಂದು ಹೆಸರಿಟ್ಟ. ಏಕಂದರೆ ಚಂದ್ರ ಕಳೆಯುಳ್ಳವನಲ್ಲವೇ? ಇನ್ನೊಂದಕ್ಕೆ ಸೂರಜ ಎಂದು ಕರೆದ

ಸೀತಾಬಾಯಿ ಅವುಗಳು ಬಾಗಿಲಬಳಿ ಬಂದಾಗ ಅರಿಷಿಣ ಕುಂಕುಮ ಏರಿಸಿ ಆರತಿ ಬೆಳಗಿದಳು. ಇಮಾಮನ ಹೆಂಡತಿ ಫಾತಿಮಾ ದಂದಕ್ಕಿಯನ್ನು ಶುದ್ಧಗೊಳಿಸಿ ಬೆಳಗಿ ಗೋದಲಿಯಲ್ಲಿ ಹಚ್ಚ ಹಸಿರಿನ ಹುಲ್ಲನ್ನು ಹಾಕಿದಳು. ಸೂರಜ, ಚಾಂದ ಕೊರಳೊಳಗಿನ ಗೆಜ್ಜೆಯ ಘಲುನಾದದೊಂದಿಗೆ ಮೇಯಹತ್ತಿದವು.

ಆದರೆ...ಇಂದಿನ ಈ ದುಸ್ಥಿತಿಯನ್ನು ಕಂಡು ಇಮಾಮನ ಮನ ಎಷ್ಟು ನೊಂದಿರಬೇಡ,......

ಅದೇ ಒಣಗಿದ ಹುಲ್ಲನ್ನೇ ಅದಕ್ಕೆ ಹಾಕಿದ ತಿನ್ನಲು. ಹಾಗೆ ಚಾಂದ-ಸೂರಜರ ಬೆನ್ನಮೇಲೆ ಕೈಯಾಡಿಸತೊಡಗಿದ. ಅವು ಹುಲ್ಲನ್ನು ತಿನ್ನುವದನ್ನು ಬಿಟ್ಟು-ಗೋಣನ್ನೆತ್ತಿಕೊಂಡು ತಮ್ಮ ಯಜಮಾನನ ಕಡೆಗೆ ನೋಡಹತ್ತಿದವು.

ಒಮ್ಮೆಲೆ ಇಮಾಮನಿಗೆ ಹಿಂದಿನದೆಲ್ಲಾ ನೆನಪಾಗಹತ್ತಿತು...ಅಂದು...ಆ ದಿನ...

ಮಣ್ಣೆತ್ತಿನ ಅಮವಾಸ್ಯೆ. ಇಮಾಮ್, ಮದುಮಗನಂತೆ ಸಡಗರ ಸಂಭ್ರಮದಿಂದ ತಯಾರಾಗಿದ್ದ.

ಫಾತಿಮಾ ದಂದಕ್ಕಿ, ಗೋದಲಿಯನ್ನು, ಶಗಣೆಯಿಂದ ಸಾರಿಸಿದಳು. ಅದರ ಮೇಲೆ, ಸೀತಾಬಾಯಿ ಸುಂದರವಾಗಿ ರಂಗವಲ್ಲಿಯನಿಕ್ಕಿ ಇಮಾಮ್ ಶುಭ್ರವಾಗಿ ತೊಳೆದ ಸೂರಜ, ಚಾಂದರಿಗೆ ಆರುತಿ ಎತ್ತಿದಳು.

"ಏನು ಇಮಾಮ್, ಇವತ್ತಿನ ಎತ್ತಿನ ಪ್ರದರ್ಶನದೊಳಗೆ ನಿನಗೆ ಬಹುಮಾನ ಸಿಗ್ತದೇನು?" – ಎತ್ತಿನ ಮೆರುಗನ್ನು ಕಂಡು ಚೇಷ್ಟೆಯ ದನಿಯಲ್ಲಿ ಕೇಳಿದರು ಗೋಪಾಲರಾಯರು.

"ಕ್ಯೊಂ ನಹಿ ಸಾಬ್-ನಿಮ್ಮ ದಯಾ, ಖುದಾನ ಆಶೀರ್ವಾದ ಇದ್ದರ ಇವತ್ತಿನ ಬಂಡಿ ಓಟದೊಳಗೂ ನಾನ ಮುಂದ ಬರ್ತೀನಿ." ಹೆಮ್ಮೆಯಿಂದ ಹೇಳಿದ ಇಮಾಮ್.

"ಓ! ಹೌದಲ್ಲ ಇವತ್ತು ಬಂಡಿ ಓಟದ ಸ್ಪರ್ಧಾನೂ. ಅದಲ್ಲ ಎಷ್ಟಕ್ಕ ಅದು?

"ಛೆ ಬಜೆ ಹೈ ಸಾಬ್"

ಎಂದು ಒಡೆಯನಿಗೆ ನೆನಪು ತಂದುಕೊಟ್ಟು ಸ್ಪರ್ಧಾಸ್ಥಳಕ್ಕೆ ಬರಲು ಹೇಳಿದ.

ಗೋಪಾಲರಾಯರೂ ಒಳ್ಳೆಯ ಉತ್ಸಾಹಿ ರಸಿಕರು. ಇಮಾಮನ ಬಗ್ಗೆ ಅವರಿಗೆ ತುಂಬಾ ಅಭಿಮಾನ. ಆದರ. ಸ್ಪರ್ಧೆಯಲ್ಲಿ ಅವನೇ ಗೆದೆಯುತ್ತಾನೆ ಎಂಬ ವಿಶ್ವಾಸ ಅವರಿಗೆ ಇದ್ದೇ ಇತ್ತು.

ಅಂದು ನಾನೂ ಎತ್ತುಗಳ ಪ್ರದರ್ಶನಕ್ಕೆ ಹೋಗಿದ್ದೆ. ಆಗ ನಾನಿನ್ನೂ ಚಿಕ್ಕವ. ಆದರೂ ಪ್ರದರ್ಶನ, ಪಂದ್ಯ, ಬೈಲಾಟಗಳಲ್ಲಿ ನನ್ನ ಹಾಜರಿ ಇದ್ದೇ ಇರಬೇಕು. (ಆಗ ನನಗಿನ್ನೂ ಇಮಾಮನದು ಹೊಸ ಪರಿಚಯ.)

ಸಂಜೆ ಸುಮಾರು ನಾಲ್ಕು ಗಂಟೆಗೆ ಪ್ರದರ್ಶನ ಪ್ರಾರಂಭವಾಯಿತು. ಸ್ವತಃ ಕಲೆಕ್ಟರ್ ಆಗಮಿಸಿದ್ದರು.

ಅವರೊಂದಿಗೆ ತಹಶೀಲದಾರ ಹಾಗೂ ಉಳಿದ ಊರಿನ ಪ್ರಮುಖ ವ್ಯಕ್ತಿಗಳು ಬಂದಿದ್ದರು. ಅವರಲ್ಲಿ ಗೋಪಾಲರಾಯರೂ ಒಬ್ಬರಾಗಿದ್ದರು.

ನಮ್ಮೂರಿನ ಪೂರ್ವ ದಿಕ್ಕಿಗೆ ಒಡಕುರಾಯನ ಗುಡಿ ಇದೆ. ಈ ದೇವಾಲಯದ ಮುಂದುಗಡೆ ಸುಮಾರು ಅರ್ಧಮೈಲು ವಿಶಾಲವಾದ ಮೈದಾನವಿದೆ.

ಈ ಮೈದಾನದಲ್ಲಿಯೇ ಪಂದ್ಯ. ಪ್ರದರ್ಶನಗಳು ಜರಗುವದು ನಮ್ಮೂರಿಗೆ ಸರ್ಕಸ್ ಬಂದಾಗಲೂ ಸಹ ಇಲ್ಲಿಯೇ ಟೆಂಟ್ ಹಾಕಿದ್ದರು.

ದೇವಾಲಯದಿಂದ ಒಂದು ಒಂದೂವರೆ ಮೈಲಾಚೆ ಮಾವಿನ ತೋಪು ಇದೆ. ಅಲ್ಲಿಂದ ಹೊರಟ ಸ್ಪರ್ಧಾಬಂಡಿಗಳು ದೇವಾಲಯವನ್ನು ಬಂದು ತಲುಪಬೇಕು. ಮತ್ತು ದೇವಾಲಯದ ಹತ್ತಿರ ಕಟ್ಟಿದ ತೋರಣವನ್ನು ಯಾವಬಂಡಿಯ ಯಜಮಾನ ಮೊದಲು ಬಂದು ಹರಿಯುತ್ತಾನೊ ಅವನಿಗೆ ಮೊದಲ ಬಹುಮಾನ ನೀಡುವದಾಗಿ ಸಾರಲಾಗಿತ್ತು.

ಈ ಪಂದ್ಯದಲ್ಲಿ ಆರು ಬಂಡಿಗಳು ಭಾಗವಹಿಸಿದ್ದವು. ಅವೆಲ್ಲವೂ ಸಾಲಾಗಿ ಮಾವಿನ ಮರದ ಅಡಿ ನಿಂತುಕೊಂಡಿದ್ದವು. -ಮೆರಾಥಾನಿನ ಓಟಗಾರನನ್ನೇ ಸೋಲಿಸುವಂತೆ.

ಕೆಲವರು ತಮ್ಮ ಎತ್ತುಗಳ ಕೋಡುಗಳಿಗೆ ಕೆಂಪು, ನೀಲಿ, ಹಸಿರು ಬಣ್ಣಗಳ ಪಟ್ಟೆಯನ್ನು ಹಚ್ಚಿದ್ದರು. ಮತ್ತೆ ಕೆಲವರು ಅವುಗಳ ಡುಬ್ಬಕ್ಕೆ ಗುಗೆದೊಗಲಿಗೆ ಬಣ್ಣ ಬಳಿದಿದ್ದರು.

ಆದರೆ ಇಮಾಮ್ ಹಾಗೇನು ಮಾಡಿರಲಿಲ್ಲ. ಚಾಂದ, ಸೂರಜ್‌ರ ಕೋಡುಗಳಿಗೆ ಮಾತ್ರ ಕಳಿರುಗಳ ಬಳ್ಳಿಯನ್ನು ತೊಡಿಸಿದ್ದ. ಅವುಗಳ ವಿಶಾಲವಾದ ಹಣೆಗೆ ಸೀತಾಬಾಯಿ ಇಟ್ಟ ತಿಲಕ ಜಯದ ಸಂಕೇತದಂತೆ ಹೊಳೆಯುತ್ತಿತ್ತು.

ಮಾವಿನ ತೋಪಿನಿಂದ ಒಡಕುರಾಯನ ಗುಡಿಯ ವರೆಗೆ ಎರಡೂ ಬದಿಯಲ್ಲಿ ಅಸಂಖ್ಯಾತವಾಗಿ ನಿಂತ ಜನಸ್ತೋಮ ದಾರಿಯ ಎರಡೂ ಮಗ್ಗಲು ಹರಿಯುವ ತೆರೆಗಳಂತೆ ಕಾಣಿಸುತ್ತಿತ್ತು. ಅಲ್ಲಲ್ಲಿ ಕೆಂಪು, ಹಳದಿ, ಬಿಳಿ ರುಮಾಲುಗಳು ಉದುರಿದ ಹೂವಿನ ಪಕಳೆಗಳಂತೆ ಗೋಚರಿಸುತ್ತಿದ್ದವು

ಪಂದ್ಯ ಆರಂಭವಾಯಿತು. ಸ್ಪರ್ಧಾಳುಗಳು ತಮ್ಮ ತಮ್ಮ ಬಂಡಿಯನ್ನೇರಿ ನಿಂತುಕೊಂಡರು.

ಅನತಿದೂರದಲ್ಲಿ ಖಾಕಿ ಉಡುಪನ್ನು ಧರಿಸಿ ನಿಂತ ವ್ಯಕ್ತಿ 'ಢಂ ಢಂ, ಢಂ, ಎಂದು ಮೂರು ಸಲ ಆಕಾಶದ ಕಡೆ ಗುಂಡು ಹಾರಿಸಿದ.

ಆ ಸದ್ದನ್ನು ಕೇಳಿ ಕಂಗೆಟ್ಟು ಓಡುವ ಜಿಂಕೆಗಳಂತೆ ಬಂಡಿಗಳು ಓಡತೊಡಗಿದವು. 'ಖಡ್-ಖಡಲ್' ಎಂದು ಹೊರಹೊಮ್ಮುವ ಅವುಗಳ ಧ್ವನಿ ನಮ್ಮೂರಿಗೆ ಸಿಡಿಲು ಬಡಿಯುತ್ತಿರುವಂತೆ ಭಾಸವಾಗುತ್ತಿತ್ತು. ಎತ್ತಿನ ಕೊರಳೊಳಗಿನ ಘಿಲು ಘಿಲು ಗೆಜ್ಜೆಯ ನಾದ-ರಾಜನರ್ತಕಿಯರ ಕುಣಿತದ ನೆನಪು ತರುವಂತಿತ್ತು.

ಬಂಡಿಗಳು ತಮ್ಮ ಬಳಿ ಸುಳಿದಂತೆಲ್ಲ ಜನರು ಎದ್ದು ಕುಣಿದು—'ಹೇ...ಹೇ...' ಎಂದು ಕೇಕೆ—ಹಾಕುತ್ತಿದ್ದರು. ತಮ್ಮ ತಮ್ಮ ಗುಂಪಿನವರೇ ಗೆಲ್ಲಬೇಕೆಂಬ ಹಂಬಲ ಅವರದು.

ಇಮಾಮ್ ಮೊದಮೊದಲು ಹಿಂದೆ ಹಿಂದೆ ಬೀಳತೊಡಗಿದ್ದ...'ಇವನೇಕೆ ಹೀಗೆ ಸುಸ್ತಾಗಿದ್ದಾನೆ' ನನಗೂ ಸಮಸ್ಯೆಯಾಯಿತು.

"ಇಮಾಮ್, ಓಡಿಸು, ಓಡಿಸು- ನೀ ಮುಂದ ಬರ್ತೀ..."

ಎಂದು ನಾನು ಕೂಗಿದೆ.

ನನ್ನ ಬಳಿಯೇ ಕುಳಿತ ಇನ್ನೊಂದು ಪಾರ್ಟಿಯ ವ್ಯಕ್ತಿ ಇಮಾಮನಿಗೆ ಹುರುಪು ತುಂಬಲು ಎದ್ದು ನಿಂತ ನನ್ನ ಕೈ ಹಿಡಿದು ಜಗ್ಗಿದ.

"ಸುಮ್ಮನೆ ಕೂಡೊ ಯಾಕ ಒದ್ರತಿ"

ಎಂದು ದುರುದುರುನೆ ನುಂಗುವಂತೆ ನೋಡಿದ.

ಅಷ್ಟರಲ್ಲಿ ಪಂದ್ಯದ ಬಂಡಿಯ ಒಂದು ಗಾಲಿ ಬಿಚ್ಚಿ ರಭಸವಾಗಿ ಕೃಷ್ಣನ ಚಕ್ರದಂತೆ ನಮ್ಮೆಡೆಗೆ ಬರತೊಡಗಿತ್ತು- ಗಾಬರಿಯಾಗಿ ಜನ ಚದುರಿದರು. ನಾನೂ ಸರಿದುಕೊಂಡೆ.

ಆದರೆ ಮರಿಆನೆಯಂಥ ಆ ವ್ಯಕ್ತಿ ಏಳಲಿಕ್ಕಾರದೆ 'ಅಯ್ಯೊ—ಅಯ್ಯೋ' ಚೀರುವಷ್ಟರಲ್ಲಿ ಅದು ಬಂದು ಹಾಗು ಧಡಾರನೆ ನೆಲಕ್ಕುರುಳಿಬಿತ್ತು. ಕೆಲಸಮಯ ಅವನು ಮೂರ್ಛೆ ಹೋಗಿದ್ದ. ಪ್ರಥಮ ಚಿಕಿತ್ಸೆಯೂ ನಡೆಯಿತು.

ಇತ್ತ ಬಂಡಿಗಳು ಓಡುತ್ತಲೇ ಇದ್ದವು.

ಅಲ್ಲಾನನ್ನು ನೆನೆದು ಇಮಾಮು ನೊಗದಮೇಲೆ ನಿಂತುಕೊಂಡು ಚಾಂದ ಹಾಗೂ ಸೂರಜರ ಬಾಲಗಳನ್ನು ಸುರುಳಿ ಮಾಡಿ ಸುತ್ತಿ—'ಹೆ...ಹೆ...' ಎಂದು ಬಾರಕೋಲಿನಿಂದ ಹೊಡೆದಾಗ ಅವು ಕಂಗೆಟ್ಟು ಓಡತೊಡಗಿದವು. ಪ್ರೇಕ್ಷಕರ ಕಣ್ಣಿಗೂ ಸಹ ಕಾಣದಂತೆ ಬಂಡಿಯ ಗಾಲಿಗಳು 'ಕಿರ್ ಕಿರ್' ಎಂದು ಕಿರಚುತ್ತಿದ್ದವು. ಭೂಮಿಯಿಂದ ಆಕಾಶದ ವರೆಗೆ ಧೂಳು, ಬಳಿಬಳಿಯಾಗಿ ಜ್ವಾಲಾಮುಖಿಯಂತೆ ಆವರಿಸಿಗೊಂಡಿತ್ತು.

ಪಂದ್ಯದ ಒಂದೆರಡು ಬಂಡಿಗಳ ಕೀಲು ಬಿಚ್ಚಿ ಗಾಲಿಗಳು ಉರುಳಿ ಹೊರಳಿ ನಡುಹಾದಿಯಲ್ಲಿಯೇ ಬಿದ್ದು ಹೋಗಿದ್ದವು. ಒಂದು ಬಂಡಿಯ ಎತ್ತು ಮುಗ್ಗರಿಸಿ ಬಿದ್ದುಕೊಂಡಿತ್ತು.

ಇದನ್ನೆಲ್ಲ ಗೆದ್ದು ಪಾರಾಗಿ ಬಂದವರು ಇಬ್ಬರೇ. ಇಮಾಮು ಗುಡಿಯ ಬಳಿಯ ತೋರಣ ಹರಿದ ನಂತರ ಹನುಮ ಬಂದ.

ಇಮಾಮ್ ತೋರಣ ಹರಿಯುವದೊಂದೇ ತಡ ಜನರಲ್ಲಿ ಹರ್ಷೋದ್ಗಾರ, ಕರತಾಡನ, ಕೇಕೆ, ಗಂಟೆನಾದ ಮೊಳಗಿದವು.

ಜರದ ರುಮಾಲಿನ ಇಬ್ಬರು ಪೈಲವಾನರು ಓಡುತ್ತಾ ಬಂದವರೇ ಮೈಮರೆತು ನಿಂತ ಇಮಾಮುನನ್ನೂ ಹೆಗಲ ಮೇಲೆ ಹೊತ್ತುಕೊಂಡು ಜನರಿಗೆಲ್ಲಾ ತೋರಿಸಿದರು. ಜಯಶಾಲಿಗೆ ಹತ್ತಾರು ಮಂದಿ ಹಾರ ಹಾಕಿದರು. ಇಮಾಮು ಕೈ ಜೋಡಿಸಿ ಕೃತಜ್ಞತೆ ಅರ್ಪಿಸಿದ.

ಗೋಪಾಲರಾಯರ ಹೃದಯ ಆನಂದದಿಂದ ತುಂಬಿಹೋಗಿತ್ತು.

ಇಮಾಮ್ ಮೊದಲು ಹೋಗಿ ಬಂಡಿಯಿಂದ ಎತ್ತುಗಳನ್ನು ಬಿಚ್ಚಿ ಗಿಡಕ್ಕೆ ಕಟ್ಟಿದ. ಅವುಗಳನ್ನು ನೋಡಿ ಅಭಿಮಾನವೆನಿಸಿತು. ಸೂರಜ ಚಾಂದರ ಕೊರಳಿಗೆ ತನ್ನ ಕೊರಳನ್ನಿರಿಸಿ ಮುತ್ತನ್ನಿಟ್ಟ. ದಣಿದ ಆ ಎತ್ತುಗಳು ಯಜಮಾನನನ್ನು ಅಂತಃಕರಣದಿಂದ ನೋಡಿದವು. ಆ ದೃಷ್ಟಿ...ಆ ನೋಟ...ಆ ದೃಶ್ಯ...ಎಲ್ಲವೂ ನೆನಪಾಗಹತ್ತಿದವು, ಇಮಾಮುನಿಗೆ. ಅಶ್ರುಗಳು ಒತ್ತರಿಸಿ ಬಂದವು. ಕ್ಷಣ ಹೊತ್ತು ಹಾಗೇ ಮಾತು ಬಾರದ ಮೂಕನಂತೆ ನಿಂತುಕೊಂಡ...

ಓಡಿ ಓಟದ ಸ್ಪರ್ಧೆಯಲ್ಲಿ ವಿಜಯಿಯಾದ ಇಮಾಮುನಿಗೆ ಕಲೆಕ್ಟರರೇ ಬೆಳ್ಳಿಯ ಪದಕವನ್ನು ಬಹುಮಾನವಾಗಿ ಇತ್ತರು. ಅದೆಂತಹ ಅದ್ಭುತ ವಿಜಯ ಆನಂದ. ಜನಸಮೂಹದಲ್ಲಿ ತಾನೊಬ್ಬನೇ ಎತ್ತರದಲ್ಲಿ ನಿಂತುಕೊಂಡು ನೋಡಿದ್ದ.

"ಹೌದು ಎಲ್ಲರೂ ನನ್ನನ್ನೇ ನೋಡುತ್ತಿದ್ದಾರೆ—ನಾನು ಮಾತ್ರ ಎಲ್ಲರನ್ನೂ ನೋಡುತ್ತಿಲ್ಲ."

—ಎಂದುಕೊಂಡ ಇಮಾಮ್.

—೩—

ಮನದ ಆಲ್ಬಂ ತೆಗೆಯುತ್ತ ಹೋದಂತೆಲ್ಲಾ ನಮ್ಮ ಕಣ್ಣೆದುರು ಎಷ್ಟೋ ಚಿತ್ರಗಳು ನಾವೇ ಸಂಗ್ರಹಿಸಿದ್ದು ಸುಳಿದು ಹೋಗುತ್ತವೆ. ಕೆಲವು "ಕರಿಬಿಳಿ"ಯಲ್ಲಿ ಕೆಲವು ಬಣ್ಣ ಬಣ್ಣದಲ್ಲಿ ಇರಬಹುದು-ಕೆಲವು ಗಾತ್ರದಲ್ಲಿಯೂ ಹೆಚ್ಚು ಕಡಿಮೆ ಇರಬಹುದು. ಅವು ಆಯಾ ಅನುಭವದ ಸಂವೇದನೆಗೆ ತಕ್ಕಂತೆ ಇರುತ್ತವೆ.

ಅಲ್ಲಿ ಇಮಾಮ್ ನೋಡ ಬಯಸಿದ್ದ ಪ್ರೀತಿಯ ಮಡದಿ ಫಾತಿಮಾಳನ್ನು.

ಫಾತಿಮಾ...ಫಾತಿಮಾ...ಅವಳೇ ಇಮಾಮುನ ಹೃದಯ-ಅವಳೇ ಇಮಾಮುನ ಸರ್ವಸ್ವ ಚಿಕ್ಕಂದಿನಲ್ಲಿಯೇ ಕೂಡಿ ಆಡಿ ಬೆಳೆದವರು ಇಂದಿಗೂ ಕೂಡಿಯೇ ಬಾಳುತ್ತಿದ್ದಾರೆ.

ಸದಾ ಇಮಾಮು ತನ್ನ ಬಾಲ್ಯದ ದಿನಗಳ ಸವಿಯನ್ನು ಯೌವನದ ಹೋರಾಟದ ಕಥೆಯನ್ನು ಹೇಳುತ್ತಿದ್ದ.

* * *

ಇಮಾಮುನ ಹಳ್ಳಿಯಲ್ಲಿ ಯಾವ ಬೀದಿಯೊಳಗಿಂದ ಹಾದು ಹೋದರೂ ಮುಖ್ಯ ಬೀದಿಗೆ ಸೇರಬಹುದು.

ಒಂದೆರಡು ಕಡೆ ಕೂಡಿದ ನಾಲ್ಕು ರಸ್ತೆ ಬಳಿ ಪೆಟ್ರೋಮ್ಯಾಕ್ಸ್ ದೀಪ ಕಂಬಗಳಿವೆ. ( ಅದು ಉರಿಯುವದು ದೇವರಿಗೆ ಹರಕೆ ಹೊತ್ತಾಗ ಮಾತ್ರ ).

ಆ ಊರಿಗೇ ಆಕರ್ಷಕ ಬಿಂದುವಾದಂತೆ ಊರ ಮಧ್ಯದಲ್ಲಿಯೇ ಜಕ್ಕಣಾಚಾರ್ಯರು ನಿರ್ಮಿಸಿದ ಸುಂದರ ಈಶ್ವರ ದೇವಾಲಯವಿದೆ.

ಒಂದೇ ರಾತ್ರಿಯಲ್ಲಿ ಜಕ್ಕಣಾಚಾರ್ಯರು ಆ ಗುಡಿಯನ್ನು ನಿರ್ಮಿಸಿದರೆಂಬ ಪ್ರತೀತಿಯೂ ಇದೆ. ಕಲ್ಲೇ ಕುಸುರೊಡೆದಂತಿದೆ ಆ ಕಲಾಶಿಲ್ಪ.

ಗುಡಿಯ ಪ್ರವೇಶ ಮಂಟಪದಲ್ಲಿ ನಂದಿಯ ಬಾಯಿ ಜಜ್ಜಿಹೋಗಿತ್ತು.

ನಂದಿಯ ಒಡಲೊಳಗೆ ಹೊನ್ನಿದೆ ಎಂದು ಬಗೆದು ಯಾರೋ ಅದನ್ನು ಒಡೆದು ಅಪಹರಿಸಲು ಯತ್ನಿಸಿದರಂತೆ. ಇಂದಿಗೂ ಅದು ಭಗ್ನವಾಗಿ ಬಿದ್ದಿದೆ.

ಗರ್ಭಗುಡಿಯೊಳಗಿನ ಸುಂದರಲಿಂಗ-ಅಲ್ಲಿಯ ತಣ್ಪು ಮನ ಹಗುರುಗೊಳಿಸುವಂಥ ವಾತಾವರಣ ನಿರ್ಮಿತವಾಗಿದೆ.

ಅನತಿ ದೂರದಲ್ಲಿ ಅದಕ್ಕೆ ಅಭಿಮುಖವಾಗಿ, ಒಂದು ಮಸೀದೆಯೂ ಇದೆ.

ಆವೆರಡು ಹಳ್ಳಿಯ ಪರಧರ್ಮ ಸಹಿಷ್ಣುತೆಯನ್ನು ಸಾರುವಂತೆ ನಿಂತಿವೆ.

ಅಲ್ಲಿಯ ಮುಸಲ್ಮಾನರ ಸಂಖ್ಯೆ ಹಿಂದೂ ಜನರಷ್ಟು ಇರದಿದ್ದರೂ ಕಡಿಮೆ ಏನಾಗಿರಲಿಲ್ಲ

ಇಲ್ಲಿಯ ಮುಸಲ್ಮಾನರು ಉರ್ದುವಿನಕ್ಕಿಂತ ಕನ್ನಡವನ್ನು ಚನ್ನಾಗಿ ಮಾತಾಡಬಲ್ಲರು. ಆಗಾಗ ಕನ್ನಡದೊಂದಿಗೆ ಉರ್ದು ಬೆರಸಿ ಮಾತಾಡುವದೂ ಉಂಟು. ಈ ಮಿಶ್ರ ಭಾಷೆ ಸ್ವಾರಸ್ಯಮಯವಾಗಿರುತ್ತದೆ.

ಕರೇಗೌಡನೇ ಆ ಹಳ್ಳಿಗೆ ಹಿರಿಯ. ಅವನ ದರ್ಪ ಅಧಿಕಾರಕ್ಕೆ ಇಡೀ ಹಳ್ಳಿಯೇ ನಡುಗುತ್ತಿತ್ತು. ಟಾಂಗಾದಲ್ಲಿ ಹೊರಟನೆಂದರೆ ರಾಜಮಹಾರಾಜರಿಗೆ ದಾರಿ ಬಿಡುವಂತೆ ಜನ ಸರಿದುಕೊಳ್ಳುತ್ತಿದ್ದರು.

ಅವನ ಅನೈತಿಕ ಪ್ರವೃತ್ತಿ ಹಳ್ಳಿಯ ಮನೆಮಾತಾಗಿತ್ತು. ಅವನ ಕೆಡುಗಣ್ಣು ಸದಾ ಹಳ್ಳಿಯ ಚಲುವೆಯರಿಗಾಗಿ ಹಂಬಲಿಸುತ್ತಿತ್ತು. ಒಂದೆರಡು ಇಂಥ ಘಟನೆಗಳ ವಿರಸ ಪ್ರಕರಣವೂ ನಡೆಯಿತು. ಅಂದಿನಿಂದ ಸ್ವಲ್ಪ ಹಣ್ಣಾಗಿದ್ದ ಎನ್ನಬಹುದು

ಕರೇಗೌಡನ ಟಾಂಗಾವಾಲಾ-ಇಮಾಮುನ ತಂದೆ ರಹೀಮು. ಬಹಳ ದಿನಗಳಿಂದ ಆ ವೃತ್ತಿಯನ್ನು ನಡೆಸಿಕೊಂಡು ಬಂದಿದ್ದ ರಹೀಮು.

ಫಾತಿಮಾಳ ತಂದೆ ಅಲ್ಲಾಬಕ್ಷ ಕರೇಗೌಡನ ರೈತ. ಫಾತಿಮಾ ಮೊದ ಮೊದಲು ಅಲ್ಲಾಬಕ್ಷನೊಂದಿಗೆ ಗೌಡನ ಮನೆಗೆ ಹೋಗುತ್ತಿದ್ದಳು. ಮೈನೆರೆದ ಮೇಲಂತೂ ಅವನ ಮನೆಗೆ ಕಾಲಿಡಲಿಲ್ಲ.

ಆದರೂ ಕರೇಗೌಡನ ಕಣ್ಣು ಫಾತಿಮಾಳ ಬೆಂಬತ್ತಿತ್ತು. ಅವಕಾಶಕ್ಕಾಗಿ ಹಂಬಲಿಸಿದ ಕರೇಗೌಡ...

ಅಂದು ಇನ್ನೂ ಬೆಳಗು ಹರಿಯುತ್ತಲೇ ಕರೇಗೌಡನ ಮನೆಯ ಕಡೆಗೆ ನಡೆದ ರಹೀಮು, ಅಲ್ಲಾಬಕ್ಷನನ್ನು ಕಂಡು 'ಸಲಾಂ ವಾಲಿಕುಂ'

—ಎಂದು ಸ್ವಲ್ಪ ನಡು ಬಾಗಿಸಿ, ನಾಲ್ಕು ಬೆರಳುಗಳ ಮಧ್ಯ ಹೆಬ್ಬೆರಳನ್ನು ಸೇರಿಸಿ-ನೀಳ್ಗಡೆಗೆ ತಾಗಿಸಿ ನುಡಿದ.

ಗಡ್ಡದ ಮೇಲೆ ಕೈಯಾಡಿಸಿಕೊಳ್ಳುತ್ತ ನಡೆದಿದ್ದ ಅಲ್ಲಾಬಕ್ಷ-ಪ್ರತಿಯಾಗಿ-

'ವಾಲೀಕುಂ ಸಲಾಂ'

ಎಂದು ವಂದಿಸಿದ.

ಅವರಿಬ್ಬರೂ ಸರಿಸಮಾನರು. ಮಧ್ಯವಯಸ್ಕರೇ. ಇಬ್ಬರದೂ ಎತ್ತರದ ನಿಲುವಿಕೆ ನೀಳ ದಾಡೆ ಗುಬ್ಬಿಯ ಗೂಡಿನಂತೆ, ಜೋತಾಡುತ್ತಿತ್ತು.

ರಹೀಮು ಪೈಜಾಮಾ, ಜುಬ್ಬ ಹಾಗೂ ಅದರ ಮೇಲೆ ಒಂದು ಹರಿದ ಜಾಕೆಟ್ ತೊಟ್ಟುಕೊಂಡಿದ್ದ. ಕಿರೀಟದಂತಹ ಕೆಂಪು ರೂಮಿ ಟೊಪ್ಪಿಗೆ. ಜುಟ್ಟವನ್ನು ಬಿಟ್ಟುಕೊಂಡು ಅವನ ತಲೆಯ ಮೇಲೆ ಕುಳಿತಿತ್ತು.

ಅಲ್ಲಾಬಕ್ಷ ಧೋತರ ಉಟ್ಟುಕೊಂಡು ಮೇಲೆ ಬಗಲುಕಿಸೆ ಅಂಗಿಯನ್ನು ಹಾಕಿಕೊಂಡಿದ್ದ. ತಲೆಗೆ ಸುತ್ತಿದ್ದ ರುಮಾಲದ ತುದಿ ಹೆಗಲ ಮೇಲೆ ಇಳಿಬಿದ್ದಿತ್ತು.

ಇಬ್ಬರೂ ಹತ್ತಿರದ ಬೇವಿನ ಗಿಡದ ಕಟ್ಟೆಗೆ ಕುಳಿತು ಹರಟತೊಡಗಿದ್ದರು.

ಅಲ್ಲಾಬಕ್ಷ ಬಗಲಕಿಸೆಯಲ್ಲಿದ್ದ ಎಲೆಅಡಕೆಯ ಚಂಚಿಯನ್ನು ಹೊರಗೆ ತೆಗೆದು—

"ಪಾನ ಖಾವು ರಹಿಮ್"

-ಎಂದು ಮುಂದೆ ಸರಿಸಿದ.

"ಷುಕ್ರಿಯಾ ಭಯ್ಯಾ"

—ಎನ್ನುತ್ತ ರಹೀಮು ಒಂದು ವೀಳ್ಯದೆಲೆಯನ್ನು ತೆಗೆದುಕೊಂಡು ತಂಬು ಚಿವಟ, ಸುಣ್ಣ ಸವರಿ ಬಾಯಲ್ಲಿ ತುರುಕಿಕೊಂಡ.

ಪಾನನ್ನು ಮೆಲ್ಲುತ್ತಿದ್ದ ಅಲ್ಲಾಭಕ್ಷ, ಚಂಚಿಯ ಇನ್ನೊಂದು ಖಾನೆಯಲ್ಲಿದ್ದ ತಂಬಾಕನ್ನು ತೆಗೆದುಕೊಂಡು ರಹೀಮನಿಗಷ್ಟು ಕೊಟ್ಟು ತಾನಿಷ್ಟು ಹಾಕಿಕೊಂಡ. ಇಬ್ಬರೂ ಎಲೆಯನ್ನು ಮೆಲ್ಲುತ್ತ ಪಿಚಿಪಿಚಿ ಜೀಕಳಿಯಂತೆ ಉಗುಳುತ್ತ ಏನೇನೋ ಹರಟುತ್ತ ಕುಳಿತುಕೊಂಡರು.

ಇವರ ಹಿಂಬದಿಯ ಕಟ್ಟೆಯ ಮೇಲೆ ಮೂರು ನಾಲ್ಕು ಜನ ಕಂಬಳಿ ಹೊದೆದುಕೊಂಡು ಬೀಡಿಯ ಝುರಿ ಎಳೆಯುತ್ತ ಕುಳಿತಿದ್ದರು.

ಅವರ ಎದುರುಗಡೆಯ ಸಣ್ಣ ಚಹದಂಗಡಿಯ ಬೆಂಚಿನ ಮೇಲೆ ಕೆಲ ಹಳ್ಳಿಗರು ಚಹ ಕುಡಿಯುತ್ತ ಕುಳಿತಿದ್ದರು.

ಇದ್ದಲಿ ಒಲೆಯ ಕೆಂಡ ನಿಗಿನಿಗಿಯಾಗಿತ್ತು. ಅದರ ಮೇಲಿರಿಸಿದ ಪಾತ್ರೆಯಲ್ಲಿಯ ನೀರು ಸಳಮಳ ಹೊಯ್ದಾಡುತ್ತಿತ್ತು. ಗಂಡುಗಚ್ಚೆಯನಾಗಿ ತುಂಬಿದೆದೆಯನ್ನು ಬಾಗಿಸಿ ಪುಡಿ ಹಾಕಿದಳು.



ಚಹ ಕುಡಿಯುತ್ತ ಕುಳಿತಿದ್ದ ಒಬ್ಬ ಸೋಮಾರಿ ಒಮ್ಮೆಲೆ "ಬೇ-ನಿನ್ನ ಉಬ್ಬಿದ ಎದೀ ಹಾಲ ಹಾಕಿಗೀಕಿ ಚಾದಾಗ" ಎಂದು ಗೇಲಿ ಮಾಡಿದ.

ಉಳಿದವರೆಲ್ಲಾ ಖೊಳ್ಳನೆ ನಕ್ಕರು. ನಾಗಿ ಮೂಗು ಮುರಿದಳು.

* * *

"ರಹೀಮ-ಇವತ್ಯಾಕ ಗಡಾನ ಹೊಂಟೀದಿ ಇನ್ನೂ ಹೊತ್ತು ಹೊಂಟಿಲ್ಲಾ."

—ಅಲ್ಲಾಬಕ್ಷ-ಪಿಚಕ್ಕನೆ ಉಗುಳಿ ಕೇಳಿದ.

"ಇವತ್ತ ಗೌಡ್ರು ಶಹರಕ್ಕ ಹೋಕ್ತಾರಂತ. ಗಡಾನ ಬರಾಕ ಹೇಳಿದ್ರು. ಇಮಾಮಗ ಹೋಗ್ಲೆ ಅಂತ ಹೇಳಿದೆ. ಒಲ್ಲೆಂದಾ- ಅದಕ್ಕ ನಾನ? ಹೊಂಟೇ..."

"ರಹೀಮ ಮೇರಾ ಏಕ ಕಾಮ ಕರ್‍ತಾ ಕ್ಯಾ?"

"ಕ್ಯಾ ಬೋಲ್, ಉಸ್ಕೆ ಕ್ಯಾ-ಹಂಗ ಹೋಗಿರ್‍ತೀನಿ ತೊಗೊಂಡು ಬರ್‍ತಿನಿ."

"ನಾಳೆ 'ರಂಜಾನ' ಬಂತು' ನನ್ಗೂ ಪ್ಯಾಟ ಊರಿಗ ಹೋಗಾಕ ಆಗಿಲ್ಲ?- ಹ್ಯಾಂಗಾದ್ರೂ ನೀ ಹೋಗ್ತಿ-ಫಾತಿಮಾಗ ಸೀರಿ. ಕಿವ್ಯಾಗ ಹಾಕ್ಕೊಳ್ಳಿಕ್ಕೆ ಲೋಲಕ್ ಲೇಕೆ ಆತಾಕ್ಯಾ?"

"ಆಗ್ಲಿ ತೊಗೊಂಡು ಬರ್‍ತೀನಿ."

ಎಂದ ರಹೀಮ.

ಅಲ್ಲಾಬಕ್ಷ ಕಿಸೆಯಲ್ಲಿ ಕೈ ಹಾಕಿ

"ರೊಕ್ಕಾ ಕೊಡ್ತೀನಿ ತಡಿ" ಎಂದ.

"ಬಾದಮೇ ದೇವ್ ಪೈಸ್ ಕಂಹಾ ಜಾತಾ"

-ಎನ್ನುತ್ತ ರಹೀಮ ಕಟ್ಟೆಯಿಂದ ಹೊರಡಲು ಅನುವಾದ

"ಅಚ್ಛಾ ಮರೀದ ತೊಗೊಂಡು ಬಾ"

ಎಂದು ಅವನಿಂದ... ಬೀಳ್ಕೊಂಡ.

ಎತ್ತರದ ಗಚ್ಚಿನ ಮನೆಯ ಮುಂದೆ ಟಾಂಗಾ ಸಿದ್ಧವಾಗಿ ನಿಂತಿತ್ತು. ಆ ಮನೆಯು ಶೀವಿಯೋ ಕರೇಗೌಡನದೆಂದು ಸಾರಿ ಹೇಳುತ್ತಿತ್ತು.

ದೊಡ್ಡ ಜರತಾರಿಯ ರುಮಾಲನ್ನು ಸುತ್ತಿಕೊಂಡು ಕುಸ್ತಿಯ ಗಡಿಯಂತೆ ತಲಬಾಗಿಲ ಬಳಿ ಬಂದು ಗೌಡ ಕೂಗಿದ-

"ರಹೀಮ ಟಾಂಗಾ ಲಾವ್"

"ಜೀ ಸಾಬ್..."

ಎಂದವನೇ ರಹೀಮ-ಟಾಂಗಾ ಬಾಗಿಲಬಳಿ ತೆಗೆದುಕೊಂಡು ಹೋಗಿ ನಿಲ್ಲಿಸಿದ.

ಟಾಂಗಾದಲ್ಲಿ ಮೆತ್ತನೆ ಗಾದಿ ಹಾಕಿ ಮಗ್ಗುಲಲ್ಲಿ ತೆಕ್ಕೆ ಇರಿಸಲಾಗಿತ್ತು. ಗಾದಿಗೆ ತೆಕ್ಕೆಗೆ ಅತ್ತರ ಸಿಡಿಸಿದ ರಹೀಮ.

ಗೌಡ ತನ್ನ ಭಾರವನ್ನೆಲ್ಲಾ ಹಾಕಿ ಹತ್ತಿದಾಗ 'ಟಾಂಗಾ ಜಿರಕ್-ಜಿರ್' ಎಂದಿತು.

ಟಾಂಗಾಕ್ಕೂ ಕುದುರೆಗೂ ಕಟ್ಟಿದ ಪಟ್ಟಿ ಉರಲು ಬಿದ್ದಂತಾಗಲು ಕುದುರೆ 'ಹಿ ಹಿ ಹಿ'... ಎಂದು ಕಿರುಚಿತು

ರಹೀಮ ಮುಂದುಗಡೆ ತನ್ನ ಭಾರಹಾಕಿ ಹತ್ತಿ ಹಿಂಜೋಲಿ ಹೋಗದಂತೆ ನೋಡಿಕೊಂಡು ಹೊಡೆದ. ಟಾಂಗಾ ಓಡಿತು.

ಕರೇಗೌಡ ರುಮಾಲನ್ನು ಸರಿಪಡಿಸಿಕೊಳ್ಳುತ್ತ ಕುಳಿತ ಅದೇ ಆಗ ಅರುಣೋದಯವಾಗುವದಿತ್ತು ರೈತರು ಗಳೆಹೊಡೆದುಕೊಂಡು ಹೊಲಗಳತ್ತ ಹೊರಟಿದ್ದರು.

ಹೊಲಗಳ ಮಧ್ಯದ ರಸ್ತೆಯಲ್ಲಿ ಸಾಗಿ ಟಾಂಗಾ ಹಳ್ಳವನ್ನು ತಲುಪಿತು. ಹಳ್ಳಿಯ ಹೆಣ್ಣುಮಕ್ಕಳು ಹಳ್ಳದ ಒರತೆಯಲ್ಲಿ ನೀರು ತುಂಬಿಕೊಳ್ಳಲು ಗುಂಪಾಗಿ ಸೇರಿದ್ದರು.

ಅವರಿಂದ ಸ್ವಲ್ಪ ದೂರದಲ್ಲಿಯೇ ರಹೀಮನ ಕುದುರೆ ನಿಂತ. ನೀರು ಕುಡಿಯಹತ್ತಿತು

ಗೌಡ ಕೆಳಗಿಳಿದು ನಿಂತು ಮೀಸೆಯ ಮೇಲೆ ಕೈ ಎಳೆದುಕೊಳ್ಳುತ್ತ ಆ ಹೆಂಗಳೆಯರನ್ನು ದಿಟ್ಟಿಸತೊಡಗಿದ.

ನೀರು ತುಂಬುತ್ತಿರುವ ಹೆಣ್ಣುಮಕ್ಕಳಲ್ಲಿ ಗುಜು ಗುಜು ನಡೆಯಿತು.

'ಹೂಂ' ಎಂದು ಒಬ್ಬ ಗರತಿ ತಿರಸ್ಕಾರದಿಂದ ಮೂಗು ಮುರಿದು ನುಡಿದಳು.

- ೪ -

"ಅಲ್ಲಾ ಹೋ ಅಕ್ಬರ್. ಅಲ್ಲಾ ಹೋ ಅಕ್ಬರ"

ಮೋಹಸೀನನ ಪ್ರಾರ್ಥನೆ ಆರಂಭವಾದಾಗಲೇ ಬೆಳಗಾಗಿರಬೇಕೆಂದು ಹಳ್ಳಿಗರಿಗೆ ಅರಿವಾಯಿತು. ಮಲಗಿದ ಕೋಳಿಗಳೂ ಕೂಗಿಕೊಂಡವು. ಗಾಢಾಂಧಕಾರದ ಸಾವಿನ ಒಡಲನ್ನು ಸೀಳಿ ಸೂರ್ಯ ಹೊರಬಂದ.

"ಫಾತಿಮಾ-ಫಾತಿಮಾ"

ಯಾರೋ ಕೂಗಿದ್ದು ಇನ್ನೂ ಹಾಸಿಗೆಯ ಮೇಲಿದ್ದ ಫಾತಿಮಾಗೆ ಕೇಳಿಸಿತು. ಬಳಿಯಲ್ಲಿಯೇ ಮಲಗಿದ ಅವಳ ತಾಯಿ.

"ನಸುಕಿನ್ಯಾಗ ಯಾರ ಫಾತಿಮಾ ನಿನ್ನ ಒದರ್‍ಯಾರು?" ಎಂದು ಕೇಳಿದಳು

"ಇಮಾಮ ಬಂದಂಗೈತಿ ನೋಡ್ತೀನಿ ಮಾ" ಎಂದವಳೇ ಹೊರಗೋಡಿ ಬಂದಳು ಫಾತಿಮಾ. ಬಾಗಿಲು ತೆರೆದು ನೋಡುತ್ತಾಳೆ, ಕೈಯಲ್ಲಿ ಏನೋ ದೊಡ್ಡ ಪೊಟ್ಟಣ ಹಿಡಿದುಕೊಂಡು ನಿಂತಿದ್ದ ಇಮಾಮ ಫಾತಿಮಾಳ ಅಂಥ ರೂಪರಾಶಿಯನ್ನು ಇಮಾಮ ಇದು ವರೆಗೆ ಕಂಡಿರಲಿಲ್ಲ ಫಾತಿಮಾ ಅದೇ ಆಗ ಎದ್ದುದರಿಂದ ಮುಂಗುರುಳು ಚೆಲ್ಲಾಪಿಲ್ಲಿ ಆಗಿತ್ತು. ಉಟ್ಟ ಸೀರೆಯ ಒಂದೆರಡು ನಿರಿಗೆ ಬಿಚ್ಚಿ ಅಸ್ತವ್ಯಸ್ತವಾಗಿತ್ತು. ಹಿಂದಿನ ರಾತ್ರಿ ತಿಂದ ಪಾನಿನ ಕೆಂಬಣ್ಣ ಅವಳ ತುಟಿಯಿಂದ ಇನ್ನೂ ಮಾಸಿರಲಿಲ್ಲ

ಯುವಕ ಇಮಾಮ ಸುಂದರನಾಗದಿದ್ದರೂ ಸದೃಢನಾಗಿದ್ದ. ಎತ್ತರದ ನಿಲುವಿಕೆ ಕಂದು ಬಣ್ಣ. ಪಾಯಿಜಾಮಾ, ಒಂದು ಜುಬ್ಬ ತೊಟ್ಟುಕೊಂಡಿದ್ದ

ಕೆಲ ನಿಮಿಷ ಅವರೀರ್ವರ ಮನಗಳು ಮೌನ ಸಂಭಾಷಣೆಯಲ್ಲಿಯೇ ತನ್ಮಯವಾಗಿದ್ದವು. ಎಂಥ ಸುಮಧುರ ಸನ್ನಿವೇಶ !

"ಫಾತಿಮಾ"

ಅವಳ ತಾಯಿ ಕೂಗಿದಾಗಲೇ ಇಬ್ಬರಿಗೂ ಎಚ್ಚರ.

"ಆಯೀ ... ಅಮ್ಮಿಜಾನ್ ... ಇಮಾಮ

ಬಂದಾನ" ಅಲ್ಲಿಂದಲೇ ಉತ್ತರಿಸಿದಳು ಫಾತಿಮಾ.

"ಫಾತಿಮಾ...ಬಾಬಾ ಪ್ಯಾಟಿ ಊರಿನಿಂದ ನಿನಗ ಸೀರಿ. ಲೋಲಕ ತೊಗೊಂಡು ಬಂದಾನ. ಅವ್ವ್ಯಾಲ ಕೊಟ್ಟ ಬಾ ಅಂದಾ ಅದ್ರ ನಾನs ಈಗ ಓಡಿ ಬಂದೆ" ಇಮಾಮುನ ಮಾತಿನಲ್ಲಿ ಹರುಷದ ವೀಣೆ ಮಿಡಿಯುತ್ತಿತ್ತು.

"ಒಳಗೆ ಬಾ ಇಮಾಮು" ಎಂದು ಫಾತಿಮಾ ಅವನ ಕೈಯೊಳಗಿನ ಪೊಟ್ಟಣ ತೆಗೆದುಕೊಂಡು ಓಡಿದಳು.

"ಕೂತುಗೋ ಇಮಾಮು" ಫಾತಿಮಾಳ ತಾಯಿ ಜುಬೇದಾ ಹೇಳಿದಳು ತಕ್ಷಣವೇ ಇಮಾಮು ಫಾತಿಮಾಳ ಹಾಸಿಗೆಯ ಮೇಲೆಯೇ ಕುಳಿತುಬಿಟ್ಟ. ಫಾತಿಮಾ ಸರಸರನೆ ಪುಡಿಕೆಯನ್ನು ಒಡೆದು ಸೀರೆಯನ್ನು ಹೊರತೆಗೆದು ನೀರಿಗೆಯನ್ನು ಬಿಚ್ಚಿ ಎದೆಯೊಳಗೆ ಹಿಡಿದುಕೊಂಡು.

"ಸಾಡಿ ಬಹುತ್ ಅಚ್ಛೀ ಹೈಮಾ" ಎಂದು ಸಾರಿದಳು

ಮರುಕ್ಷಣವೇ ಲೋಲಕ್ ಕಿವಿಗೆ ಹಾಕಿಕೊಂಡು ಅಲ್ಲಿಯೇ ಬಿದ್ದ ಕನ್ನಡಿಯ ತುಂಡಿನೊಳಗೆ ಮುಖ ಹೊರಳಿಸಿ ಹೊರಳಿಸಿ ನೋಡಿದಳು. ಅವಳ ಪ್ರತಿಯೊಂದು ಹಾವಭಾವವನ್ನು ಅವನ ಹೃದಯ ಆಟೊಮ್ಯಾಟಿಕ್ ಕ್ಯಾಮರಾದಂತೆ ಬಿಂಬಿಸಿಕೊಳ್ಳುತ್ತಿತ್ತು.

ಅಂದು ಸುಮಾರು ರಾತ್ರಿ ೮ ಗಂಟೆಯಾಗಿರಬಹುದು. ಮಸೀದೆಯಲ್ಲಿ ಯುವಕರು. ವೃದ್ಧರು, ಬಾಲಕರು, ಗಜಿಬಿಜಿಸಿ ನೆರೆದಿದ್ದರು. ರಮಜಾನದ ವೈಶಿಷ್ಟ್ಯವಾದ 'ತರಾವಿ' ನಮಾಜ ನಡೆದಿತ್ತು ಎಲ್ಲರೂ ಒಕ್ಕೊರಲಿನಿಂದ 'ಅಲ್ಲಾಹೋ ಅಕ್ಬರ್'-ಎಂದು ಪ್ರಾರ್ಥಿಸಿ ಮಣಿದರು. ಇಮಾಮುನೂ ಅದರಲ್ಲಿ ಭಾಗಿಯಾಗಿದ್ದ. ಆ ಹರ್ಷಮಯ ವಾತಾವರಣದಲ್ಲಿ ಎಲ್ಲರ ಹೃದಯಗಳು ಪುಲಕಿತಗೊಂಡಿದ್ದವು.

ವಾಸನೆಯ ತೈಲಗಳನ್ನು ಹಚ್ಚಿಕೊಂಡಿದ್ದರಿಂದ ಮಸೀದೆಯಲ್ಲಿ ಅತ್ತರಿನ ಕಾರಖಾನೆಯನ್ನು ತೆಗೆದಂತಿತ್ತು ಕೆಲವರ ತಲೆಯಿಂದ ಎಣ್ಣೆ ಬಸಿಯುತ್ತಿತ್ತು

ಖಾಜಿ ಕುರಾನಿನ 'ಸೂರಾ'ಗಳನ್ನು ಓದಿ ಲೈಲತ್ ಉಲ್ ಖದರಿನ ಕೊನೆಯಲ್ಲಿ ಮುಗಿಸಿದ. ಎಲ್ಲವೂ ಮುಗಿಯಬೇಕಾದರೆ ಸುಮಾರು ಹತ್ತು ಗಂಟೆ ಹೊಡೆಯಿತು

ಮುಸಲ್ಮಾನರಿಗೆ ರಮಜಾನ್ ವಿಶಿಷ್ಟವಾದ ಹಬ್ಬ. ಇದನ್ನು ಈದ್-ಉಲ್-ಫಿತರ್ ಅಥವಾ ಉಪವಾಸದ ಕೊನೆಗೊಳಿಸುವ ಹಬ್ಬ ಎನ್ನುವ ವಾಡಿಕೆ ಇದೆ ಉಪವಾಸನ್ನೈದು ಅಲ್ಲಾನಿಂದ ನಮ ತಪ್ಪುಗಳನ್ನು ಕ್ಷಮಿಸಲು ಕೇಳಿಕೊಳ್ಳುತ್ತಾರೆ. ಅಂದು ರಮಜಾನಿನ ವ್ರತದ ಕೊನೆಯ ದಿನ ಫಾತಿಮಾ ನಿಷ್ಠೆಯಿಂದ ವ್ರತವನ್ನು ಆಚರಿಸಿದ್ದಳು. ತಮ್ಮ ಬಾಳಿಗೆ ಅಲ್ಲಾ ಸುಖ ತರಲೆಂದು ಪ್ರಾರ್ಥಿಸಿದ್ದಳು ಹಳ್ಳಿಯಲ್ಲೆಲ್ಲ ಜನ ಬಾಲಚಂದ್ರನನ್ನು ಕಾಣಲು ಉತ್ಸುಕರಾಗಿ ನಿಂತಿದ್ದರು

ಮಸೀದೆಯ ಬಳಿಯೂ ಮಾಳಿಗೆ ಗೋಡೆಗಳ ಮೇಲೂ ನಿಂತುಕೊಂಡು ವೀಕ್ಷಿಸತೊಡಗಿದ್ದರು. ಎಲ್ಲರ ದೃಷ್ಟಿ ಆಗಸದ ಕಡೆಗೆ ಹರಿದಿತ್ತು. ಆಕಾಶ ನಿರಭ್ರವಾಗಿರದೇ ಮಸುಮಸುಕಾಗಿ ಮೋಡಗಳಿಂದ ಆವೃತವಾಗಿತ್ತು.

ಅಷ್ಟರಲ್ಲಿ ತನ್ನ ಮನೆಯ ಮಾಳಿಗೆಯ ಮೇಲೆ ನಿಂತುಕೊಂಡ ಫಾತಿಮಾ-

"ಇಮಾಮ್— ಅಲ್ನೋಡು-- ಬಾಲಚಂದ್ರ ನನಗ ಕಾಣಿಸಿದಾ " ಎಂದು ಕೂಗಿದಳು.

"ಎಲ್ಲಿ ಫಾತಿಮಾ?" ಗೋಡೆಯ ಮೇಲೆ ನಿಂತುಕೊಂಡು ಇಮಾಮು ಕೇಳಿದ. ಈದ್ ಕಾ ಚಾಂದ್ ಕಾಣಿಸಿಕೊಂಡ ಕೂಡಲೇ ಜನರೊಳಗೆ ಎಲ್ಲಿಲ್ಲದ ಸಂಭ್ರಮ ಎಲ್ಲಿ? ಎಲ್ಲಿ? ಎಂದು ಕೇಳಹತ್ತಿದ್ದರು

ಫಾತಿಮಾಳ ಹೊರತು ಮತ್ತಾರಿಗೂ ಕಂಡಂತಾಗಲಿಲ್ಲ. ನಿಜವಾಗಿಯೂ ಫಾತಿಮಾ ನಿಷ್ಠಾವಂತಳು.



'ಈದ್ ಕಾ ಚಾಂದ್' ಎಲ್ಲರಿಗೂ ಕಾಣಿಸಿತೋ ಇಲ್ಲೋ ಖಾಜಿ ಹೇಳಿಕೆಯ ಮೇರೆಗೆ ವ್ರತ ಮುಕ್ತಾಯಗೊಂಡಿತು......

ಮಾರನೆಯ ದಿನದ ನಸುಕು. ಗಾಢ-ನಿದ್ರೆಯಲ್ಲಿದ್ದ ಮೊಗ್ಗುಗಳು ಪ್ರಿಯನ ಅದೃಶ್ಯ ತುಟಿಗಳ ಚುಂಬನದಿಂದ ಎಚ್ಚತ್ತು ನಗುತ್ತ ನಗುತ್ತ ಅರಳತೊಡಗಿದ್ದವು. ಪ್ರಫುಲ್ಲತೆ ಉದಯಿಸಿದಂತೆ ಆಗಿತ್ತು ಮೂಡಣದಲ್ಲಿ

ನಸುಕಿನಲ್ಲಿಯೇ ಎದ್ದು ಎರೆದುಕೊಂಡ ಫಾತಿಮಾ ಅಂಗಳದಲ್ಲಿ ನಿಂತುಕೊಂಡು ತನ್ನ ನೀಳ ಕೇಶರಾಶಿಯನ್ನು ಅರುಣನ ಹೊಂಗಿರಣಗಳಿಂದ ಒಣಗಿಸಿಕೊಳ್ಳಹತ್ತಿದ್ದಳು

ಎಡಗೈಯಲ್ಲಿ ನೀರು ತುಂಬಿದ ತಗಡಿನ ಡಬ್ಬಿಯನ್ನು ಹಿಡಿದುಕೊಂಡು ಹಳ್ಳದ ದಂಡೆಯ ಕಳ್ಳಿಯ ಪೊದೆಯ ಕಡೆಗೆ ಹೊರಟಿದ್ದ ಇಮಾಮ್ ಫಾತಿಮಾಳನ್ನು ಕಂಡು ಥಟ್ಟನೆ ಕ್ಷಣ ಹೊತ್ತು ಅಲ್ಲಿಯೇ ನಿಂತ

ಎಲ್ಲಿಯೋ ನೋಡುತ್ತಿದ್ದ ಅವಳ ದೃಷ್ಟಿಯು ಅವನತ್ತ ಹರಿಯಿತು. ಮೂಗು ಮುರಿದು ಕೇಳಿದಳು.

"ನನ್ನಯಾಕ್ ಹಿಂಗ ತಿನ್ನೋರಂಗ ನೋಡಲಿಕ್ಕೆ ಹತ್ತೀದಿ ಸುಮ್ಮನೆ ಜಲ್ದಿ ಹೋಗು"-

"ಹೊಸಾ ಸೀರಿ ನಿನಗ ಒಪ್ಪತೈತಿ ಅಂತ ನೋಡಲಿಕ್ಕೆ ಹತ್ತೀನಿ."

"ಗಡಾಗಡಾ ಹಳ್ಳಕ್ಕ ಹೋಗಿಬಂದು ತಲೀಮ್ಯಾಗ ನೀರು ಹಕ್ಕೊಂಡು ನಮಾಜಿಗೆ ಹೋಗು. ನಿನಗಂತೂ ಹಬ್ಬಾ ಹುಣ್ಣಿವಿ ಏನೂ ಇಲ್ಲ."

- ಎಂದವಳೇ ಫಾತಿಮಾ ನಗುತ್ತ ಒಳಗೋಡಿದಳು

"ಫಾತಿಮಾ ಫಾತಿಮಾ..."

- ಇನ್ನೂ ಏನೋ ಹೇಳಲಿಕ್ಕೆ ಹೋಗಿದ್ದ ಇಮಾಮ ತೆಪ್ಪಗಾಗಿ ಮುನ್ನಡೆದ. ಹಳ್ಳದ ದಂಡಿಯ ಕಳ್ಳಿಯ ಸಾಲಿನಬಳಿ ಅವನು ಬಂದಾಗ, ಅದರೊಳಗಿಂದ ಕಳ್ಳ ದನಗಳಂತೆ ಒಬ್ಬೊಬ್ಬರೇ ಹಳ್ಳಿಗರು ಪುದು ಪುದು ಹೊರಬರಹತ್ತಿದ್ದರು.

ರಹೀಮ. ಇಮಾಮ ಹಾಗೂ ಅಲ್ಲಾಬಕ್ಷ ಸಾಮೂಹಿಕ ನಮಾಜ ಮುಗಿಸಿಕೊಂಡು ಮನೆಗೆ ಮರಳಿದಾಗ ಸುಮಾರು ಹನ್ನೊಂದು ಗಂಟೆಯಾಗಿರಬೇಕು.

ಇಮಾಮ್, ರಹೀಮ್ ಊಟಕ್ಕೆ ಕುಳಿತುಕೊಂಡರು. ತಟ್ಟೆಯಲ್ಲಿ ಕೋಳಿಪಲ್ಯ, ಶುರುಕುಂಬಾ ನೀಡಿದಳು ಇಮಾಮನ ತಾಯಿ. "ಕೋಳೀಪಲ್ಲೆ ಭಾಳ ಛಲೊ ಆಗೇದ"-ಎಲುಬಿನ ರಸವನ್ನು ಗಟ್ಟಿಯಾಗಿ ಹೀರುತ್ತ ನುಡಿದ ಇಮಾಮ.

"ನಿನ್ನ ಹೊಟ್ಟಿಗೆ ಬರೇ ಕೋಳೀಪಲ್ಲೆ ಎಲ್ಲಿ ಸಾಲತೈತಿ-ರಾವಣನ ಹೊಟ್ಟಿಗೆ ಕಾಸಿನೆಣ್ಣಿ ಆದ್ಹಂಗ"

ಬಾಗಿಲಿಗೆ ಬಂದ ಫಾತಿಮಾ ನುಡಿದಳು. ಎಲ್ಲರೂ ಹೊರಳಿ ಆಚೆ ನೋಡಿದರು. "ಬಾ ಫಾತಿಮಾ"

- ಇಮಾಮನ ತಾಯಿ ಕರೆದಳು

"ಅಮ್ಮೀಜಾನ್.- ಅಕಿನ್ನ ಒಳಗ ಕರೀಬ್ಯಾಡಾ ನಾ ಏನರ ರಾವಣನ್ಹಂಗ ಇದ್ದೀನೇನು. ನೀ ಸೂರ್ಪಣಿಕಿ ಇದ್ದಂಗ ಇದ್ದೀದಿ !"

- ಅವನು ಕೆಣಕಿ ನುಡಿದ

"ಕ್ಯಾ ಲಾಯಿ ಬೇಟಿ-"

ಅವಳ ತಲೆಯ ಮೇಲೆ ಕೈಯಾಡಿಸುತ್ತ ಕೇಳಿದಳು ಇಮಾಮನ ತಾಯಿ.

"ಇಮಾಮಗ ಬರೇ ಕೋಳೀಪಲ್ಲೆ ಸಾಲೋದಿಲ್ಲ ಅಂತ ಅಮ್ಮಿಜಾನ್ ಕುರೀಪಲ್ಯೆ ಕಳಿಸ್ಯಾಳ,"-



ಗ್ರಾಮಸೇವೆ

ಗ್ರಾಮಪರಿಚಾರಿಕೆಯ ಪರಿಚಯವು ಹೆಚ್ಚೆ।
ಗೌಡರೂ ತಿರುವಿದರು ಮೀಸೆಗೆ ಬಣ್ಣ ಹಚ್ಚಿ।
ಕುಲಕರ್ಣಿ ಕಟ್ಟಿರದು ಅವಳಿಗೆ ಹೋಟು।
ಈ ರೀತಿ ಆಯ್ತು ಗ್ರಾಮಸೇವೆಯಲಿ ಮಾರ್ಪಾಟು।

-ಎಂ. ಗೋವಿಂದ

"ಹಂಗಲ್ಲ-ಅದು ನನ್ಗ ಬಾಳ ಸೇರ್ತದ ಅಂತ ಕಳಿಸಿರಬೇಕು".

ಅವರೀರ್ವರ ಸಂಭಾಷಣೆ ಕೇಳಿ ಆ ದಂಪತಿಗಳಿಗೆ ನಗುಬಂತು.

ಒಂದುಕ್ಷಣ ಇಮಾಮನ ತಾಯಿಯ ಕಣ್ಮುಂದೆ ಆ ಜೋಡಿಯ ಸುಂದರ ಭವಿಷ್ಯ ಸುಳಿದುಹೋಯಿತು.

ಫಾತಿಮಾಳೇ ಒಂದೆರಡು ಹೋಳುಗಳನ್ನು ಇಮಾಮನ ತಟ್ಟೆಯಲ್ಲಿ ಸುರುವಿದಳು.

"ಬೇಟಿ-ಕೋಳಿಪಲ್ಲೆ ಇಷ್ಟ ನಿಮ್ಮ ಮನೀಗೆ ಒಯ್ಯಿ-ನಿನಗೂ ಸೇರ್ತದಲ್ಲ"

-ಎಂದು ಇಮಾಮನ ತಾಯಿ ಬಟ್ಟಲಲ್ಲಿ ಅದನ್ನು ತುಂಬಿಕೊಟ್ಟಳು

ಇಮಾಮನ ಊಟ ಮುಗಿಯಬೇಕಾದರೆ ಅರ್ಧ ಗಂಟೆಯಾದರೂ ಆಗಿರಬೇಕು.

- ೫ -

ಹಳ್ಳಿಯ ನಿಸರ್ಗದ ಮಡಿಲಲ್ಲಿ ಇಮಾಮ ಹಾಗೂ ಫಾತಿಮಾರ ಪ್ರೇಮ ಸುಮದಂತೆ ಅರಳಿತು.

ಪರಿಮಳ ಬೀರುವುದು ಸುಗಂಧದ ಕೆಲಸವಾದರೆ ಅದನ್ನು ಪಸರಿಸುವುದು ಗಾಳಿಯ ಕರ್ತವ್ಯ.

ಕೆಲವರಿಗೆ ಸುಗಂಧದಿಂದ ತಲೆಶೂಲೆ ಏಳುತ್ತದಂತೆ ಆಗದವರು ಆಡಿಕೊಳ್ಳಹತ್ತಿದರು ಏನೇನೊ?...ಆದರೆ ಅದರ ಪರಿಣಾಮ...

ಸಾಯಂಕಾಲ ಅಲ್ಲಾಬಕ್ಷ ಗಳೆ ಹೊಡೆದುಕೊಂಡು ಮನೆಕಡೆಗೆ ಹೊರಟಿದ್ದ.

ಅಗಸಿಯ ಹತ್ತಿರ ಈಚಲ ಮರದ ಕೆಳಗೆ ಇದ್ದ ಒಂದು ಸಣ್ಣ ಗುಡಿಸಲು-ಹೆಂಡದಂಗಡಿ. ಹೊಲಗಳಿಂದ ಮನೆಗೆ ಹೋಗುವಾಗ ರೈತರು ದರುಶನ ತೆಗೆದುಕೊಳ್ಳುವಂತೆ ಅದಕ್ಕೆ ಭೇಟಿ ಇತ್ತೇ ಹೋಗುತ್ತಿದ್ದರು. ದಿನಾಲು ಭೇಟಿ ಕೊಡುವ ರೂಢಿ ಅಲ್ಲಾಬಕ್ಷನಿಗೇನು ಇರಲಿಲ್ಲ. ಬಹಳ ಮನಸ್ಸಿಗೆ ಬೇಜಾರು ಬಂದಾಗಲೋ, ಹಬ್ಬಗಳಲ್ಲೊ ಅಥವಾ ಯಾರಾದರೂ ಬಹಳ ಒತ್ತಾಯ ಮಾಡಿದಾಗಲೋ ಅವನು ಕುಡಿಯುತ್ತಿದ್ದದುಂಟು. ಅಂದು ಏನೊ ಅಸ್ವಸ್ಥತೆ. ತಲೆ ಚಿಟ ಚಿಟ ಹೊಡೆಯಹತ್ತಿತ್ತು. ಮನಸ್ಸು ಆ ಕಡೆ ಎಳೆಯುತ್ತಿದ್ದರೂ ಅಚೆಗೆ ಕಣ್ಣು ಹಾಯಿಸದೇ ಎತ್ತುಗಳಂತೆ ತಾನೂ ತಲೆ ಕೆಳಗೆ ಹಾಕಿಕೊಂಡು ನಡೆದಿದ್ದ "ಏ! ಅಲ್ಲಾಬಕ್ತ ಬಾಬಾ, ವೈಸಾ ಕ್ಯೋಂ ಜಾತಾ ಜರಾ ಪೀಕರತೊ ಜಾ"

-ಅಂಗಡಿಯ ಮಾಲಕ ಫಕೀರಸಾಬ್ ಕೂಗಿದ.

"ನಹೀಭೈ—ಮೈಯಾಗ ಅರಾಮ ಇಲ್ಲ—ಗಡಾನ ಮನೀಗೆ ಹೋಗಿಬಿಡ್ತೀನಿ" ಎನ್ನುತ್ತ ಮುಂದುವರೆದ ಅಲ್ಲಾಬಕ್ಷ.

"ಬಾಬಾರೋ ಅಲ್ಲಾಬಕ್ಷ ಹಿಂಗ್ಯಾಕ ಮುರಕಾ ಮಾಡ್ತಿ-ಮಗಿ ಹಾಕೆರನೋಡು ಮೈಯಾನ ಎಡ್ಡೆಲ್ಲಾ ಬಿಡ್ತೈತಿ,"

- ಕುಡಿದು ಮತ್ತನಾದ ಮಲ್ಲನ ಕರೆ ಅಲ್ಲಾಬಕ್ಷನಿಗ ಪ್ರಚೋದನೆ ನೀಡಿತು.

ಅಲ್ಲಿಯೇ ಇದ್ದ ಗಿಡಕ್ಕೆ ಎತ್ತುಗಳನ್ನು ಕಟ್ಟಿದ. ಅವನ ಕಾಲುಗಳು ಅವನಿಗರಿಯದಂತೆ ಎಳೆದು ಕೊಂಡು ಹೋದವು.

ಗುಡಿಸಲಿನ ಮುಂದೆ ಆ ಬದಿ ಈ ಬದಿಯ ಕಡೆ ಎರಡೆರಡು ಖಾಲಿ ಚಿಮಣಿ ಎಣ್ಣೆ ಡಬ್ಬಿಗಳನ್ನಿರಿಸಿ ಮೇಲೆ ಫಳಿಗಳನ್ನು ಜೋಡಿಸಿದ್ದರು. ಆ ಕಡೆ ಇಬ್ಬರು ಈ ಕಡೆ ಮೂವರು ಹೆಂಡ ಕುಡಿದು ಮನಸ್ಸಿಗೆ ಬಂದಹಾಗೆ ಹರಟತೊಡ

ಗಿದ್ದರು. ಕೆಲವರು ಪೂರ್ತಿ ನಿಶೆಯಿಂದ ಕೆಳಗೇ ಉರುಳಿಬಿಟ್ಟಿದ್ದರು.

"ಬಾಬಾ...ಇಲ್ಲೇ ಕುಂಡ್ರಬಾ...."

-ಮಲ್ಲ ಜೋಲಿ ಹೊಡೆಯುತ್ತ ಎದ್ದು ಅಷ್ಟರಲ್ಲಿಯೇ ಸ್ಥಳ ಮಾಡಿಕೊಟ್ಟ.

ಫಕೀರಸಾಬ ಮುಗಿ ಕೈಯಲ್ಲಿತ್ತು ಹೆಂಡದ ಗಡಿಗೆ ಎತ್ತಿ ಸುರುವಿದ.

ಅಲ್ಲಾಬಕ್ಷ ಗಟಗಟನೆ ಕುಡಿದು, ಕೆಮ್ಮಿ, ಕಣ್ಣುಗಳನ್ನು ಉಜ್ಜಿಕೊಂಡ...ತೊದಲುತ್ತ,

"ಇವತ್ತ್ಯಾಕೊ-ಎಂಥಾ ಛಲೋ ಐತಿ ಅಲ್ಲಲೋ"-ಎಂದ.

ಫಕೀರಸಾಬ ಬಿದ್ದು ಬಿದ್ದು ನಗುತ್ತ—

"ಛಲೋ ಹತ್ತದss ಏನು! ಇನ್ನ ಸ್ವಲ್ಪ ದಿವಸದಾಗ ಮುಮ್ಮಗಾ ಹುಟ್ಟದಾ ಅಂದ್ರ ಇನ್ನೂ ಛಲೋ ಅನಸ್ತೈತಿ" ಎಂದ ಎಲ್ಲರೂ ನಕ್ಕರು.

ಅವರ ನಗೆಯೊಂದಿಗೆ ತನ್ನ ನಗೆಯನ್ನು ಸೇರಿಸಿದ-ಏನೂ ಅರಿಯದ ಅಲ್ಲಾಬಕ್ಷ ಮತ್ತೆ ಮತ್ತೆ ಅವರು ಹಂಗಿಸಿದಾಗ ಆ ಮಾತು ಅವನ ಎದೆಗೆ ಚುಚ್ಚಿದಂತಾಯಿತು.

ಚಟ್ಟನೆ ಸಿಡಿದೆದ್ದು ಮಲ್ಲನ ಅಂಗಿ ಹಿಡಿದು ಜಗ್ಗಿ-ಕೇಳಿದ,

"ಕ್ಯಾಬೋಲಾರೆ?-"

"ಅಲ್ಲಾಬಕ್ಷ ಮುಕ್ಕಾಟಲೆ ನನ್ನ ಅಂಗಿ ಬಿಟ್ಟು ಮಾತಾಡು-ಇಲ್ದಿದ್ರ ನಿನ್ನ ಗತಿ ನೆಟ್ಟಗ ಆಗೂಕ ಇಲ್ಲ ತಿಳೀತ."

"ಮದ್ಲೀಗೆ-ಅದ್ನ ಬೊಗಳಲೇ ಏನೋ ಅಂದೆಲ್ಲ"

ಅಲ್ಲಾಬಕ್ಷನಿಗೆ ನಿಶೆ ಏರತೊಡಗಿತ್ತು. ಮಲ್ಲನ ಮಾತುಗಳಿಂದ ಅವನ ಕಣ್ಣುಗಳು ಮತ್ತಷ್ಟು ಕೆಂಪಾಗತೊಡಗಿದವು.

ಸಿಟ್ಟಿನಿಂದ ಮತ್ತೆ ಅವನ ಅಂಗಿ ಹಿಡಿದು ಜಗ್ಗಿ-

"ಜಲ್ದೀ ಬೋಲರೇ?"

-ಎಂದು ಕೇಳಿದ.

ಮದ್ಯದಿಂದ ಮತ್ತನಾದ ಮಲ್ಲ ಜೋಲಿ ಹೊಡೆಯುತ್ತ—

"ಪಹಲೆ ಛೋಡರೆ-"

-ಎಂದವನೆ ಕೊಸರಿಕೊಂಡು ಆಚೆ ಅವನನ್ನು ದಬ್ಬಿ-ಬಾಯಲ್ಲಿ ಸುರಿವ ಜೊಲ್ಲನ್ನು ಒರೆಸಿಕೊಂಡು,

"ನಮ್ನ ಏನ ಕೇಳ್ತಿ- ಆ ರಹೀಮನ ಮಗಾ ಇದ್ದಾನಲ್ಲ ಇಮಾಂನ ಕೇಳು. ನಿನ್ನ ಮಗಳ್ನ ಪೀರ್ತಿ ಮಾಡಾಕಹತ್ಯಾನಂತ ಊರೆಲ್ಲಾ ಆಡಕೋತ್ತೈತಿ ಕಿವಿ ಐತೋ ಇಲ್ಲೊ?"

– ಮಲ್ಲನ ಈ ನುಡಿಗಳು ನೆಲಚ್ಚುರುಳಿದ ಅಲ್ಲಾಬಕ್ಷನ ಮೈಯಲ್ಲಿ ಕ್ರೋಧದ ಇಂಜೆಕ್ಶನ್ ಮಾಡಿದಂತಾಯಿತು.

ಕ್ಷಣಹೊತ್ತು ಅಲ್ಲಿ ನಿಲ್ಲದೆ-ಎತ್ತುಗಳನ್ನು ಹೊಡೆದುಕೊಂಡು ಮನೆಯತ್ತ ನಡೆದ. ಹಲ್ಲು ಕಟಗರಿಸಹತ್ತಿದವು.

"ಕ್ಯಾಬೆ ಆ ಪಿಂಜಾರ ಇಮಾಮಗ ಬೇಟೀನ್ ಕೊಡ್ತೀಏನು?"...

-ಎಂದು ಹಿಂದೆ ಹಂಗಿಸಿದ ಫಕೀರಸಾಬನ ನುಡಿಗಳು ಅವನನ್ನು ಉದ್ವಿಗ್ನಗೊಳಿಸಿದವು.



"ಆ ಹರಾಮು ನನ್ನ ಬೇಟನ್ನ..." ಅಲ್ಲಾ ಬಕ್ಷನ ತಲೆಯಲ್ಲಿ ದೆವ್ವದ ಗಾಳಿ ಬೀಸತೊಡಗಿತು.

ಅವನು ಮನೆಗೆ ಹೋಗಬೇಕಾದರೆ ರಹೀಮನ ಮನೆಯ ಮುಂದೆಯೇ ಹಾದುಹೋಗಬೇಕಾಗುತ್ತದೆ

ಮನೆ ಮುಂದಿನ ಅಂಗಳದಲ್ಲಿ ರಹೀಮು, ಅವನ ಮಡದಿ ಹಮೀದಾ. ಫಾತಿಮಾ ಹಾಗೂ ಇಮಾಮ ಹರಟುತ್ತ ಕುಳಿತಿದ್ದರು

ಇಮಾಮನ ಬಳಿ ಕುಳಿತ ಫಾತಿಮಾ ನಕ್ಕು ಕಿಲಿಯುತ್ತಿದ್ದುದು ಅಲ್ಲಾಬಕ್ಷನಿಗೆ ಕೇಳಿಸಿದಾಗ ಪಿತ್ತ ನೆತ್ತಿಗೇರಿದಂತಾಯಿತು.

ಎತ್ತುಗಳನ್ನು ಮನೆಯತ್ತ ಹೊಡೆದು- "ಭೋಸಡಿ-ಇಲ್ಲಿ ಕೂತಿಯಾ- ನಡಿ"-ಎನ್ನುತ್ತ ಫಾತಿಮಾಳ ಜಡೆ ಹಿಡಿದು ದರದರ ಎಳೆದುಕೊಂಡು ಹೊರಟ.

"ಬಾಬಾ..." ಎಂದು ಅವಳು ಹಲಬುತ್ತ ಜಡೆ ಬಿಡಿಸಿಕೊಳ್ಳಲು ಯತ್ನಿಸಿದಳು.

"ಇದೇನು ಬಾಬಾ?"

ಅವನ ಬಿರುಸು ಕೈಗಳಿಂದ ಮುಕ್ತಿ ಪಡೆಯದ ಫಾತಿಮಾ ಅಂಗಲಾಚಿದಳು.

"ಚುಪ ಬಂದ ಕರ್..."ಎಂದವನೇ ಬಾಯಿಗೆ ಬಿಗಿದ.

ಅವಳ ಮೆದು ತುಟಿಗಳು ಹಲ್ಲುಗಳಿಗೆ ಜಜ್ಜಿದಂತಾಗಿ—ರಕ್ತ ಒಸರಹತ್ತಿತು. ಅದಕ್ಕೆ ಮೇಲ್ಹುಡಿಯನ್ನು ಗಟ್ಟಿಯಾಗಿ ಹಚ್ಚಿಕೊಂಡಳು- ಫಾತಿಮಾ.

ಇಮಾಮನಿಗೆ ಒಂದೂ ಅರ್ಥವಾಗಲಿಲ್ಲ. ದಾರಿತೋಚದಾಗಿ ಕ್ಷಣ ಹೊತ್ತು ಸುಮ್ಮನೆ ನಿಂತ.

ರಹೀಮು- ಹಮೀದಾ ಫಾತಿಮಾಳನ್ನು ಬಿಡಿಸಿಕೊಳ್ಳಲು ಹೋಗಿ ವಿಫಲರಾದರು:

"ಮುರ್ಝು ಸಿಖಾನೆ ಮತ್ ಆ...ಚಾಚಾ..." ಎಂದು ಅಲ್ಲಾಬಕ್ಷ, ರಹೀಮು ಇಮಾಮರನ್ನು ದಬ್ಬಿಬಿಟ್ಟ

ಫಾತಿಮಾಳ ರೋದನವನ್ನು ಕೇಳಿ ಒಳಗಿನಿಂದ ಓಡಿಬಂದ ಅವಳ ತಾಯಿ ಜುಬೇದಾ ಅಡ್ಡ ಹೋಗಿ ಕೇಳಿದಳು

"ಇವತ್ತೇನಾಗೈತಿ ನಿನ್ಗ-ಕೂಡ್ಸು ಆ ಹುಡಿಗಿನ್ನ ಯಾಕ ಹೊಡೀತಿ"

"ನೀ ಸುಮ್ಮ ಇರು"

ಅಲ್ಲಾಬಕ್ಷ ಅವಳನ್ನು ಆಚೆ ನೂಕಿ ಫಾತಿಮಾಳನ್ನು ಕೋಣೆಯೊಳಗೆ ಎಳೆದುಕೊಂಡು ಹೋಗಿ "ಇನ್ನೊಮ್ಮೆ ಆ ಭಾಡಕೋ ಇಮಾಮನ ಸರಿ ಹೋದಿ ಅಂದ್ರ ಕೈಕಾಲ ಮುರ್ದು ಹಾಕ್ತೇನಿ-" ಎಂದು ಕೂಗಾಡಿ ಅವಳನ್ನು ಮೈ ಹುಣ್ಣಾಗುವಂತೆ ಪ್ರಜ್ಞಾಹೀನನಾಗಿ ಹೊಡೆಯಹತ್ತಿದ.

ಜುಬೇದಾಳ ಕಣ್ಣಲ್ಲಿ ನೀರು ಧಾರಾಕಾರವಾಗಿ ಹರಿಯತೊಡಗಿತ್ತು. ಮಾತೃಹೃದಯ ಕೇಳೀತೆ?

"ನಿನ್ನ ಮೈಯ್ಯಾಗ ಸೈತಾನ ಹೊಕ್ಕೈತೇನು ಇವತ್ತ ಹಿಂಗ್ಯಾಕ ಮಾಡ್ತಿ."

"ಊರಾಗೆಲ್ಲ ಏನ ಅನ್ಯಾಕ ಹತ್ಯಾರ ಗೊತ್ತೈತೇನು ನಿನ್ಗ-ಅಂವಾ ಇಮಾಮನ ಸರಿ ಮೆರೇಕ ಹತ್ಯಾಳಂತ ನೀನೂ ಬುದ್ಧಿ ಹೇಳಾಕ ಏನಾಗಿತ್ತು-"

"ಇನ್ನೂ ಸಣ್ಣದು ಅದೇನಾಗ್ತೈತಿ"

"ನೀ ಸುಮ್ಮ ಇರು—ಇನ್ನೊಮ್ಮೆ ಫಾತಿ ಅವ್ನ ಸರಿ ಹೋದ್ರ ಕಾಲ ಮುರ್ದು ಹಾಕ್ತೇನಿ"



ಸೆರೆಯ ನಿಶೆಯಲ್ಲಿ ಏನೇನೋ ಬೊಗಳಿದ ಅಲ್ಲಾಬಕ್ಷ ಮತ್ತೆ ಕೂಳು ತಿಂದು ಮಗಳ ಕಡೆಗೆ ಗೋಣು ಹೊರಳಿಸಿ ನೋಡದೆ-ವರಾಂಡದಲ್ಲಿ ಹೋಗಿ ಮಲಗಿದ.

ನಂತರ ಜುಬೇದ ಅವಳ ಬಳಿ-ಬಂದು

"ಬೇಟ..." ಎಂದು ಮೈದಡವಿದಳು

"ಅಮ್ಮೀಜಾನ್" ಎಂದು ತಾಯಿಯನ್ನಪ್ಪಿಕೊಂಡು ರೋದಿಸಹತ್ತಿದಳು.

ಫಾತಿಮಾಳ ಕಣ್ಣುಗಳು ಅತ್ತು ಅತ್ತು ಉಬ್ಬಿಹೋಗಿದ್ದವು ಅಲ್ಲಾಭಕ್ಷನ ಹೊಡತದಿಂದ ಮೈತುಂಬ ಬಾಸುಂಡೆಗಳೆದ್ದಿದ್ದವು. ಅದನ್ನೆಲ್ಲ ನೋಡಿದ ಜುಬೇದಾಳ ಕರುಳಿಗೆ ಬರೆ ಕೊಟ್ಟಂತಾಯಿತ್ತು-

"ಬೇಟ ಥೊಡೇ ಉಣ್ಣೇಳು"

"ಒಲ್ಲೆ ಅಮ್ಮೀಜಾನ್"

"ಹಂಗೆಲ್ಲ ಅನಬಾರ್ದು ಬೇಟ...ಏಳು..." ತಾಯಿಯ ತೊಡೆಯಲ್ಲಿ ಮುಖವಿರಿಸಿ-

"ಹಸಿವೆಯಾಗಿಲ್ಲ ಅಮ್ಮಿಜಾನ್"- ಎಂದು ಬಿಕ್ಕಿದಳು.

* * *

ಮರುದಿನ ಬೆಳಿಗ್ಗೆ ಅಲ್ಲಾಬಕ್ಷ ಹೊಲಕ್ಕೆ ಹೋಗುವದೊಂದೇ ತಡ, ಇಮಾಮು ಫಾತಿಮಾಳ ಮನೆಗೆ ಓಡಿ ಬಂದ.

ರಾತ್ರಿ ಇಡೀ ಅವನು ಎಚ್ಚತ್ತಿದ್ದನೆಂದು ಕೆಂಪಾದ ಕಣ್ಣು. ಕೆದರಿದ ಕೂದಲು, ಉಬ್ಬಿದ ಮುಖ ಹೇಳತೊಡಗಿದ್ದವು.

ಬಾಗಿಲಬಳಿ ಬಂದ ಅವನನ್ನು ಕಣ್ಣೀರಿನಿಂದ ಸ್ವಾಗತಿಸಿದಳು ಜುಬೇದಾ.

"ಆ ಬೇಟಾ...ಆ ಸೈತಾನ್ - ಮೈ ಬಾಯುಂಗ ಹೊಡ್ದಾನಾ-ಒಬ್ಯಾಕೆ ಇದ್ದಾಳ ನೋಡು."

-ಎಂದು ಒಳಗೆ ಹೋಗುವಾಗ "ಜಲ್ದೀ ಹೋಗಿ ಬಿಡಪ್ಪಾ - ಮತ್ತೇನಾದ್ರೂ ಆ ಸೈತಾನ ಬಂದಬಿಟ್ಟೇತು."

— ಎಂದು ಎಚ್ಚರಿಸಿದಳು.

ಇಮಾಮನ ಹೃದಯ ಗೀಚುಮೂಡಿದ ಗಾಜಿನಂತಾಗಿತ್ತು. ನೇರವಾಗಿ ಫಾತಿಮಾಳಿದ್ದ ಕೋಣೆಗೆ ಬಂದ ಹರಕು ಚಾಪಿಯ ಮೇಲೆ ಒರಗಿದ ಫಾತಿಮಾ-ರಾತ್ರಿ ಇಡೀ ಜಾಗರಣೆ ಆಗಿ ಜೊಂಪು ಹತ್ತಿರಬೇಕು.

"ಫಾತಿಮಾ...ಫಾತಿಮಾ..."

ಎರಡು ಮೂರು ಸಲ ಮೈದಡವಿ ಎಬ್ಬಿಸಿದ. ಕವಿದ ಮಂಪರದಿಂದ ಎಚ್ಚತ್ತಂತೆ ಫಾತಿಮಾ ಮೆಲ್ಲನೆ ಕಣ್ಣುರೆಪ್ಪೆಗಳನ್ನು ಬಿಡಿಸಿಕೊಂಡು ನೋಡಿದಳು ಇಮಾಮನನ್ನು. ಅವನ ಕೈಯಾಸರದಿಂದ ಮೆಲ್ಲನೆದ್ದು ಬಿಕ್ಕಳಿಸಿದಳು.

"ಅಳಬ್ಯಾಡ ಫಾತಿಮಾ ಸುಮ್ನ..."

"ಇಮಾಮ ಇನ್ನ ನಮ್ಗ ಸಾವ ದಿಕ್ಕು..."

"ಫಾತಿಮಾ..."

"ಖರೇಮಂದ್ರು ಇಮಾಮ್-ನೀ ಇಲ್ದ ನಾ ಬದಕಂಗಿಲ್ಲ"

“ನನ್ನ ಹಾಲು ಹಂಗ ಐತಿ-ನಿಮ್ಮಪ್ಪ ನಿನ್ನ ಮೈ ಹುಳಿ ಹೊಡದದ್ದು ನೋಡಿ ನನಗೆಷ್ಟು ತ್ರಾಸಾಗ್ಯೆತಿ ಗೊತ್ತದೇನು ಫಾತಿಮಾ…”

“ಇನ್ನ ಹ್ಯಾಂಗ ಮಾಡ್ಬೇಕು ಇಮಾಮ್… ಬಾಬಾ ಸಿಟ್ಟಿಗೆದ್ದಾನ ನಮ್ಗಬ್ಯಾರೆ ದಾರೀನು ಇಲ್ಲ,…”

“ನಾಎಲ್ಲಾ ಏಚನಿ ಮಾಡ್ತೇನಿ ಸುಮ್ಮ ಇರು” ಎಂದು ಫಾತಿಮಾಳನ್ನು ಸಂತೈಸಿದ ಇಮಾಮುನಿಗೆ ಅದೇ ಗುಂಗು-ಏನಾದರೂ ದಾರಿ ಹುಡುಕಬೇಕು.

ನಾಲ್ಕೈದು ದಿನಗಳು ಉರುಳಿದವು. ರಹೀಮು ಎದುರಿಗೆ ಬಂದರೂ, ಮಾತನಾಡಬೇಕೆಂಬ ಆಶೆಯನ್ನು ಅವನು ವ್ಯಕ್ತಪಡಿಸಿದರೂ, ಅಲ್ಲಾಬಕ್ಷ ಮುಖ ದೊಗರಿಸಿಕೊಂಡೇ ಹೋದ.

ಈ ಎರಡು ಮನೆತನಗಳ ಕಚ್ಚಾಟ ಹಳ್ಳಿಯಲ್ಲಿ ಹಬ್ಬಲಿಕ್ಕೆ ಬಹಳ ಹೊತ್ತು ಬೇಕಾಗಲಿಲ್ಲ. ಚಾವಡಿ, ಗುಡಿ. ಮಸೀದೆ ಕಟ್ಟೆಗಳಿರುವದಾದರೂ ಏಕೆ?

ಕರೇಗೌಡನಂತಹ ವ್ಯಕ್ತಿಗಳು ಸಂದರ್ಭದ ದುರುಪಯೋಗಕ್ಕೂ ಮುಂದಾದರು.

ಜಾತಿ ಒಳಜಾತಿ ಪಂಗಡಗಳಲ್ಲಿ ಮಾತ್ಸರ್ಯದ ಉರಿ ಹೊತ್ತಿತು.

“ಹಿರೇಜಾತಿ ಹುಡಿಗಿನ್ನ-ಆ ಪಿಂಜಾರನ ಮಗ್ಗ ಕೊಡತೀಯಾ ಅಲ್ಲಾಬಕ್ಷ; ಹುಗೇನಾದ್ರೂ ಆದ್ರ ನಿನ್ನಪಾಡು ನೆಟ್ಟಗ ಆಗಲಿಕ್ಕಿಲ್ಲ.”

ಎಂದು ಬೆದರಿಕೆ ಹಾಕಿದ ಮುಸಲ್ಮಾನರ ಮುಖಂಡ ಖಾಸೀಮ್ ಸಾಬ್.

“ಪಿಂಜಾರಂದ್ರ ಕಡಮಿ ಅಂತ ತಿಳದಾರೇನು? ರಹೀಮು. ಒಂದು ಕೈ ನೋಡೇಬಿಡು ನಾವೆಲ್ಲ ನಿನ್ಗ ಹಿಂದ ಇರ್ತೀವಿ”

-ರಹೀಮುನನ್ನು ಹುರಿದುಂಬಿಸಿದವು ಪಿಂಜಾರ ಕುಟುಂಬಗಳು.

ಒಂದು ದಿನವಂತೂ ಬಾಯಿಗೆ ಬಾಯಿ ಹತ್ತಿ ಕೈಗೆ ಕೈ ಹತ್ತಿ ಕಲ್ಲು, ಮಣ್ಣು, ಬಡಿಗೆಗಳು ತೂರಾಡಿದುವು. ಇನ್ನೂ ವಿಪರೀತಕ್ಕೆ ಹೋಗುತ್ತಿದ್ದ ಈ ಘಟನೆ ಹಳ್ಳಿಯ ವೃದ್ಧ ಖಾಜಿ ಹುಸೇನಸಾಬನಿಂದ ಥಮಣಿ ಆಯಿತು. ಈ ಕಚ್ಚಾಟದ ನಡುವೆ ಸಿಕ್ಕು ನುಚ್ಚು ನೂರಾದವರು ಇಮಾಮ್-ಫಾತಿಮಾ.

- ೬ -

ವೃದ್ಧ ಖಾಜಿ ಹುಸೇನ್ ಸಾಬನ ಮಾತಿಗೆ ಊರಲ್ಲಿ ಬೆಲೆ ಇತ್ತು. ಹಳ್ಳಿಯ ಎಲ್ಲ ಜಾತಿಯ ಜನರು ಅವನ ಮುಂದೆ ತಮ್ಮ ಸುಖದುಃಖಗಳನ್ನು ತೋಡಿಕೊಂಡು ತಮ್ಮ ಕಷ್ಟಗಳಿಗೆ ಅವನಿಂದ ಪರಿಹಾರ ಕಂಡುಕೊಳ್ಳುತ್ತಿದ್ದರು.

ರಾತ್ರಿ ಏಳೆಂಟು ಗಂಟೆಯಾಗಿರಬೇಕು; ಹಳ್ಳಿ ಮಲಗುವ ಸನ್ನಾಹದಲ್ಲಿ ಇತ್ತು.

ಮಸೀದೆಯ ಮಗ್ಗಲಿನ ಸಣ್ಣ ಮನೆಯೊಳಗೆ ಉರಿಯುತ್ತಿದ್ದ ಮಂದ ಪ್ರಕಾಶದ ಚಿಮಣಿ ಎಣ್ಣೆಯ ಬುಡ್ಡಿಯ ಎದುರಿಗೆ ಕುಳಿತು ಖಾಜಿ ಏನೇನೋ ಪಠಿಸಹತ್ತಿದ್ದ

ಮೆಲ್ಲನೆ ಆಗಮಿಸಿದ ಇಮಾಮುನ ಅಡಿಗಳ ಸದ್ದನ್ನಾಲಿಸಿ ಮುಖವೆತ್ತಿ ಬಾಗಿಲ ಬಳಿಬಂದ ಅವನನ್ನು-

“ಆ ಬೇಟಾ-ನೀ ಬರ್ತಿ ಅಂತ ನನ್ಗ ಅನಿಸಿತ್ತು—” ಎಂದು ಸ್ವಾಗತಿಸಿದ.

ಇಮಾಮು ಅಲ್ಲಿಯೇ ಹಾಸಿದ ಹರಿದ ಚಾಪೆಯ ಮೇಲೆ ಕುಳಿತುಕೊಂಡ.

“ಖಾಜಿಸಾಬ್…ನನಗ ದಾರೀನs ಕಾಣ್ದಂಗ ಆಗ್ಯೆತಿ. ಏನ ಮಾಡ್ಲಿ ನೀವs ಹೇಳಬೇಕು.”

“ಮ್ಯೆ ಭೀ ವಹೀ ಸೋಚ ರಹಾ ಹುಂ ಬೇಟಾ, ಈ ದುನಿಯಾನ ಹಿಂಗ ಐತಿ ಏನ್ಮಾಡೋದು ”

“ಪಿಂಜಾರಂದ್ರ ಕಡಿಮಿ ಅಂತ ಯಾಕ ತಿಳಕೋತಾರ?”

“ಆ ಜಾತಿ ಹೆಚ್ಚು ಈ ಜಾತಿ ಕಡಿಮಿ-ಅನ್ನೋದು ಅಲ್ಲಾನ ನಜರಿನಾಗ ಇಲ್ಲ. ಮನಶ್ಯಾರೆಲ್ಲಾ ಒಂದs… ಈ ಜಾತಿ ಅನ್ನೋದನ್ನ ನಾವು ಮಾಡಿಕೊಂಡಿದ್ದು-”

"ಹಂಗಾದ್ರ ಮನಶ್ಯಾ ಹಿಂಗ್ಯಾಕ ಜಗಳಾಡ ತಾನಾ?" "ವಿಚಾರ ಇಲ್ಲದ ಜನಕ್ಕೆ ತಿಳಿಸಿ ಹೇಳೋದು ಭಾಳ ಕಷ್ಟ ಐತಿನೋಡು, ಏನೋ ಹಿಂದಕಿನಿಂದ ಬಂದ ನಂಬಿಕಿ ಅದ್ನ ಕಟ್ಟ ಹಿಡೀ ತಾರ ನೋಡು...ಇದೆಲ್ಲ ಬಿಟ್ಟು ಹಳ್ಯಾಗ ಬಾಳೋದು ಮುಷ್ಕಿಲ್ ಅದ..."

"ಖಾಜಿಸಾಬ್ ಈಗ ನೀವ ಹೇಳ್ರಿ - ಏನ ಮಾಡ್ಲಿ ಅಂತಾ"

ಸ್ವಲ್ಪ ಹೊತ್ತು ಖಾಜಿ ಹುಸೇನ್‌ಸಾಬ್-- ಏನೋ ಯೋಚನೆಯಲ್ಲಿ ತೊಡಗಿದ್ದ.

ಇಮಾಮು ಮೌನವಾಗಿ ದೀಪವನ್ನೇ ದಿಟ್ಟಿಸುತ್ತ ಕುಳಿತಿದ್ದ.

ಏನೋ ದಾರಿ ಕಂಡುಕೊಂಡಂತೆ ನಿರ್ಧಾರದ ಧ್ವನಿಯಲ್ಲಿ ಖಾಜಿ ಹುಸೇನ್‌ಸಾಬ್ ಹೇಳಿದ

"ಬೇಟಾ-ಒಂದ್ಯಒಂದು ಹಾದಿ ಇದ್ಕ"

"ಯಾವದು?"

-ಇಮಾಮು ಆತುರದಿಂದ ಕೇಳಿದ.

"ದೇಖ ಬೇಟಾ, ನೀನು ಫಾತಿಮಾ ಆರಾಮದಿಂದ ಇರಬೇಕಾದ್ರ-ಈ ಊರ ಬಿಟ್ಟು ಹೋಗಬೇಕು?"

"ಖಾಜಿ ಸಾಬ್-ಫಾತಿಮಾ ಒಪ್ಪಬೇಕಲ್ಲ"-

"ಅದು ನಿನ್ನ ಕೆಲಸ-ಇಮಾಮು-ಹೆಂಗರ ಒಪ್ಪಿಸಿಕೋಬೇಕು,"-ನಿಶ್ಚಿತ ಸೂಚನೆ ನೀಡಿದ ಹುಸೇನ್‌ಸಾಬ್

ಇಮಾಮುನಿಗೂ ಅದೊಂದೇ ದಾರಿ ತನಗಾಗಿ ತಿಳಿದದ್ದು ಎನ್ನಿಸಿತು. ಹೇಗಾದರೂ ಫಾತಿಮಾಳನ್ನು ಒಪ್ಪಿಸಿಕೊಳ್ಳಬೇಕೆಂದು ನಿರ್ಧರಿಸಿ-ಖಾಜಿ ಹುಸೇನ್ ಸಾಬನಿಗೆ ವಂದಿಸಿ-ಮನೆಗೆ ಮರಳಿದ.

* * *

ಆ ರಾತ್ರಿ ಫಾತಿಮಾಳ ನಿಟ್ಟುಸಿರೇ ಮೋಡವಾಗಿ ಆವರಿಸಿತೋ ಏನೋ? ಮುಗಿಲಿನ ಕಣ್ಣು ಮಸುಕಾಗಿರಬೇಕು. ಇಡೀ ಹಳ್ಳಿಯೇ ಗಾಢಾಂಧಕಾರದಲ್ಲಿ ಮುಳುಗಿತ್ತು.

ಸ್ವಲ್ಪ ಸಮಯದ ನಂತರ ಸೂಸಿದ ತಣ್ಣನೆಯ ಮಣ್ಣಿನ ವಾಸನೆಯ ಗಾಳಿಯ ಹಿಂದೆಯೇ ಧಾರಾಕಾರದ ಮಳೆ ಧಾವಿಸಿತು

ಇಡೀ ಹಳ್ಳಿ ನಡುಗಿತು

ಅಂಥ ಭೀಕರ ರಾತ್ರಿಯನ್ನೇ ಎದುರಿಸಲು ನಿರ್ಧಾರದ ಹೆಜ್ಜೆಯನ್ನಿರಿಸಿದಳು ಫಾತಿಮಾ.

ದಂದಕ್ಕಿಯಿಂದ ಹಿತ್ತಲಕ್ಕೆ ನುಸುಳಬೇಕೆನ್ನುವಷ್ಟರಲ್ಲಿ ಮಲಗಿದ್ದ ಎತ್ತುಗಳು ಎಚ್ಚತ್ತು ಕೊರಳೊಳಗಿನ ಗೆಜ್ಜೆಗಳನ್ನು ಘಿಲುಘಿಲಿಸಿದವು.

ಫಾತಿಮಾ ಬೆಚ್ಚಿಬಿದ್ದು ಹೊರಳಿ ನೋಡಿದಳು. ಯಾರೂ ಇರಲಿಲ್ಲ- ಎದೆಯ ಮೇಲೆ ಕೈಯಿರಿಸಿಕೊಂಡು ಸಮಾಧಾನದ ಉಸಿರು ಬಿಟ್ಟಳು

'ನಿತ್ಯವೂ ನಮ್ಮ ಮೈ ತಿಕ್ಕಿ, ಜಳಕ ಮಾಡಿಸಿ ಆಹಾರ ನೀಡುವ ತಾಯಿ ನಮ್ಮನ್ನು ಬಿಟ್ಟು ಎಲ್ಲಿ ಹೊರಟೆ'. ಎಂದು ಕೇಳುವಂತಿದ್ದ ಆ ದೀನ ದೃಷ್ಟಿಯ ಮೂಕಪ್ರಾಣಿಗಳು ಅವಳನ್ನು ನೋಡತೊಡಗಿದವು. ಫಾತಿಮಾಳ ಮನ ಮಂಜುಗಡ್ಡೆ ಕರಗಿತು. ಅವುಗಳ ಮೇಲೆ ಕೈ ಆಡಿಸಿ ಸಂತೈಸಿದಳು.

ಅಷ್ಟರಲ್ಲಿ ಹಿತ್ತಲ ಬಾಗಿಲ ಬಳಿ ಇಮಾಮುನ ಪಿಸುದನಿಯು ಕೇಳಿಸಿತು. ಅತ್ತ ಓಡಿದಳು. ಅವನ ಮೈ ತೊಯ್ದು ತಪ್ಪಡಿಯಾಗಿತ್ತು.

"ಲಗೂ ನಡಿ ಎಷ್ಟು ಹೊತ್ತು?" -ಅವಳ ಕೈಹಿಡಿದೆಳೆದ.

"ಮಳೀ ಸುರ್ಯಾಕ ಹತ್ತೇದಲ್ಲ"—

"ಮಳೀ ಬಿಟ್ಟು ಬೆಂಕಿ ಸುರೀಲಿ ನಾವು ಪಾರಾಗಬೇಕು—ಹುಂ ನಡಿ ಲಗೂ"

ಇಬ್ಬರೂ ಮಳೆ ಕತ್ತಲೆಯೊಳಗೆ ಮಿಂಚಿನಂತೆ ನುಸುಳಿಹೋದರು. ಎಂಥ ಅದಮ್ಯ ಶಕ್ತಿ! ಹಿಮ ಪರ್ವತವನ್ನು ಕರಗಿಸಿ ಬಿಡಬಲ್ಲದು.

ಅನುಭವದ ಅರಣ್ಯದೊಳಗೆ ಅಲೆದಾಗ ಇಂಥ

ಎಷ್ಟೋ ಸನ್ನಿವೇಶಗಳ ಜಾಲದೊಳಗಿಂದ ತೂರಿ ಹೋಗಬೇಕಾಗುತ್ತದೆ.

ಕರಿಗೌಡನ ಬಾಲದಂತಿದ್ದ ಈರ, ಇಮಾಮನ ಖಾಜಿ ಹುಸೇನಸಾಬರ ಭೇಟಿಯ ವಿವರ ಒಪ್ಪಿಸಿದ್ದ. ಗೌಡ ತನ್ನ ಸುಪ್ತ ಆಶೆಗೆ ಈ ಸಂದರ್ಭದ ಲಾಭ ಪಡೆಯಬಯಸಿದ. ಅವರ ಮೇಲೆ 'ನಿಘುರಾನಿ, ಇರಿಸಿದ್ದ. ಅಂದಿನ ಅವರ ಪಲಾಯನದ ಸುದ್ದಿ ಸಂತಸ ನೀಡಿತ್ತು.

"ಈರ ನಾಲ್ಕೈದು ಮಂದಿನ್ನ ಕರಕೊಂಡು ಹೋಗು ಆ ಟಾಂಗಾಸಾಬ ಮಗ್ನ ಹಿಡಿದು ಕಟ್ಟಿಹಾಕಿ ಆ ಫಾತಿನ್ನ ಎಳಕೊಂಡ ಬರ್‍ರಿ. ಇಂಥ ಹೊತ್ತು ಮತ್ತ ಸಿಗಾಕಿಲ್ಲ" ಎಂದು ಕಳಿಸಿದ್ದ ಗೌಡ ತನ್ನ ಬಾಲ ಬಡಕರನ್ನು ಹುರುದುಂಬಿಸಿ ...

ಊರ ಮುಂದೆ ಹರಿಯುವ ಹಳ್ಳ ಸರ್ಪಾಕಾರದಲ್ಲಿ ಇಮಾಮನ ಹಳ್ಳಿಯನ್ನು ಸುತ್ತುವರೆದಿತ್ತು. ಕೊಪ್ಪಳಕ್ಕೆ ಹೋಗಬೇಕಾದರೆ ಆ ಹಳ್ಳವನ್ನು ದಾಟಲೇಬೇಕು ಮಳೆಗಾಲದಲ್ಲಿ ಎಷ್ಟೋ ಸಲ ಆ ಹಳ್ಳ ಸಾರಿಗೆಗೆ ವ್ಯತ್ಯಯ ಉಂಟು ಮಾಡುತ್ತದೆ.

ಸುರಿಯುವ ಮಳೆಯಲ್ಲಿ ಏಳುತ್ತ ಬೀಳುತ್ತ ಸಾಗಿದರು ಇಮಾಮ, ಫಾತಿಮಾ.

ದಾಟುಗಾಲು ಹಾಕುತ್ತ ಸಾಗಿದ್ದ ಇಮಾಮನ ಹಿಂದೆ ಫಾತಿಮಾ ತೇಕುತ್ತ ನಡೆದಿದ್ದಳು

ತಮ್ಮ ಹಿಂದೆ ಹಿಂದೆ ಯಾರೋ ನಾಲ್ಕೈದು ಜನ ನುಸುಳಿಕೊಂಡು ಬರುವಂತೆ ಎನ್ನಿಸಿತು ಇಮಾಮನಿಗೆ. "ಫಾತಿ ಲಗೂ ಲಗೂ ಕಾಲ್ಹಾಕು. ಯಾರೋ ನಮ್ಮ ಸುಳು ಹಿಡಕೊಂಡು ಬರ್‍ತಿದ್ಹಂಗ ಅದ"—

ಎಂದು ಭರಭರನೆ ಅವಳ ಕೈ ಹಿಡಿದುಕೊಂಡು ನಡೆದ.

ಇಬ್ಬರೂ ಓಡತೊಡಗಿದರು. ಇವರ ಓಟದಷ್ಟೇ ಅನುಸರಿಸುತ್ತಿರುವವರ ಗತಿಯೂ ಹೆಚ್ಚಿತು. ಅಲ್ಲಲ್ಲಿ ಗುಸು ಗುಸು—

"ಲೇ ನೀ ಇತ್ಲಾಗ ಬಾ-ನಾ ಅತ್ಲಾಗಿಂದ ಬರ್‍ತೀನಿ. ಭರಮಾ ನೀ ಬೆನ್ನ ಅಟ್ಟಗೊಂಡು ಬಾ"

......ಎಲ್ಲರೂ ಪೊದರೊಳಗೆ ನುಗ್ಗಿದರು. ಫಾತಿಮಾ, ಇಮಾಮ ಹಳ್ಳದ ಬಳಿ ಬಂದು ನೋಡುತ್ತಾರೆ. ನಿಸರ್ಗವೇ ಕೋಪಿಸಿಕೊಂಡಂತೆ ಅದು ಭೋರ್ಗರೆಯಹತ್ತಿತು. ಆ ಪ್ರವಾಹದಲ್ಲಿ ಗಿಡಗಂಟಿ, ಕಸರು ಬಣವೆ ಕೊಚ್ಚಿಕೊಂಡು ಅಡೆತಡೆಗಳಿಗೆ ಅಪ್ಪಳಿಸುತ್ತ ಭರಾಟೆಯಲ್ಲಿ ಓಡಹತ್ತಿದ್ದವು. ಹಂತ ಹಂತವಾಗಿ ನೀರು ಏರಹತ್ತಿತ್ತು

ಕೆಲ ನಿಮಿಷ ಇಬ್ಬರೂ ಏನೂ ತೋಚದಾಗಿ ದಿಂಗ್ಮೂಢರಾಗಿ ನಿಂತುಬಿಟ್ಟರು. ಎದುರುಗಡೆ ಯೋಚನೆಗಳಷ್ಟೇ ಭಯಂಕರವಾಗಿ ತುಂಬಿ ಹರಿಯುವ ಹಳ್ಳ, ಬೀಸುವ ಗಾಳಿಯೊಂದಿಗೆ ದನಿ ಬೆರೆಸಿ ಅರ್ಭಟಿಸತೊಡಗಿತ್ತು.

ಹಿಂದೆ ಮಾನವರೆಂಬ ಕ್ರೂರ ಜಂತುಗಳು ಬೆನ್ನಟ್ಟಿವೆ. ಇಮಾಮನಿಗೆ ಏನೂ ತೋಚದಾಯಿತು.

"ಫಾತಿ ನನ್ನ ಕೈ ಗಟ್ಟ್ಯಾಗಿ ಹಿಡಕೊಂಡು ಬಾ-ಹಳ್ಳದಾಗ ಇಳ್ಕೊಂಡು ಬಾ"

"ಅದ್ಹೆಂಗ-ಕಾಲಿಟ್ಟರ ಸರಕ್ಕನ ಎಳೀತದ ನೀರು"

"ಈ ಜಾನವರ್ ಕೈಯಾಗ ಸಾಗೋದಕಿಂತ ಹಳ್ಳದಾಗ ಬಿದ್ದು ಜೀವಾ ತಗೇದು ಛಲೋ..."

"ಖರೇ ಅದ ಲಗೂ ನಡಿ"

"ಮೆಲ್ಲನೆ ನನ್ನ ಕೈ ಹಿಡಕೊಂಡು ಬಾ ಫಾತಿ"

"ಹೂಂ"

ಪೈಜಾಮಾ ಮೇಲೇರಿಸಿಕೊಂಡು ನಡೆದ ಇಮಾಮ. ಸೆರಗುಗಚ್ಚೆ ಹಾಕಿಕೊಂಡು ಫಾತಿಮಾ ಅವನನ್ನು ಅನುಸರಿಸಿದಳು.

ಅವಳು ನೀರಲ್ಲಿ ಕಾಲಿರಿಸುತ್ತಲೇ ಸೆಳವು ಕಾಲು ಹಿಡಿದು ಎಳೆದಂತಾಯಿತು.

"ಅಯ್ಯಯ್ಯ" ಎನ್ನುತ್ತ ಜಾರಿ ಬಿದ್ದೇಬಿಟ್ಟಳು ಫಾತಿಮಾ. ಕೊಚ್ಚಿಕೊಂಡು ಹೋದಳು. ತತ್‌ಕ್ಷಣವೇ "ಫಾತಿ ಫಾತಿ" ಎನ್ನುತ್ತ ನೀರಿಗೆ ಧುಮುಕಿದ ಇಮಾಮ

ಫಾತಿಮಾ ಚೀರತೊಡಗಿದ್ದಳು.

"ಫಾತಿ ಬಂದೆ ಗಾಬರಿ ಆಗಬ್ಯಾಡಾ-ಅಲ್ಲೆ ದೊಡ್ಡ ಬಂಡಿ ಐತಿನೋಡು, ಹಿಡಕೊ" ಎಂದ. ಸರಕ್ಕನೆ ಫಾತಿಮಾ ಬಂಡೆಗೆ ಅವಚಿಕೊಂಡು ನಿಂತಳು.

ಕಲ್ಲಿಗೆ ಅಪ್ಪಳಿಸಿದ್ದರಿಂದ ಅವಳ ಕೋಮಲ ಗಲ್ಲದಿಂದ ರಕ್ತ ಬಸಿಯಹತ್ತಿತು.

ಇಮಾಮ ಅವಳ ಹತ್ತಿರ ಜಿಗಿದುಬಂದು ತನ್ನ ಬಲಗೈಯಿಂದ ಆಸರೆ ನೀಡಿದ. ಇಬ್ಬರೂ ಸುತ್ತಲೂ ಕಣ್ಣು ಹೊರಳಿಸಿದರು. ಆ ಕಗ್ಗತ್ತಲೆಯಲ್ಲಿ ಏನೂ ಕಾಣಸದೆ ಬರೀ ತುಂಬಿ ಹರಿಯುವ ಹಳ್ಳದ ಆರ್ಭಟ ಕೇಳಿ ಬರಹತ್ತಿತ್ತು.

"ಫಾತಿ ಈಗೇನು ಮಾಡಬೇಕು ದಾರೀನs ಕಾಣಿಸವಲ್ತು. ದಂಡಿಮ್ಯಾಗ ಹೊಗಬೇಕಂದರ ಆ ಬದ್ಮಾಷರು ಬೆನ್ನಹತ್ತಿ ಬರಾಕಹತ್ತಾರ"—

—ಎಂದು ಇಮಾಮ ನುಡಿಯುವಷ್ಟರಲ್ಲಿ ಫಕ್ಕನೆ ಬ್ಯಾಟ್ರಿ ಬೆಳಕು ಬಿತ್ತು.

"ಇಲ್ಲೆ ಇದ್ದಾರಲೆ, ಇಲ್ಲೆ ಇದ್ದಾರಲೆ" ಮೂವರು ಕೂಗಿದರು.

"ಲೇ ಇಮಾಮ, ಸುಮ್ಕ ಫಾತಿನ ಕರಕೊಂಡು ಬಾ-ಗೌಡ್ರು ಹೇಳ್ಯಾರು."

ಎಂದು ಕಿರುಚಿದ ಈರ

"ಲೇ ಈರ್‍ಯಾ ಬಾಯುಮ್ಮುಚ್ಚು-ಅವ್ನ ಹೆಸರು ತಗದ್ರ ನಾಲ್ಗಿ ಕತ್ತರಿಸಿ ಹಾಕ್ತೀನಿ—

"ನಿನ್ನs ಒಳ್ಳೇದಾಗ್ಲಿ ಅಂದ್ರ ಹಿಂಗ್ಯಾಕ ಬೊಗಳ್ತಿ—ಗಡಾನ ದಂಡಿಮ್ಯಾಗ ಕರಕೊಂಡ ಬಾ-ನಿಮ್ಮ ಮುದ್ದಿ ಸಹಿತ ಮಾಡಸ್ತಾರಂತ ಗೌಡ್ರು"

"ಥೂ ನಿಮ್ಮ ಹಾಳ ಬಾಳೇವು. ನಾಯಿ-ಹಾಂಗ ಗೌಡನ ಹಿಂದ ಬಾಲಾ ಅಳ್ಳ್ಯಾಡಿಸಿಕೋತ ಹೋಗಿ—ಎಷ್ಟ ಮಂದಿ."

"ಲೇ ಉಪದೇಶಾ ಮಾಡಾಕ ಬಂದೇನ್ಲೆ?"—ಮುಕ್ಕಾಟಲೇ ಫಾತಿಮಾನ ಕರಕೊಂಡು ದಂಡಿಗೆ ಬಾ—ಇಲ್ದಿದ್ರ..."

"ಸುಮ್ನ ನೀ ಹೋಗಲೇ ಹೊಲಸನ್ಯಾಗಿನ ಹುಳಾ"

"ಲ್ರೇ ಇಗಾ ಹಿಂಗಾದ್ರ ಕೇಳೊಂದಿಲ್ಲೇನ ಕಲ್ಲ ಒಗೀರಿ..."

ಎಂದು ಈರ ಕ್ರೂರ ದನಿಯಲ್ಲಿ ಹೇಳಿದ. ಜೋರು ಜೋರು ಕಲ್ಲು ಬೀಸಿ ಬರಹತ್ತಿದವು. ಕವಣಿಯೊಳಗಿನ ಒಂದು ಚೂಪಾದ ಕಲ್ಲು ಖಟ್ ನೆ ಫಾತಿಮಾಳ ತಲೆಗೆ ಬಡೆಯಿತು. ರಕ್ತ ಬಸಿಯಹತ್ತಿತು.

"ಲೇ ನೀವೇನು ಮನುಷ್ಯರು ಇದ್ದೀರೋ ಏನು?"

—ಎಂದು ಇಮಾಮ ಗರ್ಜಿಸುವಷ್ಟರಲ್ಲಿ ಕಲ್ಲಿನ ಸುರಿಮಳೆಯಾಯಿತು.

"ಫಾತಿ ಅಲ್ನೋಡು, ಆ ಟೊಂಗಿ ತೇಲಿ ಬರಲಿಕ್ಕೆ ಹತ್ತೇದಲ್ಲ. ಅದ್ನ ಹಿಡಕೊಂಡು ಹೋಗೋಣ ಈ ಹೊಲ್ಯಾರಿಗೆ ಕರುಣೆ ಇಲ್ಲ."
—ಎಂದವನೇ ಇಮಾಮ ಫಾತಿಮಾಳನ್ನು ಗಟ್ಟಿಯಾಗಿ ಅವಚಿಕೊಂಡು ನೀರಿಗೆ ಧುಮುಕಿದ.

ಆದರೆ ದುರ್ದೈವ; ಟೊಂಗೆ ಕೈಗೆ ಸಿಕ್ಕದೇ ಜಾರಿಹೋಯಿತು.

"ಫಾತಿ ಗಾಬರಿ ಆಗಬ್ಯಾಡಾ...ಗಟ್ಯಾಗಿ ಹಿಡಕೊ-"

-ಎಂದು ಇಮಾಮ ಸೆಳವಿನೊಡನೆ ಹೋರಾಡತೊಡಗಿದ.

ಅಷ್ಟರಲ್ಲಿ ಅಬ್ಬರದ ತೆರೆಯೊಂದು ಬಂದು ಅಪ್ಪಳಿಸಿ ಅವರನ್ನು ಎಲ್ಲಿಯೋ ಕೊಚ್ಚಿಕೊಂಡು ಹೋಯಿತು. ಅವರ ದನಿ ಕೇಳುವವರೆಗೂ- ಆ ನಿರ್ದಯ ಧೂರ್ತರು ಕಲ್ಲು ಎಸೆಯುತ್ತಲೇ ಇದ್ದರು.

* * *

—೭—

ಕಾಲದ ಕಥೆ ಕಾಣದ ಕಣ್ಣೇ ಬಣ್ಣಿಸಬೇಕು! ಪ್ರವಾಹ ಹರಿಯುತ್ತಲೇ ಇರುತ್ತದೆ

ಫಾತಿಮಾಳಲ್ಲಿದ್ದ ಇಮಾಮನ ಪ್ರೇಮ ಹಚ್ಚ ಹಸುರು-ನಿತ್ಯ ಹಸಿರು,...ವೃದ್ಧಾಪ್ಯ ಆವರಿಸಿದರೇನು?...ಮೃತ್ಯು ಸ್ವಾಗತಿಸಿದರೇನು?

ದಂದಕ್ಕಿಯಲ್ಲಿ ಬಡಕಲದ ದನಕಟ್ಟಿ ಇಮಾಮ ನಡುಮನೆಗೆ ಬಂದ. ಹೊರಸಿನ ಮೇಲೆ ಫಾತಿಮಾ ನಿಶ್ಯಕ್ತಳಾಗಿ ಮಲಗಿದ್ದಳು. ಆರಕ್ತಮುಖ ಮ್ಲಾನಮಯವಾಗಿತ್ತು.

ಅವನು ಗಾಬರಿಯಿಂದ ಅವಳತ್ತ ಸಾಗಿ--

"ಫಾತಿ ಇನ್ನೂ ಜರಾ ಕಡಿಮಿ ಆಗಿಲ್ಲ--" ಎಂದು ಕೇಳಿ ಅವಳ ಹಣೆಯ ಮೇಲೆ ಕೈಯಿರಿಸಿದ.

ಜ್ವರದ ತಾಪದಿಂದ ಸುಡುತ್ತಿರುವ ಅವಳ ಹಣೆಯನ್ನು ಸ್ಪರ್ಶಿಸಿದಾಗ ಅವನ ಹೃದಯ ತಳಮಳಿಸಿತು.

"ಇದೇನು ಫಾತಿ ಹಣಿ ಕೆಂಡ ಆಗೇದ-- ಹೇಳೇ ಇಲ್ಲ ಸುಮಾಕ ಹೊಲಕ್ಕ ಹೋಗಿ ಬಂದ್ಹಾಂಗ ಆತು ನೋಡು. ನಿನ್ನ ಹತ್ರ ಕೂಡ್ರಲಿಕ್ಕೆ ಬರ್ತಿತ್ತು"

"ಹಿರ್ಯಾ ಸ್ವಲ್ಪ ನೀರಕೊಡತೀಯಾ"...ಕ್ಷೀಣ ಸ್ವರದಲ್ಲಿ ಹೇಳಿದಳು. ಇಮಾಮ ಒಳಗೆ ಹೋಗಿ ಒಂದು ಬಟ್ಟಲೊಳಗೆ ನೀರು ತೆಗೆದುಕೊಂಡು ಬಂದ.

ತಾನೇ ಏಳಲು ಪ್ರಯತ್ನಿಸಿದ ಫಾತಿಮಾಗೆ ಕೈಆಸರ ನೀಡಿ ಸ್ವಲ್ಪ ಎತ್ತಿಕೂಡಿಸಿದ. ಅವಳು ಕುಡಿದಿದ್ದು ಒಂದೆರಡೇ ಗುಟುಕು.

ಅವನು ಅವಳನ್ನು ದಿಟ್ಟಿಸಿನೋಡಿದ ಅವಳ ಕಣ್ಣುಗಳು ಏನೋ ಹೇಳಲು ಆತುರಗೊಂಡಿ



ದ್ದವು. ಯಾವದೋ ಇಂಗಿತ ಅಡಗಿದಂತಿತ್ತು. ಅವಳ ಹೃದಯದ ಹೊಯ್ದಾಟ ಸ್ಪಷ್ಟವಾಗಿ ಮುಖಮಂಡಲದಲ್ಲಿ ಬಿಂಬಿಸಿತ್ತು.

"ಏನು ಫಾತಿ?"...

"ಹಿ...ರ್‍ಯಾ"—

"ಏನು ಹೇಳು? ಇವತ್ಯಾಕ ಹಿಂಗ ಮಾಡಲಿಕ್ಕೆ ಹತ್ತಿ?"

"ನಿನ್ನ ಬಿಟ್ಟ ಹ್ಯಾಂಗ ಸಾಯಲಿ..." ಇಮಾಮ ತನ್ನ ಬಿರುಸು ಕರಗಳಿಂದ ಅವಳ ಕಣ್ಣಲ್ಲಿ ಮಿಡಿದ ಅಶ್ರುವನ್ನು ಒರೆಸಿ--

"ಹುಚ್ಚಿ ಹಿಂಗ್ಯಾಕ ಮಾತಾಡ್ತಿ--ಇವತ್ತ ನಿನ್ಗ ಏನು ಆಗ್ಯೆತಿ--ಈಗ ಹೋಗಿ ಡಾಕ್ಟರರನ್ನು ಕರಕೊಂಡು ಬರ್ತೀನಿ!" ಎಂದ ಅವಳ ಮುಂಗುರಳು ನೇವರಿಸುತ್ತ--

ಸ್ವಲ್ಪ ಹೊತ್ತು ಏನೇನೋ ಯೋಚಿಸಿ ನುಡಿದಳು.

"ಡಾಕ್ಟರ್ನ--ಏನೂ ಕರಕೊಂಡು ಬರಬ್ಯಾಡ...ಎಷ್ಟು ದಿವಸ ಅಂತ ಈ ಪರಪಂಚದಾಗ ಇರೋದು.........ನಾ ಮುಂದ ಹೋಗ್ತೀನಿ..."

ಈ ರೀತಿ ಫಾತಿಮಾ ಬಡಬಡಿಸುವದನ್ನು ನೋಡಿ ಇಮಾಮ ಗಾಬರಿಯಾದ.

"ಫಾತಿ...ಇವತ್ಯಾಕ ಹಿಂಗ ಮಾತಾಡಲಿಕ್ಕೆ ಹತ್ತೀದಿ...?"

"ಅವ್ವಾ ಅಪ್ಪ ಊರಿಗೆ ಹೋಗ್ಯಾರ ಅವರ್ನ ನೋಡಬೇಕು ಅನಸ್ತದ."

"ಅವ್ವಾ ಅಪ್ಪ ಊರಾಗ ಇಲ್ಲ-ಧನೇರಿಗೆ ಹೇಳ್ತೀನಿ, ನೀ ಕೇಳ್ತಿ ಅಂತ. ಈಗ ಮದ್ಲೀಗೆ ಡಾಕ್ಟರ್ನ ಕರಕೊಂಡು ಬರ್ತೀನಿ ಸುಮ್ಮಾ ತುಂಬ ಹೊತಗೊಂಡು ಮಕ್ಕೊ..."

"ಇರಲಿ ಬಿಡು...ಡಾಕ್ಟರ ಬ್ಯಾಡಾ ಗೀಕ್ಟರ ಬ್ಯಾಡಾ...ಅವರಿಗೆ ಕೊಡಾಕ ರೊಕ್ಕ ಎಲ್ಲದ..."

"ನೀ ರೊಕ್ಕದ ಕಾಳಜಿ ಯಾಕ ಮಾಡ್ತಿ... ಸುಮ್ಮಾಕ ಮಕ್ಕೋ ಹೊತಕೊಂಡು, ಕೆಂಡದಂಗ ಜ್ವರಾ ಅದ."

ಕಂಬಳಿಯನ್ನು ತುಂಬ ಹೊದಿಸಿ ಇಮಾಮ ಡಾಕ್ಟರನನ್ನು ಕರೆದುಕೊಂಡು ಬರಲು ಗಡಬಡಿಸಿಕೊಂಡು ಹೊರಟ.

ಹೃದಯದಲ್ಲಿ ಏನೋ ಮೂಕವೇದನೆ (ಅವ್ಯಕ್ತ ಅಳ) ಮಿಡಿಯತೊಡಗಿತ್ತು. ಮನಸ್ಸು ಅಸ್ತವ್ಯಸ್ತ......ದಾರಿಯುದ್ದಕ್ಕೂ ಏನೇನೋ ವಿಚಾರಗಳ ಸುಳಿದಾಟ ಹೆಣೆಯಹತ್ತಿತ್ತು ತನ್ನಷ್ಟಕ್ಕೆ ತಾನೆ.

ಅವನು ಆಸ್ಪತ್ರೆ ತಲುಪಿದಾಗ ಸುಮಾರು ರಾತ್ರಿ ಏಳು ಗಂಟೆಯಾಗಿರಬೇಕು. ಒಂದೆರಡು ರೋಗಿಗಳು ಡಾಕ್ಟರ ಎದುರಿಗಿದ್ದ ಬೆಂಚಿನ ಮೇಲೆ ಸ್ಕಾರ್ಫ್ ಸುತ್ತಿಕೊಂಡು ಕೆಮ್ಮುತ್ತ ಕುಳಿತುಕೊಂಡಿದ್ದವು.

ಡಾ. ಶಂಕರ. ಬರಗಾಲ. ರಜಾಕರ ಹಾವಳಿ ಮೊದಲಾದ ವಿಷಯಗಳ ಮೇಲೆ ಮಾತಾಡುತ್ತಲೇ ಇಂಜೆಕ್ಷನ್ ಶಿದ್ಧತೆ ನಡೆಸಿದ್ದ. ಅವನ ಕೊರಳೊಳಗೆ ಸ್ಟೆತಸ್ಕೋಪ ಶಿವನ ಸರ್ಪದಂತೆ ಜೋತಾಡತೊಡಗಿತ್ತು.

ಬರಗಾಲ ಬಂದದ್ದನ್ನು ಸಾರುವಂತಿದ್ದ ಕಂಪೌಂಡರ್ ಎರಡು ಮೂರು, ಔಷಧ ಸೇರಿಸಿ ಅದರಲ್ಲಿ ನೀರು ಬೆರೆಸಿ ಬಾಟ್ಲಗಳಲ್ಲಿ ತುಂಬಿ ತುಂಬಿ ಇಡಹತ್ತಿದ್ದ. ಲಗುಬಗೆಯಿಂದ ಬಂದ ಇಮಾಮ್ ಆಸ್ಪತ್ರೆಯೊಳಗೆ ಕಾಲಿರಿಸುತ್ತಲೇ

"ಡಾಕ್ಟರ್ ! ಸ್ವಲ್ಪ ಲಗೂ ಬರ್ರಿ- ನನ್ನ ಹೆಣ್ತಿಗೆ ಆರಾಮ ಇಲ್ಲ..."





-ಎಂದು ಗಡಬಡಿಯಿಂದ ಎದ್ದ.

ಅವನು ಎಷ್ಟು ಉದ್ವಿಗ್ನನಾಗಿದ್ದನೋ ಅಷ್ಟೇ ನಿಶ್ಚಿಂತನಾಗಿ ಡಾಕ್ಟರ ರೋಗಿಯ ರಟ್ಟೆಗೆ ಇಂಜಕ್ಷನ್ ಮಾಡುತ್ತ ಹೇಳಿದ

"ಸ್ವಲ್ಪ ಕೂಡು ಇಮಾಮ್. ಯಾಕ ಅವಸರಾ ಮಾಡ್ತಿ"

ಯಾರ ಹೊಟ್ಟೆ ಕಡಿದರೆ ಯಾರು ಅಜವಾನ ಮುಕ್ಕುವರು! ಇಂಥ ಎಷ್ಟೋ ಕೇಸುಗಳು ಬರುತ್ತವೆ ಹೋಗುತ್ತವೆ. ಡಾಕ್ಟರ ನಿರ್ಲಿಪ್ತನಾಗಿಯೇ ಇದ್ದ.

ಬರಗಾಲದಲ್ಲಿ ನೆಲಾ ಎದ್ದು ಬಡೆಯುತ್ತದೆ. ಎಂಬಂತೆ ರೋಗರುಜಿನದ ಹಾವಳಿಯೂ ಜನರನ್ನು ಹಣ್ಣು ಮಾಡಿತ್ತು ಊರಲ್ಲಿ ಯಾವದೋ ವಿಚಿತ್ರ ಒಂದು ರೋಗ ಹಬ್ಬಿತ್ತು.

ಡಾಕ್ಟರರಿಗಂತೂ ಬಿಡುವೇ ಇರಲಿಲ್ಲ ಹೊಟ್ಟೆಗೆ ಹಿಟ್ಟು ಇಲ್ಲವೆಂದು ಮೃತ್ಯುವಿನ ಬಾಯಿಗೆ ತಮ್ಮನ್ನು ನೂಕಿಕೊಳ್ಳಲು ಯಾರು ಬಯಸುತ್ತಾರೆ ?

ಡಾಕ್ಟರ ಅವನನ್ನು ಹತ್ತಿರ ಕರೆದು "ನೋಡು ಇಮಾಮ್-ಸ್ಪಷ್ಟ ಹೇಳ್ತೀನಿ, ಮೊದಲು ಫೀ ಕೊಡಬೇಕು ನೋಡು. ಅದ್ಕ ತಯಾರ ಇದ್ದೀ ಏನು?" ಅಂತ ಕೇಳಿದ.

ಒಮ್ಮೆಲೆ ಇಮಾಮನಿಗೆ ಏನು ಉತ್ತರಿಸಬೇಕು ತಿಳಿಯಲಿಲ್ಲ. ದೈನ್ಯದಿಂದ ಕೇಳಿದ.

"ಡಾಕ್ಟರ್ ನಿಮಗ ಗೊತ್ತು ಅದ ಅಲ್ಲರಿ ಈ ಬಡವನ ಮ್ಯಾಲೆ"

"ಹೌದು ಇಮಾಮ. ಈಗ ಕಾಲ ಎಂಥಾದ ಬಂದದ ನೋಡು"

"ಡಾಕ್ಟರ ಹ್ಯಾಂಗರ ಮಾಡ್ರಿ ಹೊಟ್ಟ್ಯಾಗ ಹಕ್ಕೊಳ್ರಿ" ಎಂದು ಇಮಾಮ ಬೇಡಿಕೊಂಡ.

ಡಾಕ್ಟರ ಸ್ವಲ್ಪ ಸಮಯ ಮೌನವಾಗಿದ್ದು 'ಪೇಪರವೇಟ್' ಟೇಬಲ್ ಮೇಲೆ ತಿರುಗಿಸಿ "ಆಗಲಿ 'ವಿಜಿಟ್ ಫೀ'-ಏನು ಕೊಡಬ್ಯಾಡ ಆದ್ರ ಔಷಧ ಮಾತ್ರ ರೊಕ್ಕ ಕೊಟ್ಟು ತಗೋಬೇಕು"

- ಎಂದ ಸ್ಪಷ್ಟ ಧ್ವನಿಯಲ್ಲಿ.

ಸದ್ಯ ಡಾಕ್ಟರರು ಮನೆಗೆ ಬಂದು ಫಾತಿಮಾಳನ್ನು ನೋಡುವದು ಬೇಕಾಗಿತ್ತು

'ಆಗಲಿ ಡಾಕ್ಟರ್' ಎಂದು ಒಪ್ಪಿಕೊಂಡ.

ಡಾಕ್ಟರ್ ನಂತರ ಇಮಾಮನನ್ನು ಅನುಸರಿಸಿದ

ಆಸ್ಪತ್ರೆಯಿಂದ ಮನೆ ದೂರ ಇರಲಿಲ್ಲ. ಐದು, ಹತ್ತು ನಿಮಿಷಗಳ ದಾರಿ.

ಡಾಕ್ಟರ್ ಒಳಗೆ ಬರುತ್ತಲೇ ಫಾತಿಮಾ ಕಷ್ಟಪಟ್ಟು ಎದ್ದು ಕುಳಿತಳು. ಮುಸುಕರಿಯುವ ಬಿಸಿ ಬಿಸಿ ಉಸಿರು ಬಾಯಿಂದ ಹೊಮ್ಮುತ್ತಿತ್ತು. ಜ್ವರದ ತಾಪಕ್ಕೆ ಶರೀರ ಹಿಂಡಿದಂತಾಗಿ ಗಂಟಲು ಸೇದುತ್ತಿರುವಂತೆ ಭಾಸವಾಗತೊಡಗಿತು

ಅಲ್ಲಿಯೇ ಇದ್ದ ಕೊಟ್ಟಿಗೆಯ ಪೆಟ್ಟಿಗೆಯ ಮೇಲೆ ಜಮುಖಾನೆ ಹಾಸಿ ಡಾಕ್ಟರನ್ನ ಕೂಡಿಸಿದ

ಫಾತಿಮಾಳ ಬಾಯಲ್ಲಿ ಥರ್ಮಾಮೀಟರ ಇರಿಸಿ ಜ್ವರದ ಏರಿಳಿತ ಪರೀಕ್ಷಿಸಿದ ಡಾಕ್ಟರ್. ಜ್ವರ ನಿರ್ದಿಷ್ಟ ಡಿಗ್ರಿ ಮೀರುವ ಸಂಭವವಿತ್ತು

ನಂತರ ಸ್ಟೆತಸ್ಕೋಪಿನಿಂದ ಎದೆಯ ಬಡಿತವನ್ನು ಪರೀಕ್ಷಿಸಿ

"ಈಗ ಒಂದು ಇಂಜಕ್ಷನ್ ಕೊಡ್ತೀನಿ" ಎಂದ.

"ಆಗಲಿ" ಎಂದು ಇಮಾಮ ತಲೆಯಲ್ಲಾಡಿಸಿದ.

ಡಾಕ್ಟರ ಶಂಕರ ಬ್ಯಾಗಿನೊಳಗಿಂದ ಇಂಜೆಕ್ಷನ್. ಟ್ಯೂಬ್ ಹೊರತೆಗೆದು ಔಷಧಿಯ ಶಿರಂಜದೊಳಗೆ ತುಂಬಿಕೊಂಡು ಫಾತಿಮಾಳ ರಟ್ಟೆಗೆ ಚುಚ್ಚಿದ.

ಡಾಕ್ಟರರು ಹೊರಡುವ ಮುನ್ನ ಇಮಾಮನನ್ನು ಹೊರಗೆ ಕರೆದು—

"ಇಲ್ನೋಡು—ಭಾಳಾ ಸೀರಿಯಸ್ ಅದ ಇದು. ಹೊಸಾ ತರಹದ ಜಡ್ಡು-ಜ್ವರಾ ಹಿಡಿತದೊಳಗ ತರಬೇಕು ಎರಡು—ಮೂರು ಇಂಜಕ್ಷನ್--ಔಷಧ ಬರದ ಕೊಡ್ತೀನಿ ತಗೊಂಡ ಬಾ."

—ಎಂದು ಹೇಳಿ ಹೊರಟುಹೋದ.

ಒಂದೆರಡು ಹೆಜ್ಜೆ ಮುಂದೆ ಹೋಗಿದ್ದ ಡಾಕ್ಟರ ಬಳಿ ಓಡಿ--

"ಡಾಕ್ಟರ್ ರೊಕ್ಕ ಎಷ್ಟು ಹಿಡಿತದ ಔಷಧಕ್ಕ?"

---ಎಂದು ತಡವರಿಸುತ್ತ ಕೇಳಿದ— ಇಮಾಮ.

ಡಾಕ್ಟರ ಹೇಳಿದರು.

"ಇಪ್ಪತ್ತು ಮೂವತ್ತು ರೂಪಾಯಿ ಸಹಜ ಆಗಬಹುದು. ಆದ್ರ ನಿರ್ವಾಹವಿಲ್ಲ ಏನೂ ಆಲಸ್ಯ ಮಾಡಬಾರದು" ಎಂದರು

"ಆಗಲಿ ಡಾಕ್ಟರ್.. ಹ್ಯಾಂಗರ ಮಾಡ್ತೀನಿ... ನಮಸ್ಕಾರ.."

—ಎಂದು ವಂದಿಸಿ ಇಮಾಮ ಒಳಗೆ ಬಂದ.

ಡಾಕ್ಟರ ಹೊರಟು ಹೋಗಿದ್ದರೂ ಅವರು ಆಡಿ ಹೋದ ನುಡಿಗಳು ಅವನ ತಲೆಯಲ್ಲಿ 'ಘಾನಿ ನಂತೆ' ಸುತ್ತಹತ್ತಿದ್ದವು

ಫಾತಿಮಾಳ ತಲೆಯ ಬಳಿ ಕುಳಿತು ಕೂದಲುಗಳ ಮೇಲೆ ಕೈಯಾಡಿಸಹತ್ತಿದ್ದ...

"ಈಗೇನು ಮಾಡ್ಲಿ...ಹಾದೀನ ಕಾಣ ಸವಲ್ತ...ಫಾತಿ......ಜೀವಾ ಅಪಾಯದಾಗ ಅದ...ಎಲ್ಲೀದ ಆದ್ರು ರೂಪಾಯಿ ತಗೊಂಡು ಬರಲಿಕ್ಕೆಬೇಕು ಔಷಧ ಔಷಧ...ಓ ಏನ ಮಾಡ್ಲಿ...ಯಾರ್ನ ಕೇಳಲಿ"

"ಧನೇರ್ನ...ಛೆ...ಛೇ ಪಾಪಾ ಅವರಾದ್ರು ಎಲ್ಲಿಂದ ತರಬೇಕು...ಮತ್ತ--ಮತ್ತ..."

ಇಮಾಮನ ಹೃದಯದಿಂದ ಅಕ್ಷಯ ಯೋಜನೆಗಳು ಸೂಸಹತ್ತಿದ್ದವು

"ಏನ ಇಚಾರಾ ಮಾಡಾಕ ಹತ್ತಿಅಲ್ಲ" ಅವನ ಕಡೆಗೆ ಹೊರಳಿ ಕೇಳಿದಳು ಫಾತಿಮಾ.

"ಏನೂ ಇಲ್ಲ ನೀ ಲಗೂ ಆರಾಮ ಆಗ್ಲೀ ಮಲಕೋ..."

ಅವನ ಮೊಗದ ಮೇಲಿನ ನಿರಾಶಾ ರೇಖೆಯನ್ನು ಗುರುತಿಸದೇ ಇರಲಿಲ್ಲ ಫಾತಿಮಾ. ಮೆಲ್ಲಗೆ ಮುಗುಳ್ನಗುತ್ತ—

"ಹಿರ್ರ್ಯಾ ಏನೂ ಕಾಳಜೀ ಮಾಡಬೇಡ--ನಾ ಎಲ್ಲಾ ಆರಾಮ ಆಗ್ತೀನಿ... ಔಷಧಾ-ಗಿವಸದಾ ಏನೂ ತರಬ್ಯಾಡಾ..."---ಮೆಲ್ಲಗುಸುರಿದಳು.

ಇಮಾಮು ಅವಳ ಹಣೆಯ ಮೇಲೆ ಕೈಯಾಡಿಸಿದ.

ಅದೇ ಯೋಜನೆ...ಏನು--ಮಾಡಬೇಕು-- ಹೌದು ಹೌದು. ಧನೇರು ಎಲ್ಲಿಯೋ ಹೋಗ್ಯಾರ...ಮನ್ಯಾಗೂ ಇಲ್ಲ...ಕೀಲಿ ತಗದು ಎಲ್ಲಾದ್ರೂ ಸಿಗ್ತದ ಹ್ಯಾಂಗ ನೋಡಲ್ಯಾ... ಹೌದು.........ಮನೀತುಂಬ ಹುಡುಕ್ಯಾಡಿ ಬಿಡ್ತೀನಿ...

ಧಿಗ್ಗನೆ ಎದ್ದ ಇಮಾಮು ನಿರ್ಧಾರ ಅವನ ಕೈಹಿಡಿದು ಎಳೆಯಿತು.

"ಎಲ್ಲಿಗೆ ಹೊಂಟ?"...

-ಫಾತಿಮಾ...ಆಶ್ಚರ್ಯದಿಂದ ಕೇಳಿದಳು.

"ಈಗ ಬರ್ತೀನಿ ಫಾತಿ ಮಲಕೋ...ನೀನು ತುಂಬ ಹೊತಗೋ--ಅಂದ್ರ ಜ್ವರ ಬಿಡ್ತಾವ"

—ಎಂದು ಕಂಬಳಿ ಹೊದಿಸಿ--ಕೋಣೆ ಗೋಡೆಗೆ ಹಾಕಿದ ಕೀಲೀಕೈ ತೆಗೆದುಕೊಂಡು ಒಡೆಯನ ಮನೆಗೆ ಓಡಿದ

ಕಿರ್ರನೆ ಬಾಗಿಲ ತೆರೆಯಿತು ಭಣಗುಡುವ ಆ ಭವ್ಯವಾದ ಮನೆ ಹಾಳು ಹಂಪೆಯ ಮನೆಯಂತೆ ಗೋಚರಿಸುತ್ತಿತ್ತು.

ನಡುಮನೆಯ ತೂಗುಮಂಚ ನಿರಾಶೆಯಿಂದ ನೇತು ಹಾಕಿಕೊಂಡವನಂತೆ ಗಾಳಿಗೆ ಆಗಾಗ ಹೊಯ್ದಾಡುತ್ತಿತ್ತು.

ನಡುಮನೆಯಲ್ಲಿಯೇ ಇದ್ದ ಮೆಟ್ಟಿಲುಗಳ ನ್ನೇರಿ ನೇರವಾಗಿ ಮಹಡಿಯ ಕೋಣೆಗೇ ಹೋದ. ಇನ್ನೂ ಕೋಣೆಯೊಳಗೆ ಕಾಲಿರಿಸಿದ್ದನೋ ಇಲ್ಲೋ--ಎದುರುಗಡೆಯ ಗೋಡೆಗೆ ತೂಗು ಹಾಕಿದ ಚಿತ್ರಪಟ ಅವನನ್ನು ಹಿಡಿದು ನಿಲ್ಲಿಸಿತು

—೮—

ಅದು ಗೋಪಾಲರಾಯರ ಮಗಳ ಸುಮಾಳ ಚಿತ್ರಪಟ...ಸುಮಾ...ಸುಮಾ... (ಇದು ನನ್ನ ನೆಳಲು...ನೆನಪು...)

ಆ ಹೆಸರನ್ನು ಆಲಿಸಿದ ಮಾತ್ರದಿಂದಲೇ ನನ್ನ ಹೃದಯ ವೀಣೆಯ ನೂರಾರು ತಂತಿಗಳು ಒಮ್ಮೆಲೇ ಮಿಡಿದವು. ಕನಸಿನ ಕಾಮನ ಬಿಲ್ಲು ಹೆದೆ ಏರಿಸಿದೆ. ಇದೊಂದು ಗುರುತ್ವಾಕರ್ಷಣ ಬಿಂದು ನೆನಪು.

ಗೋಪಾಲರಾಯರ ಕಂಪೌಂಡಿನಲ್ಲಿ ಇದ್ದುದು ಒಂದೇ ಒಂದು ಔಟಹೌಸ್ ಆ ಮನೆಗೆ ನಾವು ಭಾಡಿಗೆಗೆ ಬಂದಾಗ ಬಹುಶಃ ನನಗಾಗ ಒಂಭತ್ತು ವರುಷ ಇರಬಹುದು.

ರಾಯರ ಮನೆಯ ಭವ್ಯಾಕಾರ ಕಂಡು ಬೆರಗಾಗಿ ಹೋಗಿದ್ದೆ, ಆಕಾಶ ಮಲ್ಲಿಗೆ ಗುಲಾಬಿ, ದುಂಡುಮಲ್ಲಿಗೆ, ಮರನಮುಷ್ಟಿ ಮುಂತಾದ ಕುಸುಮ ಬಳ್ಳಿಗಳಿಂದ ಆವೃತವಾಗಿ ಪೇರಲ, ಮಾವು, ಅಂಜೂರು ವೃಕ್ಷಗಳಿಂದ ಶೋಭಾಯಮಾನವಾಗಿ ಆ ಮನೆ ನಂದನವನದಲ್ಲಿ ನಿಂತಿತ್ತು

ಎಷ್ಟೋ ದಿವಸಗಳವರೆಗೆ ನನಗೆ ಆ ಮನೆಯಲ್ಲಿ ಯಾರು ಯಾರು ಇದ್ದರು ಎಂಬುದು ಪತ್ತೆಯೇ ಹತ್ತಿರಲಿಲ್ಲ ಹಳ್ಳದ ಪ್ರವಾಹದೊಂದಿಗೆ ಫಾತಿಮಾಳನ್ನು ದಂಡೆಗೆ ಕರೆದುಕೊಂಡು ಬಂದು ಆಗಲೆ ಎಷ್ಟೋ ವರುಷಗಳಿಂದ ಗೋಪಾಲರಾಯರ ಮನೆಯಲ್ಲಿಯೇ ಸೇವೆಗೆ ನಿಂತಿದ್ದ. ಇಮಾಮನದು ಮಾತ್ರ ಪರಿಚಯವಾಗಿತ್ತು.

ಸ್ವಾಮಿನಿಷ್ಠೆ, ಪ್ರಾಮಾಣಿಕತೆಯಿಂದ ಇಮಾಮು ಗೋಪಾಲರಾಯರ ಹೃದಯವನ್ನು ಗೆದ್ದುಬಿಟ್ಟಿದ್ದ. ಮನೆಯ ಕಾರಭಾರವನ್ನೊಳಗೊಂಡು ಟಾಂಗಾ ಹೊಡೆಯುವ ಕೆಲಸದ ವರೆಗೂ ಇವನದೇ ಅಧಿಕಾರ.

ರಾಯರು ಎಂದೂ ಅವನ ವಿಷಯವಾಗಿ ತಪ್ಪು ಗ್ರಹಿಸಲಿಲ್ಲ

ಫಾತಿಮಾ ಸಹ ಆ ಮನೆಯಲ್ಲಿ ಪತಿಯಂತೆ ಹೊಂದಿಕೊಂಡಿದ್ದಳು. ಸೀತಾಬಾಯಿಗೂ ಅವಳೆಂದರೆ ಅಷ್ಟೇ ಅಕ್ಕರೆ...

ಮದುವೆಯಾಗಿ ಐದಾರು ವರುಷವಾದರೂ ಸೀತಾಬಾಯಿ ಒಳಗೊಳಗೆ ಕೊರಗಹತ್ತಿದ್ದರು

ಅವರು—

"ದೇವಾ ಮಂಚಾಲಿರಾಯಾ—ನನ್ನ ಉಡಿಯೊಳಗ ಒಂದು ಕೂಸು ಬಂದರ ಮಂಚಾಲಿಗೆ ಬಂದು ಹಸ್ತೋದಕ ಮಾಡ್ಸಿ ಬಂಗಾರದ ಕಣ್ಣು ಬಟ್ಟು ಮಾಡಿಸಿಕೊಡ್ತೀನಿ" ಎಂದು ಹರಕೆ ಹೊತ್ತಿದ್ದರು.

ಫಾತಿಮಾ ಒಡತಿಯ ಮನದ ಇಂಗಿತವನ್ನರಿತು ಹಲವಾರು ಸಲ ಸಂತೈಸಿದ್ದಳು.

"ಅಮ್ಮಾವ್ರ ಮಕ್ಳು ಮಕ್ಳು ಅಂತಾ ಕೊರಗಿ ಕೊರಗಿ ಸೊರಗಿ ಕಡ್ಡಿ ಆಗಾಕಹತ್ತೀರಿ ಇದ್ರಿಂದ ಏನು ಫಲಾ ಐತೆ ಹೇಳ್ರಿ-ನಾನು ಯಾವ ಚಿಂತೇನೂ ಇಲ್ದ ಇದ್ದ ಬಿಟ್ಟೇನಿ ನೋಡ್ರಿ ಕೊಡೊ ದೇವ್ರು ಕಣ್ಣು ತಗೀಬೇಕು"—

"ಫಾತಿಮಾ—ಹೆಣ್ಣಿಗೆ ಐಶ್ವರ್ಯ ಸಂಪತ್ತು ಏನೂ ಇರದಿದ್ದರ ಚಿಂತೆಯಿಲ್ಲ ಬಂಜಿತನ ಮಾತ್ರ ಬರಬಾರದು ನೋಡು—ತಾಯ್ತನದ ಸುಖಾ ಸಿಗದಿದ್ದರ ಹೆಣ್ಣಾಗಿ ಹುಟ್ಟಿ ಏನು ಪ್ರಯೋಜನ ಹೇಳು?"

"ಮತ್ತೇನು ಮಾಡೋದು ಹೇಳ್ರಿ—ಮಂದಿ ಮಕ್ಕಳs ನಮ್ಮ ಮಕ್ಕಳು ಅಂತ ತಿಳಕೋಬೇಕು."

"ಅದೆಲ್ಲ ಖರೇವು ಫಾತಿಮಾ, ನನ್ಗ ಎಲ್ಲಾ ಮಕ್ಕಳು ಅಂದ್ರ ಪ್ರೀತಿ—ಆದ್ರ—ಎಲ್ಲಾರೂ ನನ್ನ ಮಕ್ಕಳ ಅಂತ ಅನಕೊಂಡು ಮನಸ ತೃಪ್ತಿ ಪಡಿಸಿಕೊಳ್ಳೋ ಶಕ್ತಿ ನನ್ನಂಥ ಸಾಮಾನ್ಯ ಸ್ತ್ರೀಗೆ ಹ್ಯಾಂಗ ಬರಬೇಕು ಹೇಳು''. ಎಂದು ಸೀತಾಬಾಯಿ ನುಡಿದಾಗೆಲ್ಲ ಕಣ್ಣೀರು ಸುರಿಸುತ್ತಿದ್ದರು.

ಇದೇನೇ ಇರಲಿ, ಮಂಚಾಲಿ ರಾಘವೇಂದ್ರ ಸ್ವಾಮಿಗಳು ಸೀತಾಬಾಯಿಯ ಮೊರೆಯನ್ನಾಲಿಸಿದರೋ ಏನೊ, ಮದುವೆ ಆಗಿ ಆರೇಳು ವರುಷಗಳ ನಂತರ ಸುಮಾ ಜನಿಸಿದಳು.

ಗೋಪಾಲರಾಯರ ಸಂತಸಕ್ಕೆ ಮಿತಿ ಇರಲಿಲ್ಲ. ಸ್ವರ್ಗದ ಸಿರಿಯೇ ಮನೆ ತುಂಬಿದಂತಿತ್ತು. ಸೀತಾಬಾಯಿಗೆ

ವೈಮನಸಗಳು ಹಗುರಾಗಿ ಅವರ್ಣನೀಯ ಆನಂದ ಕಂದನ ರೂಪದಲ್ಲಿ ಹೊರಬಂದಂತಾಗಿತ್ತು.

ಅಷ್ಟೇ ಇಮಾಮ ಫಾತಿಮಾ ಹರುಷದ ಹೊಳೆಯಲ್ಲಿ ಮಿಂದಿದ್ದರು

(ಮುಂದೆ ಸುಮಾ ಏಳೆಂಟು ತಿಂಗಳುಗಳಾದ ಮೇಲೆ ಎಲ್ಲರೂ ಮಂತ್ರಾಲಯಕ್ಕೆ ತೆರಳಿ ತಮ್ಮ ಹರಕೆಯನ್ನು ಪೂರೈಸಿ ಬಂದರು)

ಅಂದು ಪುಟ್ಟ ಸುಮಾಳ ಸುತ್ತ ಆಟಗಿ ಸಾಮಾನುಗಳನ್ನು ಹರವಿ ರಾಯರು ಪೀಪಿ ಊದಿ ಆಡಿಸಹತ್ತಿದರು.

ಸುಮಾ ಕೇಕು ಹಾಕುತ್ತ ತನ್ನ ಪುಟ್ಟ ಪುಟ್ಟ ಕರಗಳಿಂದ ರಾಯರ ಮುಖವನ್ನು ಪರಚಿಕೊಳ್ಳಹತ್ತಿದಳು. ರಾಯರು ಎತ್ತರಾದ ದನಿಯಲ್ಲಿ ತಮ್ಮ ನಗುಬೀಳಿಸ ಹತ್ತಿದ್ದರು.

"ಮಗಳಿಸರೆ ಆಡಕೊತ ಕೂತರ ನಿಮಗ ಜಗತ್ತು ಮರತಹೋಗ್ತದ ನೋಡ್ರಿ ಸ್ನಾನ ನೀರು ಇಲ್ಲೇನು?" ಸೀತಾಬಾಯಿ ಚೇಷ್ಟೆ ಮಾಡಿದಳು.

"ಇರಲಿ ಬಿಡು. ಆಮ್ಯಾಲೆ ಮಾಡಿದ್ರಾತು ನೋಡುಬಾ ಸುಮಾ ಹ್ಯಾಂಗ ಆಡಲಿಕ್ಕೆ ಹತ್ಯಾಳ"

ಎಂದು ಹೆಂಡತಿಯನ್ನು ಕರೆದು ಕೂಡಿಸಿದರು.

ಸೀತಾಬಾಯಿ ಸ್ವಲ್ಪಹೊತ್ತು ತಂದೆ ಮಗಳ ಆಟದಲ್ಲಿ ತಾವೂ ಭಾಗಿಯಾಗಿ "ನನಗ ಕೆಲಸ ಅದ"—

ಎಂದು ಒಳಗೆ ಹೊರಟುಹೋದರು.

ಅದನ್ನೆಲ್ಲ ನೋಡಿ ಬಾಗಿಲ ಬಳಿ ಬಂದು ನಿಂತ ಇಮಾಮನ ಮನಸ್ಸು ತುಂಬಿ ಬಂತು.

''ಸುಮಕ್ಕ ಭಾಳ ಖುಷಿಯೊಳಗ ಇದ್ದಾಳಲ್ಲ."

-ಎಂದ.

ರಾಯರು ಇಮಾಮನ ಕಡೆಗೆ ಹೊರಳಿ ನುಡಿದರು.

'ಬಾ-ಇಮಾಮ ನಿನಗೂ ಒಂದು ಖುಷಿ ಸುದ್ದಿ ಹೇಳಬೇಕಾಗೇದ."

''ಅದೇನು ಸಾಬ್?"

'ಗುಡ್ಡದ ಹತ್ತರದ ಹೊಲಾ ಹ್ಯಾಂಗದ?"

''ಭಾಳ ಛಲೊ ಅದ ಸಾಬ್"

''ಅದನ್ನ ನಿನ್ನ ಹೆಸರಿಗೆ ಮಾಡ್ತೀನಿ"

-ಎಂಬ ರಾಯರ ನುಡಿ ಕೇಳಿ ಇಮಾಮನಿಗೆ ಆಶ್ಚರ್ಯವಾಯಿತು. ತನ್ನ ಕಿವಿಗಳನ್ನೇ ನಂಬದಾದ.

''ಅದು ನನಗ್ಯಾಕೆ ಸಾಬ್?"

''ನೋಡು ಇಮಾಮ-ನೀ ಈ ಮನೀಗೆ ಕಾಲಿಟ್ಟ ಮ್ಯಾಲೆ ಸುಮಾ ಹುಟ್ಟಿದ್ದು. ಆಕಿ ನೆನಪಿನ ಸಲುವಾಗಿ"

''ಸಾಬ್ ನನ್ನ ಹೆಸರೀಲೆ ಯಾಕ ಇದೆಲ್ಲ. ನಿಮ್ಮ ಹೆಸರಿನ್ಯಾಗ ಇರಲಿ. ನಿಮ್ಮ ಹೆಸರಲೇನ ನನ್ನ ಮನಿ ದೀಪಾ ಹಚ್ಚಿಗೋತೀನಿ."

' ಇರಲಿ ಇಮಾಮ ನಿಮ್ಮ ಜೀವನಕ್ಕ ಸಹಾಯ ಆಗ್ತದ..."

-ಎಂದು ರಾಯರು ಒತ್ತಾಯದಿಂದ ಆ ಕಾಣಿಕೆ ಕೊಟ್ಟರು.

ಒಡೆಯನಿಗೆ ಹೇಗೆ ತನ್ನ ಕೃತಜ್ಞತೆಗಳನ್ನು ಸೂಚಿಸಬೇಕು ಇಮಾಮನಿಗೆ ಹೊಳೆಯಲಿಲ್ಲ. ಆದರೆ ಅವನ ಕಣ್ಣುಗಳಾಗಲೇ ವಂದಿಸಿದ್ದವು.

—೯—

ಗೋಪಾಲರಾಯರ ಜೀವನ ವಿಲಾಸಮಯವಾಗದಿದ್ದರೂ ಎಲ್ಲವನ್ನೂ ಹಗುರಾಗಿ ತೆಗೆದುಕೊಳ್ಳುವ ಸ್ವಭಾವ. ಮೊದಲಿನಿಂದಲೂ ಇಸ್ಪೇಟ್ ಆಟವೆಂದರೆ ಬಲು ಇಷ್ಟ. ಗೆಳೆಯರೊಂದಿಗೆ ಆಡುತ್ತ ಕುಳಿತರೆ ಇಡೀ ರಾತ್ರಿ ಊಟವಿಲ್ಲದೇ-ಆಟದಲ್ಲಿ ಮಗ್ನರಾಗಿ ಕಳೆಯುತ್ತಿದ್ದರು.

ಯಾವಾಗಲಾದರೊಮ್ಮೆ ಇವರ ಮನೆಯಲ್ಲೆ ಬೈಠಕ್ ಸೇರುತ್ತಿತ್ತು.

ದಿನಾಲು ಮಾತ್ರ ಕ್ಲಬ್ಬಿನಲ್ಲಿ ಹಾಜರಿ ಇರಲೇಬೇಕು ಆಟ ರಂಗಿಗೇಳುತ್ತಿದ್ದುದ್ದು ಆಗಾಗ ಸೋಡಾ, ವಿಸ್ಕಿ ಸಪ್ಲೈ ಆದಾಗಲೇ.

ರಾಯರಿಗೆ ಕುಡಿಯುವದು ಇಸ್ಪೇಟ್‌ದ ಹೊರತಾಗಿ ಮತ್ತಾವ ಚಟವೂ ಇರಲಿಲ್ಲ. ಇವರ ಗೆಳೆಯರೆಲ್ಲ ಸೂಳೆಗಾರಿಕೆಗೂ ಬಲಿಯಾಗಿ

# ದೀಪಾವಳಿಯ ದಿನಗಳಲ್ಲೂ ನಮ್ಮ ಏಕಮಾತ್ರ ಗ್ರಾಹಕ





ಹಾಗೆಂದು ಅವನು ಭಾವಿಸುತ್ತಾನೆ. ಅವನೀಗ ಸಹಜವಾಗಿಯೂ ಸುಖಿ. ನಿಜವಾಗಿಯೂ ಸಮೃದ್ಧಿಶಾಲಿ. ಹಾಗೆ ಭಾವಿಸುವುದು ಸೂಕ್ತವೆ. ಅವನ ವ್ಯವಹಾರವು ವೃದ್ಧಿಯಾಗುತ್ತಿದೆ. ನಮ್ಮಲ್ಲಿ ಅವನ ಹಣವು ಸುರಕ್ಷಿತವಾಗಿದೆ ಮತ್ತು ಬಡ್ಡಿಯನ್ನೂ ಸಂಪಾದಿಸುತ್ತಿದೆ. ಅವನ ಅಮೂಲ್ಯ ವಸ್ತುಗಳೂ ಸುರಕ್ಷಿತವಾಗಿವೆ. ನೀವು ಹೇಳಬಹುದು, ಅವನ ಸೇವೆಯನ್ನು ನಾವು ಎಷ್ಟು ಆಸ್ಥೆಯಿಂದ ಮಾಡುತ್ತೇವೆಂದರೆ ಅವನೊಬ್ಬನೇ ನಮ್ಮ ಗ್ರಾಹಕನೆನ್ನುವಷ್ಟು ಮಟ್ಟಿಗೆ! ಆದುದರಿಂದ ಅವನು ಸ್ವಾಭಾವಿಕವಾಗಿಯೇ ತೃಪ್ತನಾಗಿದ್ದಾನೆ. ದೀಪಾವಳಿಯನ್ನು ನಿಶ್ಚಿಂತೆಯಿಂದ ಆಚರಿಸುತ್ತಿದ್ದಾನೆ. ನಾವು ಅವನಿಗೆ—ಮತ್ತು ನಮ್ಮ ಲಕ್ಷಗಟ್ಟಲೆ ಅವನಂತಹ ''ಒಬ್ಬರೇ'' ಗ್ರಾಹಕರಿಗೆ—ದೀಪಾವಳಿಯು ಹರ್ಷದಾಯಕವೂ, ಸಮೃದ್ಧಿಶಾಲಿಯೂ ಆಗಲೆಂದು ಕೋರುತ್ತೇವೆ.

ವಜ್ರ ಮಹೋತ್ಸವ 1908-1968




ನೀವು ಎಂದೆಂದೂ ಸಮೃದ್ಧಿಶಾಲಿಗಳಾಗಿರಲು

**ದಿ ಬ್ಯಾಂಕ್ ಆಫ್ ಬರೋಡಾ ಲಿಮಿಟೆಡ್**

(ಸ್ಥಾಪನೆ : 1908) ರಿಜಿಸ್ಟರ್ಡ್ ಆಫೀಸು : ಮಾಂಡ್ವಿ, ಬರೋಡಾ
ಭಾರತದಲ್ಲಿ ಮತ್ತು ವಿದೇಶಗಳಲ್ಲಿ 300ಕ್ಕಿಂತಲೂ ಹೆಚ್ಚು ಶಾಖೆಗಳಿವೆ.

Shilpi BOB 20A/68 Kan

ದ್ದರು. ಆದರಿಂದ ಮಾತ್ರ ಸದಾ ಇವರು ದೂರ ಇರುತ್ತಿದ್ದರು.

ಸುಮಾ ಹುಟ್ಟಿದ ಮೇಲಂತೂ ತಮಗೆ ಸಮಾಜದಲ್ಲಿ ಪ್ರತಿಷ್ಠೆ ದೊರಯಿತೆಂದು ಬಗೆದರು ಕ್ಲಬ್ಬಿನ ಸೆಳೆತವು ಜೋರಾಯಿತು.

ಒಂದು ಸಲ ರಾತ್ರಿ ಹನ್ನೆರಡು ಗಂಟೆ ಆದರೂ ಕ್ಲಬ್ಬಿನಿಂದ ಮನೆಗೆ ಬಾರದ್ದಕ್ಕೆ ಸೀತಾ ಬಾಯಿಗೆ ಭಯವಾಯಿತು. ಇಮಾಮನನ್ನು ಕರೆದು.

"ಅವರು ಇವತ್ಯಾಕೊ ಇನ್ನೂ ಬರಲಿಲ್ಲ ಸ್ವಲ್ಪ ನೋಡಿಕೊಂಡು ಬಾ."

ಎಂದು ಹೇಳಿದರು ಮನದಲ್ಲಿಯೇ ಅವರು ಸುರಕ್ಷಿತವಾಗಿರಬೇಕೆಂದು ಮಂಚಾಲಿರಾಯರಿಗೆ ಬೇಡಿಕೊಂಡರು.

ಸೀತಾಬಾಯಿಯ ಹೃದಯದ ಆಳವನ್ನು ಅರಿತ ಇಮಾಮ,

"ಅಮ್ಮಾವ್ರ ಏನೂ ಗಾಬರಿ ಆಗಬ್ಯಾಡ್ರಿ, ನಾ ಎಲ್ಲಾ ಕರಕೊಂಡು ಬರ್ತೀನಿ"

ಎಂದು ಧೈರ್ಯ ನೀಡಿ ಟಾಂಗಾಕ್ಕೆ ಕುದುರೆಯನ್ನು ಕಟ್ಟಿ ಹೊಡೆದುಕೊಂಡು ಹೊರಟ.

ರಾಯರು ಎಲ್ಲಿ ಹೋಗಿರಬೇಕು? ಎಂದೂ ಇಷ್ಟು ತಡಮಾಡಿದವರಲ್ಲ. ಏನು ಸಾಹುಕಾರ ಹತ್ತರ ಕರಕೊಂಡು ಹೋದ್ನ, ಆ ಹಕೀಮ ಸಾಬ್.

ದಾರಿಯುದ್ದಕ್ಕೂ ಅದೇ ಯೋಚನೆ ಇಮಾಮನಿಗೆ ಕುದುರೆ ತ್ವರಿತ ಗತಿಯಲ್ಲಿ ಓಡಿ ಕ್ಲಬ್ಬಿನ ಬಳಿ ಬಂದು ನಿಂತಿತು.

ಬಾಗಿಲ ಬಳಿ ನಿಂತ ಆಳನ್ನು ಇಮಾಮ ಟಾಂಗಾದಲ್ಲಿಯೇ ಕುಳಿತೇ,

"ಸಾಹೇಬ್ರು ಹೋದ್ರೇನು?"

ಎಂದು ಕೇಳಿದ.

"ಹುಂ! ಹೋಗಿ ಭಾಳ ಹೊತ್ತಾತು. ಯಾಕ ಮನೀಗೆ ಬರಲೇ ಇಲ್ಲ ಏನು?"

ಎಂದು ಅವನು ಉತ್ತರಿಸುವಷ್ಟರಲ್ಲಿ ಇಮಾಮ ಹಕೀಮಸಾಬನ ಸೂಳೆ 'ಗುಲಾಬಿ'ಯ ಮನೆಯತ್ತ ನಡೆದ.

ಟಾಂಗಾನಿಂತ ಸದ್ದು ಕೇಳಿ 'ಗುಲಾಬಿ' ಹೊರಗೋಡಿ ಬಂದಳು. ಕಾಲಗೆಜ್ಜೆ ಘಲ ಘಲಿಸಿದವು. ಬಾಯಲ್ಲಿ ಅರ್ಧ ಸವಿದ ಬೀಡಾ ರಸ ಬಿಟ್ಟಿತ್ತು. ಕೃತ್ರಿಮವಾಗಿ ಉಂಗುರುಂಗುರ ವಾಗಿ ಕೂದಲನ್ನು ಹಣೆಯ ಮೇಲೆ ಚದುರಿಸಿಕೊಂಡಿದ್ದಳು.

"ಧನೇರು ಬಂದಾರೇನ್ರಿ...?"

ಇಮಾಮ ಟಾಂಗಾದಿಂದ ಇಳಿದು ಕೇಳಿದ. ಥಟಕ್ಕನೆ ಉಗುಳಿ ಗುಲಾಬಿ ಕೇಳಿದಳು.

"ಯಾರು?"

"ಗೋಪಾಲರಾಯರು..."

"ಅವರ್ಯಾಕ ಇಲ್ಲೆ ಬರ್ತಾರ?"

"ಹಕೀಮಸಾಹೇಬ್ರ ಸರಿ ಬಂದಾರೇನೊ ಅಂತಿ..."

"ಇಲ್ಲ ಇನ್ನೂ ಹಕೀಮಸಾಬ್ರು ಸಹಿತ ಬಂದಿಲ್ಲ"

ಗುಲಾಬಿಯ ಮನದಲ್ಲಿಯೂ ಏನೇನೋ ವಿಡಿತವಿತ್ತು.

"ಹೆಣ್ಣುಜೀವ ಎಷ್ಟಂದರೂ"

- ಎಂದುಕೊಂಡು ಇಮಾಮ ಹೋದ.

ಒಡೆಯ ಹೆಣ್ಣಿನ ಸವಿಗೆ ಬಿದ್ದಿಲ್ಲವೆಂಬುದೊಂದೇ ಅವನಿಗೆ ಸಮಾಧಾನ. ಆದರೆ ರಾಯರು ಈಗ ಎಲ್ಲಿರಬಹುದು. ಟಾಂಗಾದ ಗತಿಯೊಂದಿಗೆ ಯೋಚಿಸುತ್ತ ಹೊರಟ

ಒಮ್ಮೆಲೆ ಅವನಿಗೆ ಪೋಸ್ಟ್ ಆಫೀಸ್ ಬಳಿ ಬಂದಾಗ ಅದರ ಹಿಂದೆ ಇದ್ದ 'ಬಾರ್'ದ ನೆನಪಾಯಿತು. ಟಾಂಗಾ ಆ ಕಡೆಗೆ ಹೊರಳಿಸಿದ.

ಬಾರಿನ ಒಳಗೆ ಗೋಪಾಲರಾಯರು. ಹಕೀಮ ಸಾಬ ನಿಶೆ ಏರಿ ಎಚ್ಚರವಿಲ್ಲದೆ ಬಿದ್ದುಬಿಟ್ಟಿದ್ದರು. ಗೋಪಾಲರಾಯರ ತಲೆ ಆರಾಂ ಖುರ್ಚಿಯ ಕೈಗೆ ಒರಗಿತ್ತು.

"ಸಾಬ್ ...ಸಾಬ್"

-ಒಂದೆರಡು ಸಲ ಹತ್ತಿರ ನಿಂತು ಕೂಗಿದ ಇಮಾಮ ಆಗಲೂ ರಾಯರಿಗೆ ಎಚ್ಚರ ಬರಲಿಲ್ಲ. ಮೆಲ್ಲನೆ ಅವರ ಭುಜ ಅಲ್ಲಾಡಿಸಿ

'ಸಾಬ್ ಮನೀಗೆ ನಡೀರಿ...ಅಮ್ಮಾ ಅವ್ರು ಹಾದೀ ಕಾಯ್ತಾರಾ..." ಎಂದು ಎಬ್ಬಿಸಿದ.

ಕಣ್ಣುರೆಪ್ಪೆ ಮೆಲ್ಲಗೆ ಬಿಡಿಸಿಕೊಳ್ಳುತ್ತ

"ಯಾಕೊ? ಯಾರೊ? ನನ್ನ ಹಾದಿ ಕಾಯುವರು."

"ಈ ಬಡ್ಡಿಯ ಮಕ್ಕಳು ಇವತ್ತ ನನ್ನ ರೊಕ್ಕಾ ಎಲ್ಲಾ ಸುಲಿದರು....ಅವರ ಚರ್ಮ ಸುಲಿಸ್ತೀನಿ..."

ಎಂದು ರಾಯರು ಏನೇನೋ ಬಡಬಡಿಸ ಹತ್ತಿದರು.

"ಬಾರ್ ಬಾಯ್"ಸಹಾಯದಿಂದ ಇಮಾಮ ಗೋಪಾಲರಾಯರನ್ನು, ಹಕೀಮ ಸಾಬನನ್ನು ಟಾಂಗಾದಲ್ಲಿ ಕೂಡಿಸಿಕೊಂಡು ನಡೆದ.

ಹಾದಿಯಲ್ಲಿ ಗುಲಾಬಿಯ ಮನೆಯಲ್ಲಿ ಹಕೀಮಸಾಬನನ್ನು ಇಳಿಸಿದ. ಗುಲಾಬಿ ಕೃತಜ್ಞತೆ ಸೂಚಿಸಿದಳು.

ಗುಲಾಬಿಯ ನೀಳ್ತೋಳುಗಳಿಗೆ ಜೋತು ಬಿದ್ದ ಹಕೀಮಸಾಬ್ ಜೋಲಿಹೊಡೆಯುತ್ತ ಒಳಗೆ ಹೋದ.

ರಾಯರಿಗೆ ಮನೆ ತಲುಪುವಷ್ಟರಲ್ಲಿ ಸ್ವಲ್ಪ ನಿಶೆ ಇಳಿದಿತ್ತು. ಸೀತಾಬಾಯಿ ಗಾಬರಿಯಿಂದ ಅಡರಾಸಿ ಓಡಿಬಂದಳು. ಅವರು ಅಷ್ಟೊಂದು ಕುಡಿದದ್ದು ಅದೇ ಮೊದಲ ಸಲ ಇರಬೇಕು.

ಇಮಾಮನ ಆಸರೆಯಿಂದ ಒಳಗೆ ಬಂದು ಖುರ್ಚಿಯಲ್ಲಿ ಕುಳಿತರು. ಇಮಾಮ ಹೊರಟು ಹೋದ.

ಸ್ವಲ್ಪ ಹೊತ್ತಿನ ಮೇಲೆ ಕುಳಿತಲ್ಲಿಯೇ "ಸೀತ"....

-ಎಂದು ಕೂಗಿ ಕರೆದರು.

"ನನೆ"

ಸೀತಾಬಾಯಿ ಬಾಗಿಲ ಬಳಿ ನಿಂತು ಕೊಂಡಳು,

"ಸುಮಾ.. ಎಲ್ಲಿ..?"

"ಮಲಕೊಂಡು ಭಾಳ ಹೊತ್ತು ಆತು..."

"ಇಷ್ಟ ಲಗು?"

"ಹೂಂ! ಲಗು ಮಧ್ಯರಾತ್ರಿ, ಆಗಿಹೋಗೇದ ಪಾಪಾ ಆ ಕೂಸು ನಿಮ್ಮ ಹಾದಿ ನೋಡಿ ನೋಡಿ ಮಲಕೊಂಡಿತು"

- ಬಿರುಸಾಗಿ ಉತ್ತರಿಸಿದಳು ಸೀತಾಬಾಯಿ."

'ಹೂಂ' ಅಲಕ್ಷ್ಯದಿಂದ ಮತ್ತೆ ಕಣ್ಣು ಮುಚ್ಚಿದರು.



"ಏನ್ರಿ ಊಟ ಮಾಡೋದಿಲ್ಲೇನು?"

"ಇಲ್ಲ ನನ್ಗ ಏನೂ ಬ್ಯಾಡಾ"

"ನಿಮ್ಗ ಎಷ್ಟ ಸರೆ ಹೇಳ್ಳಿ ಸುಟ್ಟಬರಲಿ ಈ ಕೆಟ್ಟ ಚಟಾ ಬಿಡ್ರಿ ಅಂತ ಒಂದಿಲ್ಲ ಒಂದು ದಿನ ಇದು ನಮ್ಮ ಹಾಳಮಾಡ್ತದ ಸ್ವಲ್ಪರ..."

"ಇದೆಲ್ಲಾ ನೀನನ್ಗ ಕಲಿಸಲಿಕ್ಕೆ ಬರಬ್ಯಾಡ" ಹೆಂಗಸರ ಕೆಲಸಾ ಎಷ್ಟು ಅಷ್ಟು ಮಾಡು."

—ರಾಯರು ಕೋಪದಿಂದ ನುಡಿದರು.

ಎಂದೂ ಸೀತಾಬಾಯಿ ಗಂಡನಿಗೆ ಎದುರಾಡಿದವಳಲ್ಲ. ಆದರೆ ಅಂದು ಅವಳ ಮನ ನೊಂದಿರಬೇಕು

"ಹೆಣ್ಣು ಅಂದ್ರ ಬರೇ ಅಡಿಗಿ ಮಾಡಲಿಕ್ಕಷ್ಟೆ ಏನು! "

ಎಂದು ಧೈರ್ಯದಿಂದ ಪ್ರಶ್ನಿಸಿಯೇ ಬಿಟ್ಟರು.

" ಬಾಯಿ ಮುಚ್ಚು. ನನಗೆ ಎದುರಾಡ್ತೀಯಾ? "

- ಎಂದು ಗೋಪಾಲರಾಯರು ಕೆನ್ನೆಗೆ ಬಿಗಿದೇ ಬಿಟ್ಟರು.

ಸೀತಾಬಾಯಿ ಕಣ್ಣಲ್ಲಿ ನೀರು ಚಿಮ್ಮಿತು. ಸೆರಗಿನಿಂದ ಒರೆಸಿಕೊಳ್ಳುತ್ತ ನೇರವಾಗಿ ಸುಮಾಳ ಬಳಿ ಹೋಗಿ ಅವಳನ್ನಪ್ಪಿಕೊಂಡು ಅಳಹತ್ತಿದರು.

ಅರ್ಧಮರ್ಧ ನಿದ್ರೆಯಲ್ಲಿ ಎಚ್ಚತ್ತ ಸುಮಾ,

"ಯಾಕವ್ವ ಅಳ್ತೀ? "

ಎಂದು ಕೇಳಿದಳು.

"ಯಾಕೂ ಇಲ್ಲ ಸುಮು ನೀ ಮಲಕೊ"

ಎಂದು ತಬ್ಬಿಕೊಂಡು ಮಲಗಿದಳು.

ಸುಮಾ ಮತ್ತೆ ನಿದ್ರೆ ಹೋದಳು.

ಆದರೆ ಸೀತಾಬಾಯಿಗೆ ಮಾತ್ರ ಆ ದಿನ ನಿದ್ರೆಯೇ ಹತ್ತಲಿಲ್ಲ. ಸುಮಾಳ ಮುಗ್ಧ ಮೊಗವನ್ನೇ ನೋಡುತ್ತ ಮಲಗಿಕೊಂಡಳು.

* * * *

ನಿಜ ಸುಮಾಳ ಮುಗ್ಧರೂಪ, ಮುಗ್ಧಮನ, ಮುಗ್ಧಮಾತು ನನ್ನ ಹೃದಯದಲ್ಲಿ ಒಂದೊಂದು ಒಂದೊಂದು ವಿಧವಾಗಿ ಅಚ್ಚೊತ್ತಿವೆ

ಅವಳಂಥ ನಿಷ್ಕಲ್ಮಷ ಮನದ ಹುಡುಗಿಯರು ಇರುವದುಂಟೆ ಇಂದಿಗೂ ನನಗೆ ಸಮಸ್ಯೆಯಾಗಿದೆ. ಅವಳಿಗೆ ಒಂಭತ್ತು ಹತ್ತು ವರುಷಗಳಾಗಿದ್ದರೂ ಬಾಳಿನಲ್ಲಿ ಒಳಿತು ಕೆಡಕು ಸುಖ ದುಃಖ ಆದಿ ಇರುತ್ತವೆ ಎಂಬದು ತಿಳಿದಿರಲಿಲ್ಲ.

ಸೀತಾಬಾಯಿ ಹಾಗು ಗೋಪಾಲರಾಯರ ಪ್ರೀತಿಯ ಆವರಣ ಅವಳನ್ನು ಆ ರೀತಿ ಬೆಳಸಿರಬೇಕು.

ಅವರ ಔಟಹೌಸಿನಲ್ಲಿ ನಾವು ಹೊಸದಾಗಿ ಬಾಡಿಗೆ ಬಂದಿದ್ದರೂ ಎಷ್ಟೋ ದಿವ್ಸಗಳ ವರೆಗೆ ನನ್ನ ಅವಳ ಪರಿಚಯವೆ ಆಗಿರಲಿಲ್ಲ.

ಒಂದು ದಿನ ಇಮಾಮು ಪೇಟೆಯಿಂದ ಸುಮಾಳನ್ನು ಟಾಂಗಾದಲ್ಲಿ ಕೂಡಿಸಿಕೊಂಡು ಮನೆಗೆ ಬರಹತ್ತಿದ್ದ.

ಜೋಳದ ಹಿಟ್ಟಿನ ಚೀಲವನ್ನು ಹೆಗಲಿಗೆ ಜೋತಾಡಿಸಿಕೊಳ್ಳುತ್ತ ಹೊರಟ ನನ್ನನ್ನು ನೋಡಿ ಟಾಂಗಾ ನಿಲ್ಲಿಸಿ

"ಮಾಧು ಬರ್ತೀಯಾ!"

- ಎಂದು ಕೇಳಿದ.

ರೊಟ್ಟಿ ಜಾರಿ ತುಪ್ಪದಲ್ಲಿ ಬಿದ್ದಂತಾಯಿತು. ಟಣಾನೆ ಜಿಗಿದೇಬಿಟ್ಟೆ;

ನಾನು ಸುಮಾಳ ಕಡೆ ನೋಡಿದೆ ಸುಮಾ ನನ್ನ ಕಡೆಗೆ ನೋಡಹತ್ತಿದ್ದಳು.

"ಇಮಾಮು ಈತ ಯಾರು"

- ಸುಮಾ ಕೇಳಿದಳು.

ಇಮಾಮು ಹತ್ತಿರ ಕರೆದುಕೊಂಡು ಎಲ್ಲ ತಿಳಿಸಿಕೊಟ್ಟ.

"ನಮ್ಮ ಮನಿ ಹತ್ತಿರ ಇದ್ದು ಯಾಕ ಆಡಲಿಕ್ಕೆ ಬರೋದಿಲ್ಲ?"

- ಅವಳ ಆ ಸಹಜ ಪ್ರಶ್ನೆಗೆ ಉತ್ತರಿಸಿದೆ.

"ಇನ್ನಮ್ಯಾಲೆ ಬರ್ತೀನಿ; ನಿನ್ನ ಅಪ್ಪಾ ಅವ್ವಾ ಬಯ್ತಾರ?"

"ಊಹುಂ! ಯಾರೂ ಬೈಯೊದಿಲ್ಲ. ನನ್ನ ಹತ್ರ ಬೇಕಾದಷ್ಟು ಆಟಗಿ ಸಾಮಾನ ಅವ ದೇವ್ರ ಗೊಂಬಿ ಅವ"

"ಹೌದ, ಹಂಗಾರ ನಾ ತಪ್ಪದ ಬರ್ತೀನಿ"

ಎಂದು ಆಶ್ವಾಸನ ನೀಡಿದೆ. ಅವಳಿಗೂ ಆನಂದವಾಯಿತು.

ನಾನು ಮರುದಿನವೇ ಸುಮಾಳೊಂದಿಗೆ ಆಡಲು ಅವಳ ಮನೆಗೆ ಹೋಗಿದ್ದೆ ಆದರೆ ಆರಂಭದಲ್ಲಿ ಅಷ್ಟೊಂದು ಸೇರುತ್ತಿರಲಿಲ್ಲ ನಾನು ಆಗಾಗ ಪ್ರದರ್ಶನ, ಆಟ ಸಂತೆಗಿಂತೆಗಳಲ್ಲಿ ಅಲೆದಾಡಿ ಬರುತ್ತಿದ್ದೆ.

ಮುಂದೆ ಬರಬರುತ್ತಾ ನಾವಿಬ್ಬರೂ ಅಗಲದಷ್ಟು ಒಂದಾಗಿಬಿಟ್ಟೆವು. (ನಮ್ಮ ಜೋಡಿ ಓಣಿಯವರ ಕಣ್ಣು ಕೀಸರಾಯಿತು.)

ನನ್ನನ್ನು ಸೀತಾಬಾಯಿ ಗೋಪಾಲರಾಯರು ಪ್ರೀತಿಯಿಂದ ಕಂಡರು. ಸುಮಾಳಿಗೇನಾದರೂ ತಂದರೆ ಅದರಲ್ಲಿ ನನ್ನ ಪಾಲೂ ಇರುತ್ತಿತ್ತು.

ನನ್ನ ತಾಯಿಗೆ ಇದು ಸರಿ ಎನ್ನಿಸಲಿಲ್ಲ. ಬಡತನದಲ್ಲಿ ಬೆಳೆದ ನನ್ನ ತಾಯಿ ಸ್ವಲ್ಪ ಸಂಕೋಚ ಪ್ರವೃತ್ತಿಯವಳು.

ನನ್ನ ತಂದೆ ಸಹ ಕಾರಕೂನನ ಮಗ ಶ್ರೀಮಂತರ ಮನೆಯಲ್ಲಿ ಅಷ್ಟೊಂದು ಸಲುಗೆಯಿಂದ ವರ್ತಿಸಬಾರದು ಎನ್ನುತ್ತಿದ್ದರು. ಅಷ್ಟೊಂದು ಸುಮಾಳೊಡನೆ ನಾನು ಬೆರೆಯುವದು ಸರಿಬೀಳುತ್ತಿರಲಿಲ್ಲ.

ಆಗಾಗ ನನ್ನ ತಾಯಿ ಸೀತಾಬಾಯಿಗೆ ಹೇಳುತ್ತಿದ್ದರು.

"ನಮ್ಮ ಹಾಂಗೆ ಇದ್ದಷ್ಟು ನಾವು ಕಾಲು ಚಾಚಬೇಕು ಸೀತಾಬಾಯರ ... ನಮ್ಮ ಹುಡುಗಾ ಭಾಳ ತುಂಟ ಏನಾದ್ರೂ ತಪ್ಪ ಮಾಡಿದ್ರ...ಕ್ಷಮಿಸಿ ಬಿಡ್ರಿ..."

"ಅಂವಾ ಏನು ಮಾಡ್ಯಾನ ಕಾವೇರವ್ವ...? ಸುಳ್ಳ ಮಕ್ಕಳ ಮನಸ್ಸಿನ್ಯಾಗ, ಇಂಥ ಭೇದ ಭಾವದ ವಿಚಾರ ಬಿತ್ತಬಾರದು. ಸುಮಾನ ಸರ ಆಡ್ತಾನ ಹುಡುಗ್ರು ಹುಡುಗ್ರು ಆಡೋತಾವ-ಇದರಾಗ...ಯೋಗ್ಯತಾದ ಮಾತೆಲ್ಲಿ ಬಂತು?"

ಎಂದು ಉತ್ತರಿಸುತ್ತಿದ್ದರು ಸೀತಾಬಾಯಿ. ಈ ನುಡಿಗಳು ಅವಳ ವಿಶಾಲ ಹೃದಯದ



ಪ್ರತೀಕವಾಗಿದ್ದವು. ತಾಯಿಯ ಗುಣ ಸುಮಾಳಲ್ಲಿಯೂ ಸಮಾವೇಶಗೊಂಡಂತಿತ್ತು.

-೧೦-

"ಇವನಿಗೇನು ದೇವ್ರು ದಿಂಡ್ರು ಬೇಕಿಲ್ಲ ಶುದ್ಧ ನಾಸ್ತಿಕ."

- ಎಂಬ ಮುದ್ರೆ ಹಾಕಿದ್ದನ್ನು ನೋಡಿದರೆ ನನ್ನ ಬಾಲ್ಯ ಜೀವನದ ಕೆಲವು ಘಟನೆಗಳನ್ನು ನಾನು ಮೆಲುಕು ಹಾಕಬೇಕಾಗುತ್ತದೆ.

ಗೋಪಾಲರಾಯರ ಕಂಪೌಂಡಿನ ಹಿಂದೆ ಒಂದು ಹನುಮಂತ ದೇವರ ಹಾಳು ಗುಡಿ ಇದೆ. ಛತ್ತ ಬಿದ್ದು ಹೋಗಿದ್ದಕ್ಕೆ ತಗಡನ್ನು ಹೊದಿಸಿದ್ದರು. ಅದರ ಮುಂದುಗಡೆ ಇದ್ದ ಬೇವಿನ ಮರ ದೇವರಿಗೆ ನೆರಳು ತಂಪು ನೀಡುತ್ತಿತ್ತು-ನಾನು ಸುಮಾ ಹೆಚ್ಚು ಸಮಯ ಅಲ್ಲಿಯೇ ಕಳೆಯುತ್ತಿದ್ದೆವು. ರಾಮುಕೃಷ್ಣರ ಗೊಂಬೆಗಳನ್ನು ಕೂಡಿಸಿ ಏನೇನೋ ಆಡುತ್ತಿದ್ದೆವು

ಸಂಜೆ ತಪ್ಪದೆ ಸುಮಾಳ ಅಡಿಗೆ ಮನೆಯಲ್ಲಿ ತಪಸ್ಸು ಬೇರೆ. ಅಂದರೆ ದೇವರ ಮುಂದೆ ಇಬ್ಬರೂ ಚಕ್ಕಳಮಕ್ಕಳ ಹಾಕಿಕೊಂಡು ಕಣ್ಣು ಮುಚ್ಚಿ ಧ್ಯಾನಾಸಕ್ತರಾಗಿ ಬಿಡುತ್ತಿದ್ದೆವು.

ಎಲ್ಲರಿಗೂ ಆ ದೃಶ್ಯ ಮೋಜಾಗಿತ್ತು. ಒಮ್ಮೊಮ್ಮೆ ಘಾತಿಮಾ

"ಏನು ಸ.ಮಕ್ಕ...ಮಾಧಣ್ಣಾ ದೇವರು ಇವತ್ತ ಎಷ್ಟು ಕಂಡಾ. ಚೋಟ-ಗೇಣ"

- ಎಂದು ಚೇಷ್ಟೆ ಮಾಡುತ್ತಿದ್ದಳು.

ನಾವಿಬ್ಬರೂ ಹೀಗೆ ಕುಳಿತುಕೊಳ್ಳುವದನ್ನು ಸೀತಾಬಾಯಿ ಕಣ್ತುಂಬ ನೋಡಿ ನಲಿಯುತ್ತಿದ್ದರು.

ಒಂದು ದಿನ ಬೆಳಗು ಮುಂಜಾನೆ ಇನ್ನೂ ನಾನು ಹಾಸಿಗೆ ಮೇಲೆಯೇ ಹೊರಳಾಡುತ್ತಿದ್ದೆ.

"ಮಾಧು...ಮಾಧು"

- ಎಂದು ಕೂಗುತ್ತ ಸುಮಾ ಒಳಗೆ ಬಂದಳು.

"ಏನವ್ವಾ ಸುಮಾ-ಇನ್ನೂ ಬೆಳಗು ಆಗಲಿಕ್ಕೆ ಹತ್ತೇದ ಆಗಲೇ ಮಾಧುನ್ನ ಕರೀಲಿಕ್ಕೆ ಬಂದೇನು?"

ನಗುತ್ತ ಕೇಳಿದಳು ನನ್ನ ತಾಯಿ.

"ಲಗೂ ಮಾಧುನ್ನ ಎಬ್ಬಿಸು ಅತ್ತ್ಯಾ-ಆತಗ ಒಂದು ಮಜಾ ತೋರಿಸಬೇಕಾಗೇದ."

"ಏನದು ನನಗಷ್ಟು ಹೇಳಲ್ಲ?"

"ಊಹುಂ! ಮಾಧುಗಷ್ಟ ಅದ್ನ ಹೇಳೋದು ಅದ. ಏ ಮಾಧು ಲಗು ಬರೊ..."

ಸುಮಾಳ ಕೂಗು ಕೇಳಿ ನಾನು ಕಣ್ಣು ಉಜ್ಜಿಕೊಳ್ಳುತ್ತ ಎದ್ದು—

"ಏನು ಸುಮಾ?"

— ಎಂದು ಕೇಳಿದೆ.

"ನೀ ಲಗೂ ಏಳು, ಹೇಳ್ತೇನಿ"

"ಏನು ಹೇಳು?"

"ಇಲ್ಲಿ ಬಾ"

ಎಂದು ನನ್ನ ಕೈ ಹಿಡಿದು ಎಳೆದುಕೊಂಡ ಹೊರಟೇ ಬಿಟ್ಟಳು.

ಮೌನವಾಗಿ ಅನುಸರಿಸಿದ ನನ್ನನ್ನು ಹನುಮಂತದೇವರ ಗುಡಿಯ ಹಿಂದೆ ಇದ್ದ ಒಂದು ಬಂಡೆಗಲ್ಲಿನ ಮುಂದೆ ನಿಲ್ಲಿಸಿ—

"ಇದ್ರಾಗ ಏನು ಕಾಣಸ್ತದ ಹೇಳು?"

ಎಂದು ಕೇಳಿದಳು.

ಮೇಲಿಂದ ಕೆಳಗೆ ಹತ್ತಾರು ಸಲ ಆ ಬಂಡೆಗಲ್ಲನ್ನು ನೋಡಿದೆ. ಏನೂ ಹೊಳೆಯಲಿಲ್ಲ.

"ಏನದ ಇದ್ರಾಗೂ?"

"ಛೇ! ನಿನಗಂತೂ ಏನೂ ತಿಳಿಯೋದಿಲ್ಲ"

"ತಿಳದಕೆರ ಹೇಳು ಏನು ಅದ. ಅದ್ರಾಗ?"

"ಛೇ!ಓತ್ಲಾಗ ನೋಡ್ಯ್ಯಾ?"

"ಹುಂ! ಹತ್ತ ಸರೆ ನೋಡ್ದೆ..."

"ಛೇ, ನಿನಗಂತೂ ತಿಳಿಯೋದಿಲ್ಲ. ಇದ್ರಾಗ ಹನುಮಂತ ದೇವರು ಒಡಮೂಡಿಲ್ಲೇನು?"

"ಎಲ್ಲಿ?"

ನಾನು ದಿಟ್ಟಿಸಿ ನೋಡಿದೆ.

"ಇಲ್ನೋಡು- ಬಾ...ಇದು ಕೈ--ಇದು.... ಗದಾ--ಈ ಕಿರೀಟ ಎಷ್ಟು ಚಂದ ಮೂಡೇದ ನೋಡು"

-ಎಂದು ಆ ಕಲ್ಲಿನ ಮ್ಯಾಲೆ ಕೈಯಾಡಿಸಿ ಒಂದೊಂದಾಗಿ ಬಣ್ಣಿಸುತ್ತಾ ಹೋದಳು.

ಅವಳು ಹೇಳುವದನ್ನೆಲ್ಲ ಮೊದಲು ನಾನು ನನ್ನ ಮನದಲ್ಲಿ ಮೂಡಿಸಿಕೊಂಡು--ಆ ಕಲ್ಲಿನಲ್ಲಿ ಕಂಡೆ. ಅಂದಿನಿಂದ ಆ ಕಲ್ಲಿನ ಪೂಜೆ ಪ್ರಾರಂಭವಾಯಿತು.

ಆ ದಿನ ನಾನು, ಸುಮಾ, ಸೀತಾಬಾಯಿ ಹಾಗೂ ನನ್ನ ತಾಯಿ ಭಕ್ತ ಪ್ರಲ್ಹಾದ ಸಿನೇಮಾ ನೋಡಿ ಬಂದೆವು ಇಡೀ ರಾತ್ರಿ ನನ್ನ ಹಾಗೂ ಸುಮಾಳ ಕನಸಿನಲ್ಲಿ ಭಕ್ತ ಪ್ರಲ್ಹಾದನ ದೈವ ಭಕ್ತಿಯೇ ಬಿಂಬಿಸಿತು.

ಮರುದಿನ ಇಬ್ಬರೂ ಹನುಮಂತ ದೇವರ ಗುಡಿಯಲ್ಲಿ ಕುಳಿತು ಅದನ್ನೇ ಚರ್ಚಿಸಿದೆವು

''ಮಾಧು--ನಮಗ ಇಷ್ಟು ದೇವರ ಮ್ಯಾಲೆ ಭಕ್ತಿ ಅದ ಅಲ್ಲ--ಆತ ನಮ್ಮನ್ನ ಕಾಪಾಡ್ತಾನಲ್ಲ?"

"ಕಾಪಾಡ್ದ ಏನು?- ಮತ್ತೆ ಭಕ್ತ ಪ್ರಲ್ಹಾದನ್ನ ಗುಡ್ಡದ ಮ್ಯಾಲಿಂದ ಒಗದಾಗ--ದೇವರು ಬಂದ್ ಹಿಡಿಲಿಲ್ಲೇನು?...''

ನನ್ನ ಈ ಮಾತನ್ನು ಸ್ವಲ್ಪ ಹೊತ್ತು ಮೆಲಕು ಹಾಕಿ ಸುಮಾ ಏನೇನೋ ಯೋಚಿಸಿದಳು. ನಾನು ಅವಳನ್ನೇ ನೋಡಹತ್ತಿದೆ

"ಹಂಗಾರ ಮಾಧು...ದೇವ್ರನ ಪರೀಕ್ಷಾ ಮಾಡೋಣ"

"ಅದ್ಹೆಂಗ?"

"ನಾವು ಜೈರಾಮ ಅಂದು ಈ ಗುಡ್ಡದ ಮ್ಯಾಲಿಂದ ಹಾರಿಬಿಡೋಣ- ಖರೇವಂದ್ರ ನಮ್ಮ ಮ್ಯಾಲೆ ದೇವ್ರಿಗೆ ಪ್ರೀತಿ ಇದ್ದರ--ಬಂದು ಕಾಪಾಡ್ತಾನಾ..."

ಸುಮಾ ಮುಗ್ಧ ವಿವರಣೆ ಕೊಟ್ಟಳು ನನಗೂ ಅದು ಸರಿ ಎನ್ನಿಸಿತು.

"ಸುಮೀ—ನೀನು ಹೇಳೋದು ಸರಿ ಅದನಡೀ ಈಗ ಹೋಗಿ ಬಿಡೋಣ"

—ಎಂದು ನಾನು ಪ್ರೋತ್ಸಾಹ ನೀಡಿದೆ.

ಇಬ್ಬರೂ ಭರಭರ ಸಾಗಿದೆವು. ಗುಡ್ಡವೇನು ಮನೆಯಿಂದ ದೂರವಿರಲಿಲ್ಲ. ಮೂರುನಾಲ್ಕು ಹೊಲ ದಾಟಿದರೆ ಸಾಕು-ಅದಕ್ಕೆ ಹೊಂದಿದ್ದೇ ಗುಡ್ಡ.

ಆಗ ಸುಮಾರು ನಾಲ್ಕು ಗಂಟೆಯಾಗಿರಬಹುದು ಅಂದೇಕೊ ಹೊಲದಿಂದ ಬೇಗನೆ ಮನೆಗೆ ಹೊರಟಿದ್ದ ಇಮಾಮ"--ಎಲ್ಲಿಗೆ ಹೊರಟೀರಿ--ಸ ಮಕ್ಕ ಇತ್ತಾಗ ಬಿಸಲಾಗ..."

-ಎಂದು ಕೇಳಿದ.

ನಾನು ಸುಮಾಗೆ ಸುಮ್ಮನಿರಲು ಸನ್ನೆ ಮಾಡಿದೆ ಏನೂ ಅರಿಯದ ಸುಮಾ ಹೇಳಿಯೇ ಬಿಟ್ಟಳು.

"ಇಮಾಮ--ನಾವು ಇವತ್ತು ದೇವ್ರನ ಪರೀಕ್ಷಾ ಮಾಡಲಿಕ್ಕೆ ಹೊಂಟೇವಿ"



"ಅದ್ಹೆಂಗ ದೇವ್ರನ ಪರೀಕ್ಷಾ ಮಾಡ್ತೀರಿ?"

--ಅವನು ಚಕಿತನಾಗಿ ಕೇಳಿದ.

"ಪ್ರಲ್ಹಾದ್ನ....ಗುಡ್ಡದ ಮ್ಯಾಲಿಂದ ಒಗದಾಗ ದೇವ್ರು ಕಾಪಾಡಲಿಲ್ಲ--ಹಂಗ ನಾವೂ ಗುಡ್ಡದಮ್ಯಾಲಿಂದ ಹಾರಿ ನೋಡ್ತೀವಿ"

--ಸುಮಾಳ ಆ ಮಾತನ್ನು ಕೇಳಿ ಇಮಾಮನ ಮುಖ ಬಿಳುಚಿತು.

"ಇದೇನು--ನಿಮ್ಮ ಹುಚ್ಚುತನಾ--ನಡೀರಿ ಮನೀಗೆ'' ಜಬರಿಸಿ ಮರಳಿ ಕರೆದುಕೊಂಡು ಬಂದು 'ಅಬ್ಬಾ ಎಂಥಾ ಅನಾಹುತ ತಪ್ಪಿತು' ಎಂದು ನಿಟ್ಟುಸಿರು ಬಿಟ್ಟ.

ಇನ್ನೊಮ್ಮೆ, ಹಾಗೆ ಹೋಗುವದಿಲ್ಲವೆಂದು ಮಾತು ಕೊಟ್ಟೆವು

ಅಲ್ಲಿಗೆ ಆ ಘಟನೆ ಮುಗಿಯಿತಾದರೂ ಅದಕ್ಕೆ ಪ್ರೇರಣೆಯಾದ--ಪರೀಕ್ಷಾ ವಿಚಾರ ಇನ್ನೂ ನಮ್ಮೊಳಗೆ ಸುಪ್ತವಾಗಿಯೇ ಉಳಿಯಿತು ... ಮರುಷಗಳು ಉರುಳಿದಂತೆ ನನ್ನ ದೇಹ ಹಾಗೂ ಮನದೊಳಗೆ ಏನೋ ಒಂದು ಹೊಸತರ ಪ್ರವೇಶವಾಗುತ್ತಿರುವಂತೆ ಅನ್ನಿಸತೊಡಗಿತು

ಅಂದು ಗುಡಿಯಲ್ಲಿ ನಾನು, ಸುಮಾ ಇಬ್ಬರೇ ಇದ್ದೆವು ರವಿವಾರವಾಗಿದ್ದರಿಂದ ಶಾಲೆಗೂ ಬಿಡುವಿತ್ತು. ಆ ದಿನ ಪೂಜಾರಿ ಸಹ ಊಟ ಹೊಡೆದು ಬಂದು ಅಲ್ಲಿ ಮಲಗಿರಲಿಲ್ಲ

ನಾನು ಸುಮಾಳನ್ನು ಏಕದೃಷ್ಟಿಯಿಂದ ನೋಡತೊಡಗಿದೆ.

ಆ ದುಂಡಾದ ಮುಖದಲ್ಲಿ ಅರಳಿದ ಕಣ್ಣುಗಳು ಸ್ನಿಗ್ಧತೆಯಿಂದ ತುಂಬಿದ್ದವು. ಉಂಗುರುಗುರು ಕೂದಲು ಸೌಂದರ್ಯವನ್ನು ಹೆಚ್ಚಿಸಿದ್ದವು. ಕಷ್ಟ ದುಃಖಗಳನ್ನರಿಯದೇ ಸಿರಿಮಂತಿಕೆಯಲ್ಲಿ ತಂದೆ-ತಾಯಿಗಳ ವಾತ್ಸಲ್ಯದ ನೆರಳಲ್ಲಿ ಬೆಳೆದ ಸುಮಾ--ವಯಸ್ಸಿಗೆ ಮೀರಿ ಮೈತುಂಬಿಕೊಂಡಿದ್ದಳು.

ಕುತೂಹಲ ಕೆರಳಿಸಿದ ಕಣ್ಣು ನನ್ನ ಎದೆಗಿಂತ ಅವಳ ಎದೆ ಕೊಂಚ ಉಬ್ಬಿದ್ದನ್ನು ಸ್ಕರ್ಟಿನೊಳಗಿಂದ ಕಂಡಿತು. ಯಾವದೋ ಅವರ್ಣನೀಯ ಆಶೆ ನನ್ನನ್ನು ಕೆಣಕಿತು.

ಅಂದಿನ ನನ್ನ ಆ ನೋಟ ಅವಳಿಗೂ ವಿಚಿತ್ರವೆನಿಸಿರಬೇಕು

"ಇವತ್ಯಾಕ ಹಿಂಗ ನೋಡಲಿಕ್ಕತ್ತೀ....?"

--ಎಂದು ಕೇಳಿಯೂ ಬಿಟ್ಟಿದ್ದಳು

ಇದಕ್ಕೆ ಪೂರಕವಾದ ಭಕ್ತಿ ಭಾವೋನ್ಮಾದ ಹೃದಯದೊಳಗೆ ಹರಿದಾಡುತ್ತಲೇ ಇತ್ತು.

ಇಂದಿಗೂ ಆ ಘಟನೆ ಮನದೊಳಗೆ ಮಾಸದೇ ಉಳಿದುಕೊಂಡಿದೆ ಆ ದಿನ ನಾವು ಗುಡಿಯೊಳಗೆ ಹನುಮಂತದೇವರ ಪೂಜೆ ನಡೆಸಿದ್ದೆವು.

ನಾನು ದೇವರಿಗೆ ನೀರೆರೆದೆ. ಸುಮಾ ಅರಿಷಿಣ ಕುಂಕುಮ ಹಚ್ಚಿ ಮಲ್ಲಿಗೆ ಹೂಗಳನ್ನೇರಿಸಿದಳು. ಬಟ್ಟಲದ ಸಕ್ಕರೆಗೆ ನೀರು ತಿರುವಿ ನೈವೇದ್ಯ ಸಲ್ಲಿಸಿದೆ.

ಆ ವೇಳೆ ಇಬ್ಬರೂ ಪ್ರಸಾದ ಸ್ವೀಕರಿಸಿ ಹರಟುತ್ತ ಕುಳಿತುಕೊಂಡೆವು.

ಸುಮಾಗೆ ಏನು ಹೊಳೆಯಿತೊ ಏನೊ? ತನ್ನ ಕೈಯೊಳಗಿನ ಒಂದೊಂದು ಬಳೆ ತೆಗೆದು ಜಜ್ಜಿ ಸಣ್ಣಗೆ ಪುಡಿಮಾಡಿದಳು.

"ಇದೇನು ?"

ನಾನು ಕುತೂಹಲದಿಂದ ಕೇಳಿದೆ.

"ಸ್ವಲ್ಪ ತಡಿ ಎಲ್ಲಾ ಹೇಳ್ತೀನಿ"

ಎಂದು ಸ್ವಲ್ಪ ಕಾಜಿನ ಪುಡಿಯನ್ನು ಬಟ್ಟಲಲ್ಲಿ ಹಾಕಿ ನೀರು ಬೆರಸಿ ತಂದಳು.

ಎಲ್ಲವನ್ನೂ ನಾನು ಪ್ರೇಕ್ಷಕನಂತೆ ನಿರೀಕ್ಷಿಸುತ್ತ ಕುಳಿತಿದ್ದೆ

ಅವಳು ನನ್ನ ಬಳಿ ಸಾರಿ

"ಮಾಧು ಗುಡ್ಡದ ಮ್ಯಾಲಿಂದ ಹಾರಬೇಕು ಅಂದರ ಮುನ್ಯಾಗ ಬಯ್ತಾರಾ....ಈ ಕಾಜಿನ ಪುಡಿ ಹೊಟ್ಯಾಗ ತೊಗೋಂಡ್ರ ಗೊತ್ತುಆಗೋದಿಲ್ಲ. ದೇವ್ರನ ಪರೀಕ್ಷಾ ಮಾಡಿದ್ಹಂಗ ಆಗ್ತದ ಹೌದಲ್ಲೊ..." ಎಂದು ಆ ಬಟ್ಟಲನ್ನು ನನ್ನ ಮುಂದೆ ಹಿಡಿದಳು.

ಅವಳಿಗೆ ಆ ಯೋಚನೆ ಹೇಗೆ ಹೊಳೆಯಿತೊ ಏನೊ ನನಗೆ ತಿಳಿಯದ ! ಆದರೆ ಆಗ ನನಗೂ ಒಪ್ಪಿಗೆ ಆಯಿತು.

ದೇವರನ್ನು ಸ್ಮರಿಸಿ ಇಬ್ಬರೂ ಗಟಗಟನೆ ಕುಡಿದು ಮುಗಿಸಿದೆವು. ಎಷ್ಟೋ ಹೊತ್ತಿನವರೆಗೆ ದೇವರ ಮುಂದೆ ಹಾಗೇ ಕುಳಿತಿದ್ದೆವು. ಹೊಟ್ಟೆಯೊಳಗೆ ಕಸಿಪಿಸಿಯಾಗಿ, ಸಂಕಟವಾಗಲಿ ಯಾವ ಪರಿಣಾಮವೂ ಆಗಲಿಲ್ಲ ನಮಗಾದ ಆನಂದ ಅಷ್ಟಿಷ್ಟಲ್ಲ

"ನೋಡು ಮಾಧು...ನಮ್ಮನ್ಯಾಲೆ ದೇವರಿಗೆ ಪ್ರೀತಿ ಅದ ನಮಗ ಏನೂ ಆಗಲಿಲ್ಲ"

"ಹೌದು ಸುಮಾ, ದೇವ್ರು ಯಾವಾಗಲೂ ನಮನ್ನ ಕಾಪಾಡ್ತಾನ..."

"ಅಷ್ಟಅಲ್ಲ, ಒಂದಿಲ್ಲ ಒಂದು ದಿನ ಅವ ಪ್ರತ್ಯಕ್ಷ ಆಗ್ತೀರತಾನ..."

"ಅದಿರಲಿ ಸುಮಿ, ಇದ್ನ ಮಾತ್ರ ಯಾರಿಗೂ ಹೇಳಬ್ಯಾಡ..."

"ಏನು?"

"ನಾವು ಕಾಜು ಪುಡಿಮಾಡಿ ತೊಗೊಂಡೀವಿ ಅಂತ"

"ಊಹೂಂ! ಯಾರಿಗೂ ಹೇಳೋದಿಲ್ಲ" ಸುಮಾ ಮಾತುಕೊಟ್ಟಳು.

-೧೧-

ಹೀಗೆ ಬಾಲ್ಯ ಜೀವನದ ತೆರೆಗಳು ತೇಲುತ್ತಿದ್ದವು ವರ್ತಮಾನದಲ್ಲಿ ಭವಿಷ್ಯದ ಭೀಕರ ದೃಶ್ಯವನ್ನು ಯಾರು ಕಂಡುಕೊಂಡಾರು ಊಹೆಗೂ ನಿಲುಕದಂಥ ಘಟನೆ ಸಂಭವಿಸುತ್ತವೆ.

ಗಾಜು ಸೇವನೆಯ ಮಹಾಸಾಧನೆಯ ನಂತರ ಬಹುಶಃ ಎರಡು ತಿಂಗಳು ಕಳೆದಿರಬೇಕು ಸುಮಾ ಆಯಾಸವೆಂದು ಹಾಸಿಗೆ ಹಿಡಿದಳು.

ಸೀತಾಬಾಯಿ ಗಾಬರಿಯಿಂದ ಪತಿಯ ಬಳಿ ಓಡಿ ಬಂದು

"ಸುಮಾನ ಮೈ ಬೆಚ್ಚಗ ಆಗೇದ ನೋಡಬರ್ರಿ" ಎಂದು ಕರೆದಳು.

ಆರಾಮ ಖುರ್ಚಿಯ ಮೇಲೆ ಕುಳಿತಿದ್ದ ರಾಯರು ಪೇಪರ್ ಆಚೆ ಎಸೆದು ಸುಮಾಳ ಬಳಿ ಬಂದು....

"ಏನಮ್ಮ ಸುಮಾ ಮಲಗಿಕೊಂಡಿ?"

....ಎನ್ನುತ್ತ ಹಣೆಯ ಮೇಲೆ ಕೈಯಾಡಿಸಿದರು.

"ಯಾಕೊ ಮೈ ಕೈ ನೋಯ್ತದ ಅಪ್ಪಾ"

ಸುಮಾ ಮೆಲ್ಲಗೆ ಉಸುರಿದಳು.

ಉಸಿರೂ ಬಿಸಿ ಇತ್ತು. ಮೈಯೂ ಬಿಸಿಯಾಗಿತ್ತು. ರಾಯರು ಗಡಬಡಿಸಿ ಎದ್ದೇಬಿಟ್ಟರು.

'ಇಮಾಮ', ಎಂದು ಕೂಗುವದೊಂದೆ ತಡ ಅವನೂ ಅಲ್ಲಿಗೆ ಧಾವಿಸಿ ಬಂದೇಬಿಟ್ಟ. ನಂತರ ಫಾತಿಮಾ ಹಾಗು ನಾನು ಸುಮಾಳ ಬಳಿ ಬಂದು ಕುಳಿತೆವು.

ಅರ್ಧ ಗಂಟೆಯೊಳಗೆ ಗೋಪಾಲರಾಯರು ಡಾಕ್ಟರ್‌ನ ಕರೆದುಕೊಂಡು ಬಂದೇಬಿಟ್ಟರು.

ಡಾಕ್ಟರರು ಸುಮಾಳನ್ನು ಪರೀಕ್ಷಿಸಿ ಇಂಜಕ್ಷನ್ ಕೊಟ್ಟು....

"ಜ್ವರ ಏರಲಿಕ್ಕೆ ಹತ್ತಿವೆ ಸ್ವಲ್ಪ ಕೇರ್‌ಫುಲ್ ಇರಬೇಕು, ಏನೂ ಭಯಾಪಡೋ ಕಾರಣ ಇಲ್ಲ."

ಎಂದು ಹೇಳಿ ಹೊರಟುಹೋದರು.

ಎರಡು ದಿನಗಳು ಉರುಳಿದವು ಸುಮಾಗೆ ಜ್ವರ ನಿಲ್ಲಲಿಲ್ಲ. ಆ ಮನೆಯಲ್ಲಿ ಉತ್ಸಾಹವೇ ಬೇನೆ ಬಿದ್ದಂತೆ ಇತ್ತು.

ಮತ್ತೆ ಡಾಕ್ಟರು ಪರೀಕ್ಷಿಸಿ, ಕೋಣೆಯಿಂದ ಹೊರಗೆ ಬಂದು...

"ಕರುಳಿಗೆ ಹುಣ್ಣಾಗಿವೆ, ಸ್ವಲ್ಪ ಜೋಕೆ?... ಅಕಿನ್ನ ಅಗಳಾಡ್ಸ ಬ್ಯಾಡ್ರಿ, ಮಲಗಿದಲ್ಲೆ ಮಲಗಲಿ. ತಾಸಿಗೊಂದು ಈ ಗುಳಿಗಿ ಕೊಡ್ರಿ, ಜ್ವರದ ಏರಿಳಿತ ನಾಳೆ ಬಂದು ತಿಳಸರಿ"

ಎಂದು ಹೇಳಿದರು.

"ನಮಗೇನೂ ಕೈಕಾಲು ಹೋದಂಗ ಆಗೇದ ಡಾಕ್ಟರ್" ಸೀತಾಬಾಯಿ ಸೆರಗನ್ನು ಕಣ್ಣಿನ ಮೇಲೆ ಸವರಿಕೊಂಡು ಹೇಳಿದಳು.

"ಅವ್ವಾಗೇನು ಇಲ್ಲ. ಆದ್ರ ಧೈರ್ಯ ಕಳಕೊಳ್ಳೋದರಿಂದ ಏನೂ ಪ್ರಯೋಜನ ಇಲ್ಲ ಎಲ್ಲಾ ದೇವರ ಇಚ್ಛೆ ನೋಡ್ರಿ"

# ಈಗ BEL ಹೊಸವಾಲ್ವ್‌ಗಳ ಸರಣಿಯೊಂದನ್ನು ಬಳಕೆಗ ನೀಡುತ್ತಾರೆ







**ECC82 ಮತ್ತು ECC83**
A.F. ಆಂಪ್ಲಿಫೈಯರ್‌ಗಳು, ಫೇಸ್
ಇನ್ವರ್ಟರ್‌ಗಳು, ಆಸಿಲೇಟರ್‌ಗಳು
ಮತ್ತು ಮಲ್ಟಿ-ವೈಬ್ರೇಟರ್‌ಗಳಾಗಿ
ಬಳಸಲು ಉತ್ತಮವಾದ
ಟ್ವಿನ್‌ಟ್ರಯೋಡ್‌ಗಳು ಸಮಾನ
ECC82 12AU7 ಕ್ಕೆ ಸಮಾನ
12AX7 ಬದಲು ECC83ನ್ನು ಬಳಸಬಹುದು




**EF95**
H.F. ಆಂಪ್ಲಿಫೈಯರ್ ಆಗಿ
ಬಳಸಲು ಇದು ಬಹು ಪ್ರಯೋಜನಕಾರಿ
ಬದಲಾಗಬಹುದಾದ ಪರಸ್ಪರವಾಹಕ
ವ್ಯವಸ್ಥೆ ಲೋಕ್ಯಪಾಸಿಟೆನ್ಸ್, ವೈಡ್
ಬ್ಯಾಂಡ್, ಷಾರ್ಪ್ ಕಟ್-ಆಫ್ ಪೆಂಟೋಡ್!
ಇದು ಜನಪ್ರಿಯ 6AK5
ಮಾದರಿಗೆ ಸಮಾನವಾದುದು!

ವಿವರಗಳಿಗೆ ದಯವಿಟ್ಟು ಬರೆಯಿರಿ:
ದಿ ಚೀಫ್ ಕಮರ್ಷಿಯಲ್ ಮೆನೇಜರ್
ಭಾರತ್ ಇಲೆಕ್ಟ್ರಾನಿಕ್ಸ್ ಲಿ.
ಜಾಲಹಳ್ಳಿ, ಬೆಂಗಳೂರು 13.

ಎಂದು ಎಲ್ಲರಿಗೂ ಧೈರ್ಯ ನೀಡಿ ಹೊರಟು ಹೋದರು.

ಅಂದೇಕೋ ನನ್ನ ಮನಸ್ಸೂ ಕಳವಳಗೊಂಡಿತ್ತು. ಆಟನೋಟ ಎಲ್ಲ ತೊರೆದು ಸುಮಾಳ ಹತ್ತಿರವೇ ಕುಳಿತುಬಿಟ್ಟಿದ್ದೆ.

ರಾತ್ರಿ ೯ ಗಂಟೆಯಾಗಿರಬೇಕು ಸೀತಾಬಾಯಿಯೇ "ಮಾಧು ಇನ್ನು ಮನೀಗೆ ಹೋಗಿ ಮಲಕೊಳ್ಳಪ್ಪಾ ಭಾಳಾ ರಾತ್ರಿ ಆತು..."

ಎಂದರು. ಅವರ ಮುಖ ನೋಡಿದೆ.

ಅದು ಬಿಳಿಚಿಕೊಂಡಿತ್ತು. ಪಾಪ ಎನ್ನಿಸಿತು. ನಂತರ ಸುಮಾಳತ್ತ ತಿರುಗಿ...

"ಸುಮಾ ನಾ ಹೋಗ್ತೀನಿ'

ಎಂದೆ.

ಅವಳು ಬಾಡಿದ ತುಟಿಗಳಿಂದ 'ಹುಂ' ಎಂದಷ್ಟೇ ಉಸುರಿದಳು.

* * *

ಬಹುಶಃ ಜಾವದ ನಸುಕು ಹರಿದಿರಬೇಕು. ನನಗಿನ್ನೂ ಅರ್ಧಮರ್ಧ ನಿದ್ದೆ. ಎಲ್ಲಿಂದೋ ಸ್ವಪ್ನದಲ್ಲಿ ರೋದನ ಕೇಳಿಸುತ್ತಿರುವಂತೆ ಎನ್ನಿಸಿತು.

ನಿದ್ರೆ ತಿಳಿಯಾದಂತೆ ಅಳು ಸ್ಪಷ್ಟ ಕೇಳಿಸಹತ್ತಿತು. ಮೈಮೇಲೆ ಹಾವು ಬಿದ್ದವರಂತೆ ಚಟ್ಟನೆ ಹಾಸಿಗೆಯಿಂದ ಎದ್ದೆ.

ಸುಮಾಳ ಮನೆಯೊಳಗಿಂದ ಸೀತಾಬಾಯಿ, ಶಾಂತಿಮಾ ಜೋರಾಗಿ ಅಳುತ್ತಿರುವದು ಕೇಳಿಸಿತು. "ಅವ್ವಾ...ಅಪ್ಪಾ..." ಎಂದು ಒದರಿದೆ.

ಅವರಿಂದಲೂ ಉತ್ತರ ಬರಲಿಲ್ಲ. ಚಾದರ ಬೀಸಾಕಿ ಹೊರಗೋಡಿ ಬಂದೆ.

ಇಂದಿಗೂ ಆ ದೃಶ್ಯವನ್ನು ನೆನೆದರೆ ಮೈ 'ಜುಂ' ಎನ್ನುತ್ತದೆ ಗೋಪಾಲರಾಯರ ಮನೆಯ ಮುಂದೆ ನಾಲ್ಕು ಜನ ಹೊತ್ತುಕೊಂಡು ಹೊರಡಲು ಅನುವಾಗಿದ್ದ ಸಿದಿಗೆಗೆ ಸುಮಾಳ ದೇಹವನ್ನು ಬಿಗಿದಿದ್ದರು. ಆ ನಾಲ್ಕು ಜನರಲ್ಲಿ ನನ್ನ ತಂದೆಯವರೊಬ್ಬರಾಗಿದ್ದರು.

ಒಂದಿಬ್ಬರು ನಿರ್ವಿಕಾರದಿಂದ ನಿಂತಿದ್ದ ಗೋಪಾಲರಾಯರನ್ನು ಹಿಡಿದುಕೊಂಡಿದ್ದರು.

ನನ್ನ ತಾಯಿ ಹಾಗು ಶಾಂತಿಮಾ-ಸೀತಾಬಾಯಿಯನ್ನು ಗಟ್ಟಿಯಾಗಿ ತಬ್ಬಿಕೊಂಡಿದ್ದರು. ಅವರು ಅತ್ತು ಅತ್ತು ಗಂಟಲು ಬಿದ್ದು ಹೋಗಿತ್ತು. ಕಣ್ಣುಗಳು ಬಾತಿದ್ದವು. ಮಾತಾಡಲಿಕ್ಕೂ ಉಸಿರು ಉಳಿದಿರಲಿಲ್ಲ.

ನನ್ನನ್ನು ನೋಡುತ್ತಲೆ ಸೀತಾಬಾಯಿ ಹತ್ತಿರ ಕರೆದುಕೊಂಡು-

"ಮಾಧು-ಇನ್ನು ನಿನ್ನ ಸುಮಾ ಇಲ್ಲಪ್ಪಾ-" ಎಂದು ಭೋರಾಡಿ ಅಳಹತ್ತಿದರು.

"ಅತ್ತೆ ಮತ್ತ ಸುಮಾ..."

ಇನ್ನೂ ನಾನು ಏನೇನೊ ಬಡಬಡಿಸುತ್ತಿದ್ದೆ ನನ್ನ ತಾಯಿ...

"ಮಾಧು ನೀ ಮನೀಗೆ ಹೋಗು"

ಎಂದು ಕಳಿಸಿಬಿಟ್ಟಳು, ಸೀತಾಬಾಯಿ ದುಃಖ ಮತ್ತೆ ಮರುಕಳಿಸಬಾರದೆಂದು

ಸುಮಾ ಹೇಗೆ ಸತ್ತಳು ನನಗೆ ತಿಳಿಯಲೇ ಇಲ್ಲ. ಯಾರೂ ನನಗೆ ಹೇಳಲಿಲ್ಲ ಎಂಬುದಕ್ಕೂ ಬೇಜಾರು ಬಂತು.

ಅಲ್ಲಿಯೇ ಒಂದಿಬ್ಬರು ಅವಳ ಸಾವಿನ ಬಗ್ಗೆ ಮಾತಾಡುತ್ತಿದ್ದರು. ಮೆಲ್ಲಗೆ ನಿಂತುಕೊಂಡು ಎಲ್ಲ ಮಾಹಿತಿ ಸಂಗ್ರಹಿಸಿದೆ.

ಸುಮಾ ಹೊಟ್ಟೆಯೊಳಗಾದ ಹುಣ್ಣು ಒಡೆದು ಸತ್ತಳಂತೆ. ಇನ್ನೂ ಏನೇನೊ ಅಂದರು, ನನಗೆ ತಿಳಿಯಲಿಲ್ಲ.

ನೇರವಾಗಿ ಮನೆಗೆ ಬಂದು ವರಾಂಡದಲ್ಲಿ ಕುಳಿತು...ಅತ್ತೆ...ಅತ್ತೆ...ಎಷ್ಟೋ ಹೊತ್ತಿನವರೆಗೆ.

* * *

ಮುಂದೆ ಕೆಲವೇ ದಿನಗಳಲ್ಲಿ ನನ್ನ ತಂದೆಗೆ ರಾಯಚೂರಿಗೆ ಬದಲಿಯಾಯಿತು. ನಾವೆಲ್ಲ ಅಲ್ಲಿಗೆ ಹೊರಟು ಹೋದೆವು. ಹೊಸ ವಾತಾವರಣ ನನಗೆ ಸ್ಥಳ ಬದಲಿ ಮಾಡಿದಂತಾಯಿತು.

ಕಾಲದ ತಸ್ಕರ ನವ...

... ... ... ... ...

ಮತ್ತೆ ಹತ್ತುಹನ್ನೆರಡು ವರ್ಷಗಳ ನಂತರವೇ ನಾನು ಕೊಪ್ಪಳಕ್ಕೆ ಹೋಗಿದ್ದು. ಆಗ ನಾನು ಪ್ರೌಢವಿದ್ಯಾವಂತ ನೌಕರಿಯ ಅನ್ವೇಷಣೆಯಲ್ಲಿ ಹೋಗಿದ್ದೆ....ಬರಗಾಲದ ಭೀಷಣ ಪರಿಸ್ಥಿತಿಯಲ್ಲಿ ತಂದೆ—ತಾಯಿಗಳಿಗೆ ಹೊರೆಯಾಗದೆ ನೌಕರಿ ಶೋಧಿಸಿ ಸಹಾಯ ನೀಡಬೇಕೆಂಬ ಉದ್ದೇಶದಿಂದ ಹೊರಟದ್ದೆ.

ಕೊಪ್ಪಳ ನೆಲದ ಮೇಲೆ ಕಾಲಿರಿಸುತ್ತಲೇ ಸುಮಾಳ ನೆನಪು ಕಾರಂಜಿಯಂತೆ ಚಿಮ್ಮಿತು. ಆ ಸೆಳೆತ ಗೋಪಾಲರಾಯರ ಮನೆಯ ವರೆಗೂ ಎಳೆದುಕೊಂಡು ಹೋಯಿತು.

ಕಂಪೌಂಡಿನ ಬಳಿ ಬಂದು ನಿಂತು ನೋಡುತ್ತೇನೆ. ಅದರ ಆಕಾರ ಭೂತದರ್ಶನದಂತಾಯಿತು. ನೀರು ಕಾಣದ ಪುಷ್ಪಲತೆಗಳು ಕಮರಿ ಬತ್ತಿದ ಮಡಿಯಲ್ಲಿ ಉದುರಿಬಿದ್ದಿದ್ದವು. ಗತ ಕಾಲದ ಕಥೆಯನ್ನು ಸಾರುವಂತೆ ಬೋಳು ವೃಕ್ಷಗಳು ಗೋಳೋ ಎನ್ನುತ್ತಿದ್ದವು.

ಭಾರವಾದ ಹೆಜ್ಜೆಗಳನ್ನು ಎತ್ತಿ ಇಡುತ್ತ ಬಾಗಿಲ ಬಳಿ ಹೋಗಿ ಚಿಲಕ ಬಾರಿಸಿದೆ.

'ಯಾರು'? ಎನ್ನುತ್ತ ಬಂದು ಬಾಗಿಲು ತೆರೆದ ವ್ಯಕ್ತಿಯನ್ನು ನೋಡಿ ನನಗೆ ಬವಳಿ ಬಂದಂತಾಯಿತು.

ಇವರು ಗೋಪಾಲರಾಯರೆ? ಎಂಥ ವಿಧಿ ವಿಲಾಸ ಎನ್ನಿಸಿತು. ಬಂಗಾರ ಬಣ್ಣದ ಆ ಮುಖ ಕಪ್ಪಿಟ್ಟುಹೋಗಿತ್ತು. ತಲೆತುಂಬ ಸುರಿದ ಬಿಳಿ ಕೂದಲು ಒತ್ತಾಯದ ವೃದ್ಧಾಪ್ಯವನ್ನು ಸೂಚಿಸುವಂತಿದ್ದವು.

ಹೊಲಸಾದ ಬನಿಯನ್, ಹರಿದ ಧೋತರವನ್ನು ಧರಿಸಿದ ಆ ವ್ಯಕ್ತಿ ಹಣೆಯ ಮೇಲೆ ಕೈಯಿರಿಸಿಕೊಂಡು ಕೇಳಿತು.

"ಯಾರೂ?"

"ನಾನು ಮಾಧು"

ನಾನು ಉಗುಳು ನುಂಗಿಕೊಂಡು ಹೇಳಿದೆ.

ಗೋಪಾಲರಾಯರು ಸ್ಮರಿಸಿಕೊಂಡು

"ಓ ನೀನ....ಮಾಧು ಎಷ್ಟು ದೊಡ್ಡವ ಆಗೀದಿ. ಗುರ್ತ ಸಿಗಲಿಲ್ಲ ನೋಡು. ಬಾ ಒಳಗ"

ಎಂದು ಕರೆದು ಅಲ್ಲಿಯೇ ಇದ್ದ ಖುರ್ಚಿಯ ಮೇಲೆ ಕೂಡಿಸಿ.

"ಏನs....ಮಾಧು ಬಂದಾನ ನೋಡು.... ಬಾ..."

ಎಂದು ಕೂಗುತ್ತ ಸೀತಾಬಾಯಿಯನ್ನು ಕರೆಯಲು ಒಳಗೆ ಹೋದರು.

ನಾನು ಸುತ್ತಲೂ ಕಣ್ಣಾಡಿಸಿ ದೃಷ್ಟಿಯ ಒಳಗಡೆ ಪ್ರತಿಯೊಂದು ದೃಶ್ಯದ ಪರದೆ ಸರಿಸಿ. ಸರಿಸಿ ನೋಡುತ್ತಿದ್ದೆ.

"ಏನಪ್ಪ ಮಾಧು ಆರಾಮ ಇದ್ದೀಯಾ?"

ಸೀತಾಬಾಯಿ ಮಾತಾಡಿಸಿದಾಗಲೇ ದೃಶ್ಯ ಬದಲಾಗಿದ್ದು. ಅವರೂ ಎಲವುಗಳನ್ನು ಮುಪ್ಪಿಗೆ ಮಾಡಿದಂತಾಗಿತ್ತು

ಸೀತಾಬಾಯಿಯ ಕಣ್ಣಲ್ಲಿ ಸುಮಾಳ ನೆನಪಿನ ಅಶ್ರುಗಳು ತನ್ನಷ್ಟಕ್ಕೆ ತಾವೇ ಮಿಡಿದವು.

"ನೋಡು ಮಾಧು ನೀನ ಹೇಳು ಬಂದು ಹೋಗೋರ ಮುಂದೆ ಎಲ್ಲಾ ಹಿಂಗ ಕಣ್ಣೀರು ಬ್ಯಾಡಾಂದ್ರ ಕೇಳೋದಿಲ್ಲಾ.''

ಎಂದು ತಮ್ಮ ದುಃಖವನ್ನು ಹತ್ತಿಕ್ಕಿಕೊಂಡು ನುಡಿದರು.

"ತಾಯಿ ಕರಳು ಮರಿಯೋದ ಹ್ಯಾಂಗ ಕಣ್ಣೀರು ಹೋದ್ರ ಮನಸು ಹಗುರಾಗ್ತದ''

ನಾನು ವೇದಾಂತಿಯಂತೆ ಮಾತಾಡಿದೆ.

"ಆದೇನೊ ಖರೇವು ಮಾಧು........ಆದ್ರ ಹಿಂಗ... ಕಣ್ಣೀರ ಹಕ್ಕೋತ ಕೂಡೋದ್ರಿಂದ ಏನು ಪ್ರಯೋಜನ ಹೇಳು? ಇರೋತನಕ ಹಿಂಗ ಜೀವಾ ಹಿಡಕೊಂಡು ಇರೋದ..."

ಗೋಪಾಲರಾಯರ ಆ ನುಡಿಗಳು ನನ್ನ ಹೃದಯವನ್ನು ಕಲಕಿದವು.

ನನ್ನ ಸುಮಾಳ ತಂದೆ ತಾಯಿಯ ಆ ಗತಿಯನ್ನು ಕಂಡು ಕರಳು ಕಿತ್ತಿ ಬಂದಂತಾಯಿತು. ಬಹಳ ಹೊತ್ತು ಅಲ್ಲಿ ಕೂಡ ನಿಲ್ಲಲಿಕ್ಕಾಗಲಿಲ್ಲ ನಮಸ್ಕರಿಸಿ ಹೊಂಟೇಬಿಟ್ಟೆ.

ಅನಂತರ ಅವರ ಜೀವನದ ಕಥೆಯನ್ನೆಲ್ಲ ಸಂಗ್ರಹಿಸಿದೆ. ಮಗಳ ಮರಣಾನಂತರ ರಾಯರ ಮತಿಭ್ರಮೆಯಾದಂತಾಗಿ ದುಃಖ ಮರೆಯಲು ಇಸ್ಪೇಟ್, ಕುಡಿಯುವದು—ಕುದುರೆ ಜೂಜು ಆಟಗಳಲ್ಲಿ ಹೊತ್ತು ಕಳೆಯಲಾರಂಭಿಸಿದರು. ಈ ಜೂಜದ ಮಾಯೆ ಅವರನ್ನು ಮುಂಬೈ ವರೆಗೂ ಎಳೆದುಕೊಂಡು ಹೋಗುತ್ತಿತ್ತು.

ಒಂದರ ಹಿಂದೆ ಒಂದು ಆಸ್ತಿ ಕೂಡ ಜೂಜಿನ ಕುದುರೆಯಂತೆ ಇವರಿಂದ ದೂರ ಓಡಹತ್ತಿದವು.

ಕೊನೆಗೆ ಉಳಿದದ್ದು-ಇಮಾಮನಿಗೆ ಉಂಬಳಿಯಾಗಿ ಕೊಟ್ಟ-ಹೊಲವೇ ಜೀವನೋಪಾಯಕ್ಕೆ ನೆರವಾಗಬೇಕಾಯಿತು. ಅಲ್ಲಿಯವರೆಗೆ ಬಂತು ಅವರ ಪರಿಸ್ಥಿತಿ

ಒಡೆಯ-ಒಡತಿಯರ ಹೊಟ್ಟೆ ತುಂಬಿದ ಮೇಲೆಯೇ ಇಮಾಮ-ಫಾತಿಮಾ ಊಟ ಸೇವಿಸುತ್ತಿದ್ದರು.

(ಅಂದು ನಾನು ಗೋಪಾಲರಾಯರ ಮನೆಗೆ ಹೋದಾಗ ಇಮಾಮ ಇರಲಿಲ್ಲ. ಬರಿ ಫಾತಿಮಾಳನ್ನು ಭೆಟ್ಟಿಯಾಗಿದ್ದೆ)

* *

ಗೋಡೆಗೆ ತೂಗಾಡುವ ಸುಮಾಳ ಚಿತ್ರಪಟವನ್ನು ನೋಡಿದಾಗ ಅವನ ಕಣ್ಣಲ್ಲಿ ನುಂಗಿದ ಅಳು ಮಿಡಿಯಿತು. ಸ್ವಲ್ಪ ಹೊತ್ತು ಅಲ್ಲಿಯೇ ನಿಂತು ಒಳಗೆ ಹೋದ.

ಮಹಡಿಯ ಆ ಕೋಣೆಯ ತುಂಬೆಲ್ಲ ಕಣ್ಣಾಡಿಸಿ ನೋಡಿದ ಮೂಲೆಯಲ್ಲಿ ಸುಮಾಳ ಆಟಿಗೆ ಸಾಮಾನುಗಳು ಸೂರೆಯಾಗಿದ್ದವು. ಗೋಪಾಲರಾಯರು ಮಲಗುವ 'ಕಾಟ್' ಮೇಲೆ ಸುಮಾ



ಸದಾ ಎತ್ತಿ ಆಡಿಸುತ್ತಿದ್ದ ಕಾಜಿನ ಗೊಂಬೆ ಅಂಗಾತ ಬಿದ್ದಿತ್ತು. ಇಮಾಮು ಅಂದುಕೊಂಡ-

"ಪಾಪ ಅಪ್ಪಾ ಅವ್ರಿಗೆ ಸುಮಕ್ಕನ ನೆನಪು ಆಗಿರಬೇಕು ಇವೆಲ್ಲ ಹರವಿದ್ದು ನೋಡಿದ್ರ ಅವರ ಮನಸಿನ್ಯಾಗ ಎಷ್ಟು ಗೊಂದಲ ಎದ್ದಿರಬೇಕು ಎನ್ನೋದು-ಗೊತ್ತ ಆಗ್ತದ "

ಹಿಂದಿನ ದಿನ ಹೇಳಿದ್ದರು- ಗೋಪಾಲರಾಯರು:

"ಇಮಾಮ್. ಸುಮಾನ ನೆನಪು ಭಾಳಾ ಆಗ್ತದ ಏನು ಮಾಡೋದು-ಈಕೆ ಗದಗಿಗೆ ಹೋದರೆ ಇನ್ನೂ ಬರಲಿಲ್ಲ ಭಾಳ ದಿವಸ ಆತು. ಕೈಯಾಗ ರೊಕ್ಕಾನೂ ಇಲ್ಲ, ಏನು ಮಾಡೋದು?"

ಆಗ ಇಮಾಮು ಅಸಹಾಯಕನಾಗಿದ್ದ.

ಮತ್ತೆ ಗೋಪಾಲರಾಯರು ಹೇಳಿದ್ದರು:

"ಇದು ಕಡೇದು ಇಮಾಮು ಸುಮಾಳ ಈ ಉಂಗರಾ ಒತ್ತಿ ಇಟ್ಟು ಬಿಡ್ತೀನಿ. ಆ ಮ್ಯಾಲೆ ಬಿಡಿಸಿಕೊಂಡು ಬಂದರಾಯಿತು. ಮತ್ತೇನು ಮಾಡೋದು, ಹರಕತ್ತಾಗೇದ...."

ಇಮಾಮುನಿಗೆ ಏನು ಮಾತಾಡಬೇಕು ತಿಳಿಯಲಿಲ್ಲ. ಮೌನ ಉತ್ತರವಿತ್ತಿದ್ದ. ಮರುಕ ಮೂಡಿತ್ತು.

ಇಂದು ಇಮಾಮುನಿಗೆ ಫಾತಿಮಾಳ ಪ್ರಾಣ ರಕ್ಷಣೆಗಾಗಿ ಹಣ ಬೇಕಾಗಿದೆ.-

"ಛೇ- ಅಪ್ಪಾವ್ರ ಮನ್ಯಾಗ ಅವ್ರಿಗೆ ಹೇಳ್ದ ಕೇಳ್ದ ತಗೊಳ್ಳದ....ಅವರ್ನ ಕೇಳಬೇಕು ಅಂದ್ರ ಅವ್ರ ಇಲ್ಲs ಇಲ್ಲ....ಏನು ಮಾಡೋದು "

ಒಂದೆಡೆ ಪ್ರೀತಿಯ ಮಡದಿ ಫಾತಿಮಾಳ ಜೀವ....ಇನ್ನೊಂದೆಡೆ ಇಡೀ ತನ್ನ ಜೀವನದಲ್ಲಿ ಎಸಗಲಾರದಂತಹ ಕಾರ್ಯಕ್ಕೆ ಅನುವಾಗಬೇಕಾಗಿದೆ. ಎಷ್ಟೋ ಸಮಯದ ವರೆಗೆ ಈ ದ್ವಂದ್ವದಲ್ಲಿ ಸಿಲುಕಿದ್ದ ಇಮಾಮು.

ಅಷ್ಟರಲ್ಲಿ ಹತ್ತಿರದಲ್ಲಿಯೇ ಟೇಬಲ್ ಮೇಲೆ ಇದ್ದ ಪುಸ್ತಕದ ಒಳಗೆ ಒಂದು ಹಸಿರು ನೋಟು ಕಾಣಿಸಿತು. ಇಮಾಮು ಸರಕ್ಕನೆ ತೆಗೆದುಕೊಳ್ಳಲು ಅಡರಾಸಿದ. ಆದರೆ....ಅವನ ಒಳದನಿ ಮತ್ತೆ ಹಿಡಿದು ನಿಲ್ಲಿಸಿತು.

"ಏನ ಮಾಡ್ಲಿ ಅಪ್ಪಾ ಅವರು ಸುಮಕ್ಕನ ಉಂಗರಾ ಒತ್ತಿ ಇಟ್ಟು ರೊಕ್ಕಾ ತಂದಿರಬೇಕು. ಅದ್ನ ಹ್ಯಾಂಗ ತೊಗಳ್ಳಿ...." "ಏನಾತು ಆ ಆ ವೇಳೆ ಅಪ್ಪಾ ಅವರಿಗೆ ಹೇಳಿದ್ರ ಆತು... ಫಾತಿ ಜೀವ ಅಪಾಯದಾಗ ಅದ........ನನ್ನ ಕಣ್ಣೀಲೆ ಅಕಿ ಸಾವು ನೋಡಬೇಕ...? ಏನ ಆಗಲಿ ದುನಿಯಾ ನನ್ನ ಕೆಟ್ಟ ಅನ್ಲಿ-ಚಿಂತಿಲ್ಲ... ಫಾತಿನ್ನ ಉಳಿಸಿಕೊಳ್ಳಬೇಕು..."

ಇಮಾಮು ಗಟ್ಟಿ ಮನಸ್ಸು ಮಾಡಿ ಆ ಹಸಿರು ನೋಟನ್ನು ತೆಗೆದುಕೊಂಡು ಭರಭರನೆ ಅಟ್ಟ ಇಳಿದು ಬಾಗಿಲಿಗೆ ಬೀಗ ಹಾಕಿ ಮನೆಗೆ ಓಡಿದ. ಅವನ ಮುಖದಲ್ಲಿಯ ಬದಲಾವಣೆಯನ್ನು ಕಂಡ ಫಾತಿಮಾ,

"ಏನು ಇಷ್ಟ ಗಾಬರಿ ಆಗಿ...ಎಲ್ಲಿಗೆ ಹೊಂಟಿ?"-ಎಂದು ಕೇಳಿದಳು.

ಅದಾವುದರ ಅರಿವೂ ಅವನಿಗಿರಲಿಲ್ಲ- ಕೀಲಿ ಕೈಯನ್ನು ಕೋಣೆಯ ಕಂಬಕ್ಕೆ ತೂಗ ಹಾಕಿ ಫಾರ್ಮಸಿಗೆ ಓಡಿದ.

ಕುಡಿದು ನಿಶೆಯಲ್ಲಿ ಮತ್ತನಾದ ಫಾರ್ಮಸಿಯ ಮಾಲಕ ಜಾನ್-'ಅವೊ ಇಮಾಮ್'- ಎಂದು ಸ್ವಾಗತಿಸಿದ.

"ಜಾನ್ ಸಾಬ್- ಈ ಅವಸುಧಾ--ಅವ ಏನ ನೋಡ್ರಿ..."-ಎಂದು ಡಾಕ್ಟರ ಬರೆದುಕೊಟ್ಟ ಚೀಟಿಯನ್ನು ಅವರಿಗಿತ್ತ.

ಜಾನ್ ಒಂದೆರಡು ಸಲ ಅದನ್ನೋದಿಕೊಂಡು 'ಅವ' ಎಂದ. ಇಮಾಮು ಔಷಧಿಯನ್ನೆಲ್ಲ ತೆಗೆದುಕೊಂಡು ಹಸಿರು ನೋಟನ್ನು ಜಾನನ ಕೈಯಲ್ಲಿ ಕೊಟ್ಟು ಲಗುಬಗೆಯಿಂದ ಮನೆಯತ ಹೊರಟ

"ಏ! ಇಮಾಮ್--ಉಳಿದ ಚಿಲ್ಲರ ತಗೊಂಡು ಹೋಗು"-ಎಂದು ಕೂಗಿದ ಜಾನ್.

ಅದಾವುದರ ಲಕ್ಷ್ಯ ಇಮಾಮುನಿಗಿರಲಿಲ್ಲ.

ಮನೆ ತಲುಪಿದಾಗ ಫಾತಿಮಾ ಇನ್ನಷ್ಟು ನಿಶ್ಯಕ್ತಳಾಗಿದ್ದಳು.

"ಎಲ್ಲಿಗೆ ಹೋಗಿದ್ದೆ?"

—ಕ್ಷೀಣ ಸ್ವರದಲ್ಲಿ ಕೇಳಿದಳು.

"ಈ ಗುಳಗಿ ತಗೋ ಫಾತಿ..."

-ಅವನ ಬಾಯಿ ತಡವರಿಸಿತು. ಕೈ ಕಂಪಿಸಿತು. ಫಾತಿಮಾ ಅವನ ಆತುರದಿಂದ ಎದ್ದು

"ರೊಕ್ಕ ಯಾರು ಕೊಟ್ಟರು?" -ಎಂದು ಕೇಳಿದಳು.

ಇಮಾಮುನಿಗೆ ಏನು ಉತ್ತರಿಸಬೇಕು ತಿಳಿಯಲಿಲ್ಲ. ಆದರೂ ಸಾವರಿಸಿಕೊಂಡು

"ಫಾತಿ ನಾ ಒಂದು ತಪ್ಪು ಮಾಡ್ದೆ"

-ಎಂದ ಅವನ ಮಾತು ಕೇಳಿ-ಗಟಕ್‌ನೆ ನುಂಗಿ ನೀರು ಕುಡಿದು ಏನು ಎಂದೆ. ಫಾತಿಮಾ ಗಾಬರಿಯಿಂದ ಕೇಳಿದಳು

"ಫಾತಿ ಅಪ್ಪಾ ಅವ್ರು ಎದಕ್ಕ ರೊಕ್ಕ ತಂದು ಇಟ್ಟಿದ್ದರ ಏನೋ? ಆ ರೊಕ್ಕಾನ...."

"ಏನು ಅಪ್ಪಾ ಅವರ ರೊಕ್ಕಾ....ಕಳವು... ಮಾಡ್ದಾ........ಅಂತೂ ಎಂಥಾ ಹೊತ್ತು ಬಂತಲ್ಲಾ..."

"ಮತ್ತ ಏನು ಮಾಡಬೇಕಿತ್ತಾ ಫಾತಿ... ಬ್ಯಾರೆ ಹಾದೀನ ಇರಲಿಲ್ಲ...ಇಂಥಾ ಹೊತ್ತಿನ್ಯಾಗ ಯಾರು ನನಗಾರ ರೊಕ್ಕ ಕೊಡಬೇಕು ಹೇಳು—ಇರದಿದ್ದರ...ನಿನ್ನ ಜೀವ—"

"ಹಿರ್‍ಯಾ-ನೀ ಇದ್ನ ಮಾಡಬಾರದಿತ್ತು- ನಾ ಸತ್ತಿದ್ರರೂ ಚಿಂತಿ ಇಲ್ಲಾ...ನಮ್ಮ ಅಪ್ಪಾ ಅವ್ರ ಮನ್ಯಾಗ......ಕಳವು ಮಾಡಬಾರದಿತ್ತು..."

-ಎಂದು ಹಲುಬಿದಳು ಫಾತಿಮಾ

ಇಮಾಮನೂ ದಿಕ್ಕು ತೋಚದವನಾಗಿ ಗರ ಬಡದವರಂತೆ ಕುಳಿತುಬಿಟ್ಟ.

ಅಷ್ಟರಲ್ಲಿ ಗೋಪಾಲರಾಯರು ಬಂದು ಬೀಗದ ಕೈ ತೆಗೆದುಕೊಂಡು ಹೋದರು ಅವರನ್ನು ಕಂಡಾಗಲೇ ಇಮಾಮನ ಮುಖ ಪೆಚ್ಚಾಯಿತು.

"ಇನ್ನೇನು ಮಾಡಲಿ ಫಾತಿ ಅಪ್ಪಾ ಅವ್ರಿಗೆ ಹ್ಯಾಂಗ ಮುಖಾ ತೋರಿಸಲಿ...?"

ಅವನ ಮನಸ್ಸು ಮಿತದೊಳಗೆ ಉಳಿಯಲಿಲ್ಲ.

ಗೋಪಾಲರಾಯರು ಮನೆಯೊಳಗೆ ಸುತ್ತಾಡುತ್ತ "ಇಮಾಮ್ ನಾ ಎಲ್ಲೆ ರೊಕ್ಕ ಇಟ್ಟೆ ಸಿಗವಲ್ಲು..." ಎಂದು ಶತಪಥ ಹಾಕಹತ್ತಿದ್ದರು

ಇಮಾಮನ ಕಣ್ಣುಗಳು ರಾಯರ ಹಾವಭಾವಗಳನ್ನು ಎಣಿಸಹತ್ತಿದ್ದವು. ಕೆಲ ನಿಮಿಷಗಳ ನಂತರ ಏನೋ ನಿರ್ಣಯಕ್ಕೆ ಬಂದವನಂತೆ ದಿಗ್ಗನೆ ಎದ್ದು ಹೊರಗೋಡಿದ.

"ಎಲ್ಲಿಗೆ ಹೊರಟಿ?"

ಮೆಲ್ಲಗೆ ಎದ್ದು ಫಾತಿಮಾ ಕೂಗಿದಳು

ಅವನ ಗಮನ ಅತ್ತ ಇರಲೇ ಇಲ್ಲ

"ಹೌದು ಅದೇ ನನ್ನ ದಾರಿ..."

ಎಂದು ನಿರ್ಣಯಕ್ಕೆ ಬಂದಿದ್ದ.

× × ×

ಅಂದು ನಾನು ನೌಕರಿಯ ಅನ್ವೇಷಣೆಯಲ್ಲಿ ಪೊಲೀಸ ಸ್ಟೇಷನ್ನಿಗೆ ಹೋಗಿದ್ದೆ ನೌಕರಿಗಾಗಿ ಪೊಲೀಸ ಸ್ಟೇಷನ್ನಿಗೇಕೆ ಎನ್ನುತ್ತೀರಾ?...

ಅಲ್ಲಿಯ ಇನಸ್ಪೆಕ್ಟರ್ ರಮೇಶ ನನ್ನ ಸ್ನೇಹಿತ. ಅವನನ್ನು ಕಾಣದೆ ಬಹುದಿನವಾಗಿತ್ತು. ಅವನ ಮುಂದೆಯೂ ನೌಕರಿಯ ಯೋಚನೆ ಇಡುವ ಎಂದು ಹೋಗಿದ್ದೆ

ಇಬ್ಬರೂ ಹರಟುತ್ತ ಕುಳಿತೆವು. ಅದೇ ಆಗ ರಜಾಕಾರರ ದಂಗೆಯ ದಿನಗಳು ಕೊನೆಗೊಂಡುದರಿಂದ ಆ ವಿಷಯವಾಗಿಯೇ ಅನೇಕ ಕಥೆಗಳು ಕೇಳಿಬರಹತ್ತಿದ್ದವು

ಒಬ್ಬ ಪೊಲೀಸ ಒಳಗೆ ಬಂದು ರಮೇಶಗೆ ಸೆಲ್ಯೂಟ ಮಾಡಿ..."ಸಾಬ ನಿಮನ್ನ ನೋಡಲಿಕ್ಕೆ ಯಾರೋ ಬಂದಾರ" ಎಂದ.

ರಮೇಶ ಅವನನ್ನು ಒಳಗೆ ಕಳಿಸಲಿಕ್ಕೆ ಹೇಳಿದ

ಆ ವ್ಯಕ್ತಿ ಮತ್ತಾರೂ ಆಗದೆ ಇಮಾಮನೇ ಆಗಿದ್ದಕ್ಕೆ ಮತ್ತಷ್ಟು ಆಶ್ಚರ್ಯವಾಯಿತು ರಮೇಶನು ಅವನನ್ನು ಚೆನ್ನಾಗಿ ಬಲ್ಲ

ಇಮಾಮನ ಕೈಗಳು ನಡುಗುತ್ತಿದ್ದವು
"ಏನು ಇಮಾಮು ಬಂದೆ?"

ಎಂದು ರಮೇಶ ಕೇಳಿದ

"ಸಾಬ್ ನನ್ನ ತಪ್ಪ ಆಗೇದ. ನಾ ಕಳವು ಮಾಡೀನಿ ನನ್ನ ಹಿಡಿದು ಹಾಕರಿ."

ಅವನು ಏನೇನೊ ಬಡಬಡಿಸಹತ್ತಿದ. ನನ್ನ ಕಡೆಗೆ ಅವನ ದೃಷ್ಟಿ ಹರಿದಿರಲಿಲ್ಲ ಅವನ ನುಡಿಗಳೂ ನನಗೂ ರಮೇಶನಿಗೂ ಆಶ್ಚರ್ಯ ನೀಡಿತು. "ಏನು ಇಮಾಮ ನೀನು ಕಳವು ಮಾಡ್ದ್ಯಾ?" ರಮೇಶ ಮತ್ತೆ ಪ್ರಶ್ನಿಸಿದ ಆಶ್ಚರ್ಯದಿಂದ



"ಹೌದು ಸಾಬ್..."

"ಯಾರ ಮನಿಯೊಳಗ...''

"ನಮ್ಮ ಅಪ್ಪಾಅವ್ರು ಗೋಪಾಲರಾಯರ ಮನ್ಯಾಗ ಅವರು ಇಲ್ಲಾಗ ಕೀಲಿ ತಗದು"...

ಎಂದು ಇನ್ನೂ ಇಮಾಮು ವಿವರಣೆ ಕೊಡ ಬೇಕೆಂದಿದ್ದ ಆಗ

"ಇಲ್ಲ ಇನಸ್ಪೆಕ್ಟರ್ ನನ್ನ ರೂಪಾಯಿ ಕಳವು ಆಗಿಲ್ಲಾ......ಇಮಾಮ್ನಗ ಹಿಂಗ್ಯಾಕ ಭ್ರಮೆ ಆತೊ ತಿಳಿದಿಲ್ಲ ಆತ ಕಳವು ಮಾಡಿಲ್ಲ...ನಾನು ಎಲ್ಲಿಯೋ ತಗದು ಇಟ್ಟಿದ್ದೆ.''

ಎನ್ನುತ್ತ ಒಳಗೆ ಬಂದರು ಗೋಪಾಲ ರಾಯರು.

ರಮೇಶ ಖುರ್ಚಿಕೊಟ್ಟುಕೂಡಿಸಿ ಕೂಲಂಕ ಷವಾಗಿ ವಿಚಾರಿಸಿದ. ಗೋಪಾಲರಾಯರು ಹೇಳಿದರು: ನನ್ನ ನೂರು ರೂಪಾಯಿ ನೋಟು ಟ್ರಂಕಿನ ಡೈರಿ ಒಳಗ ಇಟ್ಟು ಮನಿ ತುಂಬ ಹುಡುಕ್ಯಾಡ್ದೆ ಸಿಗಲಿಲ್ಲ. ಎಷ್ಟೋ - ಹೊತ್ತಿನ ಮ್ಯಾಲೆ ನೆನಪು ಆತು. ತಗದು ನೋಡಿದೆ ರೂಪಾಯಿ ಅಲ್ಲೇ ಇದ್ದವು. ಇಮಾಮ್ನ ಒದ್ರಿದೆ. ಆಗ ನಿಶ್ಯಕ್ತಳಾದ ಫಾತಿಮಾ ಮೆಲ್ಲಗೆ ಬಂದು ಕಣ್ಣೀರುಸುರಿಸುತ್ತಾ ಎಲ್ಲಾ ಹೇಳಿದಳು ನನ್ನ ರೂಪಾಯಿ ಕಳದಿಲ್ಲ ಇಮಾಮು ಅವ್ನ ತಗೊಂಡಿಲ್ಲ ಎಂದು ಸಮಾಧಾನ ಮಾಡಿ ಮನೆಗೆ ಕಳಿಸಿ ಬಂದೆ."

"ನೋಡಪ್ಪಾ, ಇಮಾಮು ಏನೇನೊ ಸುಳ್ಳ ಸುಳ್ಳ ತಲ್ಯಾಗ ಹಕ್ಕೊಂಡು ಬಂದಿ...''

ಎಂದು ನಗುತ್ತ ನುಡಿದ ರಮೇಶ.

"ಇಮಾಮು ಒಂದುವ್ಯಾಳ್ಯಾ ರೂಪಾಯಿ ನೀ ತಗೊಂಡಿದ್ದರೂ ಅವ್ನ ಕಳವು ಅಂತ ಯಾಕ ತಿಳಕೊಂಡಿ? ನಿನ್ನ ಹಾಗ ಅನ್ನಿಕ್ಕೆ ನನ್ನ ನಾಲಿ ಗಾದ್ರು ಏಳ್ತದೇನು?"

ಆ ಸಮಯಕ್ಕೆ ಫಾರ್ಮಸಿಯ ಜಾನ್ ಕಂಪ್ಲೇಂಟ್ ಕೊಡಲಿಕ್ಕೆ ಅಲ್ಲಿಗೇ ಬಂದ.

"ಇನಸ್ಪೆಕ್ಟರ್ ಸಾಬ್, ಆ ಗೋಪಾಲ ರಾಯರ ಮನಿ ಇಮಾಮು ಇದ್ದಾನಲ್ಲ''

ಎಂದು ಅವನು ಹೇಳುತ್ತಿದ್ದಾಗ ಮಧ್ಯ ತಡೆದು "ಏನದು-ಗೋಪಾಲರಾಯರ ಇಮಾಮು ಇಲ್ಲೇ ಇದ್ದಾನಲ್ಲ...''

ಎಂದು ರಮೇಶ ಪ್ರಶ್ನಿಸಿದ.

"ಹಾಂ! ಇಲ್ಲೆ ಇದ್ದಾನ-ಸಾಬ್ ಇವ್ನ ಹಿಡಿರಿ ...ಅರೆಸ್ಟ್ ಮಾಡ್ರಿ. ಈತ ನೂರು ರೂಪಾಯಿ ಖೊಟ್ಟಿ ನೋಟು ಕೊಟ್ಟು ಔಷಧ ಒಯ್ದಾನ-"

ಎಂದು ದುರು ದುರು ಇಮಾಮನನ್ನ ನೋಡಿದ.

ರಮೇಶ ಆ ನೂರು ರೂಪಾಯಿ ನೋಟನ್ನು (ನೈಜಾಂ ನಾಣ್ಯದಾಗಿದ್ದ) ಕೈಯಲ್ಲಿ ತೆಗೆದು ಕೊಂಡು ಪರೀಕ್ಷಿಸಿ ಖೊಳ್ಳನೆ ನಕ್ಕುಬಿಟ್ಟ.

"ಇದು ಮಕ್ಕಳ ಆಟದ ರೂಪಾಯಿ. ಇದ್ನ ನೀ ಹ್ಯಾಂಗ ತಗೊಂಡಿ ಮಿ ಜಾನ್"

"ಸಾರ್, ಸ್ವಲ್ಪ ನಿಶ್ಯಾದಾಗ...ಇದ್ದೆ...''

ಅವನು ತಡವರಿಸಿದ.

"ಇದೆಲ್ಲಿ ಸಿಗ್ತು ನಿನಗ ಇಮಾಮು!''

ಗೋಪಾಲರಾಯರು ಪ್ರಶ್ನಿಸಿದರು.

"ಸಾರ್ ಫಾತಿಗೆ ಭಾಳ ಸೀರಿಯಸ್ ಅಂದ್ರು ಡಾಕ್ಟರ್ರು. ಔಷದ ಲಗೂನ ತರಬೇಕು ಅಲಕ್ಷ ಮಾಡಬಾರ್ದು ಅಂತ ಹೇಳಿದ್ರು. ಆಗ ನನ್ನ ಹತ್ತರ ರೊಕ್ಕ ಎಲ್ಲಿಂದ ಬರಬೇಕು? ನೀವು ಇರಲಿಲ್ಲಾ-ಆದ್ರೆ ಕೆಟ್ಟ ಮನಸ್ಸ-ನೀವು ಇಲ್ಲದಾಗ ಬಾಗಲಾ ತಗದು ಮಹಡಿಮ್ಯಾಲೆ ಹೋದೆ. ಅಲ್ಲಿ ಸುಮಕ್ಕನ ಆಟಿಗಿ ಸಾಮಾನ ಗೊಂಬಿ ಎಲ್ಲ ಬಿದ್ದಿದ್ದವು. ಅಲ್ಲಿ ಇದ್ದ ಟೇಬಲ್ ಮ್ಯಾಲಿನ ಪುಸ್ತಕದ ಕೆಳಗ ಈ ನೋಟು ಇತ್ತು. ತಗೊಂಡ ಜಾನ್ ಸಾಬ್ ಅಂಗಡಿಗೆ ಬಂದೆ'' ನಿಷ್ಕಲ್ಮಷ ಮನದಿಂದ ಇಮಾಮು ವಿವರಿಸಿದರು



ಆಗ ಗೋಪಾಲರಾಯುರು ಅನುಕಂಪದಿಂದ ನುಡಿದರು. "ಹೌದು ಇನಸ್ಪೆಕ್ಟರ್...ಎಷ್ಟೋ ವರ್ಷಾಗಿಹೋತು.ನನ್ನ ಮಗಳು ಸುಮಾಗ ಆಡಲಿಕ್ಕೆ ಇವೆಲ್ಲ ತಂದುಕೊಟ್ಟಿದ್ದೆ. ನೊನ್ನೆ ಆಕಿ ನೆನಪು ಭಾಳ ಆಗಲಿಕ್ಕೆ ಹತ್ತಿತು. ಅವಾಗೆ ಸಾಮಾನು ಗೊಂಬಿ ಎಲ್ಲಾ ಹೊರಗ ತೆಗೆದಿದ್ದೆ ಅದ್ರ ಸರಿ ಇದು ಹೊರಗ ಬಂದಿರಬೇಕು."

ರಮೇಶ ಸ್ವಲ್ಪ ಸಮಯ ಮೌನವಾಗಿದ್ದು ಇಮಾಮನತ್ತ ತಿರುಗಿ...

''ಇಮಾಮ ನೀ ಈಗ ಮನಿಗೆ ಹೋಗು ನಿನ್ನ ಹೆಂಡತಿಗೆ ಆರಾಮ ಇಲ್ಲ ಅಂತಿ.''

ಎಂದ.

"ಸಾರ್ ನನ್ನ ರೂಪಾಯಿ?''

ಬೇಟೆ ಎಲ್ಲಿ ಓಡಿ ಹೋಗುತ್ತದೊ ಎಂಬ ಭಾವದಿಂದ ಜಾನ್ ಕೇಳಿದ.

"ಎಷ್ಟು ಜಾನ್, ನಾ ಕೊಡ್ತೀನಿ"

ಗೋಪಾಲರಾಯರು ಸುಮಾಳ ಉಂಗುರ ವನ್ನು ಒತ್ತಿ ಇರಿಸಿ ತಂದ ರೂಪಾಯಿಗಳನ್ನು ಹೊರ ತೆಗೆದರು.

"ಮೂವತ್ತು ರೂಪಾಯಿ"

-ಜಾನ್ ಹೇಳಿದ.

ಗೋಪಾಲರಾಯರು ಹಣ ಕೊಟ್ಟು ಅವನು ಹೋದ ಮೇಲೆ ನನಗೂ--ರಮೇಶಗೂ ವಂದಿಸಿ ಹೊರಟು ಹೋದರು.

ಆಗಲೇ ಇಮಾಮ ಮನೆಯತ್ತ ಓಡಿದ್ದ-ದಾರಿಯುದ್ದಕ್ಕೂ ಏನೇನೋ ಯೋಚಿಸುತ್ತ-ಮನೆಗೆ ಬಂದು ಹೊರಸಿನ ಮೇಲೆ ಮಲಗಿದ್ದ ಫಾತಿಮಾಗೆ-

"ಫಾತಿ...ಫಾತಿ...ನಾನು ಕಳವು ಮಾಡಿಲ್ಲಾ ...ದೇವ್ರು ಉಳಿಸಿದ ನೋಡು—ಸುಮಕ್ಕನ ಆಟಗೀ ಸಾಮಾನದಾಗಿನ ನೋಟ ಒಯ್ದಿದ್ದೆ."

ಎಂದು ಸಂತಸದಿಂದ ತಿಳಿಸಿದ.

ಆ ಸುದ್ದಿಯನ್ನು ಕೇಳಲಿಕ್ಕೆ ಫಾತಿಮಾ ಈ ಲೋಕದಲ್ಲಿ ಇರಲಿಲ್ಲ.

ಇಮಾಮ ಗಾಬರಿಯಿಂದ

"ಫಾತಿ ಫಾತಿ..."

—ಎಂದು ಅವಳ ಮೊಗ ದಿಟ್ಟಿಸಿ ನೋಡಿದ.

ಫಾತಿಮಾಳ ತೆರೆದ ಕಣ್ಣುಗಳು ಥಳಥಳ ಹೊಳೆಯುತ್ತಿದ್ದವು. ಮೊಗ ಮಂದಸ್ಮಿತವಾಗಿತ್ತು...





# ಮುಗಿಲು ಬಳೆ ತೊಟ್ಟುಕೊಂಡಳು

-೧-

ಹೇಮಮಾಲಿನಿಯ ಹೆಸರು ಅತ್ತೆಯ ಮನೆಯಲ್ಲಿ ಮಂಗಲಾ ಎಂದು ಪರಿವರ್ತಿತವಾಗಿತ್ತು. ಈ ಹೆಸರಿನ ಬದಲಾವಣೆಯನ್ನು ಹೇಮಮಾಲಿನಿ ತನ್ನ ಎಲ್ಲ ಎಮ್. ಎ. ಬುದ್ಧಿಯನ್ನು ಉಪಯೋಗಿಸಿ ಪ್ರತಿಭಟಿಸಿದಳು ಅವಳ ಆಟ ಸಾಗಲಿಲ್ಲ. ನಿರಕ್ಷರಿಯಾದರೂ ಒಂದು ದೊಡ್ಡ ಮನೆತನವನ್ನು ತೂಗಿಸಿಕೊಂಡು ಹೋಗುತ್ತಿರುವ ಹಳ್ಳಿಯ ತಾಯವ್ವನ ಮಾತೇ ಗೆದ್ದಿತು. ಅತ್ತೆ ಮಂಗಲಾ ಎಂದು ನಾಮಕರಣ ಮಾಡಿದಳು. ಆದರೆ ಈ ಸೊಸೆ ಎಲ್ಲರ ಮುಂದೆ ತಾನು ಹೇಮಮಾಲಿನಿ ಎಂದೇ ತನ್ನ ಹೆಸರು ಹೇಳಿಕೊಳ್ಳುತ್ತಿದ್ದಳು ಪ್ರೊಫೆಸರ್ ಗಂಡನಾದ ಪಿ. ಎಚ್. ಡಿಯು ಮಂಗಲಾ ಎಂದಾಗ ಇವಳು ತುಸು ಮುನಿಸಿನ ಕಣ್ಣುಗಳಿಂದ ನೋಡಿ ರೆಪ್ಪೆಬಡಿಯುತ್ತಿದ್ದಳು. ತಾಯವ್ವ ಹಳ್ಳಿಗೆ ಹೋದ ಮೇಲೂ ಮಂಗಲಾ ಹೆಸರೇ ನಿಂತಿತು. ಗಂಡನಿಂದ ಹಗರಣ ತಪ್ಪಿಸಿಕೊಳ್ಳಲೆಂದು ಈ ಎಮ್. ಎ ಸೌಭಾಗ್ಯವತಿ ಇದನ್ನು ತಾಳಿಕೊಂಡಳು. ಅವಳ ದೃಷ್ಟಿಯಲ್ಲಿ ಅವಳ ಸಮಾಜವು ಒಂದು ನೂರು ವರುಷವಾದರೂ ಹಿಂದೆ ಇರುವದಾಗಿ ಕಂಡಿತು ಬೈರನ್ನನ ಕವನಗಳಲ್ಲಿ ಆಸ್ಕರ ವಾಯಲ್ಡನ ನಾಟಕಗಳಲ್ಲಿ ಬಹುಶಃ ಈ ಆಂಗ್ಲ ಭಾಷಾ ಪ್ರವೀಣೆ ತನ್ನ ಸಮಾಜವನ್ನು ಗುರುತಿಸಿಕೊಂಡಿರಬಹುದೆಂಬಂತಿತ್ತು ಅವಳ ಆಚರಣೆ, ಕನ್ನಡ ನಾಡು. ಕನ್ನಡ ಸಮಾಜ, ಕನ್ನಡ ಕವಿಗಳು ಇವಳಿಂದ ಬಹು ದೂರ ಹೋದಂತಿತ್ತು. ಕನ್ನಡ ಜನ ಮಧ್ಯದಲ್ಲಿ ಬಾಳಿ ಬದುಕಬೇಕಾದ ಇವಳು ಥೇಮ್ಸ್ ನದಿಯ ದಡದಲ್ಲಿ ವಿಹರಿಸುತ್ತಿದ್ದಳು.

ಹಿರಿಯರಿಲ್ಲದ ಮನೆ. ಭಾವನಾಜೀವಿಯಾದ ಪತಿ, ತನ್ನದಲ್ಲದ ಸಂಸ್ಕೃತಿಗೆ ಶರಣುಹೋದ ಈ ಸೌಭಾಗ್ಯವತಿ- ಮಂಗಲಾ ಜೀವನದ ತೆಪ್ಪದಲ್ಲಿ ಜೋಕಾಲಿಯಾಡತೊಡಗಿದಳು.

ಹಿಂದೂ ಸಂಸ್ಕೃತಿಯ ಪೋಷಕ ವಾಹಿನಿಗಳಂತಿದ್ದ ಹಬ್ಬ ಹರಿದಿನಗಳು ಇವಳ ಪಾಲಿಗೆ ವೇಳೆಯ ಅಪವ್ಯಯವಾಗಿದ್ದವು. ಅರಿಷಣ ಕುಂಕುಮ, ಹೂ ವೀಳ್ಯಗಳು ಕಾಡು ಸಂಸ್ಕೃತಿಯ ಪ್ರತೀಕಗಳಾಗಿದ್ದವು. ಚೈತ್ರಗೌರಿ, ಶ್ರಾವಣಗೌರಿ ವ್ರತಗಳೆಲ್ಲ ಮುತ್ತೈದೆಯರಿಗೆ ಕರಿಗಡಬು ತಿನ್ನುವ ಸಾಧನೆಗಳೆಂದು ಇವಳು ಬಗೆಯುತ್ತಿದ್ದಳು ಇವಳು ಯಾರೊಡನೆಯೂ ಹೊಂದಿಕೊಳ್ಳುತ್ತಿರಲಿಲ್ಲ. ಅಜ್ಞಾನಿಗಳಾದ ಸಮಾಜದ ಹೆಂಗಸರೊಡನೆ ಬೆರೆಯುವದೆಂದರೆ ಇವಳಿಗೆ ಗೌರವ ಕಡಿಮೆ.

ಬರ್ನರ್ ಉರಿಯ ಮೇಲೆ ಅನ್ನ ಕುದಿಸಿ, ಸಾರು ಮರಳಿಸಿಬಿಟ್ಟರೆ ಅಡಿಗೆಯಾಯಿತು. ಉಳಿದ ಖಾದ್ಯಗಳೆಲ್ಲ ಹಾಟೆಲ್ ದಿಂದಲೆ ಸರಬರಾಜು ಹಗಲು ಹನ್ನೆರಡು ತಾಸು ರೇಡಿಯೋ ಸಂಗೀತ ಇಲ್ಲದಿದ್ದರೆ ಕಿರಿಸ್ತಾನೀ ಕನ್ನಿಕೆಯರೊಡನೆ ಗೊಡ್ಡು ಹರಟೆ. ಸೌಭಾಗ್ಯವತಿಯ ಮನೆ ಇಂದು ಅಗ್ಗದ ಹಾಟೇಲ್‌ನಂತ ಅಂದಗೇಡಿಯಾಗಿತ್ತು. ಕೆಲಸ ಮಾಡದಿರುವದೇ ಸೌಕರ್ಯ ಜೀವನವೆಂದು ಬಗೆದ ಈ ವಿದ್ಯಾವತಿ ಅಹಂಭಾವದ ತುರಾಯಿ ಚುಚ್ಚಿಕೊಂಡ ಜಂಭದ ಕೋಳಿಯಾಗಿದ್ದಳು ಕನ್ನಡ ಮಾತಾಡುವದೂ ಅವಳಿಗೆ ಅವಮಾನಾಸ್ಪದವಾಗಿತ್ತು. ಅವಳು ಕಂಡವರೊಡನೆ ಇಂಗ್ಲೀಷಿನಲ್ಲಿಯೋ ಇಲ್ಲವೆ ಇಂಗ್ಲೀಷು ಬೆರೆಸಿದ ಕನ್ನಡದಲ್ಲಿಯೋ ಮಾತಾಡುತ್ತಿದ್ದಳು. ಅನೇಕ ವರುಷ ಇಂಗ್ಲಂಡಿನಲ್ಲಿದ್ದವಳಂತೆ ಅವಳ ಕನ್ನಡ ಭಾಷೆ ಪರಿವರ್ತಿತವಾಗಿತ್ತು.

ಇಂಗ್ಲೀಷಿನ ಅಗ್ಗದ ಕಾದಂಬರಿಗಳನ್ನೇ ಓದುವ ಈ ಹೆಂಡತಿಗೆ ಕನ್ನಡದ ಕಸ್ತೂರಿಯ ಸುಗಂಧ ದೂರವೇ ಉಳಿದಿತ್ತು.

ಈ 'ಫೇರ್ ಲೇಡಿ'ಯ ಬಂಧನದಲ್ಲಿ ಸಿಕ್ಕ ಪಿ. ಎಚ್. ಡಿ. ಗಂಡು ಒದ್ದಾಡುತ್ತಿತ್ತು. ಮಾತು ಮಾತಿಗೂ ಅವಳಿಂದ...ಸಿಲಿ, ನಾನ್ಸೆನ್ಸ್ ಆಯ್ ಡೋಂಟ್ ಲಾಯ್ಕ ದ್ಯಾಟ. ವಾಟ್ ಡುಯು ಮೀನ್ ಅನ್ನಿಸಿಕೊಂಡು ಅವನು ಮುದುಕನಾಗಿದ್ದನು. ಮನೆಯಲ್ಲಿ ಶಾಂತ ವಾತಾವರಣವನ್ನು ಕಾಯ್ದುಕೊಳ್ಳಲು ಅವಳು ಹೇಳಿದಂತೆ ಕೇಳುವದೊಂದೇ ಸರಿಯಾದ ಮಾರ್ಗವೆಂದು ಈ ಪಿ. ಎಚ್. ಡಿ. ಗಂಡು ಹೆಂಡತಿಯಾಗಿ ಬಿಟ್ಟನು. ಗಂಡನ ಸಾರ್ವಭೌಮಾಧಿಕಾರವನ್ನು ಈ ಪ್ರಜಾಪ್ರಭುತ್ವ ಪದ್ಧತಿಯಲ್ಲಿ ತಳ್ಳಿ ಹಾಕಿ ಅಧಿಕಾರದ ವಿಕೇಂದ್ರೀಕರಣವನ್ನೂ ಮಾಡದೆ ಹಸ್ತಾಂತರ ಮಾಡಿಬಿಟ್ಟನು. ಪ್ರಪಂಚ ಪಂಚಾಯತಿ ರಾಜ್ಯದಲ್ಲಿ ಇವನು ಸಾಮಾನ್ಯ ಪಂಚನಾಗಿ ಉಳಿದು ಸರಪಂಚನ ಅಧಿಕಾರದ ತ್ಯಾಗ ಮಾಡಿ ನಿಜವಾದ ಪ್ರಜಾಪ್ರಭುತ್ವದ ಪ್ರಜೆ ಎನ್ನಿಸಿಕೊಂಡನು. ಪಾಪ! ಪಿ ಎಚ್. ಡಿ ಇದಕ್ಕೂ ಹೆಚ್ಚು ಏನು ಮಾಡಬಲ್ಲನು? ಪಂಡಿತ ಮಂಡಳದಲ್ಲಿ ಬುದ್ಧಿಜೀವಿಯಾಗಿ ಸನ್ಮಾನ್ಯತೆಯನ್ನು ಗಳಿಸಿಕೊಂಡವನು ಪಾಪ! ಈ ಸಂಸಾರ ಸಾರಥ್ಯವನ್ನು ಹೇಗೆ ನಿರ್ವಹಿಸಬಲ್ಲನು? ಅವನಿಗೆ ತಾನು ನಡೆಯುತ್ತಿರುವ ದಾರಿ ಒಳ್ಳೆಯದಲ್ಲವೆಂದೂ ಪರಂಪರೆಯ ದ್ರೋಹವೆಂದೂ ಅನ್ನಿಸುತ್ತಿತ್ತು ಅವನು ಸೂಟು. ಬೂಟು, ಹ್ಯಾಟು ಹಾಕಿಕೊಂಡರೂ ಅಪ್ಪಟ ಭಾರತೀಯನೇ ಆಗಿದ್ದನು ಕನ್ನಡದ

ರೀತಿ ನೀತಿಗಳು, ಔದಾರ್ಯ ಪದ್ಧತಿಗಳು ಅವನಿಗೆ ಪ್ರಿಯವಾಗಿದ್ದವು ಇದನ್ನು ಅನೇಕ ಸಲ ಕೈಹಿಡಿದ ಎಮ್ ಎ ಗೆ ಹೇಳಿದ್ದನು. ಅದಕ್ಕೆ ಅವಳದು ಒಂದೇ ಉತ್ತರ "ಸಮಾಜದಲ್ಲಿ ಅದರ ಪದ್ಧತಿಯಲ್ಲಿ ಕ್ರಾಂತಿಕಾರಕ ಬದಲಾವಣೆಯಾಗಬೇಕು."

"ಅಂದರೇನು ಡಿಯರ್?"

"ಅಂದರೆ ಅಂದರೆ ರೆವ್ಹಲೂಶನ್ ಆಗಬೇಕು"

"ಅಂದರೆ...?"

"ನಿನಗೆ ಇಂಗ್ಲೀಷೂ ಅರ್ಥವಾಗುವದಿಲ್ಲ ಕನ್ನಡವೂ ತಿಳಿಯುವದಿಲ್ಲ ಏನು ಹೇಳಬೇಕು? ಶಿಲಿ ನಾನ್ಸೆನ್ಸ್."

"ನಿನ್ನ ಮಾತು ನಿಜ ಈ ಜೀವನ ನನಗೆ ಅರ್ಥವಾಗುತ್ತಿಲ್ಲ ನಿನಗೂ ಹಾಗೆಯೇ ಎಂದು ತೋರುತ್ತದೆ"

"ವ್ಹಾಯ್. ಆಯ್. ಎನ್ಜಾಯ್ ಇಟ್ ಇವೆ ೃನ್ಸಲಿ...!"

"ದಯಮಾಡಿ, ಕನ್ನಡದಲ್ಲಿ ಮಾತಾಡು ಮಾರಾಯಳೆ."

"ಏನಿದೆ ಕನ್ನಡದಲ್ಲಿ ಮಾತಾಡುವಂಥದು?"

"ನೋಡು ನಿನ್ನ ಅಜ್ಞಾನವನ್ನು ಪ್ರದರ್ಶಿಸಿ ನಗೆಪಾಟಲು ಆಗಬೇಡ ಕನ್ನಡದಲ್ಲಿ ಎಲ್ಲವೂ ಇದೆ ಮಾತೃಭಾಷಾ ಅವಹೇಳನ ಸರಸ್ವತೀ ದ್ರೋಹವೇ ಆದೀತು"

"ಇರಲಿ,ಇರಲಿ...ಪ್ರೊಫೆಸರ್ ಆದ ಮಾತ್ರಕ್ಕೆ ಹೆಂಡತಿಯ ಮುಂದೆಯೂ -- ಉಪನ್ಯಾಸ ಪ್ರಾರಂಭಮಾಡುವ ಅಗತ್ಯವಿಲ್ಲ. ನನಗೆ ಎಲ್ಲವೂ ತಿಳಿಯುತ್ತದೆ."

"ತಿಳಿಯುವ ಹೆಂಗಸು ತಿಳಿಗೇಡಿಯಾಗಿರುವದಿಲ್ಲ ಮಂಗಲಾ!"

"ಸುಮ್ಮನಿರ್ರಿ. ನನಗೆ ದಣಿವಾಗತೊಡಗಿದೆ..."

"ವಾಂತಿಯು ಪರಿಣಾಮವೇ ಇರಬೇಕು"

"ನಿಮ್ಮ ಕಿತಾಪತಿ...ಥೂ...ನಾನ್ಸೆನ್ಸ್."

"ನನ್ನ ಕಿತಾಪತಿ! ಅಂದರೆ ನೀನು..."

"ಪ್ಲೀಜ್ ಶಟ್ ಅಪ್!"

ಗಂಡನು ಪುಷ್ಕಳವಾಗಿ ನಕ್ಕನು. ಈ ಗಂಡನ್ನ ನಗೆಯಲ್ಲಿ ವಂಶವೃಕ್ಷದ ಬೀಜಾಂಕುರದ ಸಂತಸವು ಸಮಗ್ರವಾಗಿ ಅರಳಿತ್ತು ಪ ಪ! ಎಮ್. ಎ. ಸೌಭಾಗ್ಯವತಿಗೆ ಇದು ಎಲ್ಲಿಲ್ಲದ ನಾಟಕವಾಗಿತ್ತು. ಭೋಗಲಾಲಸೆ ಸಂತಾನ ಪ್ರಾಪ್ತಿಯಿಂದ ದೂರವಿರಬೇಕೆಂದು ಇವಳ ಸ್ತ್ರೀ ವಿಜ್ಞಾನ ಹೇಳುತ್ತಿತ್ತು

ಸೃಷ್ಟಿಕ್ರಿಯೆ ವಿಜ್ಞಾನವನ್ನ ಹೇಗೆ ಲೆಕ್ಕಿಸೀತು

-೨-

ಮಗನ ಜರೂರಿ ಕಾಗದವನ್ನ ಓದಿ ತಾಯವ್ವ ಹಳ್ಳಿಯಿಂದ ಪಟ್ಟಣಕ್ಕೆ ಧಾವಿಸಿ ಬಂದಳು

ಅವಳು ಮನೆಗೆ ಬಂದಾಗ ಮೂರು ಗಂಟೆಯಾಗಿತ್ತು. ಮಗನ ಮನೆಯ ಬಾಗಿಲು ಮುಂದು ಮಾಡಿತ್ತು. ಒಳಗೆ ರೇಡಿಯೋ ಸಂಗೀತ ಮಂದವಾಗಿ ತೂರಿ ಬರುತ್ತಿತ್ತು. ಪಡಸಾಲೆಯಲ್ಲಿ ಕಾಲಿಡಲೂ ಸ್ಥಳವಿರಲಿಲ್ಲ. ಖುರ್ಚಿ ಸಣ್ಣ ಖುರ್ಚಿ, ಸಣ್ಣ ಮೇಜುಗಳು, ಹೂದಾನಿಗಳು, ರಬ್ಬರಿನ ನಾಯಿಗಳು, ಬಹು ಎತ್ತರದ ಒಂಟೆಗೋಣೆನಂತಹ ಪಾತ್ರೆ ಇನ್ನೂ ಏನೇನೋ?

"ಮಂಗಲಾ!"

ಕೋಣೆಯ ಬಾಗಿಲು ತೆಗೆಯಿತು. ಮಂಗಲಾ ಪ್ರತ್ಯಕ್ಷಳಾದಳು.

"ಬಾ ಬಂದಿರಾ ಅತ್ತೆ'"

ಎಂದು ನುಡಿದ ಅವಳ ಮಾತಿನಲ್ಲಿ ತಾಯವ್ವನ ಲಕ್ಷವೇ ಇರಲಿಲ್ಲ. ಅವಳು ಸೊಸೆಯನ್ನು ಸಮಗ್ರವಾಗಿ ನೋಡತೊಡಗಿದಳು.

ಬಾದಾಮಿ ಗೋಲಾಕಾರದ ಸುಂದರವಾದ ಮುಖದ ಮೇಲೆ ಕುಂಕುಮ ಗೌಣವಾದ ಅಲಂಕಾರವೆಂಬಂತೆ ಮುತ್ತಿನ ಹರಳಿನಾಕಾರದಲ್ಲಿ ಬೇಡಾದ ಬವಣೆಯನ್ನನುಭವಿಸುವ ಸಜ್ಜನನಂತೆ ಕುಳಿತುಕೊಂಡಿತ್ತು. ಬೈತಲೆ ಕಾಣಲಿಲ್ಲ ಎಣ್ಣೆ ಕಾಣದಂತಿರುವ ಕೂದಲಗಳನ್ನು ಹಿಂದೆ ಹಿಕ್ಕಿ ಸರಿಸಿಕೊಂಡು ಕರಿಯ ರಿಬ್ಬನ್ನನ್ನು ಕಟ್ಟಲಾಗಿತ್ತು ಅಪ್ಪಟ ಬಿಳಿಯ ರೇಶಿಮೆ ಮೈಸುತ್ತಿಕೊಂಡಿತ್ತು. ಬೆನ್ನಿನ ಹಿಂಭಾಗವೆಲ್ಲ ಬಿದಿಗೆಯ ಚಂದ್ರನಾಕಾರದಲ್ಲಿ ಕಾಣುವಂತಿರುವ ಕುಪ್ಪುಸ ಹಿಂಬದಿಗುಂಡಿಯಿಂದ ಬಿಗಿಯಲ್ಪಟ್ಟಿತ್ತು. ಈ ವೇದನೆಯನ್ನು ಸಹಿಸದ ಅವಳ ವಕ್ಷಸ್ಥಳಗಳು ಹೌಹಾರಿ ಒಳ ಸೇರಿ ಸುಸ್ತಾಗಿದ್ದವು. ತೋಳಿಲ್ಲದ ಕುಪ್ಪುಸ. ನಿಡಿದೋಳುಗಳು ಸೌಭಾಗ್ಯ ಪ್ರತೀಕವಾದ ಬಳೆಗಳೇ ಇಲ್ಲ. ಬಲಗೈಯಲ್ಲಿ ಒಂದು ಬಂಗಾರ ಬಣ್ಣದ ಚಚ್ಚೌಕಾದ ವಾಚು. ತಾಯವ್ವ ಗಾಬರಿಯಿಂದ ಮತ್ತೊಮ್ಮೆ ಅವಳ ಕತ್ತಿನ ಕಡೆಗೆ ನೋಡಿದಳು. ಮಾಂಗಲ್ಯ ಕಂಡರೂ ಕಾಣದ ಹಾಗೆ ಎದೆಯ ಗೂಡಿನಲ್ಲಿ ಒಳಸೇರಿಕೊಂಡು ಬಾಲ ಮುದುಡಿಕೊಂಡು ಕಕ್ಕಾಬಿಕ್ಕಿಯಾಗಿ ಕುಳಿತುಕೊಂಡಿತ್ತು. ಪೂರ್ತಿಯಾದ ವೈಧವ್ಯದ ಲಕ್ಷಣಗಳಿಂದೊಡಗೂಡಿದ ಸೊಸೆಯುನ್ನು ನೋಡಿ ತಾಯವ್ವ ಕಂಗೆಟ್ಟಳು. ಅವಳ ಕಣ್ಣು ಕೆಂಪಗಾದವು

"ಅಂದ ಹಾಗೆ ಚಹವನ್ನು ಮಾಡಿಕೊಡಲೇನು ಅತ್ತೆ? ಕ್ರೀಮ ಕ್ರ್ಯಾಕರ್ಸ್ ತರಿಸಿದ್ದೇನೆ. ಸಾಲ್ಟ ಬಿಸ್ಕತ್ತುಗಳೂ ಇವೆ. ಕೇಕ್ಸ್‌ಗಳು ತುಂಬಾ ಚೆನ್ನಾಗಿವೆ. ಪೋಲ್ಸನ್ ಬಟರ

ಲೇಪಿಸಿ ಪ್ರಡ್ಡಗಳನ್ನೂ ಕೊಡುತ್ತೇನೆ. ಪಾಪ! ಹಸಿದಿದ್ದೀರಿ "

"ನಿನ್ನನ್ನು ನೋಡಿದ ಕೂಡಲೇ ನನ್ನ ಹಸಿವೆ ನೀರಡಿಕೆಗಳು ಹಿಂಗಿಹೋದುವು ಮಂಗಲಾ! ಇದೇನು ಈ ಆಕಾರ?"

"ಏನಾಗಿದೆ ನನ್ನ ಆಕಾರಕ್ಕೆ?

"ಏನೂ ಆಗಿರದಿದ್ದರೆ ನಾನೇಕೆ ಕೇಳುತಿದ್ದೆ? ನೀನು ಒಂದು ಮನೆತನದ ಸೊಸೆ ಲಕ್ಷ್ಮಿ ತಾಯಿ; ಸರಕಾರೀ ಆಸ್ಪತ್ರೆಯ ನರಸಮ್ಮನಲ್ಲ. ಬಳೆಗಳಿಲ್ಲ, ಕುಂಕುಮವಿಲ್ಲ. ಇದೆಲ್ಲಾ ನನಗೆ ಸರಿ ಬರುವದಿಲ್ಲ. ಹೆಂಡತಿ ಹೆಂಡತಿಯಂತೆಯೇ ಇರಬೇಕು "

"ನಾನು ಹೆಂಡತಿಯಂತೆಯೇ ಇಲ್ಲವೇನು? ನಾನು ಹೆಂಡತಿಯೆಂದು ಹಣೆಗೆ ಬೋರ್ಡ್ ಹಚ್ಚಿಕೊಳ್ಳಲೇನು?"

"ಎದ್ದು ಕಾಣುವ ಕುಂಕುಮವೇ ಸೌಭಾಗ್ಯವತಿಯ ಬೋರ್ಡ್ ಮಂಗಲಾ!"

"ಕುಂಕುಮಕ್ಕೂ ಸೌಭಾಗ್ಯಕ್ಕೂ ಯಾಕೆ ತಳಕು ಹಾಕುತ್ತೀರಿ?"

"ಆಂ? ಮುತ್ತೈದೆಗೆ ಕುಂಕುಮವೇ ಸಕಲ ಸೌಭಾಗ್ಯವಲ್ಲವೇನು?"

"ಆದರೆ ನಾನು ಮದುವೆಯಾಗುವ ಮೊದಲು ಕುಂಕುಮ ಹಚ್ಚಿಕೊಳ್ಳುತ್ತಿದ್ದೆನಲ್ಲ !"

"ಆಗ ಅದು ಕೇವಲ ಅಲಂಕಾರವಾಗಿತ್ತು; ಈಗ ಸೌಭಾಗ್ಯ ಚಿನ್ಹವಾಗಿದೆ ತಿಳಿಯಿತೇನು? ನನ್ನವ್ವ! ನೀನು ಎಂಥ ಚಲುವೆಯಾಗಿದ್ದೀಯೆ! ನನ್ನ ಮೊಮ್ಮಗ ನಿನ್ನ ರೂಪವನ್ನು ಹೊತ್ತು ಗುಂಡಣ್ಣನ ಬುದ್ಧಿಯನ್ನು ಪಡೆದುಕೊಂಡು.... ಓ! ನಿನ್ನ ಸಂತಾನ ಭಾಗ್ಯ ನಿನ್ನ ಸಂಸ್ಕೃತಿಯ ರಕ್ತವನ್ನು ಹೀರಿಕೊಂಡೇ ಬರುತ್ತದೆ ತಾಯಿ! ಈ ರೀತಿ, ಈ ನಡತೆ ನಮ್ಮ ಕನ್ನಡ ಸಂಸ್ಕೃತಿಯಲ್ಲ ನೀನು ತಿಳಿದವಳು. ಈಗ ನೀನು ನಿಸರ್ಗ ಬದುಕುವ ದಿನಗಳು ಹಿಂದೆ ಉಳಿದವು. ನಿನ್ನ ಸಂತಾನಕ್ಕಿದೆ. ಬಾಳುವ ತೇಜ ನಿನ್ನದಾಗಬೇಕು..."

"ಚೈತ್ರ ಗೌರಿಯಂತೆ ಅಲಂಕಾರ ಮಾಡಿಕೊಳ್ಳುವದೇ ಕನ್ನಡ ಸಂಸ್ಕೃತಿಯೇನು?

"ಸಂಸ್ಕೃತಿಯ ಮಾತು ಇರಲಿ ಈಗ ಮಗನ ಮಾತು ಬರಲಿ."

"ಅದಕ್ಕಾಗಿ ನಾನು ಏನು ಮಾಡಲೂ ಸಿದ್ಧ. ಇವರ ಕಿತಾಪತಿಗೆ ನಾನು ಭೋಗಿಸಬೇಕು."

"ನೀನು ಎಮ್. ಎ ಕಲಿತವಳೆಂದು ನನಗೆ ಅನ್ನಿಸುವದಿಲ್ಲ ಬಿಡು ನಿನ್ನ ಮಂಗಲಕಾರ್ಯದ ಹೊಣೆಯನ್ನು ನನ್ನ ಮಗನ ಮೇಲೆ ಹಾಕುವದು ಏನು ಚೆಂದವೆ ?"

ತಾಯವ್ವ ನಕ್ಕಳು ಮಂಗಳಾನ ಗಲ್ಲಗಳಲ್ಲಿ ಗುಲಾಬಿ ಅರಳಿತು. ಅವಳು ಮಂದವಾಗಿ ನಕ್ಕಳು.

– ೩ –

ತಾಯವ್ವ ತನ್ನ ಟ್ರಂಕಿನೊಳಗಿಂದ ಪಕ್ಕಾ ರೇಶಿಮೆಯ ಹಸಿರು ಶೀರೆಯನ್ನು ಹೊರಗೆ ತೆಗೆದಳು. ಅದೇ ಬಣ್ಣದ ಸುಂದರ ಹೂ ಹಾಕಿದ ಖಣವನ್ನೂ ಅದರ ಮೇಲಿಟ್ಟಳು.

ಅತ್ತೆಯ ಈ ಹಿಗ್ಗಿನ ಒಳಪದರುಗಳನ್ನು ಈ ವಿದ್ಯಾವತಿ ಬಿಡಿಬಿಡಿಸಿ ನೋಡಿದಳು ಆಗಲೆ ತನ್ನ ತಾಯಿಯನ್ನು ನೆನೆದಳು. ಆ ಸೌಭಾಗ್ಯಪೂರ್ಣ ಮುಖ ಅವಳ ಮುಂದೆ ಬಂದು ನಿಂತಂತಾಯಿತು. ಕೈತುಂಬ ಬಳೆಗಳು. ಒಂಕೆಯ ಆಕಾರದ ಉಂಗುರ.

ಮಂಗಳಾನ ಕಣ್ಣು ತುಂಬಿತು.

"ಅವ್ವಾ ಹೋಗಿಬರುತ್ತೇನೆ "

ಅತ್ತೆಯ ಮನೆಗೆ ಹೊರಟದಿನದ ದೃಶ್ಯ ಅವಳ ಮುಂದೆ ಚಿತ್ರ ಚಿತ್ತಾರವಾಗಿ ಕಂಗೊಳಿಸಿತು. "ಹೋಗಿ ಬಾ ಮಗಳೆ ! ಸಂತಾನ ಸಮೃದ್ಧಿಯನ್ನು ಹೊಂದು. ಮತ್ತೆ ಬಂದಾಗ ನಿನ್ನ ಕೈತುಂಬ ಹಸಿರು ಬಳೆಗಳನ್ನು ಇಡಿಸುವಂತಾಗಬೇಕು...."

ತಾಯಿ ತನ್ನ ಗಲ್ಲ ನೇವರಿಸಿ ಎದೆಗವಚಿಕೊಂಡು ಹೇಳಿದ ಮಾತು ಫಳಕ್ಕನೆ ಮಿಂಚಿತು.



ಮಂಗಲಾ ಒಮ್ಮೆಲೆ ಬಿಕ್ಕಳಿಸಿದಳು "ಹಾಂ! ಏನಾಯಿತು ಮಂಗಲಾ ! ನಮ್ಮವ್ವಾ !"

ಎನ್ನುತ್ತ ತಾಯವ್ವ ಸೊಸೆಯನ್ನು ತೆಕ್ಕೆಯಲ್ಲಿ ಹಿಡಿದುಕೊಂಡಳು ತಾಯವ್ವನ ಎದೆಯ ಮೇಲೆ ಮುಖವಿಟ್ಟ ಮಂಗಲಾ ಮನಸೋಕ್ತವಾಗಿ ಅತ್ತಳು.

"...ನನ್ನ ಮಾತಿನಿಂದ ನಿನಗೆ ವ್ಯಥೆಯಾಯಿತೇನು ಬಾಳಾ! ನಾನು ಹಳೆಯ ಮನುಷ್ಯಳು. ಏನೇನೋ ಹೇಳಿದೆ. ನೀನು ಹೇಗೆ ಬೇಕೋ ಹಾಗೆ ಇರು ನೀನು ಹೇಗಿದ್ದರೇನು? ನನ್ನ ಮಗನ ಹೆಂಡತಿಯೇ ಅಲ್ಲವೇನು? ಮುದ್ದು ಸೊಸೆಯೇ ಅಲ್ಲವೇನು?..."

ಮಂಗಲಾ ಅತ್ತೆಯ ಬಂಧನವನ್ನು ಬಿಡಿಸಿಕೊಂಡು ಅತ್ತೆಯ ಕಾಲು ಹಿಡಿದು ಹೇಳಿದಳು.

"ನನಗೆ ನಿಮ್ಮ ಪ್ರೀತಿಯ ಅರ್ಥವಾಯಿತು ಅತ್ತೆ! ಇನ್ನು ಮೇಲೆ ನಾನು ನೀವು ಹೇಳಿದಂತೆ ಕೇಳುತ್ತೇನೆ ನನ್ನ ಕಣ್ಣಿನ ಪರೆ ಹರಿಯಿತು "

"ಎಮ್. ಎ. ಆದ ಹೆಣ್ಣು ನೀನು ಘನವಂತೆಯೇ ನೋಡು, ಈ ತಿಳುವಳಿಕೆ ಯಾರಿಗೆ ಬಂದೀತು ?"

ತಾಯವ್ವ ಸಂಭ್ರಮದಿಂದ ನುಡಿದಳು

ಅದೇ ಹೊತ್ತಿಗೆ ಹೊರಗೆ ಸ್ಕೂಟರ ಬಂದು ನಿಂತ ಸಪ್ಪಳಾಯಿತು ಪ್ರೊ. ಗುಂಡಣ್ಣ ಹೊರಗಿನಿಂದ "ಅವ್ವಾ !" ಎಂದು ಕೂಗುತ್ತಲೇ ಒಳಗೆ ಬಂದ

ಅತ್ತೆ-ಸೊಸೆ ಒತ್ತಟ್ಟಿಗೆ ಕುಳಿತು ಚೆಲ್ಲಿ ಹರವಿದ ಸಾಮಾನುಗಳನ್ನು ವ್ಯವಸ್ಥಿತವಾಗಿ ಇಡುತ್ತಿದ್ದರು ಚಿನ್ನದ ಬಳೆಗಳು ಏಕಾವಳಿ ಸರ, ಪಾಟ್ಲಿ, ಬಿಲ್ವಾರ...ಹಸಿರು ಸೀರೆ...

"ಅವ್ವಾ !"

"ಹಾಗೇಕೆ ಕಿರುಚುತ್ತೀಯೋ..."

"ಅವರಿಗೆ ಕಾಲೇಜದಲ್ಲಿ ಕೂಗಿ ಕೂಗಿ ಇದೇ ಅಭ್ಯಾಸವಾಗಿದೆ ಅತ್ತೆ! ಅವರಿಗೆ ಕಾಲೇಜು ಬೇರೆ ಅಲ್ಲ; ಮನೆ ಬೇರೆ ಅಲ್ಲ"

ಮಂಗಲಾ ಚೇಷ್ಟೆಯ ಕಣ್ಣುಗಳನ್ನು ಕುಣಿಸಿದಳು

"ಅಂತೆಯೇ ನಿನ್ನನ್ನೂ ಕಾಲೇಜ ವಿದ್ಯಾರ್ಥಿನಿಯಂದೇ ತಿಳಿದುಕೊಂಡಿದ್ದಾನೆ ಹುಚ್ಚಪ್ಪ !"

"ಅಂದ... ಹಾಗೆ...ಇವಳಿಗೆ...ಈ ... ಹಸಿರು ಸೀರೆ ಬಹಳ ಒಪ್ಪುತ್ತದೆ ಅವ್ವಾ ..."

"ನಿನಗೆ ಈಗ ಗೊತ್ತಾಯಿತೇನು ? ನಿನಗೆ ತಂದುಕೊಡಲು ಏನಾಗಿದ್ದಿತು ?"

"ನಾನು...ನಾನು..."

ಮಂಗಲಾ ಕೈಮುಗಿದು ನಗೆಮಲ್ಲಿಗೆಯನ್ನು ತೂರುತ್ತ ಸುಮ್ಮನಿರಲು ಬಾಯ ಮೇಲೆ ತೋರುಬೆರಳು ಹಿಡಿದು ಕೊಂಡಳು...

"...ನೀನು...ತರುತ್ತೀಯೆಂದು ಗೊತ್ತಿತ್ತು ...ಅವ್ವಾ...ಈಗ "

"ನೀನು ಕೂಡಲೆ ಹೋಗಿ ಬಳೆಗಾರನನ್ನು ಕರೆದುಕೊಂಡು ಬಾ ! ರೇಶಿಮೆ ಹಸಿರು ಬಳೆಗಳನ್ನು ತೆಗೆದುಕೊಂಡು ಬರಲು ಹೇಳು..."

"...ಆದರೆ...ಇವಳ ಕೈಗೆ..."

ಮಂಗಲಾ ಮತ್ತೆ ಕೈಮುಗಿದು ಕೂಡಲೆ ಹೋಗಲು ಮೌನವಾಗಿ ಸೂಚಿಸಿದಳು.

ಗುಂಡಣ್ಣನಿಗೆ ತಾಯಿ ಮಾಡಿದ ಪವಾಡವು ಅದ್ಭುತವೆನ್ನಿಸಿತು

ಅವನೊಮ್ಮೆ ಹೆಂಡತಿಯ ಕಡೆಗೆ ನೋಡಿದನು. ನಗೆಮಲ್ಲಿಗೆ ಕಣ್ಣುಗಳಲ್ಲಿ ಅರಳಿ ನಿಂತಿತ್ತು ತಾಯಿಯ ಕಡೆಗೆ ನೋಡಿದನು. ಸಮೃದ್ಧಿ, ಸಂತೋಷ ಆ ಕಣ್ಣುಗಳಲ್ಲಿ ಮಿನುಗುತ್ತಿತ್ತು.

ಅಕ್ಕಪಕ್ಕದ ಮುತ್ತೈದೆಯರು ಬಂದು ಶುಭ ಶೋಭಾನದ ಪದಗಳನ್ನು ಹಾಡಿದರು.

ಮಂಗಲಾ ಅತ್ಯಂತ ಹರುಷದಿಂದ ಹಸಿರು ಬಳೆಗಳನ್ನು ಕೈತುಂಬ ಇಟ್ಟುಕೊಂಡು ಅತ್ತೆ ತಂದ ಹಸಿರು ಸೀರೆಯನ್ನು ಉಟ್ಟುಕೊಂಡಳು.

ನಿಸರ್ಗದೇವಿಯಂತೆ ಮಂಗಲಾ ಶುಭ ಶೋಭಾಂಗಿಯಾಗಿ ಶೋಭಿಸಿದಳು. ●

# THE BHADRAVATI SHIMOGA CENTRAL CO-OPERATIVE WHOLESALE STORES LTD, BHADRAVATI

(Regd. No 1972/RCS/63 64 dated 28-6-1963)

Jurisdiction Entire Shimoga District.

*Hearty Deepavali Greetings*



## MEMBERSHIP AND SHARE CAPITAL AS ON 30-6-68

| | | No | Share Capital |
|---|---|---|---|
| 1. Primary Consumers Co-Operatives | "A" Class | 48 | Rs. 41,800—00 |
| 2. State Government | "B" Class | 1 | Rs. 2,50,000—00 |
| 3. Other Societies | "C" Class | 8 | Rs. 6,300—00 |

4. Reserve Fund Rs, 34,296-80
5. Other Funds Rs. 82,725 42
6. Working Capital Rs. 13,86,650 25
7. Profits 65-66 ... ... ... ... ... ... ... Rs. 1,28,810-60
   Profits 66 67 ... ... ... ... ... ... ... Rs. 76,333-59

## ACTIVITIES OF THE STORES

THIS STORE IS:

1. Providing the daily necessary goods to the affiliated consumersi societies.
2. Distributing all controlled commodities alloted to Bhadravathi and Shimoga Taluks.
3. Distributing Baby Foods, Tyres, Tubes and other articles sent from Federation.
4. Doing the procurement of paddy at Bhadravathi Taluk procured during 67-68. Qtls. 27,019 – 94 Kgs.
5. Dealer for distribution for Indian Oil for Bhadravathi Taluk.
6. Running Departmental Stores at Bhadravathi and Shimoga (Two Janatha Bazars)
7. Acting as Agent to State Federation in selling the essential commodities.

## OUR SPECIALITIES IN JANATHA BAZARS

1. FREE PACKING AND HOME DELIVERY SYSTEM.
2. MEDICINE SALES BRANCH IS RUNNING AS PER "MEDICAL DOCTORS ADVISORY BOARD" SUGGESTION.
3. SUPPLIER OF ALL INDENTS TO GENERAL HOSTELS, JAIL AND HOSPITALS.
4. COIR MATS, WOODEN FURNITURE, LEATHER GOODS AND COFFEE GRINDING SECTION.

## PRESENT BOARD OF MANAGEMENT

1. **H.P. Basavarajappa,** President. B.A., B.L.
2. **B. M. Srikanta Setty,** B. A. General Manager.
3. **C. R. Eshwarappa,** Director & Federation Nominee.
4. **N. G. Rudrappa,** Director Nominee of D.C.C.B.
5. **Arundi Eshwarappa.** Director.
6. **B. P. Rajshekara.** Director.
7. **P. N. Veerappa,** Director.
8. **Deputy Registrar of CS. Govt. Nominee Director.**
9. **Food Assistant to Deputy Commissioner.**

# ಕಾರ್ಮಿಕ ಶಿಕ್ಷಣ ಯೋಜನೆ - ಸಮಾಜ ಸುಧಾರಣೆ

ಕುಣಿಗಲ್ ಶ್ರೀನಿವಾಸ ಶಾಸ್ತ್ರಿ

ನಮ್ಮ ಸಮಾಜದಲ್ಲಿ ಅನೇಕ ಬಗೆಯ ಸುಧಾರಣೆಗಳಾಗಬೇಕು ಎಂಬುದು ನಿರ್ವಿವಾದ ವಿಷಯವಾಗಿದೆ. ನಮ್ಮ ಪ್ರಾಚೀನ ಸಂಸ್ಥೆಗಳು, ಸಂಪ್ರದಾಯಗಳು, ಆಚಾರ ವ್ಯವಹಾರಗಳು, ವಿಚಾರಮಂಥನ ಪದ್ಧತಿ ಇವುಗಳಲ್ಲಿ ನಾವು ಎಷ್ಟೋ ಅಪಾರವಾದ ಮೌಲ್ಯಗಳನ್ನು ಗುರುತಿಸಿದರೂ ಅವುಗಳಲ್ಲಿ ಕೆಲವು ಕಾಲಕ್ಕೆ ತಕ್ಕಂತೆ ಹೊಂದಿಕೊಳ್ಳುವ ಪರಿವರ್ತನಶೀಲವನ್ನು ಹೊಂದಿಲ್ಲವಾದಕಾರಣ ಇಂದು ನಾವು ಸುಧಾರಣೆಯ ಮಾತನ್ನೆತ್ತಬೇಕಾಗಿದೆ. ಸೈದ್ಧಾಂತಿಕ ಘರ್ಷಣೆಗಳಿಂದ, ವೈಜ್ಞಾನಿಕ ಸಂಶೋಧನೆಗಳಿಂದ, ಮಾನವನ ನಿರಂತರ ವಿಚಾರಶೀಲತೆಯಿಂದ ಅಂದಿನ ಜಗತ್ತು ಇಂದು ಹೊಸ ರೂಪನ್ನು ಧರಿಸಿ ನಿಂತಿದೆ; ಈ ಹೊಸ ರೂಪಿಗೆ ತಕ್ಕ ಪೂರಕ ಸಾಧನಗಳು ತಯಾರಾಗಬೇಕಾಗಿವೆ. ನವೀನ ವಿಚಾರಧಾರೆಯ ಪ್ರವಾಹಕ್ಕೆ ಸಿಕ್ಕಿ ಬದಲಾವಣೆಗೆ ಗುರಿಯಾದವರಲ್ಲಿ ಸಾರ್ವಭೌಮರು, ಮಾಲೀಕರು, ನೌಕರರು, ವಿಜ್ಞಾನಿಗಳು, ವೈಚಾರಿಕರು ಮೊದಲಾದವರು ಮುಖ್ಯರು. ಸಾರ್ವಭೌಮತ್ವವು ವೈಯಕ್ತಿಕ ಶಕ್ತಿಯಾಗಿದ್ದುದು ಇಂದು ಸಾಮೂಹಿಕ ಶಕ್ತಿಯಾಗಿದೆ. ರಾಜನು ಪ್ರತ್ಯಕ್ಷ ದೇವತೆ ಎಂಬುದಕ್ಕಿಂತ ಜನಸೇವೆಯೇ ಜನಾರ್ದನ ಸೇವೆ ಎಂಬುದಕ್ಕೆ ಹೆಚ್ಚು ಮಹತ್ವ ಬಂದಿದೆ. ಒಡೆಯ-ಗುಲಾಮ ಎಂಬ ಸಂಬಂಧಕ್ಕಿಂತ ಆಡಳಿತ-ನೌಕರ ಎಂಬುದು ಹೆಚ್ಚು ಸಮಂಜಸವಾದ ಸಂಬಂಧವನ್ನು ಸೂಚಿಸುತ್ತದೆ. ದೇಹಶಕ್ತಿಗಿಂತ ಬುದ್ಧಿಶಕ್ತಿ, ಯಂತ್ರ ಶಕ್ತಿ ಇವುಗಳಿಗೆ ಇಂದು ಬೆಲೆ ಹೆಚ್ಚಿದೆ. ನಮ್ಮ ಉಡುಪು ಆಹಾರ, ಕಾರ್ಯನಿರ್ವಹಣೆ ಆಶೆಗಳು, ವಿಚಾರ ಲಹರಿ ಹೀಗೆ ನಮ್ಮ ಇಡೀ ಬದುಕಿನಲ್ಲಿ ಮಹತ್ತರವಾದ ಬದಲಾವಣೆ ಕಂಡು ಬಂದಿದೆ. ಆದುದರಿಂದ ಈ ಹೊಸ ಬೆಳಕಿನಲ್ಲಿ ಹೊಸ ಬದುಕನ್ನು ನಡೆಸಲು ಸಮಾಜದಲ್ಲಿ ಕೆಲವರಿಗೆ ಕಷ್ಟವಾಗಿದೆ; ಕೆಲವರಿಗೆ ಸುಲಭವಾಗಿದೆ. ಕಷ್ಟದಿಂದ ಹೊಸ ಬದುಕನ್ನು ರೂಪಿಸಲು ಹೋರಾಡುತ್ತಿರುವವರಲ್ಲಿ ಕಾರ್ಮಿಕ ವರ್ಗದವರು ಮುಖ್ಯರು.

ಜಗತ್ತಿನಲ್ಲಿ ಈಗಾಗಲೇ ಸಂಭವಿಸಿದ ಎರಡು ಮಹಾಯುದ್ಧಗಳ ಭೀಕರ ಪರಿಣಾಮಗಳಿಗೆ ಮೊದಲು ತುತ್ತಾದವರು ಕಾರ್ಮಿಕರು. ಅವರು ಒಂದು ಕಡೆ ಯಂತ್ರ, ಶ್ರೀಮಂತ ಮಾಲಕ ಸಹಾನುಭೂತಿಯಿಲ್ಲದ ಸರಕಾರ ಇವುಗಳೊಂದಿಗೂ ಮತ್ತೊಂದು ಕಡೆ ಅನಕ್ಷರತೆ, ಅಜ್ಞಾನ, ಬಡತನ ಇವುಗಳೊಂದಿಗೂ ಹೋರಾಡಬೇಕಾಗಿತ್ತು. ಇವರಿಗೆ ಹಕ್ಕುಗಳೆಂಬುವು ಕನಸಿನ ಗಂಟನಂತಿದ್ದವು. ಶೋಷಣೆಗೆಂದೇ ಮೀಸಲಾದ ಮೃಗಗಳಾಗಿದ್ದರು ಶ್ರಮಜೀವಿಗಳು. ಇವರು ಮಾಡಬಹುದಾದ ಯಾವುದೇ ಸಂಘಟನಾ ಪ್ರಯತ್ನವನ್ನು 'ದೇಶಕ್ಕೆಸಗುವ ಪಿತೂರಿ' ಎಂದು ಸರಕಾರ ಹೇಳುತ್ತಿತ್ತು. ಪೋಲಿಸ್ ರಾಜ್ಯದಲ್ಲಿ ಕಾರ್ಮಿಕರ ಪಾಡು ವರ್ಣನಾತೀತವಾಗಿತ್ತು. ಆದರೆ ಹಲವಾರು ಸಮಾಜಸುಧಾರಕರ ವಿಚಾರವಂತರ ಧುರೀಣರ ಮಹಾನ್ ಯತ್ನಗಳಿಂದಾಗಿ ಗುಪ್ತಗಾಮಿನಿಯಾಗಿ ಹರಿಯುತ್ತಿದ್ದ ಪ್ರವಾಹ ಮೇಲೆ ಉಕ್ಕಿ ಬಂದಿತು. ಕತ್ತಲಲ್ಲಿ ತಡವರಿಸುವವನಿಗೆ ದೀಪದ ಬೆಳಕಿನಂತೆ, ಮೋಕ್ಷಕ್ಕಾಗಿ ತಪಿಸುವ ಭಜಕನಿಗೆ ತಾರಕ ಮಂತ್ರದಂತೆ ಬಂದಿತು ಆ ಹೊಳೆ. ಸಮಾಜ ತತ್ತರಿಸಿತು; ಯಂತ್ರಗಳು ಅಲ್ಲಾಡಿದವು ಪ್ರಭುಗಳು ಉರುಳಿದರು, ಮಾಲೀಕರು ಮರಗಿದರು ಆದರೇನು ಇದೇನು ಎಂಬುದರೊಳಗೇ ಕ್ರಾಂತಿಯಾಗಿತ್ತು. ಕಾರ್ಮಿಕನೊಬ್ಬ ವ್ಯಕ್ತಿಯಾಗಿದ್ದವನು ಶಕ್ತಿಯಾಗಿ ನಿಂತಿದ್ದ. ನಿರ್ದಯ, ದರ್ಪಿಷ್ಟ ಪೋಲೀಸ್ ರಾಜ್ಯ ಭೂಶಾಯಿಯಾಗಿತ್ತು ಅದರ ಸ್ಥಳದಲ್ಲಿ ಕಲ್ಯಾಣ ರಾಜ್ಯದ ಉದಯವಾಗಿತ್ತು ಇದಕ್ಕೆ ನಾಂದಿ ಹಾಡಿದವನೇ ಕಾರ್ಮಿಕ. ಇದುವರೆಗೂ ಕಾರ್ಮಿಕನನ್ನು ಬಂಧಿಸಿದ್ದ ವಿಚಾರ ಶೃಂಖಲೆ, ಸರಕಾರದ ಮಾಲೀಕರ ಕಡು ವಿರೋಧ ನೀತಿ ಒಮ್ಮೆಗೇ ಹಾರಿಹೋದವು. ಆದರೆ ಇದು ಜಗತ್ತಿನಲ್ಲಿ ಎಲ್ಲ ದೇಶಗಳಲ್ಲೂ ಹೀಗೆ ಜರುಗಲಿಲ್ಲ. ಮೊದಲು ಪಾಶ್ಚಾತ್ಯ ಕಾರ್ಮಿಕನ ಬಿಡುಗಡೆ ನಂತರ ಪೌರ್ವಾತ್ಯನ ಬಿಡುಗಡೆಗೆ ಯತ್ನ.

## ಸುಧಾರಣೆಗಾಗಿ ಜಾಗತಿಕ ಸಂಸ್ಥೆಯ ಸ್ತುತ್ಯಯತ್ನ

ಜಗತ್ತಿನಲ್ಲಿ ಶಾಂತಿ, ಸಮೃದ್ಧಿಗಳುಂಟಾಗಬೇಕಾದರೆ, ಎಲ್ಲರಿಗೂ ಕಲ್ಯಾಣವಾಗಬೇಕಾದರೆ ಸಂಬಂಧಪಟ್ಟ ದೇಶಗಳು ಕಾರ್ಮಿಕರ ಕಲ್ಯಾಣಕ್ಕಾಗಿ ಶ್ರಮಿಸಬೇಕೆಂದು ಅಂತಾರಾಷ್ಟ್ರೀಯ ಕಾರ್ಮಿಕ ಸಂಸ್ಥೆ ಕರೆ ನೀಡಿತು. ಕಾರ್ಮಿಕರ, ಮಾಲಿಕರ, ಸರಕಾರಗಳ ಪ್ರಾತಿನಿಧಿಕ ತ್ರಿಪಕ್ಷೀಯ ಸಂಸ್ಥೆಯಾಗಿ ೧೯೧೯ ರಿಂದಲೂ ಇದು ಕಾರ್ಮಿಕರ ಕಲ್ಯಾಣಕ್ಕಾಗಿ ಶ್ರಮಿಸುತ್ತಿದೆ. ಸೇವಾ ನಿಯಮ, ಕೆಲಸದ ವೇಳೆ, ರಕ್ಷಣೆ, ವೇತನ ಮೊದಲಾದುವುಗಳ ಬಗ್ಗೆ ಅಂತಾರಾಷ್ಟ್ರೀಯ ಗುಣ-ಮಟ್ಟಗಳನ್ನು ನಿರ್ಧರಿಸಿದುದಲ್ಲದೆ ಇದರ ಬಗ್ಗೆ ಕಾರ್ಮಿಕರಿಗೆ ಕಲ್ಯಾಣವಾಗಲೆಂದು ಕಾಯದೆಯನ್ನೂ ಮಾಡುವ ಹಾಗೆ ಮಾಡಿತು. ಹೀಗೆ ಕಾಯಿದೆಗಳ ಪರಂಪರೆಯನ್ನೇ ಮಾಡಿದ ದೇಶಗಳಲ್ಲಿ ಭಾರತವೂ ಒಂದು. ಮುಂದೆ ಈ ಸಂಸ್ಥೆಯು ಕಾರ್ಮಿಕನಲ್ಲಿ ಅಂತರಿಕ ಸುಧಾರಣೆಯನ್ನು ಮಾಡುವ ಶಿಕ್ಷಣ ಯೋಜನೆಯೊಂದನ್ನು ರೂಪಿಸಿತು. ಕಾಯಿದೆಯಿಂದ ಸಾಧಿಸಲಾಗದ ವಿಚಾರವಾದ ಹೃದಯ ಪರಿವರ್ತನೆ ಅಥವಾ ದೃಷ್ಟಿಕೋನದ ಬದಲಾವಣೆಯನ್ನು ಸ್ವಯಂ ಪ್ರೇರಿತ ಶಿಕ್ಷಣದ ಆಧಾರದ ಮೇಲೆ ರೂಪಿಸಿದೆ. ಕಾಯಿದೆ ಮಾಡುವುದು ಸುಲಭ. ಕಾರ್ಯಗತ ಮಾಡುವುದು ಕಠಿಣ. ಇದರಲ್ಲಿ ಬಲಾತ್ಕಾರದ ಶಕ್ತಿ ಇದೆ. ಒಲವಿನ ಮಾಧುರ್ಯಭಾವವಿಲ್ಲ. ರಕ್ಷಣೆಗೆ, ಶಿಕ್ಷೆಗೆ ಕಾಯಿದೆಯ ನೆರವು. ಆದರೆ ಶಿಕ್ಷೆಯ ದೃಷ್ಟಿಯೂ ಸುಧಾರಣೆಯೇ ಆಗಿರುವುದರಿಂದ ಮೊದಲಿನಿಂದಲೂ ಸುಧಾರಣೆಗಾಗಿ ಶ್ರಮಿಸುವುದೇ ಒಳ್ಳೆಯದೆಂಬ ಭಾವನೆಯಿಂದ ಕಾರ್ಮಿಕ ಶಿಕ್ಷಣ ಯೋಜನೆ ಸಿದ್ಧವಾಗಿದ. ಈ ಯೋಜನೆಯನ್ನು ಅಂಗೀಕರಿಸಿದವರಲ್ಲಿ ಭಾರತ ದೇಶವೂ ಒಂದಾಗಿದೆ; ಇಷ್ಟೇ ಅಲ್ಲ ಇದರಲ್ಲಿ ಬಹಳ ಮುಂದಾಗಿದೆ.

ಶಿಕ್ಷಣದಿಂದ ಕಾರ್ಮಿಕರಲ್ಲಿ ಸುಧಾರಣೆ ಹೇಗೆ ಸಾಧ್ಯ ಎಂಬುದು ಪ್ರಕೃತ ವಿಚಾರಾರ್ಹವಾದ ಸಂಗತಿಯಾಗಿದೆ. ಈ ಶಿಕ್ಷಣ ಯೋಜನೆಯ ಮುಖ್ಯ ಉದ್ದೇಶಗಳು ನಾಲ್ಕು ೧. ಪ್ರಜಾತಂತ್ರದ ಆಧಾರದ ಮೇಲೆ ಸುಸಂಘಟಿತ ಕಾರ್ಮಿಕ ವರ್ಗದ ನಿರ್ಮಾಣ. ೨. ದೇಶದ ಆರ್ಥಿಕ—ಸಾಮಾಜಿಕ ಚೌಕಟ್ಟಿನಲ್ಲಿ ಕಾರ್ಮಿಕನಿಗೆ ಯೋಗ್ಯಸ್ಥಾನ ಲಾಭ. ೩. ತನ್ನ ಉದ್ದಿಮೆಯ ಪ್ರಗತಿಯೊಂದಿಗೇ ತನ್ನ ಪ್ರಗತಿಯೂ ಹಾಸುಹೊಕ್ಕಾಗಿದೆ ಎಂಬ ಅರಿವುಂಟು ಮಾಡುವಿಕೆ ಮತ್ತು ೪. ನೌಕರನಾಗಿ ಸಂಘಟನಕಾರನಾಗಿ ಕುಟುಂಬದ ಯಜಮಾನನಾಗಿ ದೇಶದ ಪ್ರಜೆಯಾಗಿ, ಕಾರ್ಮಿಕನ ಪಾತ್ರ ನಿರ್ವಹಣೆಯ ಬಗ್ಗೆ ತಿಳುವಳಿಕೆ ನೀಡುವುದು. ಒಂದೇ ವಾಕ್ಯದಲ್ಲಿ ಹೇಳಬೇಕೆಂದರೆ ಎದುರಾಗುವಂಥ ಎಲ್ಲ ಸನ್ನಿವೇಶಗಳಿಗೂ ಜಾಣತನದಿಂದ ಪ್ರತಿಕ್ರಿಯೆ ವ್ಯಕ್ತಪಡಿಸುವುದು.

ಹತ್ತು ವರ್ಷಗಳ ಕಾಲದಿಂದ ಭಾರತದಲ್ಲಿ ಜಾರಿಯಲ್ಲಿರುವ ಈ ಶಿಕ್ಷಣ ಯೋಜನೆಯು ಸಮಾಜದ ಪ್ರಮುಖ ಅಂಗವಾದ ಕಾರ್ಮಿಕರಲ್ಲಿ ಯಾವ ವರ್ಚಸ್ಸನ್ನು ಬೀರಿದೆ ಯಾವ ಬಗೆಯ ಪರಿಣಾಮಗಳನ್ನುಂಟು ಮಾಡಿದೆ ಎಂಬುದರ ಬಗ್ಗೆ ಕೇಂದ್ರ ಕಾರ್ಮಿಕ ಶಿಕ್ಷಣ ಮಂಡಳಿಯು ದೇಶದ ವಿವಿಧ ಭಾಗಗಳಲ್ಲಿ ಅಭ್ಯಾಸ ತಂಡಗಳನ್ನು ನೇಮಿಸಿ ಗೊತ್ತು ಮಾಡಿದೆ. ಅವುಗಳಲ್ಲಿ ವ್ಯಕ್ತಪಟ್ಟಿರುವ ಮುಖ್ಯಾಂಶಗಳು ಹೀಗಿವೆ:

## ಸುಧಾರಣೆ ಆಗಿದೆಯೆ?

ಒಂದು ಕಾಲಕ್ಕೆ ಅಜ್ಞಾನವೆಂಬ ಕತ್ತಲಲ್ಲಿ ತೊಳಲಾಡುತ್ತಿದ್ದ ಕಾರ್ಮಿಕರಲ್ಲಿ ಶಿಕ್ಷಣ ಯೋಜನೆಯು "ಜಾಗೃತಿ" ಎಂಬ ಜ್ಯೋತಿಯನ್ನುಂಟು ಮಾಡಿದೆ. ಯಾರು ಏನೇ ಹೇಳಿದರೂ ಮೌನಪಶುಗಳಂತೆ ವರ್ತಿಸುವುದಿಲ್ಲ. ತಮ್ಮ ಕಷ್ಟಗಳನ್ನು ಪರಿಹರಿಸಿಕೊಳ್ಳಲು "ಹೊರಗಿನ ಧುರೀಣತ್ವ"ಕ್ಕಿಂತ "ಒಳಗಿನ ಧುರೀಣತ್ವ" (ಕಾರ್ಮಿಕರೇ ಕಾರ್ಮಿಕರ ನಾಯಕರಾಗುವುದು) ವೇ ಮೇಲು ಎಂಬ ಭಾವನೆ ಬೇರೂರಿದ್ದು ಈಗ ಕಾರ್ಮಿಕರಲ್ಲಿ ಅಚಲವಾದ "ಆತ್ಮವಿಶ್ವಾಸ"ವುಂಟಾಗಿದೆ. ಶಿಕ್ಷಣ ಕೇಂದ್ರಗಳಲ್ಲಿ ತರಬೇತಿ ಪಡೆದವರು ಕೇವಲ ಕಾರ್ಮಿಕ ಶಿಕ್ಷಕರಾಗದೆ ದೊಡ್ಡ ದೊಡ್ಡ ಸಂಘಗಳ ಪದಾಧಿಕಾರಿಗಳಾಗಿದ್ದಾರೆ. ಸಂಘಗಳ ಬಗ್ಗೆ ಹೇಯಭಾವನೆ ಹೊಂದಿದ್ದ ಮಾಲಿಕರ ಮನ ಗೆದ್ದುದರಲ್ಲಿ ಜವಾ

ಬ್ಬಾರಿಯಿಂದ ಕೂಡಿದ ಸಂಘಗಳನ್ನು ಸ್ಥಾಪಿಸಿದ್ದಾರೆ. ಎರಡು ಬಾರಿಯ ಗಂಡಾಂತರ ಪರಿಸ್ಥಿತಿಗಳಲ್ಲಿ (ಚೀಣದ ಹಾಗೂ ಪಾಕಿನ ಆಕ್ರಮಣ ಕಾಲಗಳಲ್ಲಿ) ಸುಶಿಕ್ಷಿತ ಕಾರ್ಮಿಕರು ತಮ್ಮ "ಸಾಮಾಜಿಕ ಹೊಣೆ"ಯನ್ನು ಚೆನ್ನಾಗಿ ನಿರ್ವಹಿಸಿ ಉತ್ಪಾದನೆಯನ್ನು ಅಧಿಕಗೊಳಿಸಿದ್ದಾರೆ ಇದರಲ್ಲಿ ಅಡಗಿರುವ ಮಹತ್ತರ ಅಂಶಗಳು ಹೀಗಿವೆ; ಕಾರ್ಮಿಕರನ್ನು ಸುಧಾರಿಸಿದರೆ ಅವರು ರಾಷ್ಟ್ರದ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಾರೆ ಅವರ ಸಹಕಾರವಿಲ್ಲದೆ ಆರ್ಥಿಕ ಯೋಜನೆಗಳು ಯಶಸ್ವಿಯಾಗಲಾರವು, ಅವರ ಬೆಂಬಲವಿಲ್ಲದೆ ರಾಷ್ಟ್ರೀಯ ಸಮಗ್ರತೆ ಪೂರ್ಣವಾಗದು ದೇಶದಲ್ಲಿ ಆಗಾಗ ಸಂಭವಿಸುವ ಜೀವನ ವೆಚ್ಚದ ಬಗ್ಗೆ "ಸಾರ್ವಜನಿಕ ಅಭಿಪ್ರಾಯ"ವನ್ನು ರೂಪಿಸುವುದರಲ್ಲಿ ಕಾರ್ಮಿಕರು ಮುಖ್ಯರು. ಮೇಲಾಗಿ ಈಗ ಸುಶಿಕ್ಷಿತ ಕಾರ್ಮಿಕನಿಗೆ "ಕಾಯಿದೆಯ ಪ್ರಜ್ಞೆ" ಬಹಳವುಂಟಾಗಿದೆ ಹೀಗೆ ಶಿಕ್ಷಣ ಯೋಜನೆಯಲ್ಲಿ ಭಾಗವಹಿಸಿದವರಲ್ಲಿ ಕಾಣಸಿಕೊಂಡ ಪರಿಣಾಮಗಳಿವು. ವೈಯಕ್ತಿಕವಾಗಿ ಹೇಳಬೇಕಾದರೆ ಕಾರ್ಮಿಕನಲ್ಲಿ ಉನ್ನತ ಸ್ಥಾನಕ್ಕೇರುವ ಹಂಬಲ, ಸುಖ ಸಂಸಾರ ಮಾಡುವ ಬಯಕೆ. ನಿಷ್ಠೆಯಿಂದ ಶಿಸ್ತಿನಿಂದ ದುಡಿಯುವ ಆಶೆ ಎಲ್ಲವೂ ಕಂಡು ಬಂದಿವೆ. ಇದು ಹೆಚ್ಚಾಗಿ ಬೆಳಕಿಗೆ ಬಾರದಿರುವುದಕ್ಕೆ ಕಾರಣ ಮಾಲಿಕರ, ಆಡಳಿತದವರ ಬದಲಾಗದ ಏಕಮುಖ ನೀತಿ. ಪ್ರತಿಕ್ರಿಯೆ ದೂರೆಯುದ ಕ್ರಿಯೆಯಿಂದ ಸುಧಾರಣೆ ನಿರೀಕ್ಷಿಸುವುದು ತಪ್ಪು. ಕೆಲವರು ಮಾಲಿಕರು ಕಾರ್ಮಿಕರ ಶಿಕ್ಷಣ ಯೋಜನೆಯಲ್ಲಿ ಭಾಗವಹಿಸಿ ಬಂದವರಿಂದ "ಮಿಲಿಟರಿ ಶಿಸ್ತ"ನ್ನೂ ತಾವು ಹೇಳಿದುದಕ್ಕೆ ಎದುರಾಡದೆ ಕಾರ್ಯ ಮಾಡುವಿಕೆಯನ್ನು ನಿರೀಕ್ಷಿಸಿ ವಿಫಲರಾದರು. ಸಾಂಘಿಕ ವ್ಯವಹಾರಗಳಲ್ಲಿ ಪ್ರವೇಶಿಸಲಿಚ್ಛಿಸಿದವರ ಬಗ್ಗೆ ನೌಕರಿಯಿಂದ ತೆಗೆಯುವ ಬೆದರಿಕೆ ಹಾಕಿದರು. ಮತ್ತೆ ಕೆಲವರು ಶಿಕ್ಷಣ ವರ್ಗಗಳಲ್ಲಿ 'ಉತ್ಪಾದನೆ ಹೆಚ್ಚಿಸುವುದು ಹೇಗೆ?"ಎಂಬ ಬಗ್ಗೆ ಮಾತ್ರ ಪಾಠ ನಡೆಯಲೆಂದು ಆಶಿಸಿದರು. ಹೀಗೆ ಮಾಲಿಕರ ಪ್ರತಿಕ್ರಿಯೆ ವಿವಿಧವಾಗಿದೆ. ತಿಳಿದಂಥ ಮಾಲಿಕವರ್ಗ ಶಿಕ್ಷಣ ಯೋಜನೆಗೆ ಅಪಾರ ಹಣವನ್ನು ಖರ್ಚು ಮಾಡುತ್ತಿದೆ. ಇದರ ಲಾಭವನ್ನೂ ಗಳಿಸಿಕೊಂಡಿದೆ.

## ವಿದೇಶಿಯರ ಅಭಿಪ್ರಾಯಗಳು

೧೯೫೮ರಲ್ಲಿ ಪ್ರಾರಂಭವಾದ ಈ ಯೋಜನೆ ೧೯೬೦ ರಲ್ಲಿ ಅಭ್ಯಾಸಮಾಡಲು ಅಂತಾರಾಷ್ಟ್ರೀಯ ಕಾರ್ಮಿಕ ಸಂಸ್ಥೆಯ ಕಾರ್ಮಿಕ ಶಿಕ್ಷಣ ತಜ್ಞ ಡಾ. ಪ್ರೊ. ಚಾರ್ಲ್ಸ್ ಓರ್ ಎಂಬುವರೂ ೧೯೬೨ ರಲ್ಲಿ ಅಮೇರಿಕೆಯ ಬಿ. ಏನ್ ಮಾಕ್ಕಮಾರ ಎಂಬುವರೂ ೧೯೬೪ ರಲ್ಲಿ ಅಮೇರಿಕೆಯ ವಿಸ್ಕಾನ್ಸಿನ್ ವಿಶ್ವವಿದ್ಯಾಲಯದ ತಜ್ಞೆ ಕುಮಾರಿ ಮರ್ಜೀನಿಯ ಬಿ. ಹಾರ್ಟ್ ಎಂಬಾಕೆಯೂ ಭಾರತಕ್ಕೆ ಬಂದರು. ಸ್ವಯಂ ಪ್ರೇರಿತ ತತ್ತ್ವದ ಮೇಲೆ ಕಾರ್ಮಿಕ ಶಿಕ್ಷಣ ಯೋಜನೆಯು ಈ ದೇಶದಲ್ಲಿ "ಅದ್ಭುತ ಪ್ರಗತಿ" ಸಾಧಿಸಿರುವ ಬಗ್ಗೆ ಮುಕ್ತಕಂಠದಿಂದ ಪ್ರಶಂಸಿಸಿದ್ದಾರೆ. ಈಚೆಗೆ (೧೯೬೮ ರಲ್ಲಿ) ಬ್ರಿಟನ್ನಿನ ವಯಸ್ಕರ ಶಿಕ್ಷಣ ಯೋಜನೆಯ ತಜ್ಞರೂ ಬರ್ಮಿಂಗ್‌ಹ್ಯಾಮಿನ ಫ್ರಾಂಕ್‌ಫರ್ಟ್ ಕಾಲೇಜಿನ ಪ್ರಿನ್ಸಿಪಾಲರೂ ಆದ ಪಿ. ಜಿ ಎಚ್. ಹಾಪ್‌ಕಿನ್ಸರು ನಮ್ಮ ಯೋಜನೆಯ ಬಗ್ಗೆ ಲೇಖನವೊಂದರಲ್ಲಿ ಬರೆದಿದ್ದಾರೆ "ಅಲ್ಪವೇ ಆದ ಧ್ಯೇಯಗಳನ್ನು ಹೊಂದಿದ್ದರೂ ಕೇಂದ್ರ ಕಾರ್ಮಿಕ ಶಿಕ್ಷಣ ಮಂಡಳಿಯು ಬಹಳಉತ್ತಮ ಮಟ್ಟದ ಯಶಸಾಧಿಸಿರುವುದರ ಬಗ್ಗೆ ನನಗೆ ಖಾತರಿಯಾಗಿದೆ ಇಲ್ಲಿ ಬೋಧಿಸುವಾಗ್ಗೆ ಕಂಡು ಬರುವ ಉನ್ನತ ಶಿಕ್ಷಣ ಮೌಲ್ಯಗಳು ಶಿಕ್ಷಣವೇತ್ತರ ಉತ್ಸಾಹ ಇವು ನನ್ನಲ್ಲಿ ಉತ್ತಮ ಅಭಿಪ್ರಾಯವನ್ನು ಮೂಡಿಸಿವೆ ಇದಕ್ಕೆ ಕಾರಣ ಸರಿಯಾದ ಯೋಜನೆ ಮತ್ತು ಕ್ರಮಬದ್ಧವಾದಪ್ರಯೋಗ."

ದೇಶಾದ್ಯಂತ ಸ್ಥಾಪಿಸಲ್ಪಟ್ಟರ ಮ ೩೦ ಶಿಕ್ಷಣ ಕೇಂದ್ರಗಳಲ್ಲಿ ೧೯೫೮ ರಿಂದ ೧೯೬೫ ನೇ ಜುಲೈ ವರೆಗೆ ಒಟ್ಟು ೧೪೨೭೯ ಮಂದಿ ಕಾರ್ಮಿಕ ಶಿಕ್ಷಕರೂ ೬.೪೦ ೪೭೪ ಮಂದಿ ಕಾರ್ಮಿಕರೂ ತರಬೇತಿ ಪಡೆದಿದ್ದಾರೆ ಕರ್ನಾಟಕದಲ್ಲಿ ಹುಬ್ಬಳ್ಳಿ, ಬೆಂಗಳೂರು ಹಾಗೂ ಮಂಗಳೂರುಗಳಲ್ಲಿ ಕಾರ್ಮಿಕ ಶಿಕ್ಷಣ ಕೇಂದ್ರಗಳಿವೆ.

ಕಾರ್ಮಿಕ ಶಿಕ್ಷಣ ಕೇಂದ್ರಗಳ ಉದ್ದೇಶವು ಈಡೇರಬೇಕಾದರೆ. ದೇಶದಲ್ಲಿ ಸಮಾಜವಾದೀ ಸಮಾಜ ಪ್ರಜಾತಂತ್ರ ಪದ್ಧತಿಗಳು ಬಲವಾಗಿ ನೆಲೆಗೊಳ್ಳಬೇಕಾದರೆ ರಾಷ್ಟ್ರದ ಸಂಪತ್ತು ಹೆಚ್ಚಬೇಕಾದರೆ ಕಾರ್ಮಿಕನ ಸುಧಾರಣೆ ಅತ್ಯಗತ್ಯ. ಈ ಸುಧಾರಣೆಗೆ ಮಾಲಿಕರ ನೆರವು ಅನಿವಾರ್ಯ, ಸಂಘಗಳ ಪ್ರಯತ್ನ ಅವಿರತವಾಗಿರಬೇಕು. ಎರಡೂ ಕೈ ಸೇರಿದರೆ ತಾನೆ ಚಪ್ಪಾಳೆ!

ವಿಶೇಷ ಸಂದರ್ಶನ

# ಆಶಾ ಪೋತದಾರರೊಂದಿಗೆ — ಕೆಲ ನಿಮಿಷಗಳು

—ಅಪ್ಪಾಸಾಹೇಬ ನಾಯಕ





ಮುಂಬಯಿಯ ವಿಲೇ ಪಾರ್ಲೇದಲ್ಲಿ ತೇಜಪಾಲ ರೋಡಿನ ಹಳೆಯದಾದರೂ ಒಳ್ಳೆಯ ಮನೆಯೊಂದರ ಮಾಳಿಗೆಯ ಒಂದು ದ್ವಾರದ ಮೇಲೆ ಒಳ್ಳೆಯ ಆಕರ್ಷಕವಾಗಿ "ಆಶಾಲತಾ ಪೋತದಾರ" ಅಂತಾ ಬರೆದ ಫಲಕದ ಬಾಗಿಲದ ದ್ವಾರ ಗಂಟೆಯ ಗುಂಡಿಯನ್ನು ಎರಡು ಸಲ ದಬ್ಬಿದ ನಂತರ ಸಪ್ತಸ್ವರ ನುಡಿಯಿತು ಗಂಟೆ. ಕೆಲ ಕ್ಷಣದ ನಂತರ ೫ ವರ್ಷದ ಚಿಕ್ಕ ಮಗು ಬಂದು ಬಾಗಿಲು ತೆರೆದು "ಕೋನ ಪಾಯಿಜೆ" ಅಂದಿತು. ನಾನು "ಆಶಾತಾಯಿ ಆಹೇಕಾ"? ಎಂದಾಕ್ಷಣ ಅದು "ಅಂಟೀ ಬೇಕಂತೆ" ಅಂತಾ ಒಳಕ್ಕೆ ಓಡಿತು. ಛತ್ರ ಭಾಷೆ ಮರಾಠಿ ಹಾಗೂ ಮಾತೃಭಾಷೆ ಕನ್ನಡ ಎರಡೂ ಭಾಷೆ ಪ್ರಚಲಿತ ಇವೆ ಎಂದು ಅರಿಕೆ ಮಾಡಿಕೊಟ್ಟು ಮಗು ಹೋದ ಕ್ಷಣದಲ್ಲಿಯೇ ಕೈ ಮುಗಿದು "ಬನ್ನಿ ನಾನು ಇಷ್ಟು ತಡ ಆದ ನಂತರ ನೀವು ಬರಲಿಕ್ಕಿಲ್ಲವೆಂದೇ ತಿಳಿದಿದ್ದೆ" ಎಂದು ನಕ್ಕಳು, ಮರಾಠಿ ಚಿತ್ರತಾರೆ ಆಶಾ ಪೋತದಾರ ಹುಟ್ಟು ಕನ್ನಡತಿ.

ಆಶಾ ಪೋತದಾರ ಇವಳ ಹುಟ್ಟೂರು ಬೆಂಗಳೂರೆಂದು ಒಳ್ಳೆಯ ಅಭಿಮಾನದಿಂದ ಹೇಳುತ್ತಾಳೆ. ತಂದೆಯವರು ಸರಕಾರಿ ನೌಕರರಾಗಿದ್ದರ ಫಲವಾಗಿ ಊರೂರು ಅಲೆದು ಇವಳು ಬೆಳಗಾಂವ ಜಿಲ್ಲೆ ಹುಕ್ಕೇರಿಯ ಚಿಕ್ಕ ಓಣಿಗಳಲ್ಲಿ ಬಾಲ್ಯದಲ್ಲಿ ಆಟವಾಡುತ್ತಿದ್ದುದನ್ನು ಹಾಗೂ ಚಿಕ್ಕೋಡಿಯ ಆರ್. ಡಿ ಹಾಯಸ್ಕೂಲಿನ ಪರಿಸರದಲ್ಲಿ ಪಡೆದ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಣದ ಸವಿನೆನಹುಗಳನ್ನು ಒಳ್ಳೇ ಪ್ರಾಶಸ್ತ್ಯ ಕೊಟ್ಟು ಹೇಳುತ್ತಾಳೆ.

ಮುಂಬಯಿ ಕರ್ನಾಟಕ ಒಂದೇ ಆಗಿದ್ದಾಗ, ಆಗಿನ ಕಾಲದಲ್ಲಿ ತಂದೆಗೆ ಬೊಂಬಾಯಿಗೆ ವರ್ಗವಾದ ನಂತರ ಕನ್ನಡ ಮಾಧ್ಯಮವಾಗಿ ಮಾಡಿಕೊಂಡು ಮಾತುಂಗದಲ್ಲಿಯ ಎನ್ ಕೆ ಇ. ಎಸ್ ಹಾಯಸ್ಕೂಲಿನಲ್ಲಿ ಇಂಗ್ಲೀಷ ಶಿಕ್ಷಣ ಮುಂದುವರೆಯಿಸಿ ಎಸ್. ಎಸ್. ಎಲ್. ಸಿ. ಪರೀಕ್ಷೆಯನ್ನು ಅಲ್ಲಿಯೇ ಪಾಸಾದಳು. ಸಂಪರ್ಕ ಪರಿಣಾಮದಿಂದಾಗಿ ಹಾಗೂ ಮರಾಠಿ ಮಾತನಾಡುವ ಗೆಳತಿಯರ ಗುಂಪಿನ ಮಧ್ಯದಲ್ಲಿ ಅವಶ್ಯವೆನಿಸಿತೆಂದು ಮರಾಠಿ ಭಾಷೆಯನ್ನು ಬರೆಯಲಿಕ್ಕೆ ಓದಲಿಕ್ಕೆ ಕಲಿತು ಆತ್ಮಸಾತ್ ಮಾಡಿಕೊಂಡಳಲ್ಲದೆ, ಒಳ್ಳೆಯ ಪ್ರಭುತ್ವ ಸಂಪಾದಿಸಿದ ಸಂಗತಿಯನ್ನು ಒಳ್ಳೆಯ ರಸಭರಿತವಾಗಿ ಹೇಳುತ್ತಾಳೆ. ಮುಂದೆ ಬಾಂದ್ರಾದಲ್ಲಿಯ ನ್ಯಾಶನಲ್ ಕಾಲೇಜಿನ ಕಲಾಕ್ಷೇತ್ರದಲ್ಲಿ ತನ್ನ ಅಭ್ಯಾಸ ಮುಂದುವರೆಯಿಸಿ ಅಲ್ಲಿಯೇ ಪದವೀಧರಳಾಗಿ ಹೊರಬಿದ್ದಳು. ಈ ಕಾಲದಲ್ಲಿ ಅವಳ ತಂದೆಯವರು ತೀರಿಹೋಗಿದ್ದರು. ಪರ್ಯಾಯವಾಗಿ ಶಿಕ್ಷಣದ ಮುಂದಿನ ಆಕಾಂಕ್ಷೆಯನ್ನು ಬಿಟ್ಟು ಮನೆಯಲ್ಲಿ ತಾಯಿಯನ್ನು ಸಂತೈಸಿ ನೆರವಾಗದ ವಿನಾ ಬೇರೆ ಗತಿಯಿರಲಿಲ್ಲ. ಚಿಕ್ಕಂದಿನಿಂದಲೂ ತಂದೆ ತಾಯಿಯ ಸಲಹೆಯ ಮೇರೆಗೆ ಕಲ್ಪಿಸಿ ಕಲಿತ ನೃತ್ಯದ ಅಭ್ಯಾಸಕ್ಕೆ ಕೆಲ ದಿನ ಧಾರೆ ಎರೆದಳು. "ನಿಮ್ಮ ತಂದೇ ತೀರಿಕೊಂಡ ವಿಷಯ ಜ್ಞಾಪಕವಿದೆಯೇ" ಎಂದು ಕೇಳಿದಾಗ ತುಂಬುಗಣ್ಣಿನಿಂದ "ಹೌದೆಂದು" ಗೋಣು ಅಲ್ಲಾಡಿಸಿದಳು. ನೀರೂರಿದ ಕಣ್ಣಿನಿಂದ ತಂದೆಯ ಮನಸೋಕ್ತ ಗುಣಗಾನ ಮಾಡಿದಳು ನನ್ನ ಅಕ್ಕ ತಂಗಿಯರು, ತಾಯಿ ಎಲ್ಲರೂ ನನಗೆ ತಂದೆಯ ನೆನಪು ಬಾರದಂತೆ ಸಲುಹಿದರು. ಅದಕ್ಕೆ ನಾನು ಆಜನ್ಮ ಅವರೆಲ್ಲರ ಸೇವೆ ಮಾಡಿದರೂ ತೀರದಾದ ಋಣ ಆಗಿದೆ.

ಶಾಲೆ ಕಾಲೇಜಗಳಲ್ಲಿ ನೃತ್ಯ ನಾಟಕ ಹಾಗೂ ಕ್ರೀಡಾಸ್ಪರ್ಧೆಗಳಲ್ಲಿ ಒಳ್ಳೆಯ ಆಸ್ಥೆಯಿಂದ ಭಾಗವಹಿಸುತ್ತಿದ್ದಳು ಎಂದು ಅವಳು ನನ್ನ ಮುಂದಿಟ್ಟ ಪ್ರಶಸ್ತಿ ಪತ್ರಿಕೆಗಳ ಕಂತೆಯ ಮೇಲಿಂದಲೇ ತಿಳಿಯಿತು. ಕಾಲೇಜಿನಲ್ಲಿ ಓದುವಾಗ ಶಾಸ್ತ್ರೀಯ ನೃತ್ಯ ಸ್ಪರ್ಧೆಗಳಲ್ಲಿ ಭಾಗವಹಿಸಿ ಅಂತರ್ ಮಹಾ ವಿದ್ಯಾಲಯ ಸ್ಪರ್ಧೆಗಳಲ್ಲಿ ಪ್ರಥಮ ಪ್ರಶಸ್ತಿ ದೊರಕಿಸಿದ್ದಕ್ಕೆ ಸನ್ ೧೯೬೫ರಲ್ಲಿ ಮುಂಬಯಿ ವಿಶ್ವವಿದ್ಯಾಲಯದವರು ದಯಪಾಲಿಸಿದ ಪ್ರಶಸ್ತಿ ಪತ್ರವೆ ಸಾಕ್ಷಿಯಾಗಿದೆ.

ಭರತ ನಾಟ್ಯದ ಶಿಕ್ಷಣವನ್ನು ಮುಂಬಯಿಯ ಪ್ರಸಿದ್ಧ ನೃತ್ಯ ದಿನಕರ ಶ್ರೀ ಪಾರ್ವತಿ ಕುಮಾರರಿಂದ ಪ್ರಾರಂಭಿಸಿ ಸಾರ್ವಜನಿಕ ಸಮ್ಮುಖದಲ್ಲಿ ಒಳ್ಳೆಯ ಧೈರ್ಯವಾಗಿ ನರ್ತಿಸುವ ತನಕ ಸಾಧನೆ ಮಾಡಿದಳು. ಸಾಕಷ್ಟು ಜನರ ಮೆಚ್ಚುಗೆಗೆ ಪಾತ್ರಳಾದ ಇವಳನ್ನು ಕೇಂದ್ರ ಸರಕಾರವು ಆಯೋಜಿಸಿದ ಸಂಸ್ಕೃತಿ ಸಂಘದ ಆಯೋಗದ ಸದಸ್ಯಳೆಂದು ದೇಶವ್ಯಾಪಿ ಸಂಚರಿಸಿ ಉತ್ಕೃಷ್ಟ ನೃತ್ಯಗಾರ್ತಿಯರನ್ನು ಸೋಲಿಸಿದ ಶ್ರೇಯ ಇವಳಿಗಿದೆ.

೧೯೬೭ ರಲ್ಲಿ ಒಂದು ಖಾಸಗಿ ಸಂಸ್ಥೆಯ ಪರವಾಗಿ ಆಫ್ರಿಕೆಯಲ್ಲಿ ತನ್ನ ನೃತ್ಯ ಚಾತುರ್ಯದಿಂದ ಎಲ್ಲರನ್ನು ಮಂತ್ರಮುಗ್ಧರನ್ನಾಗಿ ಮಾಡಿದಳೆಂದು ಅವಳಿಗೆ ಪುನಃ ಪುನಃ ಆಫ್ರಿಕೆಗೆ ಬರಲು ಕೇಳಿಕೊಂಡ ಹಲವಾರು ಸಾರ್ವಜನಿಕ ಹಾಗೂ ಖಾಸಗಿ ಸಂಸ್ಥೆಗಳಿಂದ ಬಂದ ಪತ್ರಗಳ ಮೇಲಿಂದ ತಿಳಿಯುತ್ತದೆ.

ಸುಶೀಲ ಸುಸ್ವಭಾವದವಳಾದ ಆಶಾ ತನ್ನ ಗೆಳತಿಯರ ಗುಂಪಿನಲ್ಲಿ ಒಳ್ಳೆಯ ಪ್ರಿಯಳಾಗಿದ್ದಾಳೆ. ಇದಕ್ಕೆ ಅವಳ ವಾಕ್ ಚಾತುರ್ಯವೇ ಕಾರಣ. ಮಿತಭಾಷಿಯಾಗಿದ್ದರೂ ಹಿತಭಾಷಿಯಾಗಿದ್ದಾಳೆ ಆಶಾ. ಹೀಗಿರಲು ನೀವು ರಂಗ

ನಾಟಕವನ್ನು ಹೋಗಿಬಿಡುವುದು. ಪ್ರಶ್ನೆಗೆ ಹಸಗೆ ಕ್ಕೆ ಒಲಿದು ಒಳ್ಳೆಯ ಸ್ವಾಗತ್ಯನಾಗಿ ಹೇಳು ತ್ತಾಳೆ ಆದು ಒಂದು ಆಕಸ್ಮಿಕವಾದ ತಾನೇ ಸ್ವೀಕರಿಸಿ ಹೇಳುವುದನ್ನು ನಾನು ಒಳ್ಳೆಯ ಕುತೂಹಲದಿಂದ ಕೇಳುತ್ತಿದ್ದೆ. ಹಾಗೆ ಹೇಳಿ ದಳು. "ಇದೊಂದು ರವಿವಾರ ಕಲ ದಿನ ಬಂದೆ ಯೇ ಮುಂಬಯಿಯ ಗವರ್ನಮೆಂಟ್ ಲಾ ಕಾಲೇಜಿನಲ್ಲಿ ವಿದ್ಯಾರ್ಥಿನಿಯಾದ ನಾನು ಚರ್ಚ ಗೇಟಿನಲ್ಲಿ ಹಾದುಹೋಗುತ್ತಿದ್ದೆ. ನನಗೆ ತೂರಟಿದ್ದ ಹಾದಿಯಲ್ಲಿ ಅಕಸ್ಮಾತ ಆಗಿನ ಆಯ್. ಎನ್. ಟಿ. ಯ ಕಾರ್ಯದರ್ಶಿ ಶ್ರೀ ಮಂಧ ಇತಿ ಹಾಗೂ ನನ್ನ ಸಹಪಾಠಿ ಅಪ್ಪಾ ಸಾಹೇಬ ನಾಯಿಕ ಇಬ್ಬರೂ ಕಾಲೇಜಿನ ಎದುರು ನಿಂತಿದ್ದನ್ನು ಕಂಡು ಆಶ್ಚರ್ಯವಾದೆ! "ನೀವೇಕೆ? ಇಲ್ಲಿ" ಎಂದು ಪ್ರಶ್ನಿಸಿದಾಗ ಅವರಿಬ್ಬರು ನನ್ನ ವಿಷಯವನ್ನು ಪ್ರಸ್ತಾಪಿಸಿ ಮಾತನಾಡುತ್ತಿದ್ದೆವು ಎಂದರು. ನನಗೆ ಇನ್ನೂ ಆಶ್ಚರ್ಯವಾಯಿತು. ಕೊನೆಗೆ ನಾನು ಆತ್ಮಾರಾಮ ಭೇಂಡೆಯವರು ದಿಗ್ದರ್ಶಿಸುತ್ತಿರುವ ಒಂದು ಆಯ್. ಎನ್. ಟಿ. ಪ್ರಸ್ತುತಪಡಿಸುತ್ತಿರುವ "ನರೋವಾ ಕುಂಜರನಾ" ಎಂಬ ನಾಟಕದಲ್ಲಿ ಪಾತ್ರ ವಹಿಸಲಿಕ್ಕೆ ಆಮಂತ್ರಣವಿತ್ತಿದ್ದಾರೆ. ಎಂದು ತಿಳಿಸಿದಾಗ ನನಗಾದ ಆನಂದಕ್ಕೆ ಪಾರವೇ ಇರಲಿಲ್ಲ. ಸರಿ! ಅನುಭವಿ ದಿಗ್ದರ್ಶಕ



ಮುಂಬರುವ ಮರಾಠಿ ಚಿತ್ರ 'ರಾತ್ರ ವಾದಳಿ ಕಾಳೋಖ್ಯಾತ' ಚಿತ್ರದಲ್ಲಿ

'ವಾವಟಳ' ಮರಾಠಿ ಚಿತ್ರದಲ್ಲಿ



ಶ್ರೀ ಆತ್ಮಾರಾಮ ಭೇಂಡೆಯವರ ಗರಡಿಯಲ್ಲಿ ಅವಳು ನಾಟ್ಯ ಸಾಧನೆಯನ್ನು ಪ್ರಾರಂಭಿಸಿದಳು. ಇಂಡಿಯನ್ ನ್ಯಾಶನಲ್ ದಿಗ್ದರ್ಶಕರವರು ಪ್ರಸ್ತುತಗೊಳಿಸಿದ ಒಂದರ ಹಿಂದೆ ಒಂದರಂತೆ "ನರೋವಾ ಕುಂಜರವಾ"ದ ನಂತರ "ಭಾರತಿ" "ಫೋನ ನಂ.೩೩೩೩" ಪ್ರೇಮಾ ತುರ್ರುಮಾರಂಗ ಕಸಾ" ಹೀಗೆ ಈ ಎಲ್ಲ ನಾಟಕಗಳಲ್ಲಿ ಪಾತ್ರಗಳನ್ನು ಯಶಸ್ವಿಯಾಗಿ ಅಭಿನಯಿಸಿದ್ದಾಳೆ ಇದರಲ್ಲಿ ಮಹಾರಾಷ್ಟ್ರ ರಾಜ್ಯ ನಾಟ್ಯ ಸ್ಪರ್ಧೆಯಲ್ಲಿ ಅಭಿನಯಿಸಿದ "ಫೋನ ನಂ ೩೩೩೩" ಇದರಲ್ಲಿ ಶ್ರೇಷ್ಠ ಅಭಿನೇತ್ರಿಯ ಪಾರಿತೊಷಕವು ಅವಳ ಪಾಲಿಗೆ ಬಂದಿದೆ

ಈ ಎಲ್ಲ ನಾಟಕಗಳನ್ನೂ ಆಸ್ಥೆಯಿಂದ ವೀಕ್ಷಿಸುತ್ತಾ ಬರುತ್ತಿದ್ದ ಮಹಾರಾಷ್ಟ್ರದ ಒಬ್ಬ ಶ್ರೇಷ್ಠ ಚಲನ ಚಿತ್ರಕಾರರ ದೃಷ್ಟಿ ಇವಳ ಅಭಿನಯ ಕೌಶಲ್ಯಕ್ಕೆ ಮೆರಗು ಕೊಡುವ ದೃಷ್ಟಿಯಿಂದ "ಪ್ರೇಮ ಆंಧಳಾ ಅಸತ" ಪ್ರೇಮ ಕುರುಡಾಗಿರುತ್ತದೆ, ಎಂಬ ಚಿತ್ರದಲ್ಲಿ "ನಾಯಕಿಯ" ಪಾತ್ರಕ್ಕೆ ಅವಕಾಶ ನೀಡಿದರು ಸಂಪೂರ್ಣವಾಗಿ ಚಿತ್ರವು ಚಿತ್ರೀಕರಣವಾಗುವ ವರೆಗೆ ಎಲ್ಲ ಸಹೋದ್ಯೋಗಿಗಳು ಒಳ್ಳೆಯ ಆತ್ಮೀಯತೆಯಿಂದ ನನ್ನನ್ನು ಬರಮಾಡಿಕೊಂಡು ಚಿತ್ರರಂಗದಲ್ಲಿ ಇದ್ದವರೆಲ್ಲ ನನಗೆ ಒಳ್ಳೆಯ ಸಹಕಾರ ನೀಡಿದ್ದಾರೆ" ಎಂದು ಕಳಕಳಿಯಿಂದ ಹೇಳುತ್ತಾಳೆ, ಆಶಾ ನಂತರ "ವಾವಟಳ" ಎಂಬ ಗ್ರಾಮ್ಯ ಚಿತ್ರದಲ್ಲಿ ನಾಯಕಿಯ ಪಟ್ಟ ಆಶಾಳಿಗೆ ದೊರೆಯಿತು ಪಾತ್ರ ಕಠಿಣವಾಗಿದ್ದರೂ ಧೈರ್ಯದಿಂದ ಹಳ್ಳಿಗರ ಸಂಸ್ಕೃತಿಯನ್ನು ತುಂಬಿಸಿ ಪ್ರತಿಬಿಂಬಿಸಿ ತನ್ನ ಏಕಮಾತ್ರ ಆಕಾಂಕ್ಷೆಗೆ ಯೋಗ್ಯ ನ್ಯಾಯ ದೊರಕಿಸುವ ಸಲುವಾಗಿ ಕೊಲ್ಹಾಪುರದ ಹತ್ತಿರ ಹಳ್ಳಿಗಳಿಗೆ ಹೋಗಿ ಅಲ್ಲಿಯ ಜನರ ನಡೆ ನುಡಿಗಳನ್ನು ಅಭ್ಯಾಸ ಮಾಡಿದ ನಂತರವೇ ಚಿತ್ರೀಕರಣಕ್ಕೆ ಅನುವಾದಳೆಂದು ಹೇಳುತ್ತಾಳೆ ಅಂತೆಯೇ ಜೀವಂತ ಅಭಿನಯವನ್ನು ಮೆಚ್ಚಿ ಮಹಾರಾಷ್ಟ್ರ ರಾಜ್ಯ ಸರಕಾರದವರು ಶ್ರೇಷ್ಠ ಅಭಿನೇತ್ರಿಯ ಪಾರಿತೋಷಕವನ್ನು ಘೋಷಿಸಿದಾಗ ಮರಾಠಿ ಚಿತ್ರ ಸೃಷ್ಟಿಯಲ್ಲಿ ಒಂದು ಒಳ್ಳೇ ಸಮಾಧಾನ ಬೆಳಗಿತು

ಇವಳ ಚಿತ್ರರಂಗದ ಉತ್ತ ಮುನ್ನಡೆಯ ಪರಿಣಾಮವಾಗಿ ಮರಾಠಿ ಚಿತ್ರರಂಗದ ಎಷ್ಟೋ ಚಿತ್ರ ನಿರ್ಮಾಪಕರು ತಮ್ಮ ಚಿತ್ರದಲ್ಲಿ ಅಭಿನಯಿಸಬೇಕೆಂದು ಕೇಳಿಕೊಂಡಾಗ, ಒಂದೆರಡು ಚಿತ್ರದಲ್ಲಿಯ ಪಾತ್ರಗಳಿಗೆ ತಾನು ಅರ್ಹಳಲ್ಲೆಂದು ತಾನೇ ಘೋಷಿಸಿ ಉಳಿದ ಚಿತ್ರಗಳಲ್ಲಿ ಪಾತ್ರಗಳನ್ನು ಸ್ವೀಕರಿಸಿದ್ದಾಳೆ ಹಿಂದೀ ಪೌರಾಣಿಕ ಚಿತ್ರಕ್ಕೆ ಹಲವಾರು ಕರೆಗಳನ್ನ ಸ್ವೀಕರಿಸುವದಾಗಲಿಲ್ಲ. ಅದಕ್ಕೆ ಆಕೆ ಅವಳು ವಿಶಿಷ್ಟ ಕಾರಣಗಳನ್ನು ಕೊಡುತ್ತಾಳೆ ಏನೆಂದರೆ ಪೌರಾಣಿಕ ಚಿತ್ರದ ಒಂದು ಮುದ್ರೆ ತಾರೆಯರ ಮೇಲೆ ಬಿದ್ದರೆ ನಾಯಿಕೆಯರ ಪಾತ್ರಗಳಿಗೆ ನೀರೆರದಂತೆ ಎಂದು. ಪೌರಾಣಿಕ ಚಿತ್ರದ ನಾಯಿಕೆಯರೆಂದರೆ ಎಲ್ಲ ಚಿತ್ರರಂಗದಿಂದ ದೂರೆಸದ ಕಲ್ಲುಗಳೆಂಬ ಭಾವನೆ ಚಿತ್ರ ನಿರ್ಮಾತೃಗಳಲ್ಲಿ ಮೂಡಿದೆ ಎಂದು ಮರು ಉತ್ತರವಿತ್ತಳು.

ಆಶಾ ಪೋತದಾರ ಇವಳು "ರಾತ್ರ ವಾದಳಿ

ಕಾಳೋಖ್ಯಾಜಿ" "ಸ್ವಪ್ನತೇಜಿ ಲೋಜನಿ" (ರಮೇಶದೇವ ನಾಯಕ) "ವಳಣಾ ವರಚಾ ಘರ ಕೌಲಾರೂ" "ಶ್ಯಾಮ ಸುಂದರ" "ಇಥೆ ಕಾಂಬಲೆ ಲಕ್ಷ್ಮಿ" ಹಾಗೂ ಇನ್ನು ಒಂದೆರಡು ನಾಮಕರಣ ಮಾಡದ ಮರಾಠಿ ಚಿತ್ರಗಳಲ್ಲಿ ಹಾಗೂ ಪಾಟಿಯಾವರ ಹಿಂದಿ "ಇಂಟರ ನಾಶನಲ್ ಕ್ರುಕ್"ದಲ್ಲಿ ಧರ್ಮೇಂದ್ರ ಸಾಯಿರಾಬಾನುಳ ಜೊತೆಗೆ ಮಹತ್ವಪೂರ್ಣ ಭೂಮಿಕೆಯಲ್ಲಿ ಪಾತ್ರ ವಹಿಸುತ್ತಿದ್ದಾಳೆ. ಇದೂ ಅಲ್ಲದೆ ಪುಷ್ಪಾ ಪಿಕ್ಚರ್ಸದವರ ಮುಂಬರುವ ಚಿತ್ರದಲ್ಲಿ ಒಂದು ಭಿನ್ನ ಪಾತ್ರದಲ್ಲಿ ಕಾಣಿಸಿಕೊಳ್ಳುವವಳಿದ್ದಾಳೆ. ಈಗ ಮಹಾರಾಷ್ಟ್ರದ ತುಂಬೆಲ್ಲಾ ಒಳ್ಳೆಯ ಜನಪ್ರಿಯವಾಗಿ ಪ್ರದರ್ಶಿಸಲ್ಪಡುವ "ಪ್ರೀತ ಶಿಕಾವಾ ಮಾಲಾ" ಚಿತ್ರವೇ ಅವಳ ಪಾತ್ರದಲ್ಲಿ ವೈವಿಧ್ಯವನ್ನು ತೋರಿಸಲು ಒಳ್ಳೇ ಸಾಕ್ಷಿಯಾಗಿದೆ

ಕನ್ನಡ ಚಿತ್ರಗಳನ್ನು ಒಂದೂ ಬಿಡದೇ ಯಾವ ಥೇಟರದಲ್ಲಿದ್ದರೂ ನೋಡುತ್ತಾಳೆ. ಅವಳ ನಚ್ಚಿನ ನಟ- ನಟಸಾರ್ವಭೌಮ ರಾಜಕುಮಾರ ಶ್ರೀ ಉದಯಕುಮಾರ ಅಭಿನಯಿಸುವದನ್ನು ತುಂಬಾ ಮೆಚ್ಚುತ್ತಾಳೆ. ಕನ್ನಡ ಚಿತ್ರ ನಟಿಯರಲ್ಲಿ ತಾರೆ ಜಯಂತಿಯ ಅಭಿನಯವನ್ನು ಮನಸಾರೆ ಹೊಗಳುತ್ತಾಳೆ. ಕನ್ನಡ ಚಿತ್ರದಲ್ಲಿ ಒಬ್ಬ ಮೂಕ ಗೃಹಿಣಿಯ ಪಾತ್ರವನ್ನು ಅಭಿನಯಿಸುವ ಅಭಿಲಾಷೆ ತನಗೆ ತುಂಬಾ ಇದೆ ಎಂದು ಎನ್ನುತ್ತಾಳೆ. ಇದೂ ಅಲ್ಲದೆ ಭಾರತೀಯ ನೃತ್ಯಗಳ ಮೇಲೆ ಆಧಾರಿತ ಯಾವದೇ ಚಿತ್ರದಲ್ಲಿ ತಾನು ಪಾತ್ರವಹಿಸುವ ಇಚ್ಛೆಯನ್ನು ಬಲವಾಗಿ ಪ್ರಕಟಿಸಿದಳು.

ನವೋದಿತ ಕನ್ನಡತಿ ತಾರೆಗೆ ಮುಂದೆ ಉಜ್ವಲ ಭವಿಷ್ಯವಿದೆ. ಕರ್ಮವೀರದ ಓದುಗರಲ್ಲಿ ದೀಪಾವಳಿಯ ಶುಭಾಶಯಗಳನ್ನು ಕೋರಿದ್ದಾಳೆ

ದೀಪಾವಳಿಯ ಶುಭಕೋರಿಕೆ





ಶ್ರೇಷ್ಠ ಬಂಗಾಲಿಚಿತ್ರ ದಿಗ್ದರ್ಶಕ ಸತ್ಯಜಿತ ರೇ ಅವರೊಂದಿಗೆ ದಿಲ್ಲಿಯ ಒಂದು ಕೂಟದಲ್ಲಿ





# ಮುಂಬಯಿ ಚಿತ್ರರಂಗದ ಕನ್ನಡಿಗರು

ಸಂತೋಷಕುಮಾರ ಗುಲ್ವಾಡಿ



ಸದಾಶಿವರಾವ, ಜೀ. ಕವಿ

## ಸದಾಶಿವರಾವ. ಜಿ ಕವಿ

ಅದೃಷ್ಟವನ್ನರಸಿ ಕನ್ನಡ ನಾಡಿನಿಂದ ಮುಂಬಯಿಗೆ ಬಂದು ಮರಾಠಿ-ಹಿಂದಿ ಚಿತ್ರೋದ್ಯಮಗಳೆರಡರಲ್ಲೂ ಯಶಸ್ಸು ಗಳಿಸಿರುವ ಸದಾಶಿವ ರಾವ್ ಕವಿಯವರು ಮುಂಬಯಿ ಕನ್ನಡಿಗರ ಸಾಹಸಕ್ಕೆ ಇನ್ನೊಂದು ಹಿರಿಯ ಉದಾಹರಣೆ.

ಆರ್. ಡಿ. ಕಾಮತ



ಇನ್ನೇನು ಸದ್ಯದಲ್ಲೇ ಕವಿಯವರು ಮುಂಬಯಿಯಿಂದ ಮೊದಲ ಕನ್ನಡ ಚಿತ್ರವನ್ನು ನಿರ್ಮಿಸುವ ಯೋಜನೆ ಮಾಡುತ್ತಲಿದ್ದಾರೆ

ಮಂಗಳೂರಲ್ಲಿ ಹುಟ್ಟಿ, ಕೆನರಾ ಹೈಸ್ಕೂಲಿನಲ್ಲಿ ಕಲಿತು, ೧೯೩೪ ರಲ್ಲಿ ಮುಂಬಯಿಯಲ್ಲಿ ಕಾಲಿರಿಸಿದಾಗ ಕವಿಯವರಿಗೆ ತನ್ನ ಕ್ಷೇತ್ರ ಚಲಚ್ಚಿತ್ರರಂಗದಲ್ಲಿರಬಹುದು ಎಂಬ ಊಹೆ ಕೂಡ ಇರಲಿಲ್ಲವಂತೆ ಆದರೆ ಸಣ್ಣ ರೀತಿಯಲ್ಲಿದ್ದ ಆರಂಭ ಈ ೩೦ ವರ್ಷಗಳಲ್ಲಿ ಬೆಳೆದ ಬಗೆ ನೋಡಿದರೆ ಅವರ ಸಾಧನೆಯ ಅರಿವಾಗಿ ಅವರ ಬಗೆಗೆ ಅಭಿಮಾನ ಮೂಡುತ್ತದೆ.

ಆರಂಭದಲ್ಲಿ ಚಿತ್ರವಿತರಣೆಯ ಉದ್ಯಮದಲ್ಲಿ ೧೯೪೦ ರಿಂದ ೪೬ ರ ವರೆಗೆ ದುಡಿದು ಚಲಚ್ಚಿತ್ರೋದ್ಯಮದ ಅಂತರಂಗವನ್ನರಿತುಕೊಂಡ ಕವಿಯವರು ೧೯೪೬ ರಲ್ಲಿ ವಾಡಿಯಾರವರೊಂದಿಗೆ ಸಹಭಾಗಿಯಾಗಿ 'ಸಂತ ನಾಮದೇವ' ಮತ್ತು 'ಮರ್ದ ಮರಾಠಾ' ಚಿತ್ರಗಳನ್ನು ಮರಾಠಿಯಲ್ಲೇ ರಚಿಸಿದರು. ತನ್ನ ಸ್ವಂತ ಚಿತ್ರಗಳನ್ನು ತಯಾರಿಸಲು ನಾಂದಿ ಹಾಕಿಕೊಟ್ಟ ಇವು ತನ್ನಲ್ಲಿ ಆತ್ಮವಿಶ್ವಾಸ ಮೂಡಿಸಿದುವು ಎನ್ನುತ್ತಾರೆ ಕವಿ. ಆದರೆ ಸ್ವಂತ ತಯಾರಿಕೆ ಆರಂಭವಾಗಲು ಅಷ್ಟು ಬೇಗ ಕಾಲ ಕೂಡಿ ಬರಲಿಲ್ಲ.

ಕವಿಯವರ ಮೊದಲ ಸ್ವಂತ ಚಿತ್ರ 'ವಹಿನೀಚಾ ಬಾಂಗಡ್ಯಾ' (ಮರಾಠಿ-ಅತ್ತಿಗೆಯ ಬಳೆಗಳು ೧೯೫೩, ಬಹಳ ಯಶಸ್ವಿಯಾಯಿತು; ಜನಪ್ರಿಯತೆ ಹಣ ಎರಡನ್ನೂ ತಂದು ಕೊಟ್ಟಿತು. ಚಿತ್ರರಂಗದಲ್ಲಿ ಕವಿಯವರ ಸ್ಥಾನ ಭದ್ರವಾಯಿತು; ಮರಾಠಿ ಜನರಲ್ಲಿ ಅವರ ಹೆಸರು ಮನೆಮಾತಾಯಿತು ಮುಂದೆ ಇದೇ ಚಿತ್ರದ ಹಿಂದಿ ಅವತರಣಿಕೆ 'ಭಾಭೀ ಕೀ ಚೂಡಿಯಾಂ' (೧೯೬೧) ಕೂಡ ಬಹು ಜನಪ್ರಿಯವಾಗಿತ್ತು.

ಮೊದಲನೆಯ ಸ್ವಂತ ಚಿತ್ರದ ಬಳಿಕ ಕವಿಯವರು ಪ್ರತಿ ಎರಡು ವರ್ಷಗಳಿಗೊಂದರಂತೆ ಉತ್ತಮ ಅಭಿರುಚಿಯ ಮನೋಜ್ಞ ಚಿತ್ರಗಳನ್ನು ಕೊಡುತ್ತಲೇ ಬಂದಿದ್ದಾರೆ. ಅವು 'ಶೇವಗ್ಯಾಚಾ ಶೇಂಗಾ' (ಮರಾಠಿ-೧೯೫೫). 'ಹಮ್ ಪಂಛಿ ಏಕ್ ಢಾಲ ಕೆ' (ಹಿಂದಿ-೧೯೫೭). —ಎ ವಿ ಎಂ ನವರೊಂದಿಗೆ ಕೂಡಿ ರಚಿಸಿದುದು, 'ದೀದಿ' (ಹಿಂದಿ-೧೯೫೯), 'ಬೇಗಾನಾ' (ಹಿಂದಿ—೧೯೬೪-೬೫), 'ತುಕಾ ಝುಲಾಲಾಸೆ ಕಳಸ್' (ಮರಾಠಿ-೧೯೬೫). ಈಗ 'ಅನ್ನ ಆಣೆ ಅನ್ನ' (ಮರಾಠಿ) ತಯಾರಿಕೆಯಲ್ಲಿದೆ. ಇದಕ್ಕೆ ಹೆಸರಾಂತ ನಾಟಕಕಾರ ಆರ್. ಡಿ. ಕಾಮತರ ಕತೆ ಇದೆ.

ಶಿವಾಜಿ ಪಾರ್ಕ್‌ನಲ್ಲಿರುವ 'ಶೋಭಾ'ದಲ್ಲಿ ವಾಸಿಸುವ ಕವಿಯವರ ಮನೆ ಮಾತು ಕೊಂಕಣಿ ಆದರೂ ಅವರಿಗೆ ಕನ್ನಡದ ಅಭಿಮಾನ ಬಹಳ. ಮುಂಬಯಿಯಲ್ಲಾಗುವ ಕನ್ನಡ ನಾಟಕಗಳೇ ಇನ್ನಿತರ ಕಾರ್ಯಕ್ರಮಗಳೇ ಇವನ್ನವರು ತಪ್ಪದೆ ನೋಡುತ್ತಿರುತ್ತಾರೆ. ೧೯೬೯ ರೊಳಗೆ ಆರ್. ಡಿ ಕಾಮತರ 'ದೇವರ ಕಣ್ಣು' ನಾಟಕವನ್ನೇ ಹೊಂದಿ ಮಾಡುವ ಅವರ ಕನ್ನಡ ಚಿತ್ರದ ಯೋಜನೆಯೇ ಅವರ ಕನ್ನಡ ಪ್ರೇಮಕ್ಕೆ ಸಾಕ್ಷಿ

## ಶ್ರೀಮತಿ ಕೃಷ್ಣಾ ಕಲ್ಲೆ

ಕಲ್ಲೆ ಎಂಬ ಹೆಸರೇ ಕೃಷ್ಣಾ ಕಲ್ಲೆ ಕನ್ನಡಿಗರೆಂದು ಸೂಚಿಸುತ್ತದೆ. (ಕಲ್ಲೆ ಎಂಬುದು ದಕ್ಷಿಣ ಕನ್ನಡದ ಒಂದು ಹಳ್ಳಿ) ಅವರ ಮಾತಾಪಿತರು ಮಂಗಳೂರಿನವರು. ಮುಂಬಯಿಯಲ್ಲಿ ಹುಟ್ಟಿ, ಕಾನಪುರದಲ್ಲಿ ಬೆಳೆದ ಕೃಷ್ಣಾಗೆ ಅಲ್ಪಸ್ವಲ್ಪ ಕನ್ನಡ ಬರುತ್ತದೆ. ಮನೆ ಮಾತು ಕೊಂಕಣಿ. ಆದರೆ ಕೃಷ್ಣಾ ಕಲ್ಲೆ ಕನ್ನಡ ಕೂಡಿ ಒಂಭತ್ತು ಭಾಷೆಗಳಲ್ಲಿ – ಹಿಂದಿ, ಗುಜರಾಥಿ, ಮರಾಠಿ, ಡೋಗ್ರಿ, ಪಂಜಾಬಿ, ಹರಿಯಾಣ, ಮೈಥಿಲಿ ಮತ್ತು ಭೋಜಪುರಿಗಳಲ್ಲಿ ಹಾಡಿದ್ದಾರೆ. ಅವರು ಒಟ್ಟು ಹಾಡಿದ ಗೀತಗಳ ಸಂಖ್ಯೆಯೇ ೫೦೦ ಕ್ಕೆ ಹತ್ತಿರ ಹತ್ತಿರ ಬಂದಿದೆ. ಬೇರೆ ಬೇರೆ ಭಾಷೆಗಳಲ್ಲಿ ಹಾಡುವುದು ತನಗೊಂದು ಸಮಸ್ಯೆ ಎಂದೇ ಅನಿಸಿಲ್ಲ, ಬದಲು ಅವು ತನ್ನ ವ್ಯಾಪ್ತಿಯನ್ನು, ಭಾವನೆಗಳನ್ನು ಬೇರೆ ಬೇರೆ ಬಗೆಗಳಲ್ಲಿ ಹೊರಹಾಕುವ ಶಕ್ತಿಯನ್ನು ಹೆಚ್ಚಿಸಿವೆ ಎನ್ನುತ್ತಾರೆ ಕೃಷ್ಣಾ.

ಇಂದು ಲತಾ ಮಂಗೇಶ್ಕರ್, ಆಶಾ ಭೋಸಲೆ, ಸುಮನ್ ಕಲ್ಯಾಣಪುರ ಇವರೊಂದಿಗೇ ಸರಿಸಮನಾಗಿ ಕೃಷ್ಣಾ ಮರಾಠಿ ಭಾವಗೀತಗಳನ್ನು ಹಾಡುವುದರಲ್ಲೂ ಒಂದು ಕೈ ಮೇಲು. ಠುಮ್ರಿ, ಗಝಲ್‌ಗಳನ್ನು ಅವರು ಚೆನ್ನಾಗಿ ಹಾಡುತ್ತಾರೆ

ಇಂದಿನ ಪ್ರಥಮ ಶ್ರೇಣಿಯ ಎಲ್ಲ ಸಂಗೀತ ದಿಗ್ದರ್ಶಕರಿಗಾಗಿ ಕೃಷ್ಣಾ ಹಾಡಿದ್ದಾರೆ. ಹೆಸರಾಂತ ಗಾಯಕ–ಗಾಯಕಿಯರೊಂದಿಗೆ ಕಂಠ ಕೂಡಿಸಿದ್ದಾರೆ. ಸಂಗೀತ ದಿಗ್ದರ್ಶಕರು – ಕಲ್ಯಾಣಜಿ-ಆನಂದಜಿ, ರವಿ, ಸಿ ರಾಮಚಂದ್ರ, ಉಷಾಖನ್ನಾ, ಜಯದೇವ್ ಮೊದಲಾದವರು. ಪಾರ್ಶ್ವಗಾಯಕ— ಗಾಯಕಿಯರು – ರಫಿ ಮಹೇಶ್, ಮನ್ನಾಡೆ ಮಹೇಂದ್ರ ಕಪೂರ್, ಸುಮನ ಕಲ್ಯಾಣಪುರ, ಶಮಶಾದ್ ಬೇಗಮ್, ಮುಬಾರಕ್ ಬೇಗಮ್, ಉಷಾ ಮಂಗೇಶ್ಕರ್, ಕಮಲ ಬಾರೂಟ್, ಉಷಾ ಟಿಮ್ಮಾನರ್ ಮೊದಲಾದವರು.

ಕೃಷ್ಣಾರ ಪತಿ ಶ್ರೀ ಇಡಗುಂಜಿಯವರು, ಉತ್ತರ ಕರ್ನಾಟಕದವರು. ಆದರೆ ಚಿತ್ರರಂಗದಲ್ಲಿ 'ಕಲ್ಲೆ' ಎಂಬ ಹೆಸರೇ ಪ್ರಸಿದ್ಧವಾಗಿರುವುದರಿಂದ ಹೆಸರಿನ ಬದಲಾವಣೆಯ ಗೋಜಿಗೇ ಅವರು ಹೋಗಲಿಲ್ಲ.

ಸಾಂತಾಕ್ರೂಜಿನ ಅವರ 'ಸಂಗಮ' ಮನೆಗೆ ಹೋದಾಗ ಯಾವಾಗಲೂ ನಗುಮುಖದಿಂದ ಬರಮಾಡಿಕೊಳ್ಳುವ ಕೃಷ್ಣಾರನ್ನು 'ಕರ್ಮವೀರ'ದ ದೀಪಾವಳಿ ವಿಶೇಷಾಂಕದ ಲೇಖಕ್ಕಾಗಿ ಭೇಟಿಯಾದಾಗ ನಾನು ಕೇಳಿದೆ.

"ಕನ್ನಡ ನಾಡಿನವರ ವಂಶಜರಾದ ನೀವು ಕನ್ನಡ ಓದುಗರಿಗೆ ಏನೆಂದು ಸಂದೇಶ ಕೊಡುತ್ತೀರಿ?"

ಮೃದುವಾಗಿ ಮುಗುಳ್ನಗುತ್ತ ಕೃಷ್ಣಾ ಎಂದರು–

"ಹೆಚ್ಚು ಹೆಚ್ಚು ಕನ್ನಡ ಹಾಡುಗಳನ್ನು ಹಾಡುವ ಆಸೆ ನನಗಿದೆ. ಅದನ್ನು ಕೇಳುವ, ಪ್ರೋತ್ಸಾಹಿಸುವ, ಉತ್ತಮ ಅಭಿರುಚಿ ಬೆಳೆಸುವ ವಾತಾವರಣವನ್ನು ಕಲ್ಪಿಸಿರಿ ಎಂದು ವಿನಂತಿಸುತ್ತೇನೆ; ಮತ್ತ ಹಾಡುತ್ತೇನೆ." ಎಂದು ಕೈ ಜೋಡಿಸಿ ಹೇಳಿದರು.

ಕೃಷ್ಣಾ ಕಲ್ಲೆ



## ಕೆ. ಎ. ನಾರಾಯಣ

ಹಿಂದಿ ಚಿತ್ರರಂಗದಲ್ಲಿ ಒಮ್ಮೆಲೇ ಅತಿ ಹೆಚ್ಚಿನ ಸಂಖ್ಯೆಯ ಕತೆಗಳನ್ನು ಚಿತ್ರರಂಗಕ್ಕೆ ಕೊಟ್ಟಿರುವ ದಾಖಲೆ ಮಾಡಿದ ಕೆ. ಎ. ನಾರಾಯಣ ಇನ್ನೊರ್ವ ಕನ್ನಡಿಗರು. 'ಕರ್ಮವೀರ'ದ ದೀಪಾವಳಿ ವಿಶೇಷಾಂಕಕ್ಕಾಗಿ ಅವರ ಕುರಿತು ಬರೆಯುವುದಕ್ಕಾಗಿ ಮಾಹಿಮ್ ನಲ್ಲಿರುವ ಅವರ ಮನೆಗೆ ಹೋದಾಗ ತನ್ನ ಒಂಭತ್ತು ಕತೆಗಳ ಮೇಲೆ ಹೊಂದಿ ಈಗ ಚಿತ್ರಗಳು ತಯಾರಾಗುತ್ತಿವೆ ಎಂಬ ಸುದ್ದಿಯನ್ನು ಸ್ವತಃ ನಾರಾಯಣರೇ ಅಭಿಮಾನದಿಂದ ನನ್ನೊಡನೆ ಹೇಳಿದರು. ಆದರಲ್ಲೂ ಈ ಚಿತ್ರಗಳನ್ನು ತಯಾರಿಸುವವರು ಪ್ರಸಿದ್ಧ ದಿಗ್ದರ್ಶಕ—ನಿರ್ಮಾಪಕರುಗಳೇ; ದೇವ್‌ಆನಂದ್, ವಹೀದಾರೆಹಮಾನ್, ಮನೋಜ್‌ಕುಮಾರ್, ವೈಜಯಂತಿಮಾಲಾ ಮೊದಲಾದ ಹಿರಿಯ ನಟ–ನಟಿಯರುಗಳೇ ಇದರಲ್ಲಿದ್ದಾರೆ

ಈಗಾಗಲೇ ಬಹುಪಾಲು ಮುಗಿದಿರುವ 'ದುನಿಯಾ' (ದೇವ್–ವೈಜಯಂತಿ ಜೋಡಿ)



ಕೆ. ಎ. ನಾರಾಯಣ್

ಮತ್ತು 'ಪ್ಯಾರ್ ಹಿ ಪ್ಯಾರ್', 'ಮಹಲ್', 'ಇನ್ಸಾನಿಯತ್', 'ಬಲಿದಾನ್' ಚಿತ್ರಗಳು ಹಿಂದಿಯಲ್ಲಿ ಇತಿಹಾಸ ಮಾಡಬಲ್ಲಂಥವು. ಅಕ್ಟೋಬರದಿಂದ ಆರಂಭವಾಗಿರುವ 'ರಕ್ಷಾ' ತನ್ನ ಪ್ರಮುಖ ಕಥೆಯಿಂದ ರಚಿತವಾಗುವುದೆಂದು ನಾರಾಯಣ್ ಹೇಳಿದರು. 'ದುನಿಯಾ' ದಲ್ಲಿರುವ ಕಾರಾಗಣವೇ ಇದರಲ್ಲೂ ಇದ್ದು ಚಿತ್ರದಲ್ಲಿ ಗೋವಾ ಹಿನ್ನೆಲೆಯಿಂದ ಗೋವಾದಲ್ಲೇ ಚಿತ್ರದ ಕೆಲವು ಭಾಗಗಳನ್ನು ತೆಗೆಯುವರು. ನಾರಾಯಣರು ಹೆಸರಿಡದ ಮೂರು ಚಿತ್ರಕತೆಗಳೂ ಈಗಾಗಲೇ ನಿರ್ಮಾಪಕರ ಒಪ್ಪಿಗೆ ಪಡೆದು ಇನ್ನೇನು ಸದ್ಯದಲ್ಲೇ ಅವುಗಳ ಕೆಲಸ ಪ್ರಾರಂಭವಾಗಲಿದೆ.

ಕಳೆದ ಏಳು ವರ್ಷಗಳಲ್ಲಿ ನಾರಾಯಣರ ಹನ್ನೊಂದು ಕತೆಗಳನ್ನು ಹೊಂದಿ ಚಲಚ್ಚಿತ್ರಗಳಾಗಿವೆ. ಅವೇ–'ಗೀತ ಗಾಯಾ ಪತ್ಥರೋನೆ! 'ಲವ್ ಮ್ಯಾರೇಜ್' 'ಜಂಗ್ಲೀ', 'ಏಕ್ ಮುಸಾಫಿರ್ ಏಕ್ ಹಸೀನಾ', 'ಗ್ಯಾಮ್ಲರ್', 'ಗೆಸ್ಟ್ ಹೌಸ್', 'ಬ್ಯಾಂಡ್ ಮಾಸ್ಟರ್', 'ಡೆಲ್ಲಿ ಜಂಕ್ಷನ್', 'ಫ್ಲಾಯಿಟ್ ಟು ಹ್ಯಾಂಗ್ ಕಾಂಗ್', 'ದೇವರ್' ಮತ್ತು 'ಜುವೆಲ್ ಥೀಫ್'. ಇದೇ ವೇಗದಲ್ಲಿ ಮುಂದರಿದರೆ ಗರ್ಭದೊಳಗೆ ನಾರಾಯಣ್ ತನ್ನ ಕತೆಗಳ ರಜತೋತ್ಸವವಾಚರಿಸುವುದು ಖಂಡಿತ. ಇದು ಅವರು ಚಿತ್ರರಂಗ ಸೇರಿದ ಎಂಟೇ ವರ್ಷಗಳಲ್ಲಿ ಮಾಡುವ ದಾಖಲೆಯಾಗುತ್ತದೆ.

ಕತೆಗಾರ ಕೆ. ಎ. ನಾರಾಯಣರೆಂದರೆ ವ್ಯಂಗ್ಯ ಚಿತ್ರಕಾರ ಆರ್ ಕೆ. ಲಕ್ಷ್ಮಣರ ಅಣ್ಣ. ಆರ್. ಕೆ ನಾರಾಯಣ್ 'ಗೈಡ್' ಖ್ಯಾತಿ, ಎಂದು ಅನೇಕರ ತಪ್ಪು ತಿಳುವಳಿಕೆ ಇದೆ. ಕೆ. ಎ. ನಾರಾಯಣರೂ ಕನ್ನಡಿಗರು, ಕೊಡಗಿನವರು ಮೈಸೂರಿನಿಂದ ಪದವೀಧರರಾಗಿ ಬಂದು



‘ದೇವಯಾನಿ’

‘ಟೈಮ್ಸ್ ಆಫ್ ಇಂಡಿಯಾ’ದ ‘ಇಲಸ್ಟ್ರೇಟೆಡ್ ವೀಕ್ಲಿ’ಯಲ್ಲಿ ಸಂಪಾದಕೀಯ ವರ್ಗದಲ್ಲಿ ಕೆಲಸ ಪ್ರಾರಂಭಿಸಿ ಇಂದು ಚಿತ್ರರಂಗದಲ್ಲಿ ಅವರು ಮೇಲಕ್ಕೇರಿದುದು ಬರೀ ಆಕಸ್ಮಿಕವಲ್ಲ. ಅವರ ಅವಿರತ ಶ್ರಮ, ಕಾರ್ಯನಿರತ ಶ್ರದ್ಧೆ, ಆತ್ಮವಿಶ್ವಾಸಗಳೇ ಇದಕ್ಕೆ ಕಾರಣ. ಹಾಗೆಂದೇ ದೇವ್, ಮನೋಜ್, ವಿ. ಶಾಂತಾರಾಂ ಧರ್ಮೇಂದ್ರ ಮೊದಲಾದವರಿಗೆ ಅವರು ಕೇವಲ ಕತೆಗಾರರಾಗಿ ಮಾತ್ರ ಇಲ್ಲ ಇದಕ್ಕೂ ಹೆಚ್ಚಾಗಿ ದಿಗ್ದರ್ಶನದಲ್ಲಿ ಅವರ ಮಾರ್ಗದರ್ಶನವನ್ನವರು ಪಡೆಯುತ್ತಾರೆ ಸದ್ಯದಲ್ಲೇ ನಾರಾಯಣ್ ತನ್ನ ಸ್ವಂತ ಚಿತ್ರವನ್ನು ದಿಗ್ದರ್ಶಿಸಿ ನಿರ್ಮಿಸಿದರೆ ನನಗೆ ಆಶ್ಚರ್ಯವಾಗಲಾರದು.



## ದೇವಯಾನಿ (ಗೀತಾಹತ್ತಂಗಡಿ)

ಉದಯೋನ್ಮುಖ ತಾರೆಯರಲ್ಲಿ ಒಬ್ಬರಾದ, ಚಿಗರೆಗಣ್ಣಿನ ದೇವಯಾನಿ (ಖಾಸಗಿ ಹೆಸರು ಗೀತಾ ಎಂದು) ಚಿತ್ರರಂಗಕ್ಕೆ ಬಂದುದು ಆಕಸ್ಮಿಕವೂ ಅಲ್ಲ ಕೇವಲ ಅದೃಷ್ಟ ಮಾತ್ರದಿಂದಲೂ ಅಲ್ಲ. ತನ್ನ ಸಾಧನೆಯಿಂದ ಅಭ್ಯಾಸದಿಂದ ಈ ರಂಗ ಪ್ರವೇಶಿಸಿದ್ದಾರೆ; ಹಾಗೆ ಬಂದು ಅವರು ಹಿಂದಿ ಚಿತ್ರರಂಗದಲ್ಲಿ ಬಂದ ಮೈಲುಗಲ್ಲಾಗಲು ಪ್ರಯತ್ನಿಸುತ್ತಿದ್ದಾರೆ.

ಇಂದು ಒಂದೇ ಸಲ ಮೂರು ಹಿರಿಯ ಚಿತ್ರಗಳಲ್ಲಿ ಫನಿ ಮುಜುಮದಾರರ ‘ಮಾ’ ರವಿ ಟಂಡನರ ‘ಬಲಿದಾನ’ ಮತ್ತು ಶತ್ರುಜಿತ್ ಪಾಲರ ‘ಅಮಾನತ್’ಗಳಲ್ಲಿ ಪ್ರಮುಖ ನಟಿಯಾಗಿ ನಟಿಸುತ್ತಿರುವ ದೇವಯಾನಿ ಹುಟ್ಟಿದುದು ಧಾರವಾಡದಲ್ಲಿ. ತಂದೆ ಹತ್ತಂಗಡಿ ವಸಂತರಾಯರು ಮಂಗಳೂರಿನವರು; ಏರ್ ಇಂಡಿಯಾದಲ್ಲಿ ಆಫೀಸರರು ತಾಯಿ ಕಾರವಾರದವರು

ಚಲಚ್ಚಿತ್ರಗಳಲ್ಲಿ ನಟಿಸಲು ಅವಶ್ಯವಾಗಿರುವ ಆಕರ್ಷಕ ರೂಪು, ಅಂಗಸೌಷ್ಟವ, ಕಂಠಶ್ರೀ, ನಟನಾ ಸಾಮರ್ಥ್ಯ ಎಲ್ಲವೂ ದೇವಯಾನಿಯಲ್ಲಿ ಧಾರಾಳವಾಗಿವೆ ಮೇಲಾಗಿ ಫಿಲ್ಮಾಲಯದ ನಟನಾ ಶಾಲೆಯಲ್ಲಿ ಅವರು ಕನ್ನಡಿಗರೇ ಆದ ಹೆಸರಾಂತ ಸ್ಕ್ರೀನ್ ಪ್ಲೇಯರ್ ಶ್ರೀ ಪಿ. ಡಿ ಶೆಣ್ಯಾಯವರ ನೇತೃತ್ವದಲ್ಲಿ ಎರಡು ವರ್ಷ ತರಬೇತಿ ಪಡೆದಿದ್ದಾರೆ. ಅವರೊಂದಿಗೆ ಆಗ ಸಾಧನಾ, ಜಾಯ್ ಮುಖರ್ಜಿ, ಆಶಾ ಪಾರೀಖ್, ಸಾಯಿರಾಬಾನು, ಸಂಜೀವ್ ಕುಮಾರ್ ಮೊದಲಾದವರೂ ತರಬೇತಿ ಪಡೆಯುತ್ತಿದ್ದರು

ನಾಲ್ಕು ವರ್ಷಗಳಿಂದ ಸಿದ್ಧವಾಗುತ್ತಿರುವ ಅವರ ‘ಮಾ’ ಇನ್ನೇನು ಸದ್ಯದಲ್ಲೇ ಬಿಡುಗಡೆಯಾಗಲಿದೆ ಕನ್ನಡಿಗ ಕೆ. ಎ ನಾರಾಯಣರ ಕತೆಯನ್ನು ಹೊಂದಿ ತಯಾರಾಗುತ್ತಿರುವ ವರ್ಮಾ ಎಂಟರ್ ಪ್ರೈಸಸ್‌ರವರ ‘ಬಲಿದಾನ’ದಲ್ಲಿ (ಮನೋಜ್ ಸಾಯಿರಾಬಾನು ಜೋಡಿ) ಅಂಧ ಕನ್ಯೆಯಾಗಿ ಪ್ರಮುಖ ಪಾತ್ರವಿದೆ. ದೇವಯಾನಿಗೆ, ಟಿ. ಪ್ರಕಾಶರಾವ್ ದಿಗ್ದರ್ಶಿಸುತ್ತಿರುವ “ಅಮಾನತ್” ನಲ್ಲಿ (ಮನೋಜ್-ಸಾಧನಾ ಜೋಡಿ)ಯೂ ದೇವಯಾನಿಗೆ ಮುಖ್ಯ ಪಾತ್ರವಿದೆ.

ಸಾಂತಾಕ್ರುಜನ್ ಶಾಂತ ತಾಣದಲ್ಲಿ ಮನೆ ಮಾಡಿಕೊಂಡಿರುವ ದೇವಯಾನಿ ತನ್ನ ತಂದೆ-ತಾಯಿಯ ನಾಲ್ಕು ಹೆಣ್ಣು ಒಂದು ಗಂಡು ಮಕ್ಕಳಲ್ಲಿ ಹಿರಿಯ ಮಗಳು. ನೃತ್ಯದಲ್ಲವರಿಗೆ ವಿಶೇಷ ಆಸಕ್ತಿ. ಭರತ ನಾಟ್ಯದಲ್ಲೂ ಸಾಕಷ್ಟು ತರಬೇತಿ ಪಡೆದಿದ್ದಾರೆ. ಸದ್ಯದಲ್ಲೇ ಗೋಪಿ-ಕೃಷ್ಣರ ನೃತ್ಯಶಾಲೆ ಸೇರುವೆನೆಂದೂ ಸಂದರ್ಶನದ ಸಂದರ್ಭದಲ್ಲಿ ತಿಳಿಸಿದರು ಈಗಾಗಲೇ ಎರಡು-ಮೂರು ಬಾರಿ ಯುರೋಪು-ಇಂಗ್ಲಂಡು ತಿರುಗಿ ಬಂದ ದೇವಯಾನಿ ಸದ್ಯದಲ್ಲೇ ಮತ್ತೆ ಹೋಗುವರಂತೆ. ಅವರ ಒಬ್ಬ ತಂಗಿ ಇಂಗ್ಲಂಡಿನಲ್ಲಿದ್ದಾರೆ.

ಪ್ರಸಿದ್ಧ ಖಳನಾಯಕ ಪಾತ್ರಧಾರಿ ಕೆ ಎನ್. ಸಿಂಗ್, ದಿ। ಮೋತಿಲಾಲ್ ಮತ್ತು ಹಾಡುಗಾರ ಮುಖೇಶ ಇವರು ದೇವಯಾನಿಯ ಮನೆಯ ಆತ್ಮೀಯ ಮಿತ್ರವರ್ಗದವರು ಮೊದಲನೆಯ ದಿನ ದೇವಯಾನಿಯನ್ನು ಭೇಟಿಯಾಗಲು ಹೋದಾಗ ಅಲ್ಲಿದ್ದ ಕೆ. ಎನ್. ಸಿಂಗರ ಭೇಟಿಯೂ ಆಯಿತು. ಮುಖೇಶರ ವಿವಾಹವಂತೂ ದೇವಯಾನಿಯ ಕಂಪೌಂಡಿನಲ್ಲೇ ಆಯಿತಂತೆ.

ತಮ್ಮ ಚಿತ್ರಗಳ ಬಗೆಗೆ ಬಹಳ ಆಶಾವಾದಿಯಾಗಿರುವ ದೇವಯಾನಿ ನಾಯಕಿಯ ಪಟ್ಟವೇರುವ ದಿನಗಳು ದೂರವಿಲ್ಲ. ಇದಕ್ಕೆ ಬೇಕಾದ ಸಿದ್ಧತೆಗಳು, ಅವಶ್ಯಕತೆಗಳು ಮತ್ತು ಅವಕಾಶಗಳು ದೇವಯಾನಿಗಿವೆ ಎಂದಾಗ ಚಿತ್ರರಂಗದಲ್ಲಿ ಅವರ ಭವಿಷ್ಯ ಭದ್ರವಾಗಿದೆ ಎಂದು ಬೇರೆ ಹೇಳಬೇಕಿಲ್ಲ.



## ಉಷಾ ಬಲ್ಸಾವರ್

ದುಂಡು ಮುಖದ ಸುಂದರ ಕನ್ಯೆಯೊಬ್ಬಳು ೧೯೫೬ ರಲ್ಲಿ ನಡೆದ ಮರ್ಫಿ ಹಾಡುಗಾರಿಕೆಯ ಸ್ಪರ್ಧೆಯಲ್ಲಿ ಮುಂಬಯಿಗೇ ಮೊದಲಾಗಿ ನಿಂತು ಬಹುಮಾನ ಗಿಟ್ಟಿಸಿದಳು ಮತ್ತೆ ೧೯೬೦ ರಲ್ಲಿ ನಡೆದ ಸೈಗಲ್ ಎವಾರ್ಡಿನ ಅಖಿಲ ಭಾರತ ಸ್ಪರ್ಧೆಯಲ್ಲೂ ಆಕೆಗೇ ಪ್ರಥಮ ಬಹುಮಾನ ನೀಡಲಾಯಿತು ಅವರೇ ಇಂದಿನ ಉದಯೋನ್ಮುಖ ಹಿನ್ನೆಲೆ ಗಾಯಕಿ ಉಷಾ ಬಲ್ಸಾವರ್.

ಉಷಾರ ತಂದೆ ಶ್ರೀ ಯು. ಜಿ. ಫಲ್ಲೆ ಮಂಗಳೂರಿನವರು. ಇಂದು ಮುಂಬಯಿಯ ಹೆಸರಾಂತ ಉದ್ಯಮಿಗಳು. ಹಲವು ಕನ್ನಡ ಸಂಘ ಸಂಸ್ಥೆಗಳಿಗೆ ಉದಾರ ದಾನ ಕೊಟ್ಟವರು. ಪ್ರಸಿದ್ಧ ಹಿನ್ನೆಲೆ ಗಾಯಕಿ ಕೃಷ್ಣಾ ಕಲ್ಲೆ ಉಷಾಳ ಸಹೋದರಿ (ಇವರಿಬ್ಬರ ತಾಯಂದಿರು ಅಕ್ಕಂದಿರು) ನಟ ಶೋಭಾಖೋಟೆ ಉಷಾಳ ಮೈದುನನ ಪತ್ನಿ.

ಉಷಾ ಸಂಗೀತ ಕಲಿತುದು ಚಲಚ್ಚಿತ್ರಗಳಲ್ಲಿ ಹಾಡಲಿಕ್ಕಲ್ಲ ಪ್ರಸಿದ್ಧ ಸಂಗೀತಗಾರ ಲಕ್ಷ್ಮಣಪ್ರಸಾದ ಜೈಪುರವಾಲೆ ಅವರು ಗುರು. ಇಂದಿಗೂ ಉಷಾ ಮುಂಬಯಿ ಆಕಾಶವಾಣಿಯಿಂದ ಶಾಸ್ತ್ರೀಯ ಸಂಗೀತ ಹಾಡುತ್ತಿರುತ್ತಾರೆ

‘ರಾಗರಾಗಿಣಿ’ ಉಷಾ ಹಾಡಿದ ಮೊದಲ ಚಿತ್ರ (೧೯೬೩) ಅಲ್ಲಿಂದ ಐದು ವರ್ಷಗಳೊಳಗೆ ಉಷಾ ಸುಮಾರು ೨೦ ಚಿತ್ರ ಗೀತಗಳನ್ನು ಹಾಡಿದ ರೆಕಾರ್ಡುಗಳಾಗಿವೆ ಹಿಂದಿ-ಮರಾಠಿ-ಪಂಜಾಬಿ-ಹರಿಯಾಣ ಚಿತ್ರಗಳಲ್ಲಿ ಹಾಡಿರುವ ಉಷಾಗೆ ಹೊಸ ಹೊಸ ಕಂಟ್ರಾಕ್ಟುಗಳೂ ಬರುತ್ತಿವೆ ‘ಸಾಖೀ ಲುಟೇರಾ’ ಚಿತ್ರದಲ್ಲಿ ಅವರು ಕೃಷ್ಣಾ ಕಲ್ಲೆ ಮತ್ತು ತಲತ್ ಮಹಮೂದ್‌ರೊಂದಿಗೆ ಎರಡು ಯುಗಲ ಗೀತಗಳನ್ನು ಹಾಡಿದ್ದಾರೆ. ‘ದೀರ ಶೈಲಾ’ ಮತ್ತು ‘ಸಸಿಪುನ್ನು’ ಅವರು ಹಾಡಿದ ಗೀತಗಳಿರುವ ಮತ್ತೆರಡು ಪಂಜಾಬಿ ಚಿತ್ರಗಳು ‘ಘರ್ ಕಾ ಚಿರಾಗ್’ ಮತ್ತು ‘ಗೋಲ್ಡನ್ ಐಸ್’ ಇವೆರಡು ಹಿಂದಿ ಚಿತ್ರಗಳು, ‘ಚಿಮಕಲಾ

ಉಷಾ ಬಲ್ಸಾವರ್





ಸುಮನ ಕಲ್ಯಾಣಪುರ

ಪಾಹುಣಾ' ಮರಾಠಿ ಚಿತ್ರದಲ್ಲಿ ಅಲ್ಲದೆ ಹಲವು ಮರಾಠಿ ಭಾವಗೀತಗಳನ್ನು ಹಾಡಿದ್ದಾರೆ.

ಕನ್ನಡದಲ್ಲಿಯೂ ಹಾಡಬೇಕೆಂಬ ಆಸೆ ಉಷಾ ಳದು. ಅದಕ್ಕೆ ನಮ್ಮ ಸಂಗೀತ ದಿಗ್ದರ್ಶಕರು ಅವಕಾಶ ಮಾಡಿಕೊಡಬೇಕು.



# ಸುಮನ ಕಲ್ಯಾಣಪುರ

ಇಂದು ಅತಿ ಹೆಚ್ಚು ಬೇಡಿಕೆ ಇರುವ ಹಾಗೂ ಅತಿ ಜನಪ್ರಿಯ ಹಿನ್ನೆಲೆ ಗಾಯಕಿಯರಲ್ಲಿ ಸುಮನ ಕಲ್ಯಾಣಪುರ ಅವರು ಅಗ್ರಗಣ್ಯರು. ಕಳೆದ ಹನ್ನೆರಡು ವರ್ಷಗಳಿಂದ ಸತತವಾಗಿ ಹಾಡುತ್ತಿರುವ ಅವರ ಸ್ಥಾನ ಚಿತ್ರಪ್ರೇಮಿ, ಸಂಗೀತ ಪ್ರೇಮಿಗಳ ಹೃದಯದಲ್ಲಿ ಚಿರಸ್ಥಾಯಿಯಾಗಿದೆ. ಇದಕ್ಕೆ ಇವರ ಸ್ವರದಲ್ಲಿರುವ ಕೇವಲ ಮಾಧುರ್ಯ ಇಲ್ಲವೆ ಹಾಡುವಿಕೆಯಲ್ಲಿ ಅವರು ತುಂಬುವ ಜೀವನಾದ ಬಹುಮಟ್ಟಿಗೆ ಕಾರಣವೆನ್ನಬೇಕು. ಅದು ದುಃಖದ ಹಾಡೇ ಇರಲಿ, ಪ್ರಣಯಗೀತವಿರಲಿ, ಭಜನ್ ಬೇಕಾದರೆ ಆಗಲಿ, ಸುಮನರಂತೆ ಅದರಲ್ಲಿ ಜೀವ ತುಂಬಿ ಶ್ರೋತೃಗಳಲ್ಲಿ ನವಿರನ್ನೆಬ್ಬಿಸುವ 'ಅದ್ಭುತ' ಮಾಡುವ ಹಾಡುಗಾತಿ ಇನ್ನೊಬ್ಬರಿಲ್ಲ. ಪಾರ್ಶ್ವಗಾಯಕಿ ಎಂದರೆ ಯಾಂತ್ರಿಕವಾಗಿ ಹಾಡುವ ಕೀಲು ಗೊಂಬೆಯಲ್ಲ. ಕಣ್ಣ ಮುಂದೆ ಕಾಣುವ ದೃಶ್ಯವು ಪ್ರೇಕ್ಷಕರಲ್ಲಿ ಹೇಗೆ ಪರಿಣಾಮ ಮಾಡುತ್ತದೋ ಅಂತೆಯೆ ಗಾಯಕಿಯ ಕಂಠವೂ ಆಕೆ ಅದೃಶ್ಯಳಾಗಿದ್ದರೂ ಪ್ರೇಕ್ಷಕರಲ್ಲಿ ಪ್ರತಿಕ್ರಿಯೆ ಉಂಟು ಮಾಡಬೇಕು ಅಂಥ ಶಕ್ತಿ ಸುಮನರ ಕಂಠಕ್ಕಿದೆ, ಎಂದೇ ಚಿತ್ರವಲಯದಲ್ಲಿ ಅವರು ಅತಿ ಗೌರವಾನ್ವಿತರು ಪ್ರಿಯರು

ಕಲಕತ್ತೆಯಲ್ಲಿ ಜನಿಸಿದ ಸುಮನರ ಉಪನಾಮ ವಿವಾಹಕ್ಕೆ ಮೊದಲು ಹೆಮ್ಮಾಡಿ ಎಂದಿತ್ತು. (ಹೆಮ್ಮಾಡಿ ಎಂಬುದು ದಕ್ಷಿಣ ಕನ್ನಡದ ಕುಂದಾಪುರದ ಬಳಿಯ ಹಳ್ಳಿ) ೧೯೫೮ರಲ್ಲಿ ಅವರು ಶ್ರೀ ಆರ್. ಎಸ್. ಕಲ್ಯಾಣಪುರರೊಂದಿಗೆ ವಿವಾಹವಾದರು (ಕಲ್ಯಾಣಪುರ ಉಡುಪಿಯ ಬಳಿಯ ನದಿ ಹಳ್ಳಿ) ಶ್ರೀ ಕಲ್ಯಾಣಪುರರು ಉತ್ತರ ಕರ್ನಾಟಕದ ಗೋಕರ್ಣ–ಹುಬ್ಬಳ್ಳಿಯವರು. ಇಂದು ಮುಂಬಯಿಯಲ್ಲಿ ಉದ್ಯಮಿಗಳು ವಿವಾಹದ ಬಳಿಕ ವಿಶೇಷ ರೀತಿಯಲ್ಲಿ ಪ್ರೋತ್ಸಾಹಿಸಿ ಪತ್ನಿಯ ಅಭ್ಯುದಯಕ್ಕೆ ಜನಪ್ರಿಯತೆಗೆ ಅವರು ಕಾರಣರಾಗಿದ್ದಾರೆ. ಈ ದಂಪತಿಗಳಿಗೆ ಈಗ ಚಾರುಲತಾ ಎಂಬ ತುಂಟ ಮಗಳಿದ್ದಾಳೆ.

'ಕರ್ಮವೀರ'ಕ್ಕಾಗಿ ಸುಮನ ಕಲ್ಯಾಣಪುರರ ಸಂದರ್ಶನ ತೆಗೆದುಕೊಳ್ಳಲಿಕ್ಕಾಗಿ ಖಾರ್ ಉಪನಗರದಲ್ಲಿರುವ ಅವರ ಮನೆಗೆ ಹೋದಾಗ ಪತ್ನಿಯ ಸಂಗೀತ ಸಾಧನೆಗಾಗಿ, ಅದರಂತೆ ವಾತಾವರಣ ಉಂಟುಮಾಡಲಿಕ್ಕಾಗಿ ಅವರ ಪತಿ ಮಾಡಿಟ್ಟಿರುವ ಸಿದ್ಧತೆಗಳನ್ನು ನೋಡಿ ನಾನು ಅವಾಕ್ಕಾದೆ. ಮಾಯಾಜಾಲದಂತಿರುವ ಚಲಚಿತ್ರ ಜಗತ್ತಿನ ಸಂಬಂಧವಿರಿಸಿಕೊಂಡರೂ, ಅದಕ್ಕೆ ಹೊಂದಿಕೊಂಡಿದ್ದರೂ ಇದಂತೆ ಸಂಸಾರ ಸುಖದ ರುಚಿಯನ್ನು ಸ್ವಾದಿಸುವ ಈ ಜೋಡಿ ಎಷ್ಟು ಪುಣ್ಯವಂತರು ಎಂದುಕೊಂಡೆ. ಚಲಚಿತ್ರದಲ್ಲಿ ಕೆಲಸ ಮಾಡುವ ಎಷ್ಟು ಮಂದಿಗಿದೆ ಈ ಭಾಗ್ಯ?

ಸುಮನ ಕಲ್ಯಾಣಪುರ ಹಾಡಲಾರಂಭಿಸಿದುದು ೧೯೫೪ ರಲ್ಲಿ–ಶೇಖ್ ಮುಖ್ತಾರರ "ಮಂಗೂ" ಚಿತ್ರದೊಂದಿಗೆ. ಅಲ್ಲಿಂದೀಚೆಗೆ ಸುಮನ ಹಾಡಿದ ರೆಕಾರ್ಡುಗಳ ಸಂಖ್ಯೆ ೧,೭೦೦ಕ್ಕೆ ಮೀರಿದೆ. ಹಿಂದಿ, ಮರಾಠಿ, ಬಂಗಾಳಿ, ಕನ್ನಡ, ಗುಜರಾತಿ ಅಸ್ಸಾಮಿ, ಛತ್ತೀಸಘಡಿ, ಮೈಥಿಲಿ, ಪಂಜಾಬಿ, ಭೋಜಪುರಿ ಹೀಗೆ ಹತ್ತು ಭಾಷೆಗಳ ಚಿತ್ರಗಳಲ್ಲವರು ಹಾಡಿದ್ದಾರೆ, ಹಾಡುತ್ತಿದ್ದಾರೆ.

ನಾನು ಸುಮನರನ್ನು ಭೇಟಿಯಾದಾಗ ಆಗ ತಾನೆ ಭಾವನಾ ಚಿತ್ರರವರ "ಕಲ್ಪವೃಕ್ಷ" ಕನ್ನಡ ಚಿತ್ರದ ಎರಡು ರೆಕಾರ್ಡುಗಳ ಕೆಲಸವನ್ನವರು ಮುಗಿಸಿದ್ದರಷ್ಟೆ 'ಹನಿ ಹನಿ ಹಿರಿತನೆ ಹರಿಯಿ. ಮಾಧುರ್ಯ ಸಿರಿಯ ಲಾವಣ್ಯ ಸಿರಿಯ.' ಮತ್ತು ತಲ್ಲಣ ನೂರ ಬಗೆ ಮಾಳಮಳ ಅಡಿಗಡಿಗೆ...' ಇವೇ ಎರಡು ಪದ್ಯಗಳವು. ಇವು ಕನ್ನಡ ಚಿತ್ರ ಪ್ರಪಂಚದಲ್ಲೇ ವಿಕ್ರಮ ಸಾಧಿಸುವುದರಲ್ಲಿ ಸಂಶಯವಿಲ್ಲ. ಹಾಗೆಂದು ಸುಮನ ಇದೇ ಏನು ಮೊದಲಾಗಿ ಕನ್ನಡದಲ್ಲಿ ಹಾಡುವುದಿಲ್ಲ. ೧೯೬೩ರಲ್ಲೇ 'ಕಲಾವತಿ' ಚಿತ್ರದಲ್ಲೂ ಅವರ ಗೀತಗಳಾಗಿವೆ.

ಈ ಕೋಗಿಲೆಗೆ ದೊರೆತ ಬಹುಮಾನಗಳನ್ನೆಲ್ಲ ಮನೆಯಲ್ಲಿ ಓರಣವಾಗಿಟ್ಟಿದ್ದಾರೆ. ೧೯೬೪ ಮತ್ತು ೬೫ ಹೀಗೆ ಎರಡು ವರ್ಷ ಅವರು ಮಹಾರಾಷ್ಟ್ರ ರಾಜ್ಯದ ಶ್ರೇಷ್ಠ ಮಹಿಳಾ ಗಾಯಕಿ ಎಂದು ಬಿರುದನ್ನು ಪಡೆದರು; ೧೯೬೬ ರಲ್ಲಿ ಸೂರ್ ಸಿಂಗಾರ್ ಗಂಗಾರ್ಡ್‌ನ ಮಿಯಾಂ ತಾನಸೇನ್' ಬಹುಮಾನ ಗಿಟ್ಟಿಸಿದರು; ಮರಾಠಿ 'ಮಾನಿನಿ' ಚಿತ್ರದಲ್ಲಿ ಅವರ ಹಾಡುಗಳಿಗಾಗಿ ಪ್ರಥಮ ಫಾಲ್ಕೆ ಬಹುಮಾನವೂ ಅವರದಾಯಿತು. ಇದಲ್ಲದೆ 'ಹಮಾರ್ ಸಂಸಾರ' ಮತ್ತು 'ಮೇರೆ ಮನ ಮಿತವಾ' ಎಂಬೆರಡು ಭೋಜಪುರಿ ಚಿತ್ರದ ಅವರ ಹಾಡುಗಳಿಗೂ ಬಹುಮಾನ ದೊರೆತಿವೆ.

ಸಂಗೀತವೆಂದರೆ ಸತತವಾದ ಶ್ರದ್ಧಾಪೂರ್ವಕ ಸಾಧನೆ ಎಂದು ನಂಬಿಕೊಂಡು ಬಂದಿರುವ ಸುಮನ ಪ್ರತಿನಿತ್ಯ 'ರಿಯಾಜ್' (ಅಭ್ಯಾಸ) ಮಾಡುತ್ತಾರೆ. ಅವರ ಸಂಗೀತ ಗುರು ಅಬ್ದುಲ್ ರೆಹಮಾನ ಅವರು ರಚಿಸಿದ ಎರಡು ಶಾಸ್ತ್ರೀಯ ಠುಮ್ರಿಗಳನ್ನು ಸುಮನರ ಕಂಠದಲ್ಲಿ ಇತ್ತೀಚೆಗೆ ರೆಕಾರ್ಡ್ ಮಾಡಿದ್ದಾರೆ ಅವು ಠುಮ್ರಿ ಗಾಯಕಿಯಲ್ಲೇ ಮೈಲುಗಲ್ಲಾಗಿ ನಿಲ್ಲಬಲ್ಲವು.

ಮೊದಲಿನ ನೋಟಕ್ಕೆ ಸ್ವಲ್ಪ ಗಂಭೀರಳಾಗಿ ಕಂಡರೂ ಸುಮನ ಕಲ್ಯಾಣಪುರ ತುಂಬ ಆತ್ಮೀಯರು, ತಮ್ಮ ಕೆಲಸದಲ್ಲಿ ಅಷ್ಟೇ ನಿಷ್ಠಾವಂತರು. ಒಮ್ಮೆ ರೆಕಾರ್ಡಿಂಗ್‌ಗೆ ಹೋದಾಗ ಅದಾರೋ "ಸುಮನ್ ಕಲ್ಯಾಣಪುರ ತುಂಬ ಗಂಭೀರಪ್ಪ" ಎಂದು ಹೇಳಿದಾಗ ಸುಮನ ಕೊಟ್ಟ ಉತ್ತರ ಎಷ್ಟು ಮಾರ್ಮಿಕವಾಗಿತ್ತು ನೋಡಿ–

"ಹೂಂ. ದುಃಖದ ಒಂದು ಗೀತವನ್ನು ಹಾಡಬೇಕಾದರೆ ಇಲ್ಲವೆ ಇನ್ನಾವುದೇ ಭಾವದ ಗೀತವನ್ನು ಹಾಡಬೇಕಾದರೆ ಗಾಯಕಿ ಅದರಲ್ಲೇ ತನ್ಮಯಳಾಗಿರಬೇಕಾಗುತ್ತದೆ ಚೆಲ್ಲುಚೆಲ್ಲಾಗಿ ಮಾತಿನಲ್ಲೋ ತಮಾಷೆಯಲ್ಲೋ ಮನಸ್ಸನ್ನು ಹರಿಯಬಿಟ್ಟರೆ ಮುಖ್ಯ ಉದ್ದೇಶವೇ ಕೆಡುವುದಿಲ್ಲವೆ?"



# ಕನ್ನಡ ಚಿತ್ರರಂಗದ ಚಿರರೋಗಗಳು

ಹ.ವೆಂ. ಸೀತಾರಾಮಯ್ಯ

ಇತ್ತೀಚಿನ ಅನೇಕ ಕನ್ನಡ ಚಿತ್ರಗಳು 'ಬಾಕ್ಸ್ ಆಫೀಸ್' ದೃಷ್ಟಿಯಿಂದ ಅಯಶಸ್ವಿಯಾಗುತ್ತಿರುವದಕ್ಕೆ ಕಾರಣವೇನು? ಇದಕ್ಕೆ ಸೂಕ್ತ ಮಾರ್ಗವನ್ನು ಕಂಡುಹಿಡಿಯದಿದ್ದರೆ ಇದೀಗ ತಲೆಯೆತ್ತುತ್ತಿರುವ ಕನ್ನಡ ಚಿತ್ರರಂಗ ಕ್ಷಿಪ್ರದಲ್ಲಿಯೇ ಅವನತಿಯ ಹಾದಿಯನ್ನು ತುಳಿದೀತೆಂದು ವಿಷಾದದಿಂದ ಹೇಳಬೇಕಾಗಿದೆ. ಈಗಾಗಲೇ ಕನ್ನಡ ಚಿತ್ರಗಳಿಗೆ ಮಾರುಕಟ್ಟೆಯೇ ಇಲ್ಲದಂತಾಗಿದೆ.

ಉದ್ಯಮದಲ್ಲಿ ತನಗೆ 'ಸಿಂಹ ಪಾಲು' ಬೇಕೆನ್ನುವ ವ್ಯಕ್ತಿಯೇ ಬಂಡವಾಳಗಾರ. ಈತನ ದೃಷ್ಟಿಯೆಲ್ಲವೂ ತಾನು ಹಾಕಿದ ಹಣ ಯಾವ ರೀತಿಯಲ್ಲೇ ಆಗಲಿ–ದ್ವಿಗುಣವಾಗುತ್ತ ಹೋಗಬೇಕೆಂಬುದೇ ಆಗಿದೆ ಎಲ್ಲಿಯ ವರೆಗೆ ಈ ವ್ಯಾಪಾರೀ ಮನೋಭಾವನೆ ಮುಂದುವರೆಯುತ್ತದೆಯೋ ಅಲ್ಲಿಯ ವರೆಗೂ ದಕ್ಷ ಹಾಗೂ ಅರ್ಹ ನಿರ್ಮಾಪಕರು ಕತ್ತಲಲ್ಲೇ ತೊಳಲಾಡಬೇಕಾಗುತ್ತದೆ.

ನಿರ್ಮಾಪಕರ ಬಗ್ಗೆ ಹೇಳುವುದಾದರೆ ಇತ್ತೀಚೆಗೆ ಅನೇಕರು ಈ ಉದ್ಯಮದಲ್ಲಿ ನಾಯಿಕೊಡೆಗಳಂತೆ ಹುಟ್ಟಿಕೊಳ್ಳುತ್ತಿದ್ದಾರೆ ಅಲ್ಪ ಹಣವನ್ನೇ ಮೂಲ ಬಂಡವಾಳವನ್ನಾಗಿಸಿಕೊಂಡು (ಅದು ಸಹ ಅವರ ಸ್ವಂತದ್ದಲ್ಲ!) ತಮ್ಮ ಭವಿಷ್ಯವನ್ನು ಉಜ್ವಲವಾಗಿ ರೂಪಿಸಿಕೊಳ್ಳಬೇಕೆಂಬಾಸೆಯಿಂದ ಈ ಉದ್ಯಮಕ್ಕೆ ಸಾಕಷ್ಟು ಹಣ ಸಹಾಯ ಮಾಡುವಂತಹ ವ್ಯಕ್ತಿಗಳನ್ನೂ ಚಿತ್ರರಂಗಕ್ಕೆ ಆಕರ್ಷಿಸುತ್ತಾರೆ. ಚಿತ್ರರಂಗಕ್ಕೆ ಅಪರಿಚಿತರಾದ ಈ ವ್ಯಕ್ತಿಗಳು ನಿರ್ಮಾಪಕರ ಯೋಗ್ಯಾಯೋಗ್ಯತೆಯನ್ನು ಪ್ರಶ್ನಿಸದೆ ಅವರ ಮಾತಿಗೆ ಮರುಳಾಗಿ ಹಣ ತೊಡಗಿಸಲೂ ಮುಂದೆ ಬರುತ್ತಾರೆ—ಲಾಭದಾಶೆಯಿಂದ.

ಚಿತ್ರಕ್ಕೆ ಉತ್ತಮ ಕಥೆಯೇ ಜೀವಾಳವಲ್ಲದೆ ತಾರಾ ನಿಕರವಲ್ಲವೆಂದು ಎಷ್ಟೋ ಮಂದಿ ನಿರ್ಮಾಪಕರಿಗೆ ತಿಳಿದಿರಲಾರದು. ನಿರ್ದೇಶಕನಾದರೂ ತಾನು ತಯಾರಿಸುತ್ತಿರುವ ಭಾಷೆಯ ಪೂರ್ಣ ಪರಿಚಯ ಪಡೆದವನಾಗಿರಬೇಕು ಏಕೆಂದರೆ ಚಿತ್ರದಲ್ಲಿನ ಪ್ರತಿಯೊಂದು ಸಂಭಾಷಣೆಯನ್ನೂ ಅವನು ಅರ್ಥಮಾಡಿಕೊಳ್ಳಬೇಕು ಅನುಭವಿಸಬೇಕು. ಒಂದು ಉತ್ತಮ ಕಥೆಯನ್ನು ಸಮರ್ಪಕವಾಗಿ ಸುಂದರವಾಗಿ ಚಿತ್ರಕ್ಕೆ ಅಳವಡಿಸುವ ಪರಿಶ್ರಮ ಅವನಲ್ಲಿರಬೇಕು. ನಂತರ ಸ್ವಚ್ಛ ಛಾಯಾಗ್ರಹಣ ಮತ್ತು ಶಬ್ದಗ್ರಹಣದ ಬಗ್ಗೆ ಗಮನ ಹರಿಸಬೇಕು. ಚಿತ್ರಕ್ಕೆ ತಾರಾಗಣವನ್ನು ಆಯ್ಕೆ ಮಾಡುವಾಗಲೂ ಅಷ್ಟೆ. ಪ್ರತಿಯೊಬ್ಬ ಪಾತ್ರಧಾರಿಯೂ ಆಯಾ ಪಾತ್ರಕ್ಕೆ ಸರಿಹೋಗುವನೇ ಇಲ್ಲವೇ ಎಂಬುದನ್ನು ಬಹು ಬುದ್ಧಿವಂತಿಕೆಯಿಂದ ವಿಚಾರಿಸಬೇಕು. ಎಷ್ಟೋ ಮಂದಿ ನಿರ್ಮಾಪಕರು ಈ ಆಯ್ಕೆಯಲ್ಲಿ ಮುಗ್ಗರಿಸುತ್ತಾ ನಡೆದಿದ್ದಾರೆ.

ಇನ್ನು ಕೆಲವು ನಿರ್ಮಾಪಕರು ತಮ್ಮ ಚಿತ್ರದ ಪ್ರಥಮದಲ್ಲೆ ಒಂದೆರಡು ಹೃದಯ ಸ್ಪರ್ಶಿ ಸನ್ನಿವೇಶಗಳನ್ನು ಚಿತ್ರಿಸಿಕೊಂಡು ಅದನ್ನು ಹಂಚಿಕೆದಾರರಿಗೆ ತೋರಿಸಿ ಕರಾರು ಪತ್ರಕ್ಕೆ ಸಹಿ ಹಾಕಿಸಿಕೊಳ್ಳುತ್ತಾರೆ. ತಾನು ನೋಡಿದ ಉತ್ತಮ ಸನ್ನಿವೇಶಗಳು, ಭಾರಿ ತಾರಾಗಣದ ಸಮೂಹ, ನಿರ್ಮಾಪಕನ ಬಣ್ಣ ಬಣ್ಣದ ಬೆಡಗಿನ ಮಾತು- ಇವುಗಳಿಂದ ಹಂಚಿಕೆದಾರನ ದೃಷ್ಟಿಕೋನವೂ ಬದಲಾಗಿ ಆ ಚಿತ್ರದ ಬಗ್ಗೆ ಏನೇನೋ ಊಹಿಸಿಕೊಂಡು ಸ್ವಪ್ನ ಲೋಕದಲ್ಲಿ ವಿಹರಿಸುತ್ತಿರುತ್ತಾನೆ. ಚಿತ್ರ ಬಿಡುಗಡೆಯಾಗಿ ಗಲ್ಲಾ ಪೆಟ್ಟಿಗೆಯ ದೃಷ್ಟಿಯಿಂದ ಅಯಶಸ್ವಿಯಾದಾಗ ಅದಕ್ಕೆ ಕಾರಣವನ್ನು ಅಗ ಅರಸುತ್ತಾ ಈ ಉದ್ಯಮವನ್ನು ದೂಷಿಸುತ್ತಾ ಚಿರಂತನ ವ್ಯಥೆಯಲ್ಲಿ ಬೀಳುತ್ತಾನೆ.

ಚಿತ್ರಕಥೆ ರಚನೆ ಮತ್ತು ನಿರ್ದೇಶನ ಈ ಎರಡು ಲೀಲಾ ಜಾಲವಾದ ವಿಷಯಗಳಾಗಿವೆ. ಇತ್ತೀಚೆಗಂತೂ ಕೇವು ನಿರ್ಮಾಪಕರು-ಉತ್ತಮ ಕಥೆಯನ್ನು ಕನ್ನಡದಲ್ಲಿ ಅರಿಸದೆ ಪರ ಭಾಷೆಯಲ್ಲಿ ಯಶಸ್ವಿಯಾದ ಚಿತ್ರ ಕಥೆಗಳಿಗೇ ಜೋತು ಬೀಳುತ್ತಿದ್ದಾರೆ. ಇದು ಶೋಚನೀಯ ಹಾಗೂ ಖಂಡನೀಯ! ಒಂದುವೇಳೆ ನಮ್ಮಲ್ಲಿ ಸತ್ವಪೂರ್ಣ ಕಥೆ ದೊರೆತರೆ ಅದು ಅಸಮರ್ಥ ಅನನುಭವಿ ನಿರ್ದೇಶಕರ ಕೈಗೆ ದೊರೆತು ರಸಹೀನವಾಗಿ ಬಿಡುವದು. ಮೂರನೆ ದರ್ಜೆ ಕಥೆಯನ್ನು ಪ್ರತಿಭಾವಂತ ನಿರ್ದೇಶಕನಿಗೆ ಕೊಟ್ಟು ಅವನಿಂದ ಉತ್ತಮ ಚಿತ್ರ ನಿರೀಕ್ಷಿಸುವುದೂ ತಪ್ಪು.

ಚಿತ್ರೋದ್ಯಮದಲ್ಲಿ ಇಷ್ಟೊಂದು ದೋಷ, ಅಸಮರ್ಪಕತೆ ಅಡ್ಡಿ ಆತಂಕಗಳಿದ್ದರೂ ನಮ್ಮ ಚಿತ್ರೋದ್ಯಮವು ಇನ್ನೂ ಜೀವಂತವಾಗಿರುವುದಕ್ಕೆ ಅಖಂಡ ಅಭಿಮಾನದ ಆಗರವಾದ, ಸಾಂತಃಕರಣದ ಸಾಕಾರ ಮೂರ್ತಿಗಳಾದ, ಹೃದಯ ವೈಶಾಲ್ಯಕ್ಕೆ ಹೆಸರಾದ ಕೋಟಿ ಕೋಟಿ ಕನ್ನಡ ಚಿತ್ರಪ್ರೇಮಿಗಳೇ ಕಾರಣರೆಂದೆನ್ನಬೇಕು. ಇಲ್ಲಿ ತುಂಬು ಹೃದಯದಿಂದ ಹೇಳಲೇಬೇಕಾದ ಮತ್ತೊಂದು ಅಂಶವೂ ಇಲ್ಲದಿಲ್ಲ. ಎಷ್ಟೋ ಕೆಳಮಟ್ಟದ ಚಿತ್ರಗಳು ತೆರೆಕಂಡರೂ ಅವೆಲ್ಲವನ್ನೂ ತಾಳ್ಮೆಯಿಂದ ವೀಕ್ಷಿಸಿ-ಪ್ರೋತ್ಸಾಹಿಸುತ್ತಿದ್ದಾರೆ ನಮ್ಮ ಚಿತ್ರಪ್ರಿಯರು. ಸತತವೂ ಅವರಿಂದ ಇದೇ ತೆರನಾದ ಪ್ರೋತ್ಸಾಹ ನಿರೀಕ್ಷಿಸುವುದು ನಾಚಿಕೆಗೇಡು.

ಪರಭಾಷಾ ಚಿತ್ರಗಳಂತೆ ಸುಭದ್ರವಾದ ತಳಹದಿಯ ಮೇಲೆ ನಮ್ಮ ಚಿತ್ರೋದ್ಯಮವು ಬಾಳಬೇಕಾದರೆ ನಿರ್ಮಾಪಕರಿಗೆ ಯೋಗ್ಯ ಬಂಡವಾಳ ಒದಗಿಸಬೇಕು. ಅನುಭವಶಾಲಿ ಹಾಗೂ ನುರಿತ ನಿರ್ಮಾಪಕರಿಗೆ ಉತ್ತಮ ಚಿತ್ರಗಳನ್ನು ತಯಾರಿಸಲು ಆರ್ಥಿಕ ಸಹಾಯ ದೊರೆಯಬೇಕು. ಮೂರು ಲಕ್ಷದಲ್ಲಿ ತಯಾರಾದ ಶ್ರೇಷ್ಠ ಕನ್ನಡ ಚಿತ್ರಗಳು ಅತ್ಯಂತ ಯಶಸ್ವಿಯಾಗಿ ನಿರೀಕ್ಷಿಸಿದುದಕ್ಕಿಂತಲೂ ಹೆಚ್ಚು ಪಾಲು ಲಾಭವನ್ನು ತಂದುಕೊಟ್ಟಿವೆ. ಕನ್ನಡ ಚಿತ್ರಗಳನ್ನು ತಯಾರಿಸುವುದಕ್ಕೆ ಕನ್ನಡ ನಾಡಿನಲ್ಲಿ ಸರ್ವ ಸುಸಜ್ಜಿತ ಸ್ಟುಡಿಯೊ ಸ್ಥಾಪನೆಯಾಗಬೇಕು.

ಅಂತೆಯೇ ನಮ್ಮ ನಿರ್ಮಾಪಕರು ತಾವು ತಯಾರಿಸುವ ಚಿತ್ರಗಳಿಗೆ ಶ್ರೇಷ್ಠ ಕಥೆಗಳನ್ನು ಆಯ್ಕೆ ಮಾಡಿಕೊಂಡು—ಅಗತ್ಯಬಿದ್ದರೆ ಅರ್ಹ ಲೇಖಕರಿಗೆ ಯೋಗ್ಯ ಸಂಭಾವನೆ ನೀಡಿ ಕಥೆಯನ್ನು ಬರೆಸಿ ಪ್ರತಿಭೆಯಿರುವ ನೂತನ ನಟ ನಟಿಯರನ್ನು ಹುಡುಕಿ ಸರಿಯಾದ ತಾರಾಗಣದೊಂದಿಗೆ ಸೇರಿಸಿ ಅವರನ್ನು ಬೆಳಕಿಗೆ ತರಬೇಕು. ಆರ್ಥಿಕ ಮುಗ್ಗಟ್ಟಿನಿಂದಾಗಿ ಎಂದೂ ನಿರ್ಮಾಣದ ವೆಚ್ಚವನ್ನು ಮೊಟಕು ಮಾಡಬಾರದು.

ನಿರ್ಮಾಪಕ ಚಿತ್ರಕ್ಕೆ ವೆಚ್ಚ ಮಾಡಿದ ಮೊಬಲಗು ಪೂರ್ಣವಾಗಿ ಸಂದಾಯವಾಗುವ ವರೆಗೂ ನಮ್ಮ ಹಂಚಿಕೆದಾರರು ಸರಾಸರಿ ನೂರಕ್ಕೆ ೧೫ ರಷ್ಟು ಕಮಿಷನ್ ಪಡೆದು ಅಷ್ಟರಲ್ಲೇ ತೃಪ್ತರಾಗಬೇಕು. ಅವನ ಹಣ ಪೂರ್ಣ ಕೈಸೇರಿದ ಮೇಲೆ ಹಂಚಿಕೆದಾರ ಹೆಚ್ಚಿನ ಭಾಗಕ್ಕೆ ಆಶಿಸಬಹುದು ಈ ರೀತಿ ಹಂಚಿಕೆದಾರರು ತಮ್ಮ ಪ್ರಾಮಾಣಿಕತೆಯಿಂದ ಚಿತ್ರೋದ್ಯಮದ ಬೆಳವಣಿಗೆಗೆ ನೆರವಾಗಬೇಕು.

ಇನ್ನು ಪ್ರದರ್ಶನಕಾರರ ಬಗ್ಗೆ ಒಂದೆರಡು ಮಾತು ಹೇಳದಿದ್ದರೆ ತಪ್ಪೆನೀತು. ಚಿತ್ರ ಮಂದಿರಗಳನ್ನು ವಾರದ ಬಾಡಿಗೆಯ ಮೇಲೆ ಬಿಟ್ಟುಕೊಡುವ ಅವರ ವಿಧಾನ, ಬಾಲ್ಯಾವಸ್ಥೆಯಲ್ಲಿರುವ ನಮ್ಮ ಉದ್ಯಮಕ್ಕೆ ಭಾರಿ ಗದಾಪ್ರಹಾರವಾಗಿದೆ ಅವರು ನಿಜವಾಗಿಯೂ ಕನ್ನಡ ಚಿತ್ರಗಳ ಪ್ರಗತಿಗೆ ಹಾರೈಸಿ; ಹರಸುವುದಾದರೆ—ಅದರ ಏಳಿಗೆಯಲ್ಲಿ ತಾವೂ ಸಹ ಭಾಗಿಗಳೆಂದು ತಿಳಿದುಕೊಂಡಿದ್ದರೆ ಕನ್ನಡ ಚಿತ್ರಗಳನ್ನು ಶೇಕಡಾ ದರದಲ್ಲಿ ಪ್ರದರ್ಶಿಸಿ ಜಾಹೀರಾತಿನ ವೆಚ್ಚವನ್ನು ನಿರ್ಮಾಪಕನೊಂದಿಗೆ ಸಮಪ್ರಮಾಣದಲ್ಲಿ ಹಂಚಿಕೊಳ್ಳಬೇಕು.

ಕನ್ನಡ ಚಿತ್ರನಟರೂ ಅಷ್ಟೆ. ಏಕ ಕಾಲದಲ್ಲಿ ಹತ್ತಾರು ಚಿತ್ರಗಳಲ್ಲಿ ಕೆಲಸ ಮಾಡದೆ, ಪರ ಪ್ರಾಂತದ ಚಿತ್ರ ನಟರಂತೆ ಕಪ್ಪು ಹಣವನ್ನು ಸ್ವೀಕರಿಸದೆ ನಿರ್ಮಾಪಕರಿಗೆ ಸಂಪೂರ್ಣ ಸಹಕಾರವನ್ನು ನೀಡಬೇಕು. ಚಿತ್ರದ ಯೋಗ್ಯತಾ ಮಟ್ಟವನ್ನು ಕಾಯ್ದುಕೊಳ್ಳಬೇಕು.

# "ಮಕ್ಕಳ ನಂದನದಲ್ಲಿ ಮನೆ ಬೆಳಗುವ ದೀಪಾವಳಿ"

— ಮೈನಾವತಿ



ತಾರೆ ಮೈನಾವತಿ

ನನಗೆ ಮಕ್ಕಳೆಂದರೆ ಪಂಚಪ್ರಾಣ. ಏಕೆಂದರೆ ಅವರ ನಡೆನುಡಿಯಲ್ಲಿರುವ ಮುಗ್ಧತೆಯನ್ನು ದೇವರೆನ್ನಬಹುದು. ಈ ದೃಷ್ಟಿಯಿಂದ ಒಂದೊಂದು ಮಗುವನ್ನು ಜೋಗುಳ ಹಾಡಿ ಮಲಗಿಸುವಾಗಲೂ "ನಿನ್ನಂಥ ಹತ್ತು ಮಕ್ಕಳು ಇರಬಹುದು" ಎನ್ನುತ್ತೇನೆ. ಆ ವೇಳೆ ತಕ್ಷಣ ನಾಲಿಗೆ ಕಚ್ಚಿಕೊಂಡು ಕೆನ್ನೆಗೆ ಏಟು ಹಾಕಿಕೊಳ್ಳುತ್ತೇನೆ. ಈ ಮಿತ ಸಂತಾನದ ಯುಗದಲ್ಲಿ ಒಂದೊಂದು ಮಗುವಿಗೂ "ನಿನ್ನಂಥ ಹತ್ತು ಮಕ್ಕಳು ಇರಬಹುದು" ಅಂದರೆ ಗತಿ? ನನ್ನ ಈ ಹಾಡನ್ನು ಕದ್ದು ಕೇಳುವ "ನನ್ನ ದೇವರು" ಅಂದರೆ ನನ್ನ ಕೈಯನ್ನು ಹಿಡಿದು ನನ್ನ ಮನಸ್ಸನ್ನು ಬೆಳಗಿ ದೀಪೋತ್ಸವದ ದೀಪಾವಳಿಯನ್ನು ದಿನದಿನವೂ ಮೆರೆಸುವ 'ಅವರು'–

"ಏನೇ ಇದು ನಿನ್ನ ಪಲ್ಲವಿ?" ಎಂದು ನನ್ನ ಕೆನ್ನೆ ಚಿವುಟಿದಾಗ ನನಗೆ ಆಗುವ ಅನುಭವ ನನಗೊಬ್ಬಳಿಗೇ ವೇದ್ಯ.



" ಜಯಾಲಜಿಯಲ್ಲ ಏನಿದೆಬಿಡೊ
ಬರೀ ಕಲ್ಲು-ಮಣ್ಣು "
—ಪಿ. ಎಮ್. ಕುಡುಮಿ ಅಂದ;
ಕೆಂಡ, ಪಿ. ಜಿ. ಹುಡುಗನ ಕಣ್ಣು;
ಮರುದಿನ ಕುಡುಮಿ ಕ್ಲಾಸಲಿ
ಹೆಂಗಳ ನಗುವಿನ ಗುಲ್ಲೊಗುಲ್ಲು
" ಕೊಡ್ಬೋಲ್ವೇನ್ರಿ ಸ್ವೀಟ್ನ,
ತೆಗ್ಸಿವ್ದಕ್ಕೆ ಕೋರೆ ಹಲ್ಲು! "
- ನಿ.

'ಅವರು' ಡಾಕ್ಟರು. ಅವರಿಗೆ ದೇಹದ ಬಗ್ಗೆ ಹೇಗೆ ಗೊತ್ತಾಗುತ್ತದೋ ಹಾಗೆಯೇ ನನ್ನ 'ಡಾಕ್ಟರ್ ಸಾಹೇಬ'ರಿಗೆ ನನ್ನ ಮನಸ್ಸಿಗೂ "ಸ್ಟೆತಸ್ಕೋಪ್" ಹಿಡಿಯುವುದು ಗೊತ್ತು.

"ನೀನು ಸಾಮಾನ್ಯವಾದ ಹೆಣ್ಣಲ್ಲ. ಕಲಾವಿದೆ, ಕನಸುಗಾತಿ, ಕಥಾನಾಯಕಿಯಾಗಿ ಅಭಿನಯಿಸುವುದರಿಂದ ಮಕ್ಕಳಿಲ್ಲದೆ ಅಭಿನಯಿಸುವುದೇ ಹೆಚ್ಚು. ಆಗ ನೀನು ಹೇಗೆ ಇರುತ್ತೀಯೋ" ಎಂದು ಗೇಲಿ ಮಾಡುವರು.

ನಿಜ, ಅವರು ಹೇಳುವುದೆಲ್ಲ ನಿಜ. ನನಗೆ ಮಕ್ಕಳನ್ನು ಬಿಟ್ಟು ಏನನ್ನು ಮಾಡಲೂ ತೋಚುವುದಿಲ್ಲ. ಹಬ್ಬ ಹರಿದಿನಗಳಲ್ಲಂತೂ ನನಗೆ ಶೂಟಿಂಗ್ ಬಿದ್ದರೆ ಏನಾದರೊಂದು ಕುಂಟು ನೆಪವನ್ನು ಪ್ರೊಡ್ಯೂಸರ್‌ಗಳಿಗೆ ಹೇಳಿ 'ಚಕ್ಕರ್' ಹಾಕಿ ಮಕ್ಕಳೊಂದಿಗೆ ಕಾಲ ಕಳೆಯುತ್ತೇನೆ. ಅದರಲ್ಲೂ ದೀಪಾವಳಿ ಎಂದರೆ ನನಗೆ ತುಂಬಾ ಇಷ್ಟ. ಆ ದಿನ ಮಕ್ಕಳೊಂದಿಗೆ ಕಾಲ ಕಳೆಯುವುದಕ್ಕಿಂತ ಹೆಚ್ಚಿನ ಆನಂದ ಇನ್ನು ಯಾವುದರಲ್ಲೂ ಇಲ್ಲ.

ನಾನು, ನನ್ನ ಮಕ್ಕಳು. ನನ್ನ ತಂಗಿಯರ ಮಕ್ಕಳು, ಎಲ್ಲರೂ ನಸುಕಿನಲ್ಲೇ ಏಳುತ್ತೇವೆ. ನಮ್ಮ ದೀಪಾವಳಿ ಹಾಗೂ ಎಲ್ಲ ಹಬ್ಬ ಹರಿದಿನಗಳೂ ಪಾಂಡುರಂಗಾಶ್ರಮದಲ್ಲೇ.

ನನ್ನ ಅಕ್ಕ ಕನ್ನಡದ ಸುಪ್ರಸಿದ್ಧ ಅಭಿನೇತ್ರಿ. ಆಕೆಗಂತೂ ಪಾಂಡುರಂಗನನ್ನು ಮಕ್ಕಳಲ್ಲೂ, ಆಶ್ರಮದಲ್ಲಿರುವ ಶಿಲಾಮೂರ್ತಿಯಲ್ಲೂ ಕಾಣುವುದೇ ನಿತ್ಯಕರ್ಮ. ದೀಪಾವಳಿ ಬಂದರೆ ಆಗ ನಾವಿಬ್ಬರೂ ಮಕ್ಕಳೊಂದಿಗೆ ಕಳೆಯುತ್ತೇವೆ.

ನಮ್ಮ ಕುಲದೈವ ಪಾಂಡುರಂಗ. ಆ ಮಂದಿರ ದೀಪಾವಳಿಗಾಗಿ ಅಲಂಕೃತವಾಗಿ ನಿಂತಾಗ ನೋಡಲು ಕಣ್ಣೆರಡು ಸಾಲದು. ರಂಗವಲ್ಲಿ ಹಾಕಿ, ತಳಿರು ತೋರಣಗಳಿಂದ ಮನೆಯನ್ನೂ ಮಂದಿರವನ್ನು ಅಂದಗೊಳಿಸಿ, ಬಂಧು ಬಳಗದೊಡನೆ ಭಜನೆಯನ್ನು, ಪೂಜೆಯನ್ನು ಮಾಡಿ, ಷಡ್ರಸೋಪೇತ ಭೋಜನವನ್ನು ಮಾಡಿದರೆ ಏನು ಸೊಗಸು ಗೊತ್ತೆ.

ದೀವಳಿಗೆಯ ಈ ಶುಭ ದಿನದಂದು ಮಾತ್ರ ನನಗೆ ಸಿನಿಮಾ ಪ್ರಪಂಚದಿಂದ ಸಂಪೂರ್ಣ ಬಿಡುವು- ಹಾಗೂ ಮರೆವು ಮಕ್ಕಳೊಂದಿಗೆ ಮೈಮರೆವು.

ಪಟಾಕಿ, ಮತಾಪು, ಬಾಣ ಬಿರುಸು ಮೂಟೆಗಟ್ಟಲೆ ಬಂದರೂ ಸಾಲದು. ಎಷ್ಟು ಸಿಹಿ ತಿಂದರೂ ಸಾಲದು. ಒಂದೊಂದು ಮಗುವಿಗೆ ಒಂದೊಂದು ಬಗೆಯ ತಿಂಡಿ, ಮತಾಪು, ಪಟಾಕಿ, ಹೂಬಾಣಗಳ ಕಂತೆ.

ಈ ಸಮಾರಂಭದಲ್ಲಿ ನಾವು ತುಂಬಾ ಜಾಗ್ರತೆ ವಹಿಸುತ್ತೇವೆ. ಏಕೆಂದರೆ ಈ ದೀಪಾವಳಿಯಲ್ಲಿ ಬೆಂಕಿಯ ಹಾವಳಿಯೂ ಜಾಸ್ತಿ. ಮಕ್ಕಳು ಬಟ್ಟೆ ಬರೆಗಳನ್ನು ಹಚ್ಚಿಸಿಕೊಂಡು ಅನಾಹುತ ಮಾಡಿರುವುದೂ ಉಂಟು.

"ನೀನು ಆನೆ ಪಟಾಕಿ ಹಚ್ಚಿಸಿದ್ರೆ ನಾನು ಅಟಂಬಾಂಬ್ ಹಾಕಿಬಿಡ್ತೀನಿ ನೋಡು."

"ನೀನು ಮತಾಪ್ ಹಚ್ಚಿದರೆ ನಾನು ಹೂಬಾಣ ಹಚ್ಚಿಸ್ತೀನಿ"

"ನೀನು ಚಿನಕುರುಳಿ"

"ನೀನು ಚೈನಾ ಚುಮ್ಮ"

ಢಂ! ಢಂ! ಢಮಾರ್!

ಚಟ್ ಚಟ್ ಚಟ್!

ಪಟ್ ಪಟ್ ಪಟ್!

ಈ ಎಲ್ಲ ಸಮಾರಂಭ ಈ ದೀವಳಿಗೆ ಬೆಳಕಿನ ಹಬ್ಬದಲ್ಲಿ, ಮಕ್ಕಳ ನಂದನದಲ್ಲಿ ಎಂಥ ಅನುಭವ ತರುತ್ತದೆ ಗೊತ್ತೆ?

ಹೇಳಿ ನೋಡೋಣ?

ನನ್ನ 'ಡಾಕ್ಟರ್' ಹೇಳುತ್ತಾರೆ "ನಿನ್ನಂಥ ಹತ್ತು ಮಕ್ಕಳು ಇರಬಹುದು" ಎಂದು.

ಹೌದೆ?

ನಿಜ ನನಗೆ ಈ ಮನುಷ್ಯ ಜನ್ಮವೇ ಜನ್ಮಜನ್ಮಕ್ಕೂ ಬರಲಿ. ಅದರಲ್ಲೂ ಹೆಣ್ಣು ಜನ್ಮವೇ ಬರಲಿ, ನನ್ನ ಅಕ್ಕನಾಗಿ ಪಂಡರಕ್ಕನೇ ಬರಲಿ, ಮಕ್ಕಳು ತುಂಬಿದ ನಂದಗೋಕುಲದಲ್ಲಿ ದಿನದಿನವೂ ದೀಪಾವಳಿ ಆಚರಿಸುತ್ತೇನೆ.

ನನ್ನ ಅಭಿಮಾನಿಗಳಾದ ನೀವೂ ನಮ್ಮೊಂದಿಗೆ ಸಿಹಿ ತಿನ್ನಿ. ಇಲ್ಲವಾದರೆ ಸಿಹಿ ತಿನ್ನುವಾಗ ನನ್ನನ್ನು ನೆನಸಿಕೊಳ್ಳಿ. 

### ಕುಣಿ ಕುಣಿಯುವ ಮಣಿಮಹಲಿನ

# ಮಂಗಳೋತ್ಸವ ದೀಪಾವಳಿ

ಎಸ್. ಆರ್. ಪುಟ್ಟಣ್ಣ ಕಣಗಾಲ

ನಾನು "ಭಾವ ಜೀವಿ" ಎಂದು ನನ್ನ ಕವಿ ಮಿತ್ರರು ನನ್ನ ಕಡಿವಾಣವಿಲ್ಲದ ಕಲ್ಪನೆಯ ಕುದುರೆಯನ್ನು ಕಂಡು ಕೀರ್ಮಾನಿಸಿದ್ದಾರೆ.

ಹೌದು! ನೂರೆಂಟು ಬಗೆಯ ಚಿಂತನೆ ಅಥವಾ ವಿಚಾರಮಂಥನ ಮಾಡುವ ಮಿದುಳು (ಕರ್ತಾರನ ಕಮ್ಮಾರಗಾರ) ಸದಾ ಗದ್ದಲದಿಂದ ಕೂಡಿರುತ್ತದೆ. ಅದರಿಂದ ಹೊರಬರುವ ವಸ್ತು ಅನೇಕರಿಗೆ ಆಪ್ಯಾಯಮಾನವಾಗಿರಬಹುದು ಇಲ್ಲವೆ ಬೇಸರ ಉಂಟುಮಾಡಬಹುದು. ಅಂತೂ ನಾನು ನನ್ನ ಕಲ್ಪನಾ ವಿಲಾಸದಲ್ಲಿ ತಲ್ಲೀನನಾಗಿ ಕಲಾತ್ಮಕ ಸೃಷ್ಟಿಯಲ್ಲಿ ತೊಡಗುತ್ತೇನೆ ಬ್ರಾಹ್ಮಣನಾದ ನಾನು ಎಲ್ಲವನ್ನೂ ಬ್ರಹ್ಮ ಕರ್ಮವೆಂದು ಭಾವಿಸುತ್ತೇನೆ – ಸಮರ್ಪಿಸುತ್ತೇನೆ.

ಈ ಲೇಖನವನ್ನೂ ಹಾಗೆಯೇ ಭಾವಿಸಿ ಬರೆಯುತ್ತೇನೆ.

ಲೇಖನದ ಪ್ರಾರಂಭವೇ "ನಾನು" ಇಂದ ಆಗಿದೆ ಅಲ್ಲವೆ? ಅದೂ ಸಮಂಜಸವೇ! ಏಕೆನ್ನುತ್ತೀರಾ?

ನಾನು ಆದಿ ಶ್ರೀಶಂಕರಾಚಾರ್ಯರ ಅದ್ವೈತ ಮತಾನುಯಾಯಿ.

"ಅಹಂಬ್ರಹ್ಮಾಸ್ಮಿ" ನನ್ನ ನಡೆ ನುಡಿಯಲ್ಲಿದೆ ಆದ್ದರಿಂದ

ದೀಪಾವಳಿ ಬಗ್ಗೆ ನನ್ನ ಕಲ್ಪನೆಯೇ ಬೇರೆ. ಆಂಗ್ಲ ನಿರ್ದೇಶಕರ ಆದರ್ಶ ನನಗೆ ಬೇಡವಾದರೂ ವಾಲ್ಟ್ ಡಿಸ್ನೆ ತನ್ನದೇ ಆದ "ಡಿಸ್ನೆ ಲ್ಯಾಂಡ್"ಅನ್ನು ಕಲ್ಪಿಸಿಕೊಂಡಿದ್ದಂತೆ ನಾನು ನನ್ನದೇ ಆದ ಬೇರೊಂದು ಲೋಕವನ್ನು ಸೃಷ್ಟಿಸಿಕೊಂಡು ವಿಹರಿಸುತ್ತೇನೆ. ಈ ನನ್ನ ಪ್ರಪಂಚಕ್ಕೆ ನಾನೇ ಸಾರ್ವಭೌಮ. ದೀಪಾವಳಿಯನ್ನು ನಾನು ಕನ್ನಡ ರಾಜೇಶ್ವರಿಯ ಸನ್ನಿಧಿಯಲ್ಲಿ ವೈಭವೋಪೇತವಾಗಿ ಆಚರಿಸುತ್ತೇನೆ.

ಅದೊಂದು ವರ್ಣರಂಜಿತ ಚಿತ್ರದಂತೆ ಕಂಗೊಳಿಸುತ್ತದೆ.

ಸಹ್ಯಾದ್ರಿಯ ಸುಂದರ ಶಿಖರ ನಿಕರಗಳ ಮಧ್ಯದಲ್ಲಿ, ನವರತ್ನ ಖಚಿತ ಸಿಂಹಾಸನದಲ್ಲಿ, ಕನ್ನಡ ತಾಯಿದೇವಿ ಮಂದಹಾಸದ ಇಂದು ಕಿರಣಗಳನ್ನು ಬೀರುತ್ತಾ ಮಂಡಿಸಿದ್ದಾಳೆ ಆ ಮಮತಾಮೂರ್ತಿಯ ಕೃಪಾಶ್ರಯವನ್ನು ಕೋರಿ ಕವಿ ಸಮುದಾಯ ಸಮುದ್ರದಂತೆ ಗಂಭೀರವಾಗಿ ಗುಣಗಾನ ಮಾಡುತ್ತಿದೆ.

ನೃಪತುಂಗ, ರನ್ನ, ಪಂಪ, ಜನ್ನ, ರಾಘವಾಂಕರು, ಲಕ್ಷ್ಮೀಶ, ಹರಿಹರ, ಸರ್ವಜ್ಞ, ಬಸವಣ್ಣ, ಅಕ್ಕಮಹಾದೇವಿ, ಹೊನ್ನಮ್ಮ, ಕುಮಾರವ್ಯಾಸ ಮೊದಲಾದ ಕವಿಗಣ ಕಾವ್ಯ ದೀಪಧಾರಿಗಳಾಗಿ-- ಕಗ್ಗತ್ತಲಲ್ಲಿ, ಅಜ್ಞಾನದ ಅಂಧಕಾಸುರನ ದಬ್ಬಾಳಿಕೆಯಲ್ಲಿ, ದಲಿತವಾದ ಪೀಳಿಗೆಯನ್ನು ಉದ್ಧರಿಸುವಾಗ, ತುಂಗಭದ್ರೆಯರು ಕಾವೇರಿ ಕಪಿಲೆಯರು ನಲಿದು ನರ್ತಿಸುವುದು. ಕನ್ನಡ ನಾಡಿನ ಹೊಸ ಪೀಳಿಗೆಯು ಏಳಿಗೆಯಾಗಿ ಮನೆ ಮನೆಯಲ್ಲೂ ಮನೋಹರವಾದ ದೀಪಾವಳಿಯ ಸಡಗರ ನಡೆದಾಗ ಈ ತಲೆಮಾರಿನ ಕವಿಗಳು ನವಸ್ಫೂರ್ತಿಯಿಂದ ಕವಿತೆಗಳ ಹೂಮಾಲೆಯನ್ನು ಕನ್ನಡ ತಾಯಿ ದೇವಿಯ ಅಡಿದಾವರೆಗಳಲ್ಲಿ ಅರ್ಪಿಸುವುದು.

ಕನ್ನಡದ ಖ್ಯಾತ ಕರ್ನಾಟಕ ಸಂಗೀತದ 'ಸರಿಗಮ ಪದನಿ'ಯಲ್ಲಿ ವಿಶ್ವದ ಹೃದಯ ವೀಣೆಯನ್ನು ತಾಯ್ ದೇವಿ ಮಿಡಿಯುವ ಈ ಅನುಪಮ ದೃಶ್ಯವನ್ನು ದೀಪಾವಳಿಯ ಸಂತಸ ಸಮಾರಂಭದಲ್ಲಿ ಕಾಣುತ್ತೇನೆ.

ಕನ್ನಡ, ಮಳಯಾಳ, ತೆಲುಗು ಹಾಗೂ ತಮಿಳು ಭಾಷೆಗಳಲ್ಲಿ ಹನ್ನೆರಡು ಚಿತ್ರಗಳನ್ನು ನಿರ್ದೇಶಿಸಿರುವ ನಾನು ಯಾವ ಭಾಷೆಯ ಚಿತ್ರವನ್ನು ನಿರ್ದೇಶಿಸಿದರೂ ಕನ್ನಡಕ್ಕೆ ಮೊದಲ ಮನ್ನಣೆ ಕೊಡುತ್ತೇನೆ ಕನ್ನಡಕ್ಕಾಗಿ ದುಡಿಯುತ್ತೇನೆ-ಕನ್ನಡತನ ಮೆರೆಸುತ್ತೇನೆ.

ದೀಪಾವಳಿಯ ದಿವ್ಯ ಅನುಭವವನ್ನು ಕನ್ನಡಿಗನಾಗಿ ಅನುಭವಿಸುತ್ತೇನೆ. ದೀಪಾವಳಿ ಕತ್ತಲಿಂದ ನಮ್ಮನ್ನು ಬೆಳಕಿಗೆ ಒಯ್ಯುತ್ತದೆ. ಅದೇ ನಮ್ಮ ಸಂಸ್ಕೃತಿಯ ಸಂಕೇತ. ಅದೇ ನಮ್ಮ ಉಪನಿಷದ್ ಸಂದೇಶ. "ತಮಸೋಮಾ ಜ್ಯೋತಿರ್ಗಮಯ" ಅದನ್ನೇ ನಾವು ದೀಪಾವಳಿಯ ಈ ಶುಭದಿನದಂದು ಬಯಸುವುದು.

"ಅಸತೊಮಾ ಸದ್ಗಮಯ
ತಮಸೋಮಾ ಜ್ಯೋತಿರ್ಗಮಯ
ಮೃತ್ಯೋರ್ಮಾ ಅಮೃತಂಗಮಯ"

ನಿರ್ದೇಶಕ ಪುಟ್ಟಣ್ಣ





# ಮೈಸೂರ್ ರಾಜ್ಯದಲ್ಲಿ ಚಿತ್ರೋದ್ಯಮಕ್ಕೆ ಸೌಕರ್ಯಗಳು

ವಿಜಯಸಾರಸಿಂಹ

ಮನಸ್ಸು ಪ್ರಫುಲ್ಲವಾದಾಗ ವಿಲಾಸ, ದಣಿದಾಗ ಉಪಚಾರ ಅಗತ್ಯ. ಈ ಅಗತ್ಯವನ್ನು ಪೂರೈಸಬಲ್ಲ ಚೈತನ್ಯವನ್ನು ಕಲೆ ಪಡೆದಿದೆ. ಆಧುನಿಕ ಕಲೆಗಳಲ್ಲಿ ಸಿನಿಮಾ ಈ ಚೈತನ್ಯ ಧಾರೆಯನ್ನು ನೀಡಬಲ್ಲ ಉತ್ತಮ ಮಾಧ್ಯಮವಾಗಿದೆ. "ಏನೊ ತುಂಬಾ ದುಡಿದು ಸಾಕಾಗಿದೆ ಒಂದು ಪಿಕ್ಚರ್ ಆದ್ರೂ ನೋಡೋಣ" ಎಂದು ಚಿತ್ರವನ್ನು ನೋಡುವ ಶ್ರಮಜೀವಿಗಳು ತಮ್ಮ ಜೀತದ 'ಪುಡಿಗಾಸಿ'ನಲ್ಲಿ ಪಾಲನ್ನು ಕೊಟ್ಟು ಚಿತ್ರ ನೋಡುತ್ತಾರೆ.

"...ಅವಳು ತುಂಬ 'ಮುಂದುವರಿದು' ನಟಿಸಿದ್ದಾಳೆ. ಅವಳ ಚೆಂದ ನೋಡೋಕೆ ಎರಡು ಕಣ್ಣು ಸಾಲದು" ಎಂದು ಚಿತ್ರಮಂದಿರವನ್ನು ಭರ್ತಿ ಮಾಡುವ ಕೀಳುಮಟ್ಟದ ಅಭಿರುಚಿಯ ಜನರೂ ಇರುತ್ತಾರೆ.

"ಉತ್ತಮ ಕಥೆ, ಉತ್ತಮ ಸಂಭಾಷಣೆ, ಭಾವಪೂರ್ಣ ಗೀತೆಗಳು, ಸುಶ್ರಾವ್ಯ ಸಂಗೀತ, ದಕ್ಷನಿರ್ದೇಶನ, ಉತ್ತಮ ತಂತ್ರಜ್ಞರ ಗುಂಪು" ಇತ್ಯಾದಿಗಳನ್ನು ಗಮನಿಸಿ ಚಿತ್ರವನ್ನು ನೋಡಿ ರಸಾಸ್ವಾದನೆ ಮಾಡುವ ರಸಿಕರ ತಂಡವೂ ಇರುತ್ತದೆ.

ಈ ಎಲ್ಲ ಬಗೆಯ ಜನಸಮುದಾಯಕ್ಕೆ ರುಚಿಸುವ ರಸದೌತಣ ನೀಡುವುದು ಕಲೆಯ ವಿಶಿಷ್ಟ ಧರ್ಮವಾಗಿದೆ.

## ಧಿಕ್ಕಿಯೋ ಧಿಕ್ಕಿ !



ಬಸ್ಸು ಬಸ್ಸಿಗೆ ಧಿಕ್ಕಿ, ಟ್ರೇನು-ಟ್ರೇನಿಗೆ ಧಿಕ್ಕಿ
ಬಸ್ಸು ಟ್ರೇನಿಗೆ ಧಿಕ್ಕಿ, ಟ್ರೇನು ಬಸ್ಸಿಗೆ ಧಿಕ್ಕಿ
ದೇಶ-ದೇಶಕ್ಕೆ ಧಿಕ್ಕಿ, ವರ್ಣ-ವರ್ಣಕೆ ಧಿಕ್ಕಿ
ಧಿಕ್ಕಿಮಯ ಜಗವೆಲ್ಲ ಜನ ತಿಕ್ಕಿ-ಮುಕ್ಕಿ

— ಜಿನದತ್ತ ದೇಸಾಯಿ

ಈ ಎಲ್ಲ ದೃಷ್ಟಿಕೋನಗಳಿಂದ ಆಳೆದು ಕನ್ನಡ ಚಿತ್ರಗಳು ಎಷ್ಟು ದೂರ ಪ್ರಗತಿ ಸಾಧಿ... ಸಿವೆ? ಎಂದು ನಿಷ್ಪಕ್ಷವಾಗಿ ವಿವೇಚಿಸಿದರೆ ನಾವು ಬಹಳ ಹಿಂದುಳಿದಿದ್ದೇವೆ ಎಂಬ ಅಂ... ವ್ಯಕ್ತವಾಗುತ್ತದೆ.

## ಸೋದರಭಾಷೆ ಚಿತ್ರಗಳ ಮುನ್ನಡೆ

ಕನ್ನಡ ಚಿತ್ರರಂಗ ತನ್ನ ಸೋದರ ಭಾಷೆಯ... ಚಿತ್ರರಂಗದವರೊಂದಿಗೆ ಹೋಲಿಸಿಕೊಂಡಾಗ ತೀರಾ ಬಡವಾಗಿ ಕಾಣುತ್ತದೆ. ಇತರ ಭಾಷೆಯವರ ಅದ್ದೂರಿಯ ವರ್ಣಚಿತ್ರಗಳನ್ನು, ವೈಭವದ 'ಕಪ್ಪು ಬಿಳುಪಿ'ನ ಚಿತ್ರಗಳನ್ನು ತಯಾರಿಸಿ ಹೊರನಾಡುಗಳಲ್ಲಿ ಪ್ರದರ್ಶಿಸುತ್ತಾರೆ. ಹೇರಳವಾದ ವ್ಯಾಪಾರ ಮಾಡುವ ವಿಶಾಲವಾದ ಮಾರುಕಟ್ಟೆಯನ್ನು ಸ್ಥಾಪಿಸಿದ್ದಾರೆ. ವ... ವರ್ಷವೂ ರಾಷ್ಟ್ರಪತಿ ಪ್ರಶಸ್ತಿಯನ್ನು ಪಡೆಯು... ವಲ್ಲಿ ನಮಗಿಂತಲೂ ಹೆಚ್ಚು ಪಾಲು ಪಡೆಯುತ್ತಾರೆ. ಸ್ಟುಡಿಯೊಗಳನ್ನು ಸ್ಥಾಪಿಸಿ ಕಲಾವಿದರಿಗೂ ಕಲೋಪಜೀವಿಗಳಿಗೂ ತಂತ್ರಜ್ಞರಿಗೂ ನೆರವಾಗಿದ್ದಾರೆ. ಸರ್ಕಾರದ ಹಾಗೂ ಸಾರ್ವಜನಿಕರ ಪ್ರೋತ್ಸಾಹ ಚಿತ್ರೋದ್ಯಮವನ್ನು ಉನ್ನತಿಗೆ ಒಯ್ಯುತ್ತಿದೆ. ನಮಗಿಂತಲೂ ಕಿ... ದಾದ ವ್ಯಾಪಾರ ಕ್ಷೇತ್ರವನ್ನು ಹೊಂದಿರುವ ಮಳಯಾಳಿ ಚಿತ್ರರಂಗ ಅದ್ದೂರಿಯ ವರ್ಣ... ಚಿತ್ರವನ್ನು ತಯಾರಿಸಿ ಸ್ವರ್ಣಪದಕ ಗಳಿ... ವಿದೇಶಗಳಲ್ಲಿ ಪ್ರದರ್ಶಿತವಾಗಲಿದೆ. ತಮಿಳ... ಚಿತ್ರಗಳಲ್ಲಿ "ಪಣಮಾ? ಪಾಶಮಾ?" ತೆಲುಗಿ... "ಸಾಕ್ಷಿ" ಹಾಗೂ ಮಳಯಾಳಿ "ಚೆಮ್ಮೀನ್"...

ಹೊರನಾಡಿನಲ್ಲಿ ಪ್ರದರ್ಶಿತವಾಗುತ್ತವೆ. "ಈ ಸುಸಂಧಿ ಕನ್ನಡ ಚಿತ್ರಗಳಿಗೇಕೆ ದೊರೆಯಲಿಲ್ಲ?" ಎಂದು ನಮ್ಮನ್ನು ನಾವು ಕೇಳಿಕೊಂಡಾಗ ಉತ್ತರಿಸಬೇಕಾದ ಪ್ರಶ್ನೆಗಳು ಅನೇಕ.

## ನಮ್ಮ ಚಿತ್ರೋದ್ಯಮದ ಕೊರತೆ

ಕನ್ನಡ ಚಿತ್ರಗಳು ಸಂಖ್ಯೆಯಲ್ಲಿ ಪ್ರಗತಿ ತೋರಿಸಿವೆಯಾದರೂ. ಗುಣಮೌಲ್ಯಗಳಲ್ಲಿ ತೋರಿಸಿಲ್ಲ. "ಸಮೂಹರಂಜನೆಯ ಮೂಲ ಸೂತ್ರಗಳು" ಎಂಬ ತಮ್ಮದೇ ಆದ ಸೂತ್ರಗಳ ಆಧಾರದ ಮೇಲೆ ತಯಾರಾದ ಚಿತ್ರಗಳು "ಕಡಿಮೆ ಬಂಡವಾಳ-ಹೆಚ್ಚು ಆದಾಯ"ದ ದೃಷ್ಟಿಯಿಂದ ತಯಾರಾದ ಚಿತ್ರಗಳು ಅನನುಭವಿಗಳ ಅಲ್ಪಜ್ಞಾನದ ಅಪಕ್ವ ನಿರ್ಮಾಣಗಳು ನಮ್ಮ ಚಿತ್ರರಂಗದ ಪ್ರಗತಿಗೆ ಕುಠಾರಪ್ರಾಯ.

## ನಮಗಿರುವ ಸೌಕರ್ಯಗಳು

ಕನ್ನಡ ಚಿತ್ರೋದ್ಯಮ ಮುಂದುವರೆಯಲು ನಮ್ಮಲ್ಲಿ ವಿಪುಲವಾದ ಸೌಕರ್ಯಗಳಿವೆ.

### ಭಿಕ್ಷುಕನ ಶಂಕೆ

ಹೊಲಸಿರಬೇಕು, ಹಳಿಸಿರಬೇಕು,
ಇರುವೆ ಹುಳಗಳು ಬಿದ್ದಿರಬೇಕು
ಇಲ್ಲದಿದ್ದರೆ ಈ ಮನೆಯೊಡತಿ
ನೀಡಿದಳೇತಕೆ ಹೋಳಿಗೆ ಪೂರ್ತಿ ?

- ಎಂ. ಗೋವಿಂದ

ನಮ್ಮಲ್ಲಿ ಉತ್ತಮ ಕಲಾವಿದರಿಗಾಗಲೀ ತಂತ್ರಜ್ಞರಿಗಾಗಲೀ ಕೊರತೆ ಇಲ್ಲ ಆದರೆ ಸುಸಜ್ಜಿತವಾದ ಸ್ಟುಡಿಯೋಗಳ ಕೊರತೆ ಎದ್ದು ಕಾಣುತ್ತದೆ. ಈಗ ನಮಗಿರುವುದು ಒಂದೇ ಸ್ಟುಡಿಯೋ. ಪ್ರಯೋಗಶಾಲೆ ಹಾಗೂ ಪ್ರದರ್ಶನ ಶಾಲೆಗಳ ಅಭಾವ ಇರುವ ಒಂದು ಸ್ಟುಡಿಯೊ ಎಷ್ಟು ತಯಾರಿಕೆಗಳಿಗೆ ಅನುಕೂಲವಾದೀತು ?

## ಸಬ್ಸಿಡಿ ಪರಿಣಾಮ

ಕನ್ನಡ ಚಿತ್ರೋದ್ಯಮವನ್ನು ಪ್ರೋತ್ಸಾಹಿಸುವ ಸದುದ್ದೇಶದಿಂದ ಮೈಸೂರ್ ಸರ್ಕಾರ ಸಹಾಯಧನದ ಸಹಕಾರ ನೀಡಿದೆ. ಈ ಅವಕಾಶವನ್ನು ಉಪಯೋಗಿಸಿಕೊಂಡು ಉತ್ತಮ



ಚಿತ್ರಗಳನ್ನು ನೀಡುವುದರ ಬದಲಾಗಿ ಸರ್ಕಾರದ ಐವತ್ತು ಸಾವಿರ ರೂಪಾಯಿಗಳನ್ನು ಕಬಳಿಸುವ ಲಕ್ಷ್ಯದಿಂದ ತಯಾರಾದ ಚಿತ್ರಗಳು ಹೊರ ಬರ ತೊಡಗಿವೆ. ಉತ್ತಮ ದರ್ಜೆಯ ಚಿತ್ರಗಳಿಗೆ ಮಾತ್ರ ಈ ಸಹಾಯಧನ ಮೀಸಲಾಗಬೇಕು ಈ ವಿಷಯದಲ್ಲಿ ಸರ್ಕಾರದ ನಿಲುವು ನಿಬಂಧನೆಗಳು ಬಿಗಿಯಾಗಿರಬೇಕು. ನಮ್ಮ ನಾಡಿನಲ್ಲಿ ತಯಾರಾದ ಎಲ್ಲ ಚಿತ್ರಗಳಿಗೂ ಈ ಸಬ್ಸಿಡಿ ಸಲ್ಲಬೇಕಾದರೆ ಅಂತಸ್ತು ಅರ್ಹತೆಗಳಿಲ್ಲದ ಇನ್ನೂ ಹೊಲಸು ಚಿತ್ರಗಳು ಬರುವುದರಲ್ಲಿ ಸಂದೇಹವಿಲ್ಲ

## ಮುನ್ನಡೆಗೆ ಏನು ತಡೆ ?

ಕನ್ನಡ ಚಿತ್ರರಂಗ ಪ್ರಗತಿಯನ್ನು ಸಾಧಿಸಬೇಕಾದರೆ, ಸುಸಜ್ಜಿತ ಸ್ಟುಡಿಯೊಗಳನ್ನು ಮೈಸೂರು ಮತ್ತು ಬೆಂಗಳೂರುಗಳಲ್ಲಿ ಸ್ಥಾಪಿಸಬೇಕು. ಯಾವುದಕ್ಕೂ ನೆರೆನಾಡಿನ ನೆರವಿಗೆ ಕೈ ಚಾಚದಷ್ಟು ಸ್ವ ಪರಿಪೂರ್ಣವಾಗಬೇಕು- ಸರ್ಕಾರದ ಸಹಾಯಧನದ ಸದುಪಯೋಗವಾಗಬೇಕು. ಮುಖ್ಯವಾಗಿ ದಕ್ಷ ಕಲಾವಿದರ ಹಾಗೂ ತಂತ್ರಜ್ಞರನ್ನು ಒಟ್ಟುಗೂಡಿಸಿ ಉನ್ನತ ದರ್ಜೆಯ ಚಿತ್ರಗಳನ್ನು ತಯಾರಿಸಬೇಕು ನೊಂದ ಕಲಾವಿದರಿಗೆ ಸೂಕ್ತವಾದ ನೆರವು ನೀಡಬೇಕು. ಉದಯೋನ್ಮುಖ ಕಲಾವಿದರನ್ನು ಅನ್ವೇಷಿಸಿ ಬೆಳಕಿಗೆ ತರಬೇಕು.

## ಶುಭಸ್ಯ ಶೀಘ್ರಂ

ಈ ಎಲ್ಲ ನಿಟ್ಟಿನಿಂದ ನೋಡಿದಾಗ ಕನ್ನಡ ಚಿತ್ರರಂಗ ಮುಂದುವರಿಯುವ ಸಲ್ಲಕ್ಷಣಗಳು ಮೈಸೂರ್ ರಾಜ್ಯದಲ್ಲಿ ಕಂಡುಬರುತ್ತಿವೆಯಾದರೂ, ವೇಗ ಮಾತ್ರ ಕಾಣುತ್ತಿಲ್ಲ. ಈ ದಿಸೆಯಲ್ಲಿ ನಮ್ಮ ಚಿತ್ರೋದ್ಯಮಿಗಳು ಆಮೆಯ ನಡೆಯನ್ನು ಬಿಟ್ಟು ರಾಮಬಾಣದ ವೇಗವನ್ನೂ ಗುರಿಸಾಧನೆಯನ್ನು ಸದ್ಯದಲ್ಲೇ ಅನುಸರಿಸುವ ಕಾಲ ಬರಲಿದೆ ಎಂದು ಆಶ್ವಾಸಿಸಬಹುದು ಆಲಸ್ಯದಿಂದ ಅಮೃತ ವಿಷವಾಗಬಹುದು. ಆದ್ದರಿಂದ ದೊರೆತಿರುವ ಅವಕಾಶದ ಸಮಯೋಚಿತ ಉಪಯೋಗವಾಗಲಿ.

### ಮಾಮೂಲಿ



ಜೋರಿನಲಿ ತಿರುವಿದನು ಸರದಾರ ಮೀಸೆ।
ಟ್ರಕ್ಕುಗಳು ಬರಲು ಮುಂದೆ ಕೈಬೀಸಿ।
ಎಂಟಾಣೆ ಕೊಟ್ಟರು ಸಾಕು ಮಾಮೂಲಿ।
ಅರ್ಧ ಪೆಗ್ಗನು ಕುಡಿದು ಹೊಡೆಯುವನು
ಝೋಲಿ।

-ಎಂ. ಗೋವಿಂದ







ಹುಬ್ಬಳ್ಳಿಯಲ್ಲಿದ್ದು ಹೊಲಸಿಗೆ
ಅಂಜಿದೊಡೆಂತಯ್ಯಾ ?
ಬೆಳಗಾವಿಯಲ್ಲಿದ್ದು ಗೂಳಿಗೆ
ಅಂಜಿದೊಡೆಂತು ?
ಬೆಂಗಳೂರಿನ ಮನೆಗೆ ಭಾಷಣದ ಅಂಜಿಕೆಯಿ?
ನೆಲ—ಹೊಲಸು ಮರದ ಮೇಲಿರಲುಂಟೆ.
ವಾನರಾತ್ಮಜ ?

— ಜಿನದತ್ತ ದೇಸಾಯಿ

# ಹೆಮ್ಮರದಲ್ಲಿ ಹೊಸ ಚಿಗುರು




ತಂದೆಯಂತೆ ಮಗಕೂಡಾ, ಬೆಳೆದ ಅಶ್ವತ್ಥಮರದಲ್ಲಿ ಮೊಳೆತ ಹೊಸ ಚಿಗುರಿನಂತೆ, ಹಣಕೂಡಿಡುವ ಪರಿಪಾಠ ಈ ಮಗುವಿಗೆ ಹೆತ್ತವರಿಂದ ಪಡೆದುಬಂದ ಗುಣ. ಪುಟ್ಟ ನಾಣ್ಯ ಮಗುವಿನ ಕೈಗೆ ದೊರೆತ ಕ್ಷಣ ಅದು ನೇರವಾಗಿ ಈಕೆಯ ಉಳಿತಾಯದ ಡಬ್ಬಿಯನ್ನು ಸೇರುತ್ತದೆ. ಅಲ್ಲಿ ಕೂಡಿದ ಹಣ ಮತ್ತೆ ಸೇರುವುದು ಆಕೆಯ ಹೆಸರಿನಲ್ಲಿರುವ ಬ್ಯಾಂಕಿನ ಖಾತೆಗೆ. ಈಕೆ ಬೆಳೆದಂತೆ ಖಾತೆಯಲ್ಲಿರುವ ಉಳಿತಾಯದ ಮೊತ್ತವೂ ಬೆಳೆಯುತ್ತದೆ. ಜತೆಗೆ ಮಗುವಿನ ಹಣ ಕೂಡಿಡುವ ಹವ್ಯಾಸ ಮತ್ತು ಕೂಡಿಟ್ಟ ಹಣವನ್ನು ಬ್ಯಾಂಕಿನ ಖಾತೆಗೆ ಜಮೆ ಮಾಡುವ ಪರಿಪಾಠಕೂಡಾ.

ಚಿಕ್ಕ ವಯಸ್ಸಿನಲ್ಲೇ ನಿಮ್ಮ ಮಕ್ಕಳಲ್ಲಿ ಉಳಿತಾಯದ ಹವ್ಯಾಸವನ್ನು ತೊಡಗಲು ನೆರವಾಗಿರಿ. ಉಳಿತಾಯದ ಡಬ್ಬಿಯಲ್ಲಿ ಹಣ ಬೆಳೆಯುತ್ತಿರುವಂತೆ ಅವರು ಉಬ್ಬುವುದನ್ನು ಕಂಡು ಆ ಸಂತೋಷದಲ್ಲಿ ಪಾಲುಗೊಳ್ಳಿರಿ. ನಿಮ್ಮ ಮಕ್ಕಳ ಎಳೆಯ ಮನಸ್ಸಿನಲ್ಲೆ ನೀವು ಅವಶ್ಯಕವಾಗಿ ಬಿತ್ತಬೇಕಾದ ಗುಣ—ಉಳಿತಾಯ. ನಿಮ್ಮ ಮಕ್ಕಳ ಮುಂದಿನ ಬದುಕಿಗೆ ನೆರವಾಗುವ ಸಾಧನ—ಉಳಿತಾಯ.

ಸಿಂಡಿಕೇಟ್ ಬ್ಯಾಂಕಿನಲ್ಲಿ ನಿಮ್ಮ ಅನುಕೂಲತೆಗಳಿಗೆ ಹೊಂದಿಕೊಳ್ಳುವ ವಿವಿಧ ತೆರನ ಉಳಿತಾಯ ಖಾತೆಗಳಿವೆ : ಪಿಗ್ಮಿ, ಸೇವಿಂಗ್ಸ್ ಬ್ಯಾಂಕ್, ಕ್ಯುಮ್ಯುಲೇಟಿವ್ ಡಿಪಾಸಿಟ್ ... ಇತ್ಯಾದಿ. ಯಾವುದಾದರೊಂದು ಉಳಿತಾಯ ಖಾತೆಯನ್ನು ನಿಮ್ಮ ಮಕ್ಕಳ ಹೆಸರಿನಲ್ಲಿ ತೆರೆದು ಈ ಖಾತೆಯು ಕ್ರಮವಾಗಿ ಬೆಳೆಯುವಂತೆ ಮಾಡಿರಿ. ಇದು ನೀವು ನಿಮ್ಮ ಮಕ್ಕಳಿಗೆ ನೀಡುವ ಹಿರಿದಾದ ಕಾಣಿಕೆಯಾಗಬಲ್ಲುದು.

## ಸಿಂಡಿಕೇಟ್ ಬ್ಯಾಂಕ್ ಲಿಮಿಟೆಡ್

ರಜಿಸ್ಟರ್ಡ್ ಆಫೀಸು : ಮಣಿಪಾಲ, ಮೈಸೂರು ರಾಜ್ಯ.

| ಸಾಧನ ಸಂಪತ್ತು : | ಶಾಖೆಗಳು : | ಟಿ. ಎ. ಪೈ |
| --- | --- | --- |
| ರೂ. 100 ಕೋಟಿಗೂ ಮಿಕ್ಕಿ. | 240 ಕ್ಕೂ ಮಿಕ್ಕಿ. | ಚೆಯರಮನ್ |




*Specalists in* **HALF TONE, LINE & COLOUR BLOCKS.**

ಫೋನ್ : 73307

# ಕ್ಲಿಕ್ ಅಂಡ್ ಕಂಪನಿ

## ಫೋಟೋ ಬ್ಲಾಕ್ ತಯಾರಕರು

೨, [illegible] ರೋಡು : : ಬೆಂಗಳೂರು



# *Happy Deepavali Greetings*





ದೀಪಾವಳಿಯು ಸರ್ವರಿಗೂ
ಸುಖ-ಸಂಪದಭಿವೃದ್ಧಿಯಾಗಲಿ !

ಬೇಡೆಕರರ ಉಪ್ಪಿನಕಾಯಿಗಳು
ಹಪ್ಪಳಗಳು ಮತ್ತು ಮಸಾಲೆಗಳು
ನಿಮ್ಮ ಕುಟುಂಬಕ್ಕೆ
ಪ್ರಿಯವಾದವುಗಳು
ಪರಿಶುದ್ಧ ದ್ರವ್ಯಗಳು
ಶಾಸ್ತ್ರೀಯ ತಯಾರಿಕೆ ಕ್ರಮ
ಹಾಗೂ ವಿಶಿಷ್ಟ ರುಚಿ
ಅವುಗಳನ್ನು ಪರಿಪೂರ್ಣ
ಆಯ್ಕೆ ವಸ್ತುಗಳನ್ನಾಗಿ ಮಾಡಿವೆ.

**ಬೇಡೆಕರ ಮಸಾಲೆವಾಲೆ**
**ಮುಗಭಾಟ, ಮುಂಬಯಿ - ೪**

## ಅವುಗಳು ಇಲ್ಲಿಯೇ ಇವೆ



# ದೀಪಾವಳಿ ವಿರಸ

"ಏನು ನಡೀತು ಇಲ್ಲಿ, ಮಳೆ ಬಂದು ಬಿಟ್ಟ ಹಾಗೆ ಇದೇನು ನಿಶ್ಶಬ್ದ! ತಾತ ನಿಂತರು ಗಮನಿಸಿದರು.

ಪ್ರತಿ ನಿಮಿ ನಿಮಿಷಕ್ಕೆ ಅಂಗಡಿಗೂ ಮನೆಬಾಗಿಲಿಗೂ ತಿರುಗುತ್ತಿದ್ದನಲ್ಲ ಆ ರಾಘವನೇ ಇವನು! ನನ್ನ ಪ್ರೀತಿಯ ಮಗನೆ, ಏನು ಬಿಮ್ಮಗೆ ಕೂತಿದ್ದೀಯಲ್ಲ!

ಅಡುಗೆಮನೆಗೂ ಪಡಸಾಲೆಗೂ ಬಿಸಬಿಸ ಅಂತ ಓಡಾಡುತ್ತಿದ್ದಳಲ್ಲ! ಅನುಂಗಳಮ್ಮನೇ ಇವಳು! ಅಮ್ಮ, ನನ್ನ ಪ್ರೀತಿಯ ಸೊಸೆಯೇ ಏನಮ್ಮಾ ಆಯಿತು ನಿನ್ನಬೀಸು ನಡೆಗೆ! ಏಕೆ ಏನೊ, ಒಂದು ತರಹನಡೆಯುತ್ತಿಯಲ್ಲ!

ಬಾದಾಮಿಹಾಲಿಗೆ ಕುಂಕುಮ ಕೇಸರಿ ಹಾಕದಿದ್ದರೆ ಸವಿಯಾಗಿರೊಲ್ಲ. ಎಂದುಓಡಿಹೋಗಿತಂದಗೋಪಿಯೇ ಇವನು? ನನ್ನ ಮುದ್ದುಮೊಮ್ಮಗನೆ, ಸ್ಕೂಟರು ಬಿಸಿಲಲ್ಲಿ ಕಾಯುವುದನ್ನ ಗಮನಿಸದೆ ಇರುವಂಥ ಯೋಚನೆ ಏನಪ್ಪ!

ತನ್ನಲ್ಲೆ ಹಾಗೆ ಅಂದುಕೊಂಡು ಹೊರಗೆ ಬಂದು ನೋಡಿದ ತಾತನಿಗೆ ಒಂದೇರೀತಿ ಆಶ್ಚರ್ಯ! ಎರಡು ದಿನಗಳಿಂದ(ಅಳಿಯಂದಿರು ಬಂದಾಗಿನಿಂದ) ಕಣ್ಣಿಗೇ ಕಾಣಿಸದೆ ಇದ್ದ ಮೀನಳೆ ಇವಳು! ನನ್ನ ಮೆಚ್ಚಿನ ಮೊಮ್ಮಗಳೆ, ಮೊದಲ ದೀಪಾವಳಿಯ ಮದುವಣಗಿತ್ತಿಯೇ ಕಾದಂಬರಿ ಓದ್ತಾ ಇದ್ದೀಯೊ, ಅಥವಾ ಹಾಗೆ ನಟನೆ ಮಾಡ್ತಿದ್ದೀಯಾ ನಿನ್ನ ಗಮನವು ಕಾದಂಬರಿಯಲ್ಲಿ ಇಲ್ಲ ಅನ್ನೋದು ಪುಸ್ತಕ ತಲೆಕೆಳಗಾಗಿರುವುದರಿಂದಲೇ ತಿಳಿಯುತ್ತೆ.

ನಿಶ್ಚಯವಾಗಿ ಏನೊ ನಡೆದಿದೆ! ಏನಾಗಿರಬಹುದು?

ಅವರು (ತಾತ) ಪತ್ತೆದಾರಿ ಕಾದಂಬರಿಪ್ರಿಯರು. ಆದರಿಂದ ಯಾವಕತೆ ಎಲ್ಲಿ ಆರಂಭವಾದರೆ, ಅದುಹೇಗೆ ನಡೆದು ಹೇಗೆ ಮುಗಿಯುತ್ತೆ ಅನ್ನುವುದು ಅವರಿಗೊತ್ತು. "ಎಲ್ಲೊ ತಪ್ಪು ನಡೆದು ಹೋಗಿದೆ" ಎಂದು ತೀರ್ಮಾನಕ್ಕೆ ಬಂದರು. "ಅದನ್ನು ಕಂಡು ಹಿಡಿದು ಸರಿಪಡಿಸಬೇಕು."

"ಏನಮಗು, ಅಷ್ಟು ಗಮನವಿಟ್ಟು ಓದ್ತಾ ಇದ್ದೀಯಲ್ಲ"—ಮೀನಳನ್ನು ಕೇಳಿದರು. "ಏನು ಪತ್ತೇದಾರಿ ಕಾದಂಬರಿಯಾ?"

"ಗಮನವಿಟ್ಟು" ಎಂದು ಅವರು ಒತ್ತಿಹೇಳಿದ್ದು ವ್ಯರ್ಥವಾಗಲಿಲ್ಲ. ಕಾದಂಬರಿ ನೋಡಿದ ಮೀನ ತಟ್ಟನೆ ಅದನ್ನು ತಿರುಗಿಸಿ ಸರಿಪಡಿಸಿಕೊಂಡಳು.

"ಅಳಿಯ ಹೊರಗೆ ಹೋಗಿದ್ದಾರೇನಮ್ಮ," ಅಂತ ಕೇಳಿದ್ದಕ್ಕೆ ತಲೆಯಾಡಿಸಿದಳು ಮಾತ್ರ.

"ಏಯ್ ಗೋಪಿ ಸ್ಕೂಟರನ್ನು ನೆರಳಲ್ಲಿ ಬಿಡಬಾರದೆ? ಬಿಸಿಲಲ್ಲಿ ಒಂದೇಸಮನೆ ಕಾಯ್ತಿದೆ." ಎಂದುಮೊಮ್ಮಗನನ್ನ ಆಚೆಗೆಕಳಿಸಿ, ಏನುರಾಘವ? ಎಂದು ಆರಂಭಿಸಿದವರು. ಹಾಗೆ ನಿಲ್ಲಿಸಿದರು. ಕಾಫಿ ತೆಗೆದುಕೊಂಡು ಬಂದ ಸೊಸೆಯನ್ನು ಕೇಳಿದರು.

'ಕೇಸರಿಭಾತುಮಾಡಿದ್ದೀಯೇನಮ್ಮ ಸ್ವಲ್ಪಕೊಡು ರುಚಿ ನೋಡೋಣ.'

'ಅದಕೇನಂತೆ ಕೊಡ್ತೀನಿ, ಅಳಿಯಂದಿರಿಗೋಸ್ಕರ ಆಸೆಯಿಟ್ಟು ಮಾಡಿದೆ. ಅವರು ತಿನ್ನಲೇ ಇಲ್ಲ. ನೀವು ತಿನ್ನೋದು ನೋಡಿಯಾದ್ರೂ ಸಂತೋಷಪಡ್ತೀನಿ.'

"ಅಳಿಯಂದಿರು ತಿನ್ನಲಿಲ್ಲವೆ? ಏಕೆ? ಕೇಸರಿಭಾತ್‌ಗೆ, ತುಪ್ಪಸರಿಯಾಗಿಹಾಕೋದು ಮರೆತುಬಿಟ್ಟೆಯ"

"ನಾಮಾಡಿದ ಭಕ್ಷ್ಯದಲ್ಲಿ ಏನು ತಪ್ಪಿಲ್ಲ. ನಮ್ಮ ಅಳಿಯಂದಿರ ಮನಸ್ಸೇ ಏನೋ ಒಂದುತರಾ ಇದೆ ಅದೇನೋ ಇದ್ದಕ್ಕಿದ್ದಹಾಗೆ - ಮೌನ ವ್ರತಿಗಳಾಗಿ ಬಿಟ್ಟಿದ್ದಾರೆ. ಯಾರೊಡನೆಯೂ ಮಾತಾಡುವುದಿಲ್ಲ."

"ಯಾವಾಗ್ಲಿಂದ ಹೀಗೆ?"

ದೀಪಾವಳಿ ಉಡುಗೊರೇನ ಅವರಿಗೆ ತೋರಿಸಲು ಹೇಳಿದ್ದೆ. ಆಗ್ಲಿಂದ.

"ಏಕೆ ಹೇಳಿದಹಾಗೆ ಒಡವೆ ಹಾಕ್ಲಿಲ್ಲವೆ?" ಎಂದವರು ಮಗನಮೇಲೆ ರೇಗಿ ಕೆಂಗಣ್ಣಿನಲ್ಲಿ ನೋಡಿದರು.

"ಉತ್ತರಕೊಡೊ, ಬಾಯಲ್ಲೇನು ಕೇಸರಿಭಾತ್ ತುರುಕ್ಕೊಂಡಿದೀಯಾ."



"ನೀವೊಬ್ಬರಪ್ಪ! ಈಗ ಇರೋ ಒಡವೆನೋಡಿಯೇ ಅವನು ಏನು ನಿಮ್ಮ ಮಗಳು ಒಡವೆ ಬೆಳೆಯೊ ಮರವೇ ಯಾಕೆಹಾಗೆದುಡ್ಡು ಹಾಳು ಮಾಡ್ತೀರಿ." ಅಂತ ರೇಗಿದ.

"ಹಾಗಾದ್ರೆ ಬಟ್ಟೆಗಳಲ್ಲಿ ಏನಾದರೂ ಕೊರತೆ ಇರಬಹುದು."

"ನಿಮಗೇನು ಹೇಳಲಿಕ್ಕೆ? ಒಂದೊಂದು ಅಂಗಡಿ ಮೆಟ್ಟಿಲು ಹತ್ತಿ ಇಳಿದು ತಂದ ಕಷ್ಟ ನನಗೆ ಗೊತ್ತು."

"ಮೀನ," ಎಂದು ಕರೆದವರು ತಾತ ಅವಳು ಬಂದ ಮೇಲೆ ಕೇಳಿದರು "ಏನಮ್ಮಮಗು, ಯಾವ ಬಟ್ಟೆ ನೋಡಿ ಅವರ ಮನಸ್ಸು ಬಾಡಿತು?"

"ನನಗೆ ತಂದ ಪಟ್ಟೆಸೀರೆಯನ್ನು ಪರೀಕ್ಷಿಸಿ ನೋಡಿದರು ತಾತ, ಅವರಿಗೆ ಕೊಟ್ಟಬಟ್ಟೆನೂ ತಿರುಗಿಸಿ ತಿರುಗಿಸಿ ನೋಡಿದರು—ನೋಡಿದಮೇಲೆ ಮಾತು ಮಾತಿಗೆ "ನೀನೇ ನಿಮ್ಮಪ್ಪನಿಗೆಮುದ್ದು ಬಿಡು" ಅಂತಹೇಳ್ತ ಇದ್ದರು."

"ಹಾಗೇನು?" ಎಂದು ಸೀರೆಯನ್ನು ಒಮ್ಮೆ ಪರೀಕ್ಷಿಸಿದರು. ಹೊತ್ತು ಎಷ್ಟಾಗಿದೆಯೆಂದು ನೋಡಿದರು. ಸಂಜೆಆರು ಘಂಟೆಯಾಗಿತ್ತು. ಅವಸರ ಅವಸರವಾಗಿ ಹೊರಹೊರಟರು.

ಸ್ವಲ್ಪಹೊತ್ತಾದ ನಂತರ...

ನಿಜವಾಗಿ ಪುಸ್ತಕ ಓದುತ್ತಿದ್ದ ಮೀನ-ತನ್ನನ್ನ ಯಾರೊ ಮೆಲ್ಲಗೆ ಹಿಂದಿನಿಂದ ಚಿಗುಟದುದನ್ನ ಅರಿತು ತಿರುಗಿ ನೋಡಿದಳು. ಅವಳ ಅಗಲವಾದ ಕಣ್ಣುಗಳು ಮತ್ತಷ್ಟು ಅಗಲವಾದುವು.

ಸ್ಪೋರ್ಟ್ಸ್ ಕಾಲಂ ಓದುತ್ತಿದ್ದ ಗೋಪಿ ಪೇಪರನ್ನು ಯಾರೊ ಕಸಿದುಕೊಳ್ಳುವುದನ್ನ ಕಂಡು, ತಲೆಯೆತ್ತಿ ನೋಡಿ ಆಶ್ಚರ್ಯಪಟ್ಟ. ಅರೆ ನಿದ್ರೆಯಲ್ಲಿದ್ದ ರಾಘವನೂ ಮಂಗಳೆಯೂ ಅಚ್ಚರಿಯಿಂದ ನಿಂತಾಗ—

"ಅತ್ತೆ ಕೇಸರಿಭಾತ್ ಇದೆಯಾ, ಹಸಿವಾಗ್ತ ಇದೆ" ಅಂತ ನಗುತ್ತ ಕೇಳಿದರು ಅಳಿಯ. ಅಳಿಯ ಪೂರ್ತ ಬದಲಾಗಿದ್ದರು.

"ಏನಪ್ಪಾ ಮಾಡಿದ್ರಿ, ಅಳಿಯ ಪೂರ್ತ ಬದಲಾಯಿಸ್ಬಿಟ್ಟಿದಾರಲ್ಲ." ರಾಘವಕೇಳಿದ.

"ಮಾರ್ಕೆಟ್ಟಿನಲ್ಲಿಅಳಿಯನ್ನದುಡುಕಿಹಿಡಿದು 'ನಿನ್ನ ಷರ್ಟಿನ ಸೈಜುಏನು, ಬಿನ್ನಿ ಷೋ ರೂಮಿಗೆ ಹೋಗ್ತೀನಿ. ಒಂದು ಷರ್ಟ್, ಮಾರ್ಲ್‌ಬರೋ ಸೂಟಿಂಗೂ ತರ್ತೀನಿ' ಅಂತಹೇಳ್ದೆ. ಅಷ್ಟೆ ಅಳಿಯ ಬದಲಾಯಿಸ್ಬಿಟ್ರು."

"ಅವರಿಗೆ ಬಿನ್ನಿ ಬಟ್ಟೇನೆ ಇಷ್ಟ ಅಂತ ಹೇಗೆ ಕಂಡುಹಿಡಿದ್ರಿ?"

"ಡಿಟೆಕ್ಟ್ ಮಾಡಿ ಕಂಡುಹಿಡಿದೆ. ಮೀನಳಿಗೆ ತಂದ ಸೀರೆಯ ಲೇಬಲ್ ನೋಡಿದೆ. ಅದು ಬಿನ್ನಿಯ, ಅಪ್ಪಟ ಸಿಲ್ಕ್ ಸೀರೆ ಅಲ್ವೇ?"

"ಅಯ್ಯೊ ರಾಮಚಂದ್ರ, ಅಳಿಯನ ಹತ್ರಬೇಕಾದಷ್ಟು ಬಿನ್ನಿ ಬಟ್ಟೆ ಇದೆಯಲ್ವೆ, ಅದಕ್ಕೇ ಬೇರೆತಂದೆ."

"My dear son, ಎಷ್ಟಿದ್ದರೆ ಏನು? ಅದರ ಕ್ವಾಲಿಟಿ ದಿ ಬೆಸ್ಟ್! ಅಲ್ಲವೆ? ಅದಕ್ಕೆ ಅವರಿಗೆ ಅದು ತುಂಬ ಹಿಡಿಸುತ್ತೆ ಅಳಿಯನಿಗೆ ಗೊತ್ತಿರೊವಷ್ಟು ಈಮಾವನಿಗೇ ಗೊತ್ತಿಲ್ವಲ್ಲ! ಸರಿಯಾದ ಗುಗ್ಗು ಮಾವಕಣೊ. ನೀನು."

"ಏನಾಯಿತೀಗ?" ನಾಚಿಕೆಯಿಂದ ಅವನ ಮುಖ ಕೆಂಪಾಯಿತು. "ಸಂಕ್ರಾಂತಿ ಬರುತ್ತಲ್ಲ ಆಗನಾನು ಬುದ್ಧಿ ಕಲಿ ಮಾವ ಆಗ್ತೀನಿ."



ಬಿನ್ನಿ—ಬಟ್ಟೆಗಳಲ್ಲಿ ಒಳ್ಳೆಯಹೆಸರು.



ದೀಪಾವಳಿಯ

ಶುಭಾಶಯಗಳು

# "ಆರೋಗ್ಯವೇ ಭಾಗ್ಯ"

ನಿಮ್ಮ ರೋಗಗಳನ್ನು ನಿರ್ಮೂಲ ಮಾಡಿ ಆರೋಗ್ಯ ಕಾಪಾಡಿಕೊಳ್ಳಲೂ ಹಾಗೂ ಯೌವನೋತ್ಸಾಹಶಾಲಿಗಳಾಗಿ ಶಕ್ತಿಯುತರೂ, ಚೈತನ್ಯಪೂರ್ಣರೂ ಆಗಿರಲು ಆರೋಗ್ಯ ಶಾಸ್ತ್ರಕ್ಕನುಸಾರವಾಗಿ ಕಟ್ಟುನಿಟ್ಟಾದ ಮೇಲ್ವಿಚಾರಣೆಯಲ್ಲಿ ಸಿದ್ಧಗೊಳಿಸಿದ ಶಾಸ್ತ್ರೋಕ್ತ

## ಆಯುರ್ವೇದ ಔಷಧಿಗಳನ್ನು ಸೇವಿಸಲು ಪ್ರಾರಂಭಿಸಿರಿ.

ನರಗಳ ದೌರ್ಬಲ್ಯ, ಹಸಿವಾಗದಿರುವಿಕೆ, ಜ್ಞಾಪಕಶಕ್ತಿ ಕುಂದುವುದೂ, ಮಾನಸಿಕ ದೌರ್ಬಲ್ಯ, ಉದರವಾಯು. ಮಲಬದ್ಧತೆ, ಮನೋವ್ಯಾಕುಲ ಮತ್ತು ಉಬ್ಬಸ ಮುಂತಾದವುಗಳಿಂದ ನರಳುತ್ತಿದ್ದರೆ ದಯವಿಟ್ಟು ಖಂಡಿತ ನಮಗೆ ಬರೆಯಿರಿ.

ಎಲ್ಲಾ ವ್ಯವಹಾರಗಳನ್ನೂ ಗೌಪ್ಯವಾಗಿಡಲಾಗುವುದು

ಪ್ರಧಾನ ವೈದ್ಯ

# ಶಂಕರ್ ಫಾರ್ಮಸಿ

ಭದ್ರಾವತಿ

For all your requirements

visit

# JANATHA BAZAAR

**Sahakari Mahal**
**MANGALORE**

**– S. K. C. C. W. Stores Ltd.**

WISH YOU ALL A
HAPPY DEEPAVALI



ಫೋನ್:
260

ಮಲೆನಾಡಿನ ಕೇಂದ್ರಸ್ಥಳವಾದ
ಶಿವಮೊಗ್ಗಾಕ್ಕೆ ನೀವು ಬಂದಾಗ
ಇಳಿದುಕೊಳ್ಳಲು
ಯೋಗ್ಯವಾದ ಸ್ಥಳ

# ಹೋಟೆಲ್ ಬೃಂದಾವನ್

ಊಟ, ಉಪಹಾರ, ಮತ್ತು ವಸತಿ ಗೃಹ

ಪೋಸ್ಟ್ ಆಫೀಸ್ ಸಮೀಪ– ಶಿವಮೊಗ್ಗ

ನೀವು ಪಡೆಯಲು ಇಚ್ಛಿಸುವ ಎಲ್ಲಾ ವಿಧದ
ಸೌಕರ್ಯಗಳನ್ನು ಹೊಂದಿದೆ

ದೀಪಾವಳಿಯ ಶುಭಾಶಯಗಳು



